# ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.
ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕ

ರಮೇಶ ನಾಯಕ

ಮಾರ್ಗದರ್ಶಕರು

ಡಾ.ಸಿ.ಎಸ್.ವಾಸುದೇವನ್

ಸಹ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೫

# ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕ

**ರಮೇಶ ನಾಯಕ**

ಮಾರ್ಗದರ್ಶಕರು

**ಡಾ.ಸಿ.ಎಸ್.ವಾಸುದೇವನ್**

ಸಹ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

**ಸಮಾಜ ವಿಜ್ಞಾನಗಳ ನಿಕಾಯ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

**2015**

# ಮಾರ್ಗದರ್ಶಕರ ದೃಢೀಕರಣ ಪತ್ರ

ರಮೇಶ ನಾಯಕ ಅವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಸಿ.ಎಸ್.ವಾಸುದೇವನ್**
ಸಹ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

ದಿನಾಂಕ: 30-04-2015
ಸ್ಥಳ: ವಿದ್ಯಾರಣ್ಯ

## ಸಂಶೋಧಕರ ಘೋಷಣಾ ಪತ್ರ

**"ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ ಡಾ.ಸಿ.ಎಸ್.ವಾಸುದೇವನ್ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**(ರಮೇಶ ನಾಯಕ)**

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

# ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ

### ಪ್ರಸ್ತಾವನೆ

### ಅಧ್ಯಯನದ ಉದ್ದೇಶ

ಪ್ರಸ್ತುತ ಸಂದರ್ಭದಲ್ಲಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು ವಿಶಾಲ ವ್ಯಾಪ್ತಿಯಿಂದ ಕಿರು ವ್ಯಾಪ್ತಿಯತ್ತ ತಿರುವು ಪಡೆದುಕೊಳ್ಳುತ್ತಿವೆ. ಸೂಕ್ಷ್ಮತೆ ಮತ್ತು ಹೆಚ್ಚಿನ ಸಮಗ್ರತೆಯೆಡೆಗೆ ಮುಖ ಮಾಡಿ ರೂಪಗೊಳ್ಳುವ ಇಂಥ ಕ್ರಿಯೆಗಳು ಇತಿಹಾಸ ಅಧ್ಯಯನದಲ್ಲಿ ಜರಗುವ ಪ್ರಮುಖ ಬದಲಾವಣೆಗಳೆಂದೇ ಪರಿಭಾವಿಸಲಾಗುತ್ತದೆ. ಅಲ್ಲದೇ ಈ ರೀತಿಯಲ್ಲಿ ರಚನೆಗೊಳ್ಳುವ ಅಧ್ಯಯನಗಳು ಮೂಲ, ತಲಸ್ಪರ್ಶಿಯ, ಕೆಳಸ್ತರದ ಹಾಗೂ ಗ್ರಾಮ ಸಮುದಾಯಗಳ ಚರಿತ್ರೆ ವಿವರಗಳಿಗೆ ಹೆಚ್ಚು ವಾಲುತ್ತವೆ. ಮುಖ್ಯವಾಗಿ ಇಂಥ ಸಾಂಸ್ಕೃತಿಕ ಆಯಾಮಗಳನ್ನು ಒಳಗೊಂಡು ವಿಶಾಲ ವ್ಯಾಪ್ತಿ ಪಡೆದಾಗಲೇ ಅವು ತಕ್ಕಮಟ್ಟಿಗೆ ಸಫಲತೆಯ ಕಡೆಗೆ ಪಯಣಿಸಿದಂತಾಗುತ್ತದೆ. ಹಾಗಾದಾಗ ಮಾತ್ರ ಇಂಥ ಅಧ್ಯಯನದ ಉದ್ದೇಶಗಳು ಈಗಾಗಲೇ ದಾಖಲಾದ ಇತಿಹಾಸ ಅಧ್ಯಯನದ ಸ್ವರೂಪವನ್ನು ಸಾಧ್ಯವಾದಷ್ಟು ಬದಲಾಯಿಸುವಲ್ಲಿ ಅವು ಸಹ ಯಶಸ್ವಿಯಾಗುತ್ತವೆಂದು ಅಭಿಪ್ರಾಯಿಸಬಹುದು. ಅಲ್ಲದೇ ಸಾಂಸ್ಕೃತಿಕ ಅಧ್ಯಯನಗಳು ಹರಳುಗಟ್ಟಿಕೊಳ್ಳುವ ಇಂಥ ಸಂದರ್ಭದಲ್ಲಿ ಅವು ಕೇವಲ ಲಿಖಿತ ದಾಖಲೆಗಳನ್ನು ಮಾತ್ರವಲ್ಲದೇ ಆ ವ್ಯಾಪ್ತಿಯಲ್ಲಿರುವ ಸ್ಥಳ ವಿವರ ವಸ್ತು, ವ್ಯಕ್ತಿ ವಿವರ ಮತ್ತು ಘಟನೆಯ ಬೇರೆ ಬೇರೆ ಆಯಾಮಗಳನ್ನು ಕೂಡಿಸಿಕೊಳ್ಳುತ್ತ ಹೊಸ ಅರ್ಥವನ್ನು ಹೊರಡಿಸುವ ಪ್ರಯತ್ನದೆಡೆಗೆ ಸಾಗಬೇಕು. ಆವಾಗಲೇ ಈ ಅಧ್ಯಯನಗಳು ಸಮಗ್ರತೆಯೆಡೆಗೆ ಚಲಿಸಿದಂತಾಗುತ್ತವೆ. ಇಂಥ ಹತ್ತು ಹಲವು ಉದ್ದೇಶಗಳನ್ನಿಟ್ಟುಕೊಂಡು ರೂಪಗೊಳ್ಳುವ ಈ ಬಗೆಯ ಅಧ್ಯಯನಗಳು ಮುಖ್ಯವಾಗಿ ಜಿಲ್ಲೆ, ತಾಲೂಕು ಹಾಗೂ ಕ್ಷೇತ್ರವಾರು ವ್ಯಾಪ್ತಿಯಲ್ಲಿ ದೊರೆಯುವ ಆಕರಗಳನ್ನು ವಿಶ್ಲೇಷಿಸಿ ವಿಮರ್ಶಿಸುವ ಪ್ರಧಾನಧಾರೆಯನ್ನು ಇಟ್ಟುಕೊಂಡಿರುತ್ತವೆ. ಅಲ್ಲದೇ ಈ ರೀತಿಯ ಅಧ್ಯಯನಗಳು ಸಂಶೋಧನಾ ವಲಯದಲ್ಲಿ ಉತ್ತಮ ಬೆಳವಣಿಗೆಗಳಾಗಿವೆಯೆಂದು ಅರ್ಥೈಸಲಾಗುತ್ತದೆ. ಹಾಗಾಗಿಯೇ ಸಾಂಸ್ಕೃತಿಕ ಅಧ್ಯಯನವು ಎಲ್ಲ ಕಾಲಕ್ಕೂ ತನ್ನದೇ ಮಹತ್ವವನ್ನು ಉಳಿಸಿಕೊಂಡು ಬಂದಿದೆ ಎಂದು ಅಭಿಪ್ರಾಯಿಸಬಹುದು.

ಅಗಣಿತ ಸಂಖ್ಯೆಯಲ್ಲಿ ಲಭ್ಯವಿರುವ ಸಾಕ್ಷಾಧಾರಗಳು ನಿರೀಕ್ಷೆ ಮೀರಿ ವಿವರ ಮತ್ತು ಹೊಳವುಗಳನ್ನು ನೀಡುತ್ತವೆ. ಅಂಥವುಗಳನ್ನೆಲ್ಲ ಸಾಧ್ಯವಾದ ಮಟ್ಟಿಗೆ ಪೂರ್ಣಪ್ರಮಾಣದಲ್ಲಿ ಬಳಸಿಕೊಂಡು ಅಧ್ಯಯನಗಳನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಅಲ್ಲದೇ ಕ್ಷೇತ್ರವು ಕಿರಿದಾಗಿದ್ದರೆ ಅವುಗಳು ಹೊರಡಿಸುವ ವಿವರಗಳು ಹಿರಿದಾಗುತ್ತಾ ಹೋಗುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನವನ್ನು ರಚಿಸುವ ಪ್ರಯತ್ನ ಮಾಡಲಾಗಿದೆ.

ಈ ಜಿಲ್ಲೆಯಲ್ಲಿರುವ ಬಹುತೇಕ ಗ್ರಾಮಗಳು ಐತಿಹಾಸಿಕ ಕುರುಹುಗಳನ್ನು ಉಳಿಸಿಕೊಂಡು ಬಂದಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಅವು ಹಲವು ಬಗೆಯ ಅರ್ಥಗಳನ್ನು ಪ್ರಕಟಪಡಿಸುತ್ತವೆ. ಮುಖ್ಯವಾಗಿ ಜಿಲ್ಲಾ ವ್ಯಾಪ್ತಿಯಲ್ಲಿರುವ ಪ್ರಾಗಿತಿಹಾಸ ಕಾಲದ ಉಪಕರಣಗಳು, ದೇವಾಲಯ, ಮೂರ್ತಿಶಿಲ್ಪ, ಶಾಸನಗಳು, ಇಂಡೋ-ಇಸ್ಲಾಮಿಕ್ ಶೈಲಿಯ ದರ್ಗಾ ಮತ್ತು ಮಸೀದಿಗಳು, ಪ್ರಾಚೀನ ಕಾಲದಲ್ಲಿ ನಿರ್ಮಾಣವಾಗಿರುವ ಕೆರೆ-ಬಾವಿಗಳು ಹಾಗೂ ರಕ್ಷಣಾ ಸಂಬಂಧಿ ವಾಸ್ತುಗಳು ಈ ಪ್ರದೇಶದಲ್ಲಿ ಉಪಲಬ್ದವಿರುವ ಬಹುಮುಖ್ಯ ಆಕರ ಸಮಾಗ್ರಿಗಳಾಗಿವೆ. ಅಧ್ಯಯನದ ದೃಷ್ಟಿಕೋನಗಳಲ್ಲಿ ಅವೆಲ್ಲವುಗಳು ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ ಕಟ್ಟಿಕೊಡಬಲ್ಲ ಮೂಲ ಆಕರಗಳಾಗಿವೆ. ಅಲ್ಲದೇ ಇಂಥೆಲ್ಲ ವಿವರಗಳು ಪ್ರಾದೇಶಿಕತೆ ಮತ್ತು ಸ್ಥಳೀಯ ಹಿನ್ನೆಲೆಯ ಉದ್ದೇಶಗಳನ್ನು ಪ್ರಚುರಪಡಿಸುವಲ್ಲಿಯೂ ತುಂಬಾ ಸಹಾಯಕವಾಗುತ್ತವೆ. ಇಂಥ ಪ್ರಕ್ರಿಯೆಗಳನ್ನು ಕೈಗೊಂಡಾಗ ಅವುಗಳಿಗೆ ಪೂರಕವಾಗಿರುವ ಬಹುಮುಖ ಅರ್ಥವುಳ್ಳ ಈ ಬಗೆಯ ಆಕರಗಳು ಸಾಧ್ಯವಾದಷ್ಟು ಹೆಚ್ಚಿನ ಪ್ರಮಾಣದಲ್ಲಿ ಬೇಕಾಗುತ್ತವೆ. ಆದರೆ ಬಹುಮುಖ ಆಯಾಮವುಳ್ಳ ಅಂಥ ವಿವರಗಳು ಈ ಪ್ರದೇಶದಲ್ಲಿದ್ದರೂ ಆ ಕುರಿತು ಅಧ್ಯಯನಗಳು ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಸರಿಸಮವಾಗಿ ನಡೆದಿಲ್ಲವೆಂದೇ ಅಭಿಪ್ರಾಯಿಸಬಹುದು. ಇಂಥ ಪ್ರಮುಖ ಕೊರತೆಯನ್ನು ನೀಗಿಸುವ ಪ್ರಯತ್ನವು ಸಹ ಈ ಅಧ್ಯಯನದ ಪ್ರಮುಖ ಉದ್ದೇಶಗಳಲ್ಲೊಂದಾಗಿದೆ. ಈ ರೀತಿಯ ಅಧ್ಯಯನ ಕೈಗೊಳ್ಳಲು ಮುಖ್ಯ ಕಾರಣ ಇತಿಹಾಸ ಅಧ್ಯಯನದಲ್ಲಿ ಬಿಟ್ಟುಹೋದ ಅಥವಾ ಮರುಕೊಂಡಿಗಳನ್ನು ಜೋಡಿಸಿ ನಮ್ಮ ನಾಡಿನ ಇತಿಹಾಸದ ವ್ಯಾಪ್ತಿ ಮತ್ತು ಮಹತ್ವ ಹೆಚ್ಚಿಸುವುದಾಗಿದೆ. ಈ ಸಂದರ್ಭದಲ್ಲಿ ಪ್ರತಿ ಆಕರವನ್ನು ಬಳಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಜಿಲ್ಲೆಯ ಕುರಿತಿರುವ ಸಮಗ್ರವಾದ ಅಧ್ಯಯನಗಳು ಈವರೆಗೂ ನಡೆದಿರುವುದಿಲ್ಲ. ಅಂಥ ಕೊರತೆಯನ್ನು ತಕ್ಕಮಟ್ಟಿಗೆ ನೀಗಿಸುವ ಉದ್ದೇಶವಿಟ್ಟುಕೊಂಡ ಈ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಈ ಮೂಲಕ ಪ್ರಸ್ತುತ ಪ್ರದೇಶದ ಚರಿತ್ರೆಯ ಪುಟಗಳು ಹೆಚ್ಚಾಗಬಹುದೆಂಬ ಆಶಯವನ್ನು ಹೊಂದಲಾಗಿದೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶವು ಹಲವು ದೃಷ್ಟಿಕೋನಗಳಿಂದ ಹಿಂದುಳಿದ ಪ್ರದೇಶವಾಗಿದ್ದು ಅದರಲ್ಲಿರುವ ಯಾದಗಿರಿ ಜಿಲ್ಲೆಯು ಸಹ ಇಂಥ ಸಂಗತಿಗಳಿಂದ ಹೊರತಾಗಿಲ್ಲ. ಆ ಮೊದಲು ಈ ಪ್ರದೇಶವು ಗುಲಬರ್ಗಾ ಜಿಲ್ಲೆಯಲ್ಲಿರುವ ಪ್ರಮುಖ ಕಂದಾಯ ವಿಭಾಗಗಳಲ್ಲಿ ಒಂದಾಗಿತ್ತು. ಅದೇ ವಿಭಾಗವೇ ಪ್ರಸ್ತುತ ಯಾದಗಿರಿ ಎಂಬ ಹೆಸರಿನ ಹೊಸ ಜಿಲ್ಲೆಯಾಗಿ ರಚನೆಗೊಂಡಿದೆ.

ಈ ಪ್ರದೇಶದಲ್ಲಿ ಸಾಂಸ್ಕೃತಿಕ ಆಯಾಮಗಳನ್ನು ಕಟ್ಟಿಕೊಡುವ ಹತ್ತು ಹಲವು ಮಹತ್ವ ಆಕರಗಳು ಕಂಡುಬರುತ್ತಿದ್ದರೂ ಅವು ಹೆಚ್ಚಿನ ಅವಜ್ಞೆಗೆ ಒಳಗಾಗಿರುವುದು ದುರದೃಷ್ಟಕರ ಸಂಗತಿ. ಇತಿಹಾಸ ಮತ್ತು ಪುರಾತತ್ವ ವಿವರಗಳಂತೂ ಇನ್ನೂ ಹೆಚ್ಚಿನ ಅವಕೃಪೆಗೆ ಒಳಗಾಗಿವೆ. ಈ ಪ್ರದೇಶಗಳಲ್ಲಿರುವ ಅವಶೇಷಗಳೇ ಬಹು ಬಗೆಯ ರೋಚಕ ಇತಿಹಾಸ ಸೃಷ್ಟಿಸುತ್ತವೆ ಎಂದರೆ ತಪ್ಪಾಗಲಾರದು. ಅವು ಆದಿಶಿಲಾಯುಗ ಸಂಸ್ಕೃತಿಯ ಹಂತದವರೆಗೂ ಹಿಂದೋಡುತ್ತಾ ವಿರಾಟರೂಪ ಪಡೆಯುತ್ತವೆ. ಅಲ್ಲದೇ ಸಾಂಸ್ಕೃತಿಕ ಅಧ್ಯಯನಕಾರರನ್ನು ಸೂಜಿಗಲ್ಲಿನಂತೆ ಸೆಳೆದಿವೆ. ಇಲ್ಲಿರುವ ಪ್ರಾಚೀನ ಪೂರ್ವ ವಿವರಗಳು ಕೇವಲ ಈ ಜಿಲ್ಲೆಯ ಪ್ರಾಗಿತಿಹಾಸ ದೃಷ್ಟಿಯಿಂದ ಮಾತ್ರವಲ್ಲ ಇಡೀ ನಾಡಿನ ಮತ್ತು ನಮ್ಮ ದೇಶದ ಪ್ರಾಗಿತಿಹಾಸಕ್ಕೆ ಸಂಬಂಧಿಸಿದ ಕಾಲಾನುಕ್ರಮದ ಚರಿತ್ರೆಯನ್ನು ಕಟ್ಟಿಕೊಡುವ ಪುರಾತತ್ವ ಆಕರಗಳಲ್ಲಿ ಅತೀ ಮುಂಚೂಣಿ ಪಾತ್ರ ವಹಿಸುತ್ತವೆ. ಅಲ್ಲದೇ ಅವುಗಳಲ್ಲಿ ಪುರಾತತ್ವದಲ್ಲಿ ತುಂಬಾ ಬೆಲೆ ಇದೆ. ಹಾಗಾಗಿಯೇ ಈ ಪ್ರದೇಶದಲ್ಲಿ ಲಭ್ಯವಿರುವ ಆಕರಗಳು ಸಾಂಸ್ಕೃತಿಕ ಅಧ್ಯಯನಕಾರರನ್ನು ಸಹ ಬಿಡದೇ ಸೆಳೆದಿವೆ. ಅಲ್ಲದೇ ಲಭ್ಯವಿರುವ ಅಂಥ ಆಕರಗಳನ್ನು ಅನುಲಕ್ಷಿಸಿ ವಿಸ್ತೃತವಾದ ಫಲಿತಗಳನ್ನು ಹೊರಹೊಮ್ಮಿಸಿರುವ ಅಧ್ಯಯನ ವರದಿಗಳು ಸಹ ಈಗಾಗಲೇ ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟವಾಗಿವೆ. ಬಹುಮುಖ್ಯವಾಗಿ ವಿವರಿಸಬೇಕಾದ ವಿಷಯವೆಂದರೆ ಈ ಪ್ರದೇಶದಲ್ಲಿ ಸಿಕ್ಕಿರುವ ಆಕರಗಳು ಜಾಗತಿಕ ಮಟ್ಟದ ಖ್ಯಾತಿಯನ್ನು ಪಡೆದಿರುವಂಥವುಗಳು. ಆದರೆ ಈ ಜಿಲ್ಲೆಯ ಇತಿಹಾಸ ರಚನೆಗೆ ಬೇಕಾದ ಬಹುಮುಖ್ಯ ಆಕರಗಳಾದ ದೇವಾಲಯ, ಮೂರ್ತಿಶಿಲ್ಪ, ಶಾಸನ, ಹೊಂಡ, ಬಾವಿ, ಕೆರೆ-ಕಟ್ಟೆ, ದರ್ಗಾ-ಮಸೀದಿಗಳ ಬಗೆಗೆ ಹೆಚ್ಚಿನ ವಿವರಗಳುಳ್ಳ ಅಧ್ಯಯನಗಳು ಸಮಗ್ರವಾಗಿ ರೂಪುಗೊಂಡಿಲ್ಲ. ಪ್ರಕಟಗೊಂಡಿರುವ ಹಾಗೂ ಇನ್ನು ಕೆಲವು ಹೊಸ ಶಾಸನಗಳನ್ನು ಸೇರಿಸಿಕೊಂಡು ಹಲವು ಗ್ರಂಥಗಳನ್ನು ಕೆಲವು ವಿದ್ವಾಂಸರು ಪ್ರಕಟಿಸಿದ್ದಾರೆ. ಆದರೆ ಅವು ಹೊರಡಿಸುವ ವಿವರಗಳು ಕಡಿಮೆಯೆಂದೇ ಅಭಿಪ್ರಾಯಿಸಬಹುದು. ಅವು ತಕ್ಕಮಟ್ಟಿಗೆ ಮಾಹಿತಿ ನೀಡುತ್ತವೆ ಹೊರತು ಸಾಂಸ್ಕೃತಿಕ ವಿವರಗಳ ಕುರಿತಿರುವ ತಲಸ್ಪರ್ಶಿಯ ಹಾಗೂ ಸಮಗ್ರ ವಿವರಗಳು ವಿಶ್ಲೇಷಣಾತ್ಮಕ ನೆಲೆಯೂ ತುಂಬಾ ಕಡಿಮೆ ಪ್ರಮಾಣದ್ದಂದೇ ಪರಿಭಾವಿಸಬಹುದು. ಅಂಥ ಕೊರತೆಗಳನ್ನು ತಕ್ಕಮಟ್ಟಿಗೆ ನೀಗಿಸುವ ಉದ್ದೇಶವನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನ ಪೂರೈಸಲಾಗಿದೆ.

ಜಿಲ್ಲೆಗೆ ಸಂಬಂಧಿಸಿದ ಸಮಗ್ರವಾದ ಮಾಹಿತಿಗಳನ್ನೆಲ್ಲ ಒಳಗುಮಾಡಿ ಅಧ್ಯಯನ ಪೂರೈಸುವ ಮುಖ್ಯ ಉದ್ದೇಶವನ್ನಿಟ್ಟುಕೊಂಡಿದ್ದರಿಂದ 'ಸಾಂಸ್ಕೃತಿಕ' ಎಂಬ ಪದವನ್ನು ಬಳಸಿಕೊಳ್ಳಲಾಗಿದೆ. ಈ ಪದದ ಕುರಿತು ಹತ್ತು ಹಲವು ಆಯಾಮಗಳಲ್ಲಿ ಬಹುವರ್ಷಗಳಿಂದಲೂ ವಿದ್ವತ್ ವಲಯದಲ್ಲಿ ಎಡಬಿಡದ ಹಲವು ಚರ್ಚೆಗಳು ಸುದೀರ್ಘವಾಗಿ ನಡೆದು ಬಂದಿರುವ ವಿಷಯವಂತೂ ಎಲ್ಲರಿಗೂ ತಿಳಿದಿದ್ದೇ ಆಗಿದೆ. ಹಾಗಾಗಿ ಅಂಥ ಜಟಿಲ ಸ್ವರೂಪವನ್ನು ಬಿಡಿಸುವ ಉದ್ದೇಶವಂತೂ ಈ ಅಧ್ಯಯನದ್ದಲ್ಲ. ಪ್ರಸ್ತುತ ಸಂದರ್ಭದಲ್ಲಿ ಸಾಂಸ್ಕೃತಿಕ ಎನ್ನುವ ಪದವು ಸಾಮಾನ್ಯವಾಗಿ ಪುರಾತತ್ವ, ಇತಿಹಾಸ, ಆಡಳಿತ (ರಾಜಕೀಯ) ಸಮಾಜೋ-ಧಾರ್ಮಿಕ, ಆರ್ಥಿಕ ಹಾಗೂ ವಾಸ್ತು

ಮತ್ತು ಮೂರ್ತಿ ಶಿಲ್ಪ ಹಾಗೂ ಸಾಂಸ್ಕೃತಿಕ ಆಚರಣೆ ಇತರ ನೆಲೆಗಳ ವಿವರಗಳನ್ನೆಲ್ಲ ಒಳಗೊಂಡ ಸಮಗ್ರ ಸ್ವರೂಪದ ಅಧ್ಯಯನವೆಂಬುದನ್ನು ಮಾತ್ರ ಧ್ವನಿಸುತ್ತದೆ. ಇಂಥ ಮುಖ್ಯ ಉದ್ದೇಶದಿಂದ ಕೂಡದ ಆಶಯಗಳು ಮಾತ್ರ ಈ ಪ್ರಬಂಧದ್ದಾಗಿವೆ. ಅಂದರೆ ಈ ಪ್ರದೇಶದ ಚರಿತ್ರೆಯನ್ನು ಕಟ್ಟಿಕೊಡುವ ಆಕರಗಳಲ್ಲಿರುವ ವಿವರಣೆಗಳನ್ನು ಸಮಗ್ರವಾಗಿ ಕೂಡಿಸಿಕೊಂಡು ವಿಶಾಲ ಅರ್ಥದಲ್ಲಿ ಬಳಸಿಕೊಳ್ಳುವ ಉದ್ದೇಶದ ಹಿನ್ನೆಲೆಯಲ್ಲಿ ಮಾತ್ರ ಈ ಪದ ಬಳಸಿಕೊಳ್ಳಲಾಗಿದೆ. ಹಾಗಾಗಿ ಸಂಸ್ಕೃತಿ, ಸಾಂಸ್ಕೃತಿಕ ಪದಗಳ ಕುರಿತು ಪ್ರಕಟಗೊಂಡಿರುವ ಜಿಜ್ಞಾಸೆ, ವ್ಯಾಖ್ಯಾನುಗಳನ್ನು ವಿವೇಚಿಸುವ ಪ್ರಯತ್ನ ಇದರ ಉದ್ದೇಶವಲ್ಲ. ಈ ಜಿಲ್ಲೆಯು ಸಾಂಸ್ಕೃತಿಕ ಇತಿಹಾಸವನ್ನು ಸಮಗ್ರವಾಗಿ ಕಟ್ಟಿಕೊಡುವ ಉದ್ದೇಶಗಳೇ ಪ್ರಬಂಧದ ಪ್ರಧಾನ ಆಶಯಗಳಾಗಿವೆ.

**ವ್ಯಾಪ್ತಿ**

ಪ್ರಸ್ತುತ ಅಧ್ಯಯನಕ್ಕೆ ಈ ಜಿಲ್ಲೆಯ ಭೌಗೋಳಿಕ ಪ್ರದೇಶವೇ ವ್ಯಾಪ್ತಿಯಾಗಿದೆ. ಇದು ಯಾದಗಿರಿ, ಶಹಾಪುರ ಮತ್ತು ಸುರಪುರ ಪ್ರದೇಶಗಳನ್ನು ಒಳಗೊಂಡಿರುವುದು. ಈ ಮೂರು ತಾಲೂಕುಗಳ ವ್ಯಾಪ್ತಿಯಲ್ಲಿ ಹರಡಿಕೊಂಡಿರುವ ಪುರಾತತ್ವ ಮತ್ತು ಇತಿಹಾಸ ವಿಷಯಗಳಿಗೆ ಸಂಬಂಧಿಸಿದ ಆಕರಗಳೆಲ್ಲವನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅಲ್ಲದೇ ಪ್ರಾಗಿತಿಹಾಸ ಕಾಲದಿಂದ ಹದಿನಾಲ್ಕನೆಯ ಶತಮಾನ ಪ್ರಥಮ ದಶಕದ ಪೂರ್ವಪಾದದವರೆಗಿನ ಕಾಲಮಿತಿ ಹಾಕಿಕೊಳ್ಳಲಾಗಿದೆ. ಬಹಮನಿ ರಾಜ್ಯವು ಪ್ರಾರಂಭಗೊಳ್ಳುವ ಮೊದಲೇ ಕಾಲು ಶತಮಾನಾವಧಿ ಈ ಪ್ರದೇಶದಲ್ಲಿ ಮಹತ್ವದ ರಾಜಕೀಯ ತಿರುವುಗಳು ಘಟಿಸಿದವು. ಅವು ನಮ್ಮ ನಾಡಿನ ಇತಿಹಾಸ ರಚನೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅಂಥ ಹತ್ತು ಹಲವು ಘಟನೆಗಳಿಗೆ ಸಗರನಾಡು ಸಾಕ್ಷಿಯಾಯಿತು. ರಾಜಕೀಯ ವಿದ್ಯಮಾನಗಳಿಗೆ ಈ ಪ್ರದೇಶವು ತುಂಬಾ ಪ್ರಾಮುಖ್ಯ ಪಡೆದ ನೆಲೆಯಾಗಿತ್ತು. ಆ ಕುರಿತಂತೆಯೇ ವಿಸ್ತೃತವಾದ ಮಹಾಪ್ರಬಂಧ ರಚನೆಯಾಗಿರಬಹುದು. ಹೀಗಾಗಿ ಹದಿನಾಲ್ಕನೆಯ ಶತಮಾನದ ಘಟನೆಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಲಾಗಿದೆ.

ಅಧ್ಯಯನದ ವ್ಯಾಪ್ತಿಯ ಪ್ರಾರಂಭವು ಪ್ರಾಗಿತಿಹಾಸ ಕಾಲದಿಂದಲೂ ಪ್ರಾರಂಭವಾದರೂ ಈ ಪ್ರದೇಶದಲ್ಲಿ ಇತಿಹಾಸಿಕ ಘಟನೆಗಳು ಮಾತ್ರ ೧೧ನೇ ಶತಮಾನದಲ್ಲಿಯೇ ಹೆಚ್ಚಿನ ತೀವ್ರತೆ ಪಡೆದುಕೊಂಡಂತೆ ಕಾಣುತ್ತವೆ. ಈ ಭೌಗೋಳಿಕ ವ್ಯಾಪ್ತಿಯಲ್ಲಿ ಪ್ರಮುಖವಾಗಿ ಕಲ್ಯಾಣದ ಚಾಲುಕ್ಯ ಅರಸ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಿಂದ ಪ್ರಾರಂಭಗೊಂಡ ಇತಿಹಾಸದ ಹೆಜ್ಜೆ ಗುರುತುಗಳು ಕುಮ್ಮಟದ ಅರಸ ಕುಮಾರರಾಮನ ಕಾಲದವರೆಗೂ ನಿರಂತರವಾಗಿ ಮೂಡುತ್ತಾ ಬಂದವು. ಈ ಕಾಲಾವಧಿಯಲ್ಲಿಯೇ ಹತ್ತು ಹಲವು ಐತಿಹಾಸಿಕ ಆಕರಗಳು ನಿರ್ಮಾಣವಾದವು. ಶಾಸನ, ದೇವಾಲಯ, ಶಿಲ್ಪಗಳು, ಬಾವಿ, ಕೆರೆ, ಕಟ್ಟೆಗಳು ಮತ್ತು ಮಠಗಳು ಈ ಅವಧಿಯಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡವು. ಅವೆಲ್ಲವುಗಳನ್ನು ಅಧ್ಯಯನ ವ್ಯಾಪ್ತಿಗೆ ಒಳಪಡಿಸಲಾಗಿದೆ. ಸಮಾಜೋ-ಧಾರ್ಮಿಕ ಸ್ಥಿತಿಗತಿಯಲ್ಲಿ ಅಗ್ರಹಾರಗಳು, ಬ್ರಹ್ಮಪುರಿಗಳು, ಪರ್ಷೆಗಳು ಹಾಗೂ ಮಠಗಳು ರೂಪಗೊಂಡವು. ಅಲ್ಲದೇ ಇಂಥ ಮಠಮಾನ್ಯಗಳಿಂದ ಶೈಕ್ಷಣಿಕ

ಸಂಸ್ಥೆಗಳು ಹುಟ್ಟಿಕೊಂಡವು. ಆ ಕುರಿತ ವಿವರಗಳನ್ನು ಸಹ ಹಾಕಿಕೊಂಡ ಕಾಲ ಮಿತಿಯಲ್ಲಿ ರಚನೆಯಾಗಿದ್ದರೆ ಮಾತ್ರ ಪರಿಗಣಿಸಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯ ಸ್ವರೂಪವನ್ನು ಈ ಹಿನ್ನೆಲೆಗಳಲ್ಲಿಯೇ ನಿರ್ಧರಿಸಿಕೊಳ್ಳಲಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಸಮಾಜೋ-ಧಾರ್ಮಿಕ ರೂಪದಲ್ಲಿ ಹುಟ್ಟಿಕೊಂಡ ಶರಣ ಅಥವಾ ವಚನ ಚಳವಳಿಯ ಹುಟ್ಟು ಮತ್ತು ಅಂತ್ಯದ ಎರಡು ಪ್ರಭಾವ ಕಂಡಿರುವ ಆ ಪ್ರದೇಶವು ಆ ಕುರಿತಿರುವ ಸಾಕ್ಷಿಗಳನ್ನು ಸಹ ಹೆಚ್ಚಿನ ಪ್ರಮಾಣದಲ್ಲಿ ಉಳಿಸಿಕೊಂಡಿಲ್ಲವೆಂದು ಪರಿಭಾವಿಸಿದರೆ ತಪ್ಪಾಗಲಾರದು. ತೀರ ಸಣ್ಣ ತುಣುಕುಗಳ ರೂಪದಲ್ಲಿ ಉಳಿದಿರುವ ಅಂಥ ವಿವರಗಳನ್ನು ಅಧ್ಯಯನದ ಅವಶ್ಯಕತೆ ಹಾಗೂ ಸಾಂದರ್ಭಿಕ ಸಂದರ್ಭಗಳಿಗನುಗುಣವಾಗಿ ಮಾತ್ರ ವಿವೇಚಿಸುವ ಪ್ರಯತ್ನವನ್ನು ಮಾಡಲಾಗಿದೆ. ಕೆಲವೊಮ್ಮೆ ಜಿಲ್ಲೆಯ ಭೌಗೋಳಿಕ ಹಾಗೂ ಗೊತ್ತುಪಡಿಸಿಕೊಂಡ ಕಾಲಮಿತಿ ವ್ಯಾಪ್ತಿಯನ್ನು ಮೀರಿಯೂ ಕೆಲವು ಮಾಹಿತಿಗಳನ್ನು ಬೇರೆ ಬೇರೆ ಪ್ರದೇಶದಿಂದಲೂ ಪಡೆಯಲಾಗಿದೆ. ಅವು ಸಹ ಆಂಶಿಕವಾದವುಗಳೇ ಆಗಿವೆ.

ನಮ್ಮ ನಾಡಿನ ಪ್ರಾಗಿತಿಹಾಸದಲ್ಲಿ ಅತೀ ಮಹತ್ವದ ಸ್ಥಾನ ಪಡೆದಿರುವ ಯಾದಗಿರಿ ಜಿಲ್ಲೆಯೂ ಸಾಂಸ್ಕೃತಿಕ ಇತಿಹಾಸದಲ್ಲಿಯೂ ಸಹ ಅಷ್ಟೇ ಮಹತ್ವದ ಸ್ಥಾನ ಪಡೆದಿತ್ತೆಂದರೆ ಅತಿಶಯೋಕ್ತಿ ಆಗಲಾರದು. ಈ ಪ್ರದೇಶದಲ್ಲಿದ್ದ ಪ್ರಾಚೀನ ನಾಡುಗಳ ಪ್ರಭಾವವು ಸಹ ಬೇರೆ ಬೇರೆ ಭಾಗಗಳ ಮೇಲೆಯೂ ಪರಿಣಾಮ ಬೀರಿದ್ದವು. ಮುಖ್ಯವಾಗಿ ಸಗರನಾಡು ಆ ಕಾಲದಲ್ಲಿ ತುಂಬಾ ಮಹತ್ವದ ಪಾತ್ರವನ್ನು ವಹಿಸಿರುವುದು ಲಿಖಿತ ದಾಖಲೆಗಳಲ್ಲಿಯೇ ವ್ಯಕ್ತವಾಗಿವೆ. ಅಲ್ಲದೇ ಕಲ್ಲಕೆಳಗು ನಾಡು ಸಹ ತನ್ನದೇ ಆದ ಮಹತ್ವದ ಇತಿಹಾಸ ಹೊಂದಿತ್ತು. ಇನ್ನೊಂದು ಪ್ರಾಚೀನ ಆಡಳಿತ ವಿಭಾಗ ಹಗರಟಗಿ ತರ್ದಾವಾಡಿ ನಾಡಿನಷ್ಟೆ ಪ್ರಾಮುಖ್ಯತೆ ಪಡೆದಿತ್ತು. ಈ ಪ್ರಾಚೀನ ಪ್ರದೇಶಗಳಲ್ಲಿದ್ದ ಬಹುತೇಕ ವಿವರಗಳು ಅಧ್ಯಯನದ ವ್ಯಾಪ್ತಿಯಲ್ಲಿಯೇ ಬಂದಂತವು. ಹಾಗಾಗಿ ಈ ಬಗೆಯಲ್ಲಿರುವ ಪ್ರಾಚೀನ ವಿಷಯ ವಿವರಗಳನ್ನು ಸಹ ಅಧ್ಯಯನದ ವ್ಯಾಪ್ತಿಯಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ಸಮೀಕ್ಷೆ

ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ ಕುರಿತು ಸ್ವತಂತ್ರ ಹಾಗೂ ಪ್ರತ್ಯೇಕ ಅಧ್ಯಯನ ಈವರೆಗೂ ಪ್ರಕಟಗೊಂಡಿಲ್ಲವಾದರೂ ಈ ಪ್ರದೇಶಕ್ಕೆ ಸಂಬಂಧಿಸಿದ ಹಲವಾರು ಸಂಗತಿಗಳ ಕುರಿತು ಆಂಶಿಕ ವಿವರಗಳು ಪ್ರಕಟವಾಗಿವೆ. ಅಂಥ ಅಧ್ಯಯನಗಳ ಕುರಿತು ಸ್ಥೂಲ ಪರಿಚಯ ನೀಡುವ ಪ್ರಯತ್ನ ಇದಾಗಿದೆ. ಅಲ್ಲದೇ ಅವರು ಕಟ್ಟಿಕೊಟ್ಟ ಆಲೋಚನೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಮನಃಪೂರ್ವಕವಾಗಿ ಬಳಸಿಕೊಳ್ಳಲಾಗಿದೆ.

ಪ್ರತಿಯೊಬ್ಬ ಸಂಶೋಧಕ ಇನ್ನೊಬ್ಬ ಸಂಶೋಧಕನ ಹೆಗಲು ಮೇಲೆ ನಿಂತು ನೋಡಿದಾಗ ಮಾತ್ರ ದೂರದ ಮಾರ್ಗ ಕ್ಷೀಣವಾಗಿ ಆದರೂ ಕಾಣುತ್ತದೆ. ಪ್ರಮುಖವಾಗಿ ಈ ಜಿಲ್ಲಾ ಪರಿಸರದಲ್ಲಿರುವ ಪ್ರಾಗಿತಿಹಾಸ ನೆಲೆಗಳ ಕುರಿತು ವಿಸ್ತೃತವಾದ ಅಧ್ಯಯನ ವರದಿಗಳು ಪ್ರಕಟವಾಗಿವೆ.

ಅಲ್ಲದೇ ಹದಿನೇಳನೆಯ ಶತಮಾನದಿಂದ ಹತ್ತೊಂಭತ್ತನೆಯ ಶತಮಾನದ ನಡುಗಾಲಿನವರೆಗೆ ಆಳ್ವಿಕೆ ಮಾಡಿದ ಸುರಪುರದ ಪಾಳೇಗಾರರ ಬಗೆಗೂ ಸಹ ವಿಸ್ತೃತವಾದ ಅಧ್ಯಯನಗಳು ಪ್ರಕಟಗೊಂಡಿವೆ. ಈ ಎರಡು ಕ್ಷೇತ್ರಗಳನ್ನು ಹೊರತುಪಡಿಸಿದರೆ ಈ ಜಿಲ್ಲೆಯ ಇತಿಹಾಸಕ್ಕೆ ಸಂಬಂಧಿಸಿದಂತೆ ಉಳಿದ ವಿವರಗಳುಳ್ಳ ಸಮಗ್ರ ಅಧ್ಯಯನಗಳು ಪ್ರಕಟಗೊಂಡಿಲ್ಲವೆಂದೇ ಅಭಿಪ್ರಾಯಿಸಬಹುದು. ಅಂಥ ಬಿಟ್ಟ ಜಾಗಗಳನ್ನು ತಕ್ಕಮಟ್ಟಿಗೆ ತುಂಬುವ ಕೆಲಸ ಈ ಅಧ್ಯಯನದ್ದು.

ನಮ್ಮ ನಾಡಿನ ಪ್ರಾಗಿತಿಹಾಸ ಪ್ರಾರಂಭ ಕಾಲದ ಹೆಜ್ಜೆ ಗುರುತುಗಳು ರಾಜ್ಯದ ಬೇರೆ ಬೇರೆ ಪ್ರದೇಶಗಳ ಹಲವು ನೆಲೆಗಳಲ್ಲಿ ಅಚ್ಚಳಿಯದೇ ಮೂಡಿಬಂದಿರುವ ಸಂಗತಿಗಳನ್ನು ಈಗಾಗಲೇ ಪುರಾತತ್ವ ಮತ್ತು ಇತಿಹಾಸ ಅಧ್ಯಯನಾಸಕ್ತರು ಹಾಗೂ ವಿವಿಧ ವಿದ್ವಾಂಸರುಗಳು ಪತ್ತೆಹಚ್ಚಿ ಪ್ರಕಟಿಸುತ್ತಾ ಬಂದಿದ್ದಾರೆ. ಮುಖ್ಯವಾಗಿ ಕೃಷ್ಣ ನದಿಕೊಳ್ಳದ ಭೀಮಾ, ಮಲಪ್ರಭಾ, ಹಾಗೂ ಘಟಪ್ರಭಾ ನದಿಗಳ ವ್ಯಾಪ್ತಿಯಲ್ಲಿ ಇಂಥ ನೆಲೆಗಳನ್ನು ಪತ್ತೆಹಚ್ಚಲಾಗಿದೆ. ಪ್ರಮುಖವಾಗಿ ಭೀಮಾನದಿ ಪ್ರದೇಶಗಳ ವ್ಯಾಪ್ತಿಯಲ್ಲಿರುವ ಹುಣಸಗಿ(ಸುರಪುರ ತಾಲೂಕು) ಖ್ಯಾಡ, ಢಾಣಕಶಿರೂರು(ಬಾದಾಮಿ ತಾಲೂಕು) ಘಟಪ್ರಭಾ ಪರಿಸರದ ಸಾಲ್ವಡಗಿ ಮತ್ತು ಕಲಾದಗಿ (ಬಾಗಲಕೋಟೆ ತಾಲೂಕು) ಅಲ್ಲದೇ ಕಾವೇರಿ ಕೊಳ್ಳದ ಬೇರೆ ಬೇರೆ ನೆಲೆಗಳ ಪ್ರಾಗಿತಿಹಾಸ ಕಾಲದ ಮಹತ್ವದ ವಿವರಗಳು ಈಗಾಗಲೇ ಪ್ರಕಟವಾಗಿರುವುದನ್ನು ಗಮನಿಸಬಹುದು. ಇಂಥ ಅಧ್ಯಯನಗಳನ್ನು ಅನುಲಕ್ಷಿಸಿ ಅಭಿಪ್ರಾಯಿಸಬಹುದಾದ ಸಂಗತಿಗಳೆಂದರೆ ಈ ನಾಡಿನಲ್ಲಿ ಪ್ರಾರಂಭಗೊಂಡ ಪುರಾತತ್ವ ಅಧ್ಯಯನಗಳ ಇತಿಹಾಸ ಅಧ್ಯಯನಗಳ ಅಧ್ಯಯನ(Historiography) ಕುರಿತು ವಿವೇಚಿಸುವುದಾದರೆ ಅಂಥ ಪ್ರಾರಂಭದ ಅಧ್ಯಯನಗಳು ಈ ಜಿಲ್ಲೆಯ ಕೆಲವು ನೆಲೆಗಳಲ್ಲಿ ದೊರಕಿರುವ ಸಾಕ್ಷಿಗಳಿಂದಲೇ ಪ್ರಾರಂಭವಾಗುತ್ತವೆ ಎಂಬುದು ಮುಖ್ಯ. ಈ ವಿವರಗಳು ಸಹ ಬಹುತೇಕರಿಗೆ ತಿಳಿದಿರುವ ಸಂಗತಿಗಳಾಗಿವೆ.

ಈ ಪ್ರದೇಶದಲ್ಲಿ ಮೊಟ್ಟ ಮೊದಲಿಗೆ ಕರ್ನಲ್ ಮೆಡೋಸ್ ಟೇಲರ್ ಎಂಬುವವರು ತಮ್ಮ ಆಸಕ್ತಿದಾಯಕ ಸಂಶೋಧನಾ ಕಾರ್ಯಗಳನ್ನು ಕೈಗೊಂಡರೆಂದು ಹೇಳಬಹುದು. ಅವರು ಕ್ಷೇತ್ರಕಾರ್ಯದ ಮೂಲಕ ಈ ಪ್ರದೇಶದಲ್ಲಿ ಕಂಡು ಬಂದ ನೆಲೆಗಳಲ್ಲಿನ ವಿವರಗಳ ಕುರಿತು ಪ್ರಪ್ರಥಮವಾಗಿ ವರದಿ ಪ್ರಕಟಿಸಿದ್ದಾರೆ. ಅಂಥ ವಿವರಗಳನ್ನೆಲ್ಲ ಸಂಗ್ರಹಿಸಿ ಶ್ರೀಯುತ ಜಿಯಾವುದ್ದೀನ್ ಯಾಜ್ದಾನಿ ಅವರು 'ಮೆಗಾಲಿಥಿಕ್ ಟೋಂಬ್ಸ್ ಆ್ಯಂಡ್ ಅದರ ಏನ್ಸೆಂಟ್ ರಿಮೆನ್ಸ್ ಇನ್ ದಿ ಡೆಕ್ಕನ್ ಹೈದ್ರಾಬಾದ್: ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್ ಆಫ್ ಹೈದ್ರಾಬಾದ್, ೧೯೬೧ ಎಂಬ ಶೀರ್ಷಿಕೆ ಅಡಿಯಲ್ಲಿ ಅವುಗಳನ್ನು ಮರುಪ್ರಕಟಿಸಿದ್ದಾರೆ. (ಇದು ೧೯೮೯ರಲ್ಲಿ ನವದೆಹಲಿಯ ವಿಳಾಸದೊಂದಿಗೆ ಮತ್ತೆ ಮರುಮುದ್ರಣಗೊಂಡಿದೆ). ಮುಖ್ಯವಾಗಿ ಮೆಡೋಸ್ ಟೇಲರನ್ನು ಕ್ರಿ.ಶ.೧೮೪೧-೧೮೫೩ ಹಾಗೂ ೧೮೫೮-೧೮೬೨ರವರೆಗಿನ ಕಾಲಾವಧಿಯಲ್ಲಿ ಈ ಪ್ರದೇಶದಲ್ಲಿ ಕೈಗೊಂಡ ಪುರಾತತ್ವ ಅನ್ವೇಷಣೆ ಹಾಗೂ ಉತ್ಖನನಗಳ ಕುರಿತಿರುವ ಮಾಹಿತಿಗಳುಳ್ಳ ಲೇಖನಗಳು ಈ ಗ್ರಂಥದಲ್ಲಿವೆ. ಪ್ರಮುಖ ಊರುಗಳಾಗಿದ್ದ ಸುರಪುರ ತಾಲೂಕಿನ ಹಗರಟಗಿ, ರಾಜನಕೋಳೂರು

ಹಾಗೂ ಶಹಾಪುರ ತಾಲೂಕಿನ ವಿಭೂತಿಹಳ್ಳಿ ಹಾಗೂ ಅಮ್ಲಾಪುರ(ಭೀಮರಾಯನ ಗುಡಿ) ಪರಿಸರದಲ್ಲಿ ವಿಸ್ತರಿಸಿಕೊಂಡಿದ್ದ ಪುರಾತತ್ವೀಯ ಅವಶೇಷಗಳ ಕುರಿತು ಮಹತ್ವದ ಮಾಹಿತಿಯನ್ನು ಮೊಟ್ಟಮೊದಲಿಗೆ ಟೇಲರ ತಮ್ಮ ಲೇಖನಗಳಲ್ಲಿ ನೀಡುತ್ತಾರೆ.

ಇದಲ್ಲದೇ ಶ್ರೀಯುತ ಮೆಡೋಸ್ ಟೇಲರ್ ಅವರು ಈ ಪ್ರದೇಶದ ಪ್ರಾಚೀನ ಪೂರ್ವ ಇತಿಹಾಸ ಮತ್ತು ಸಂಸ್ಕೃತಿಯ ಕುರಿತು ಇನ್ನು ಕೆಲವು ವಿವರಗಳನ್ನು ಪ್ರಕಟಿಸಿದ್ದಾರೆಂಬ ವಿವರಗಳು ಸಹ ದಾಖಲಾಗಿರುವುದುಂಟು. ಟೇಲರ್ ಮೆಡೋಸ್ ಪಿ, ೧೮೫೧, ಏನ್ಸೆಂಟ್ ರಿಮೆನ್ಸ್ ಆಟ್ ದಿ ವಿಲೇಜ್ ಆಫ್ ಜೇವರ್ಗಿ ನಿಯರ್ ಫಿರೋಜಾಬಾದ್ ಆನ್ ದಿ ಭೀಮಾ: ಜರ್ನಲ್ ಆಫ್ ದಿ ಬಾಂಬೆ ಬ್ರಾಂಚ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಸಂ.೩(೨)೧೭೯-೧೯೬(ಜನವರಿ-೧೮೫೧) ಟೇಲರ್ ಮೆಡೋಸ್ ಪಿ. ೧೮೬೮, ವೇಡರ್ ಆರ್ ವೆಡ್ಡರ್, ವಾಟ್ಸನ್ ಜೆ, ಫೋರ್ಬ್ಸ್ ಆ್ಯಂಡ್ ಜಾನ್ ಡಬ್ಲೂ ಕೆ(ಸಂ)., ಪೀಪಲ್ ಆಫ್ ಇಂಡಿಯಾ, ದೆಹಲಿ, ೪೫೪(ಮರುಮುದ್ರಣ, ೧೯೮೭) ಹಾಗೂ ಟೇಲರ್ ಮೆಡೋಸ್ ಪಿ, ೧೯೨೦, ದಿ ಸ್ಟೋರಿ ಆಫ್ ಮೈ ಲೈಫ್, ಲಂಡನ್ (ಹೊಸ ಆವೃತ್ತಿ).[೧] ದಾಖಲಿಸಿದ ಇಷ್ಟೊಂದು ಗ್ರಂಥಗಳಲ್ಲಿ ಮೆಡೋಸ್ ಟೇಲರ ಅವರು ರಚಿಸಿದ ಈ ಪ್ರದೇಶದ ಪ್ರಾಗಿತಿಹಾಸ ಕುರಿತ ಬೇರೆ ಬೇರೆ ಬಗೆಗೆ ಅಲ್ಲದೇ ಲೇಖನ ಮತ್ತು ವರದಿಗಳು ಪ್ರಕಟಗೊಂಡಿವೆ.

ಅಲ್ಲದೇ ಈ ಜಿಲ್ಲೆಯ ಪ್ರಾಗಿತಿಹಾಸದ ಕುರಿತು ಪ್ರಕಟಗೊಂಡಿರುವ ಮೊಟ್ಟ ಮೊದಲ ವಿವರಗಳು ಸಹ ಇವಾಗಿವೆ.

ಟೇಲರ್ ಮುಖ್ಯವಾಗಿ ಬೃಹತ್ ಶಿಲಾಯುಗ ಮತ್ತು ಐತಿಹಾಸಿಕ ಪ್ರಾರಂಭ ಕಾಲದ ಪುರಾತತ್ವ ಆಕರಗಳ ಬಗೆಗೆ ಹೆಚ್ಚಿನ ಗಮನಹರಿಸಿದ್ದರು. ಅಲ್ಲದೇ ನವಶಿಲಾಯುಗದ ಸಂಸ್ಕೃತಿಗೆ ಸಂಬಂಧಪಟ್ಟ ವಿವರಗಳನ್ನು ಮೊಟ್ಟಮೊದಲಿಗೆ ದಾಖಲಿಸಿರುವ ಶ್ರೇಯವು ಕೂಡಾ ಅವರಿಗೆ ಸಲ್ಲುತ್ತದೆ. ಆದರೆ ಪ್ರಾಗಿತಿಹಾಸದ ಮಾನವನ ಮೊಟ್ಟ ಮೊದಲ ಹೆಜ್ಜೆ ಗುರುತುಗಳು ಅಥವಾ ಆ ಕುರಿತಿರುವ ಆಕರಗಳನ್ನು ಪತ್ತೆ ಹಚ್ಚಿದ ಕೀರ್ತಿ ಮತ್ತು ಶ್ರೀಯುತ ಆರ್.ಬಿ.ಫೂಟ್ ಅವರಿಗೆ ಸಲ್ಲುವುದು. ಅಲ್ಲದೇ ಕನ್ನಡ ನಾಡಿನ ಪ್ರಾಗಿತಿಹಾಸಕ್ಕೆ ಸಂಬಂಧಿಸಿದ ಇಂಥ ಸಾಕ್ಷಿಗಳನ್ನು ಸಹ ಶ್ರೀಯುತ ಫುಟ್ ಅವರೇ ಮೊಟ್ಟ ಮೊದಲಿಗೆ ಈ ಜಿಲ್ಲೆಯ ಪರಿಸರದಲ್ಲಿರುವ ಬೈಚಬಾಳ ಕಣಿವೆಯಲ್ಲಿ ಪತ್ತೆಹಚ್ಚಿದ್ದರು ಎಂಬುದು ಸಹ ಬಹುಮುಖ್ಯವಾದ ಸಂಗತಿಯೆನಿಸುತ್ತದೆ.

ಭಾರತೀಯ ಪ್ರಾಗಿತಿಹಾಸದ(Pre-History) ಪಿತಾಮಹರೆನಿಸಿಕೊಂಡ ರಾಬರ್ಟ್ ಬ್ರೂಸ್ ಫೂಟ್ ಅವರು ಕ್ರಿ..ಶ.೧೮೬೩ರಲ್ಲಿ ಮದ್ರಾಸ್(ಚನ್ನೈ) ಸಮೀಪ ಇರುವ ಪಲ್ಲಾವರಮ್(Pallavavaram) ಸ್ಥಳದಲ್ಲಿ ಮೊಟ್ಟಮೊದಲಿಗೆ ಹಳೆಯ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ ಆಯುಧೋಪಕರಣವನ್ನು ಪತ್ತೆ ಹಚ್ಚಿದರು.[೨] ಇದು ಭಾರತೀಯ ಪುರಾತತ್ವ ಅಧ್ಯಯನದಲ್ಲಿ ಪ್ರಾಗಿತಿಹಾಸ ಸಂಸ್ಕೃತಿಯ ಕುರಿತು ಪ್ರಕಟಿಸಿರುವ ಅತಿ ಮಹತ್ವದ ಘಟನೆಯಾಗಿದೆ.

ಅಂಥದ್ದೇ ಕಾರ್ಯವನ್ನು ಕ್ರಿ.ಶ.೧೮೮೦ರ ಆಸುಪಾಸಿನಲ್ಲಿ ಶ್ರೀಯುತ ರಾಬರ್ಟ್ ಬ್ರೂಸ್ ಫೂಟ್ ಅವರೇ ಸ್ವತಹ ಕ್ಷೇತ್ರಕಾರ್ಯ ಮಾಡಿ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಯಡಳ್ಳಿ(ಬೈಚಬಾಳ ಕಣಿವೆ) ಗ್ರಾಮ ಪರಿಸರದಲ್ಲಿ ಆದಿ ಶಿಲಾಯುಗ (palieolithic) ಸಂಸ್ಕೃತಿಗೆ ಸಂಬಂಧಿಸಿದ ಆಯುಧೋಪಕರಣಗಳನ್ನು ಪತ್ತೆಹಚ್ಚುವುದರ ಮೂಲಕ ಇನ್ನೊಂದು ಇತಿಹಾಸವನ್ನು ಸಹ ನಿರ್ಮಿಸಿದರು.

ಈ ನೆಲೆಯಲ್ಲಿ ಆಶ್ಯೂಲಿಯನ್ ಮಾದರಿಯ ಆಯುಧಗಳನ್ನು (ಫ್ರಾನ್ಸ್ ದೇಶದ ನದಿಯೊಂದರ ದಡದಲ್ಲಿನ ಅಶ್ಯೂಲಿಯನ್ ಎಂಬ ಸ್ಥಳದಲ್ಲಿ ಈ ಕಾಲದ ಉಪಕರಣಗಳು ಮೊಟ್ಟಮೊದಲಿಗೆ) ಪತ್ತೆ ಹಚ್ಚಲಾಯಿತು) ಹಾಗಾಗಿ ಆ ಮಾದರಿಯ ಉಪಕರಣಗಳನ್ನು ಅದೇ ಹೆಸರಿನಿಂದ ಕರೆಯುವ ವಾಡಿಕೆವುಂಟು. ಆದರೆ ವಾಸ್ತವವಾಗಿ ಈ ನೆಲೆಯಲ್ಲಿ ಸಿಕ್ಕ ಉಪಕರಣಗಳ ಮಾಧ್ಯಮದ (ಮಟಿರಿಯಲ್) ಕುರಿತು ಬಿಸಿ ಚರ್ಚೆಗಳು ಹುಟ್ಟಿಕೊಂಡವು. ಕಾರಣ ಉಪಕರಣ ತಯಾರಿಸಲು ಉಪಯೋಗಿಸಿದ ಸಾಧನವು ಸುಣ್ಣದ ಕಲ್ಲಿನದ್ದು. ಆದರೆ ಅಶ್ಯುಲಿಯನ್ ಮಾದರಿಯ ಉಪಕರಣಗಳು ಹೆಚ್ಚಾಗಿ ಬೆಣಚು ಕಲ್ಲಿನಲ್ಲಿ ಇರುವಂಥವುಗಳು. ಹಾಗಾಗಿ ಯಡಳ್ಳಿಯ ನೆಲೆಯು ಅಶ್ಯುಲನ್ ಕಾಲಾವಧಿಗೆ ಸರಿಸಮಾನವಾದುದ್ದೇ ಎಂಬ ಪ್ರಶ್ನೆಗಳು ಹುಟ್ಟಿಕೊಂಡವು. ಅಲ್ಲದೇ ಅಲ್ಲಿಯೇ ಆ ಕಾಲದ ಜನವಸತಿಯು ಸಹ ಈ ಜಾಗದಲ್ಲಿತ್ತು ಎಂಬುದು ಇನ್ನೊಂದು ಚರ್ಚೆಯ ಮುಖ್ಯ ವಿಷಯವಾಯಿತು. ಇಲ್ಲಿ ಮುಖ್ಯವಾಗಿ ಸುಣ್ಣದಕಲ್ಲಿ(ಲೈಮ್‌ಸ್ಟೋನ್)ನಲ್ಲಿ ರೂಪಿಸಿದ ಅಂಡಾಕಾರದ ಉಪಕರಣಗಳು ಹಾಗೂ ಆ ಕಾಲದ ಜನವರ್ಗವು ಬಳಕೆ ಮಾಡಿದ ಈ (ವಸ್ತು)ಗಳ ಬಗೆಗೆ ಹಲವು ಜಿಜ್ಞಾಸೆಗಳು ಪುರಾತತ್ವಜ್ಞರಲ್ಲಿ ಹುಟ್ಟಿಕೊಂಡವು. ಆದರೆ ಅದು ಆ ಕಾಲದ ವಾಸಯೋಗ್ಯ ನೆಲೆಯಾಗಿತ್ತೆಂಬುದಲ್ಲದೇ ಆ ನೆಲೆಯಲ್ಲಿ ಕಂಡುಬರುವ ಶಿಲಾಯುಧಗಳು ಸಹ ಖಚಿತವಾಗಿ ಆದಿಶಿಲಾಯುಗಕ್ಕೆ ಸಂಬಂಧಿಸಿದವುಗಳು ಎಂಬುದು ಫೂಟ್‌ರ ಅಭಿಪ್ರಾಯವಾಗಿತ್ತು. ಆ ಕುರಿತು ವಿವರವುಳ್ಳ ಮಾಹಿತಿಗಳನ್ನು ದಿ ಫೂಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರಿ ಹಿಸ್ಟಾರಿಕ್ ಆ್ಯಂಡ್ ಪ್ರೊಟೊ ಹಿಸ್ಟಾರಿಕ್ ಆಂಟಿಕ್ವಿಟಿಸ್; ನೋಟ್ಸ್ ಆನ್ ದೇರ್ ಏಜಸ್ ಅಂಡ್ ಡಿಸ್ಟ್ರಿಬ್ಯುಷನ್, ಮದ್ರಾಸ್ ಗೌರ್ನಮೆಂಟ್, ಮದ್ರಾಸ್, ೧೯೧೬ ಎಂಬ ಪುಸ್ತಕದಲ್ಲಿ ಪ್ರಕಟಿಸಲಾಗಿದೆ. ರಾಬರ್ಟ್ ಬ್ರೂಸ್ ಫೂಟ್ ಅವರ ಪ್ರಕಟಿಸಿದ ಈ ಮಾಹಿತಿಗಳು ನಮ್ಮ ನಾಡಿನ ಹಾಗೂ ಇಡೀ ದಕ್ಷಿಣ ಭಾರತದ ಪುರಾತತ್ವ ಅಧ್ಯಯನ ಬೆಳವಣಿಗೆಗೆ ಹೊಸ ದಿಕ್ಕನ್ನು ನೀಡದಂತಾದವು ಎಂದು ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಅವರಿಗಿಂತ ಮೊದಲೇ ಡಾ.ಪ್ರಿಮರ್ರೊ (Dr Primorose) ಅವರು ರಾಯಚೂರಿನ ಸರಕಾರಿ ವಸತಿ(Bungalow) ಗೃಹದ ಹಿಂಭಾಗದಲ್ಲಿ ಕೈಕೊಡಲಿ, ಚಕ್ಕೆ ಮತ್ತು ಮೊನೆಗಳಂತಹ ಆಯುಧೋಪಕರಣಗಳನ್ನು ಪತ್ತೆ ಹಚ್ಚಿದ್ದರು ಎಂಬ ಮಾಹಿತಿಗಳು ಸಹ ದಾಖಲಾಗಿವೆ.[೬] ಆದರೆ ಆ ವಿವರಗಳು ಹೆಚ್ಚಿನವರಿಗೆ ತಿಳಿದಿರಲಿಲ್ಲವೆಂದು ಭಾವಿಸಬಹುದು. ಹಾಗಾಗಿ ಫೂಟ್ ಅವರು ಪ್ರಕಟಿಸಿದ ವಿವರಗಳೇ ಹೆಚ್ಚಿನ ಮಹತ್ವ ಪಡೆದಿವೆಯೆಂದು ಅಭಿಪ್ರಾಯಿಸಬಹುದು.

ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಬಗೆಯ ಅಧ್ಯಯನಗಳು ಸುಮಾರು ಒಂದು ಶತಮಾನ ಕಾಲ ನಿಂತಂತೆ ಕಾಣುತ್ತವೆ. ಕಾರಣ ೧೮೮೦-೧೯೭೦ರ ಈ ಅವಧಿಯಲ್ಲಿ ಈ ಪ್ರದೇಶ ಕುರಿತು ಪುರಾತತ್ವ ಸಂಶೋಧನೆ, ಅನ್ವೇಷಣೆ ಹಾಗೂ ಉತ್ಖನನಗಳಿಗೆ ಸಂಬಂಧಿಸಿದಂತೆ ವಿವರಗಳು ಪ್ರಕಟಗೊಂಡಿರುವ ಬಗೆಗೆ ಮಾಹಿತಿಗಳಿಲ್ಲ. ಇಂಥ ಹಿನ್ನೆಡೆಗೆ ಸ್ಪಷ್ಟ ಕಾರಣಗಳು ತಿಳಿದುಬಂದಿಲ್ಲ. ಆದರೆ ಈ ಪ್ರದೇಶಕ್ಕೆ ಸಂಬಂಧಿಸಿದ ಇತಿಹಾಸ ಕಾಲದ ಘಟನೆಗಳನ್ನು ಕಟ್ಟಿಕೊಡುವಲ್ಲಿ ಮಹತ್ವದ ಪಾತ್ರ ವಹಿಸುವ ಶಾಸನಗಳ ಕುರಿತ ಸಂಗ್ರಹ ಹಾಗೂ ವಿವರಿಸುವ ಸಂಶೋಧನಾ ಪ್ರಯತ್ನಗಳು ಮೇಲೆ ವಿವರಿಸಿದ ಅಕಾಲ ಅವಧಿಯಲ್ಲಿಯೂ ಜರುಗಿವೆಂಬುದು ಮುಖ್ಯ ಸಂಗತಿಯಾಗುತ್ತವೆ.

ಈ ಪ್ರದೇಶಕ್ಕೆ ಸಂಬಂಧಿಸಿದ ಪುರಾತತ್ವೀಯ ಅಧ್ಯಯನಗಳು ಕ್ರಿ.ಶ.೧೯೭೦ರ ನಂತರ ಮತ್ತೆ ಗರಿಗೆದರಿದವು. ಕರ್ನಲ್ ಮೆಡೋಸ್ ಟೇಲರ್ ಹಾಕಿಕೊಟ್ಟ ವಿವರಗಳ ಬುನಾದಿಯ ಮೇಲೆ ನೂತನ ಶಿಲಾಯುಗ(Neo-lithic Cluture) ಹಾಗೂ ಬೃಹತ್ ಶಿಲಾ ಸಮಾಧಿ ಸಂಸ್ಕೃತಿ(Megalithic Cultute) ಕುರಿತ ವಿಸ್ತೃತ ಅಧ್ಯಯನಗಳನ್ನು ಕೆಲವು ವಿದ್ವಾಂಸರು ಕೈಗೊಂಡರು. ಮುಖ್ಯವಾಗಿ ಬೃಹತ್ ಶಿಲಾ ಸಮಾಧಿ ಕುರಿತಂತೆ ಡಾ.ಅ.ಸುಂದರ, ಡಾ.ಬಿ.ಕೆ.ಗುರುರಾಜರಾವ್ ಹಾಗೂ ಡಾ.ಎಂ.ಎಸ್.ನಾಗರಾಜರಾವ್ ಅವರು ವಿವರವಾಗಿರುವ ಮತ್ತು ವಿಶೇಷ ಅಧ್ಯಯನಗಳನ್ನು ಪ್ರಕಟಿಸಿದರು. ಅಲ್ಲದೇ ಅವರುಗಳ ಅಧ್ಯಯನ ಕ್ಷೇತ್ರವೂ ದಕ್ಷಿಣ ಭಾರತದಲ್ಲಿಯೇ ಕೇಂದ್ರೀಕೃತವಾಗಿದ್ದ ಬೇರೆ ಬೇರೆ ನೆಲೆಗಳಾಗಿದ್ದವು. ತಕ್ಕಮಟ್ಟಿಗೆ ಅಸ್ತಿತ್ವ ಉಳಿಸಿಕೊಂಡಿದ್ದ ಪ್ರಮುಖ ನೆಲೆಗಳ ಕುರಿತಂತೂ ವಿವರ ಅಧ್ಯಯನಗಳನ್ನು ಕೈಗೊಂಡರು. ಅವುಗಳ ಪರಿಣಾಮದಿಂದ ಪ್ರಾಗಿತಿಹಾಸ ಅಧ್ಯಯನಗಳನ್ನು ಇನ್ನಷ್ಟು ರೋಚಕಗೊಳ್ಳುವಂತೆ ಮಾಡಿದವು. ಮುಖ್ಯವಾಗಿ ಸುಂದರ ಎ, ಅವರಿಂದ ರಚಿತಗೊಂಡ 'ದಿ ಅರ್ಲಿ ಚೇಂಬರ್ ಟೋಂಬ್ಸ್ ಆಫ್ ಸೌಥ್ ಇಂಡಿಯಾ, ೧೯೭೫, ನವದೆಹಲಿ, ಹಾಗೂ ಗುರುರಾಜರಾವ್ ಬಿ.ಕೆ, ಅವರ 'ದಿ ಮೆಗಾಲಿಥಿಕ್ ಕಲ್ಚರ್ ಇನ್ ಸೌಥ್ ಇಂಡಿಯಾ, ೧೯೭೨, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು ಎಂಬ ಎರಡು ಕೃತಿಗಳಲ್ಲಿ ಈ ಜಿಲ್ಲೆಯಲ್ಲಿರುವ ನೆಲೆಗಳ ಕುರಿತು ತುಂಬಾ ವರ್ಷಗಳ ನಂತರ ಮತ್ತೆ ವರದಿಗಳು ಪ್ರಕಟಗೊಂಡವು. ಪ್ರಮುಖವಾಗಿ ಸುರಪುರ ತಾಲೂಕಿನ ಹಗರಟಗಿ, ರಾಜನಕೋಳೂರು, ಕೊಡೇಕಲ್ಲು, ತಿಂಥಣಿ ಹಾಗೂ ಶಹಾಪುರ ತಾಲೂಕಿನ ವಿಭೂತಿಹಳ್ಳಿ ಹಾಗೂ ಆಮ್ಲಾಪುರ(ಭೀಮರಾಯನ ಗುಡಿ) ನೆಲೆಗಳ ಕುರಿತು ವಿಸ್ತೃತವಾದ ವಿವರಗಳು ಈ ಗ್ರಂಥಗಳಲ್ಲಿ ಪ್ರಕಟವಾಗಿರುವುದನ್ನು ಗಮನಿಸಬಹುದು.

ಈ ವಿಚಾರಗಳು ಬೃಹತ್ ಶಿಲಾಸಮಾಧಿ ಸಂಸ್ಕೃತಿಗೆ ಸಂಬಂಧಿಸಿದ ಅಧ್ಯಯನಗಳಾದರೇ, ಪುಣೆಯಲ್ಲಿರುವ ಡೆಕನ್ ಕಾಲೇಜು ಸಂಶೋಧನಾ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತರಾಗಿರುವ ಡಾ.ಕೆ.ಪದ್ದಯ್ಯ ಅವರು ಹಳೆಯ ಶಿಲಾಯುಗ ನೆಲೆಗಳಿಗೆ ಸಂಬಂಧಿಸಿದ ವಿಷಯಗಳನ್ನು ತಮ್ಮ ಅಧ್ಯಯನಕ್ಕೆ ಆಯ್ದುಕೊಂಡು ವರದಿಗಳನ್ನು ಪ್ರಕಟಿಸಿದ್ದಾರೆ. ಮುಖ್ಯವಾಗಿ ರಾಬರ್ಟ್ ಬ್ರೂಸ್

ಫೂಟ್ ಅವರು ಅನ್ವೇಷಿಸಿ ಪ್ರಕಟಿಸಿದ ವಿವರಗಳ ಕುರಿತಂತೆ ಇನ್ನೂ ಹೆಚ್ಚಿನ ಆಳವಾದ ತಲಸ್ಪರ್ಶಿಯ ಹಾಗೂ ಗಂಭೀರ ಅಧ್ಯಯನಗಳ ಅವಶ್ಯಕತೆಯ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿರುವ ನೆಲೆಗಳ ಕುರಿತಂತೆ ವಿಸ್ತೃತವಾದ ಬಹುಶ್ರುತ ಅಧ್ಯಯನ ವಿವರಗಳನ್ನು ಕಟ್ಟುವ ಪ್ರಯತ್ನ ಮಾಡಿದರು. ಈ ಬಗೆಗೆ ಅವರು ನೀಡಿರುವ ಅಧ್ಯಯನ ಫಲಿತಗಳು ಜಾಗತಿಕ ಮಟ್ಟದಲ್ಲಿ ಪುರಾತತ್ವಜ್ಞರನ್ನು ಗಮನ ಸೆಳೆದವು ಎಂದರೆ ತಪ್ಪಾಗಲಾರದು. ಮುಖ್ಯವಾಗಿ ಹಳೆಯಶಿಲಾಯುಗ(Palaeolithic), ನೂತನ ಶಿಲಾ ಸಂಸ್ಕೃತಿ(Neolithic) ಹಾಗೂ ಶಿಲಾ-ತಾಮ್ರ(Neo-Chalco-lithic) ಸಂಸ್ಕೃತಿಯ ಕಾಲಕ್ಕೆ ಸಂಬಂಧಿಸಿದ ಬೂದಿದಿಬ್ಬ ಅಥವಾ ಗುಡ್ಡ(Ashmounds)ಗಳ ಬಗೆಗೆ ವಿಶೇಷವಾದ ಅಧ್ಯಯನಗಳನ್ನು ಕೈಗೊಂಡರು. ಸುಮಾರು ಮೂರು ದಶಕಗಳ ಕಾಲ ಅವರು ಈ ಜಿಲ್ಲಾ ಪ್ರದೇಶದ ಬೂದಿಹಾಳ, ಹಗರಟಗಿ, ರಾಜನಕೋಳೂರು, ಕೊಡೇಕಲ್ಲು, ಹುಣಸಗಿಕೊಳ್ಳ ಹಾಗೂ ಬೈಚಬಾಳ ಕಣಿವೆಯಲ್ಲಿರುವ ನೆಲೆಗಳನ್ನು ಸಮಗ್ರವಾಗಿ ಪರೀಕ್ಷಿಸಿ ವರದಿ ಪ್ರಕಟಿಸಿದ್ದಾರೆ. ಪದ್ದಯ್ಯ ಕೆ, ಪ್ರಿ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಇನ್‌ವೆಸ್ಟಿಗೇಶನ್ಸ್ ಇನ್ ಶೋರಾಪುರ-ದೋ ಅಬ್, ೧೯೬೮(ಅಪ್ರಕಟಿತ ಸಂಶೋಧನಾ ಪ್ರಬಂಧ) ಡೆಕನ್ ಕಾಲೇಜು ಸಂಶೋಧನಾ ಸಂಸ್ಥೆ ಪುಣೆ. ಇನ್‌ವೆಸ್ಟಿಗೇಶನ್ ಇನ್ ಟು ದಿ ನಿಯೋಲಿಥಿಕ್ ಕಲ್ಚರ್ ಆಫ್ ದಿ ಶೋರಾಪುರ ದೋ-ಅಬ್ ಸೌಥ್ ಇಂಡಿಯಾ, ೧೯೭೩, ಲೈಡೆನ್ ಇ.ಜೆ ಬ್ರಿಲ್.(ಈ ಪ್ರಕಾಶಕ ಸಂಸ್ಥೆಯು ಅಂತರಾಷ್ಟ್ರೀಯ ಮಟ್ಟದ ಅತ್ಯುನ್ನತ ಪ್ರಕಾಶಕ ಸಂಸ್ಥೆಯಾಗಿದೆ). ಕೆ.ಪದ್ದಯ್ಯ, ಆ್ಯಶ್‌ಮೌಂಡ್ಸ್ ಎಕ್ಸ್‌ಕವೇಶನ್ಸ್ ಆ್ಯಟ್ ಬೂದಿಹಾಳ್, ಗುಲಬರ್ಗಾ ಡಿಸ್ಟ್ರಿಕ್ಟ್, ಕರ್ನಾಟಕ, ಮ್ಯಾನ್ ಆ್ಯಂಡ್ ಇನ್‌ವ್ಹಿರಾನ್‌ಮೆಂಟ್೧೮(೧)೫೭:೮೭, ೧೯೯೩. ಕೆ.ಪದ್ದಯ್ಯ, ಫರದರ್ ಫೀಲ್ಡ್ ಇನ್‌ವೆಸ್ಟಿಗೇಶನ್ಸ್ ಆ್ಯಟ್ ಬೂದಿಹಾಳ, ಗುಲಬರ್ಗಾ ಡಿಸ್ಟ್ರಿಕ್ಟ್ ಕರ್ನಾಟಕ, ಬುಲೆಟಿನ್ ಆಫ್ ದಿ ಡೆಕನ್ ಕಾಲೇಜ್ ರೀಸರ್ಚ್ ೫-೩(೧೯೯೩) ೨೭೭-೩೨೨, ೧೯೯೫. ಕೆ.ಪದ್ದಯ್ಯ, ಇವೆಡೆನ್ಸ್ ಆಫ್ ನಿಯೋಲಿಥಿಕ್ ಕ್ಯಾಟಲ್-ಪೆನ್ನಿಂಗ್ ಆ್ಯಟ್ ಬೂದಿಹಾಳ, ಗುಲಬರ್ಗಾ ಡಿಸ್ಟ್ರಿಕ್ಟ್ ಕರ್ನಾಟಕ. ಸೌಥ್ ಏಶಿಯನ್ ಸ್ಟಡೀಸ್, ೧೪:೧೪೧:೫೩, ೧೯೯೮. ಹಾಗೂ ಪದ್ದಯ್ಯ ಕೆ, ಥಾಮಸ್ ಪಿ.ಕೆ, ಆ್ಯಂಡ್ ಜೋಗಳೇಕರ ಪಿ.ಪಿ, ಎ ನಿಯೋಲಿಥಿಕ್ ಆ್ಯನಿಮಲ್ ಬುಚ್‌ರಿಂಗ್ ಫ್ಲೋರಾ ಫ್ರಾಮ್ ಬೂದಿಹಾಳ, ಗುಲಬರ್ಗಾ ಡಿಸ್ಟ್ರಿಕ್ಟ್, ಕರ್ನಾಟಕ, ಮ್ಯಾನ್ ಆ್ಯಂಡ್ ಇನ್‌ವ್ಹಿರಾನ್‌ಮಂಟ್, ೨೦(೨)೨೩-೩೧), ೧೯೯೫ರಲ್ಲಿ ಪ್ರಕಟಗೊಂಡ ವಿವರಗಳಲ್ಲಿ ಈ ಪ್ರದೇಶದ ನೆಲೆಗಳ ಕುರಿತು ವಿಸ್ತೃತವಾದ ಮಾಹಿತಿಗಳು ಪ್ರಕಟವಾಗಿವೆ.

ಸುವ್ಯವಸ್ಥಿತ ಇಂಥ ಅಧ್ಯಯನಗಳಲ್ಲದೇ ಈ ಜಿಲ್ಲೆಯಲ್ಲಿರುವ ಮೂರೂ ತಾಲೂಕಿನಲ್ಲಿರುವ ಹತ್ತು ಹಲವು ಬೇರೆ ಬೇರೆ ನೆಲೆಗಳ ಕುರಿತು ಸಂಕ್ಷಿಪ್ತವಾದ ವರದಿಗಳು ಸಹ ಪ್ರಕಟವಾಗಿವೆ. ಕೆ.ಜಿ.ಶಿವತಾರಕ್, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧ರಲ್ಲಿ ಪ್ರಕಟಿತವಾದ ಗ್ರಂಥದಲ್ಲಿ ಆಕರ ಸೂಚಿ ರೂಪದ ವಿವರಗಳನ್ನು ನೀಡಲಾಗಿದೆ. ಬೇರೆ ಬೇರೆ ಸಂಶೋಧನಾ ಗ್ರಂಥಗಳಲ್ಲಿ ಪ್ರಕಟಗೊಂಡ ಈ ಪ್ರದೇಶದಲ್ಲಿರುವ

ಪ್ರಾಚೀನಪೂರ್ವ ಇತಿಹಾಸದ ನೆಲೆಗಳ ಬಗೆಗಿರುವ ಮಾಹಿತಿಗಳನ್ನು ಕ್ರೋಢೀಕರಿಸಿ ಸೂಚಿ ರೂಪದಲ್ಲಿ ಪ್ರಕಟಿಸಲಾಗಿದೆ. ಈವರೆಗೂ ವಿವರಿಸಿರುವ ಇಂಥ ವಿವರಗಳು ಈ ಜಿಲ್ಲೆಯಲ್ಲಿರುವ ನೆಲೆಗಳ ಕುರಿತು ಮಾಹಿತಿ ನೀಡುವ ಪ್ರಮುಖ ಆಕರಗಳ ಕುರಿತ ವಿವರಗಳಾಗಿವೆ.

ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಾಯಗಳನ್ನು ಕಟ್ಟಿಕೊಡುವಲ್ಲಿ ಶಾಸನ ಆಕರಗಳು ಸಹ ಅತ್ಯಂತ ಪ್ರಮುಖ ಪಾತ್ರವಹಿಸುತ್ತವೆ. ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿರುವ ಮಾಹಿತಿ ಸಂಗ್ರಹ ಹಾಗೂ ಅವುಗಳನ್ನು ಪ್ರಕಟಿಸುವ ಕಾರ್ಯಗಳು ಕಳೆದು ಒಂದು ಶತಮಾನದಿಂದಲೂ ನಡೆಯುತ್ತಾ ಬಂದಿವೆ. ಆದರೆ ಬೇರೆ ಬೇರೆ ಪ್ರದೇಶಗಳಿಗೆ ಹೋಲಿಸಿದರೆ ಇಲ್ಲಿ ನಡೆದಿರುವ ಈ ಬಗೆಯ ಕಾರ್ಯಗಳಂತೂ ತೀರಾ ಕಡಿಮೆ ಎಂದೇ ಅಭಿಪ್ರಾಯಿಸಬೇಕಾಗುತ್ತದೆ.

ಭಾರತ ಹಾಗೂ ಕರ್ನಾಟಕ ಸೇರಿದಂತೆ ಶಾಸನಾಧ್ಯಯನಗಳ ಕಾರ್ಯಗಳು ೧೮ನೇ ಶತಮಾನದ ನಡುಗಾಲದಿಂದಲೇ ಪ್ರಾರಂಭವಾಗಿವೆ. ಕರ್ನಲ್ ಕಾಲಿನ್ ಮೆಕೆಂಝಿ ಮತ್ತು ವಾಲ್ಟರ್ ಇಲಿಯಟ್ ಎಂಬ ಮಹಾಶಯರು ಮೊಟ್ಟಮೊದಲಿಗೆ ಈ ಬಗೆಯ ಸಂಗ್ರಹ ಕಾರ್ಯಗಳನ್ನು ಪ್ರಾರಂಭಿಸಿದ ಮೊದಲಿಗರೆಂದು ಅಭಿಪ್ರಾಯಿಸಲಾಗುತ್ತದೆ. ಹಾಗಾಗಿ ಅವರನ್ನು ಈ ಕ್ಷೇತ್ರದ ಮುಂಗೋಳಿಗಳೆಂದು ಕರೆದಿರುವುದರಲ್ಲಿ ಉತ್ಪ್ರೇಕ್ಷೆ ಇರಲಾರದು. ಅದರಂತೆ ಈ ಭಾಗದ ಕೆಲವು ಶಾಸನಗಳನ್ನು ಅವರಿಬ್ಬರೂ ತಮ್ಮ ತಮ್ಮ ಹೊತ್ತಿಗೆಗಳಲ್ಲಿ ಪ್ರಕಟಿಸಿದ್ದಾರೆ ಎಂಬ ವಿವರಗಳು ದಾಖಲಾಗಿವೆ.[೪] ಅಲ್ಲದೇ ಇವು ಮೆಕೆಂಝಿ ಸಂಗ್ರಹದಲ್ಲಿ ಹಾಗೂ ಇಲಿಯಟ್ ಸಿದ್ಧಪಡಿಸಿದ ಕರ್ನಾಟಕ ದೇಶ ಇನ್‌ಸ್ಕ್ರಿಪಶನ್ಸ್ ಎಂಬ ಸಂಪುಟದಲ್ಲಿ ಈ ಶಾಸನ ಮಾಹಿತಿಗಳಿರುವ ಉಲ್ಲೇಖಗಳಿವೆ. ಇವರಲ್ಲದೇ ಶ್ರೀಯುತ ಜಾನ್ ಫೇತಫುಲ್ ಫ್ಲೀಟ್, ಶ್ರೀಯುತ ಶಿವಾನಂದ ಚನ್ನಪ್ಪ ನಂದಿಮಠ, ಡಾ.ಎಲ್.ಡಿ.ಬಾರ್ನೆಟ್ ಅವರು ನೈಜಾಂ ಕರ್ನಾಟಕ ಅಥವಾ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿರುವ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುವ ಕಾರ್ಯಗಳನ್ನು ಮಾಡಿದ್ದಾರೆ. ಆದರೆ ಮೊಟ್ಟಮೊದಲಿಗೆ ಈ ಭಾಗದ ಶಾಸನಗಳ ಕುರಿತು ಹೆಚ್ಚಿನ ಅಧ್ಯಯನ ಕೈಗೊಂಡ ಶ್ರೇಯಸ್ಸು ಮಾತ್ರ ಡಾ.ಪಾಂಡುರಂಗ ಭೀಮರಾವ್ ದೇಸಾಯಿ ಅವರಿಗೆ ಸಲ್ಲುವುದು. ಅವರ 'ಜೈನೀಸಮ್ ಇನ್ ಸೌಥ್ ಇಂಡಿಯಾ ಆ್ಯಂಡ್ ಸಮ್ ಜೈನಾ ಎಫಿಗ್ರಾಪ್ಸ್', ಪ್ರಕಟಣೆ: ಜೈನ್ ಸಂಸ್ಕೃತಿ ಸಂರಕ್ಷಣ ಸಂಘ, ಸೊಲ್ಲಾಪುರ, ೧೯೫೭ ಎಂಬ ಸಂಶೋದನಾ ಮಹಾಪ್ರಬಂಧದಲ್ಲಿ ಪ್ರಕಟವಾಗಿರುವುದನ್ನು ನೋಡಬಹುದು(೨೦೦೧ರಲ್ಲಿ ಇದು ಮರುಮುದ್ರಣಗೊಂಡಿದೆ). ಕುಲಕರ್ಣಿ ವ್ಹಿ.ಎಸ್. ಹಿಸ್ಟಾರಿಕಲ್ ಆ್ಯಂಡ್ ಕಲ್ಚರಲ್ ಸ್ಟಡೀಸ್ ಆಫ್ ದಿ ರಿಜನ್ ಅರೌಂಡ್ ಬಸವಕಲ್ಯಾಣ; ಬೇಸ್ಡ್ ಆನ್ ಇನ್ಸ್ಕ್ರಿಪ್ಶನ್ಸ್(ಅಪ್ರಕಟಿತ ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫),, ಶಿವಾನಂದ ವ್ಹಿ., ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ಕನ್ನಡ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಹಿರೇಮಠ ಬಿ.ಆರ್. ಮತ್ತು ಗೋಗಿ ಹನುಮಾಕ್ಷಿ, ಮುದನೂರು ಮತ್ತು ಯಡ್ರಾಮಿ ಶಾಸನಗಳು, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, ೧೯೯೪. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಮಹಿಳಾ

ಸಾಹಿತ್ಯಿಕ, ನವನಗರ, ಹುಬ್ಬಳ್ಳಿ, ೧೯೯೫(ಗೋಗಿ ಹನುಮಾಕ್ಷಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, ೧೯೯೬, ಗೋಗಿ ಹನುಮಾಕ್ಷಿ, ಅನುಶಾಸನ(ಸಂಪುಟ ಒಂದು) ಮಹಿಳಾ ಸಾಹಿತ್ಯಿಕ ನವನಗರ, ಹುಬ್ಬಳ್ಳಿ, ೨೦೦೨. ವನದುರ್ಗ ರಂಗರಾಜು, ಶಹಾಪುರ ತಾಲೂಕಿನ ಶಾಸನಗಳು: ಒಂದು ಸಮೀಕ್ಷೆ ಶಹಾಪುರ, ೧೯೯೬. ಅಬ್ದುಲ್ ಕರೀಮ್ ರಾ.ಗಂ.ಕನ್ಯಕೋಳೂರು, ಯಾದಗಿರಿ ಜಿಲ್ಲೆಯ ಶಾಸನಗಳು, ಹನಿ ಪ್ರಕಾಶನ, ಶಹಾಪುರ, ೨೦೧೦. ಪಾಟೀಲ ಸಿ.ಎಸ್ ಮತ್ತು ಬಾಲಸುಬ್ರಮಣ್ಯ, ಶಿರವಾಳ ಇಟ್ಸ್ ಮಾನ್ಯುಮೆಂಟ್ಸ್ ಸ್ಕಲ್ಪಚರ್ಸ್ ಆ್ಯಂಡ್ ಇನ್ಸ್ಕ್ರಿಪ್ಷನ್ಸ್ ಡೈರೆಕ್ಟೋರೇಟ್ ಆಫ್ ಆರ್ಕಿಯಾಲಾಜಿ ಆ್ಯಂಡ್ ಮ್ಯೂಸಿಯಂ, ಮೈಸೂರು ೨೦೦೧ ಎಂಬ ಗ್ರಂಥಗಳಲ್ಲಿ ಈ ಜಿಲ್ಲೆಯ ಗ್ರಾಮಗಳಲ್ಲಿ ಲಭ್ಯವಿರುವ ಶಾಸನಗಳಲ್ಲಿರುವ ಮಾಹಿತಿಗಳನ್ನು ಪ್ರಕಟಿಸಲಾಗಿದೆ.

ಈ ಭಾಗದ ಇತಿಹಾಸ ಕುರಿತ ವಿವರಗಳನ್ನು ಆಂಶಿಕವಾಗಿ ಕಟ್ಟಿಕೊಡುವ ಇನ್ನೂ ಕೆಲವು ಗ್ರಂಥಗಳು ಪ್ರಕಟವಾಗಿವೆ. ಕಪಟರಾಳ ಕೃಷ್ಣರಾಯ, ಶ್ರೀ ಚಂದಲಾ ಪರಮೇಶ್ವರಿ, ಕರ್ನಾಟಕ ಸಂಸ್ಕೃತಿಯ ಸಂಶೋಧನಾ, ಉಷಾ ಸಾಹಿತ್ಯ ಮಾಲೆ, ಮೈಸೂರು–೧೯೭೦. ಕೃಷ್ಣ ಎ(ಪ್ರಧಾನ ಸಂಪಾದಕರು) 'ಸಗರನಾಡು ದರ್ಶನ' ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫, ಅಕ್ಕಿ ಡಿ.ಎನ್, ಶಹಾಪುರ ತಾಲೂಕು ದರ್ಶನ, ಐಬಿಎಚ್, ಬೆಂಗಳೂರು, ೧೯೮೬, ಅದೇ ಲೇಖಕರಿಂದ ರಚನೆಗೊಂಡ ಸಗರನಾಡ ಸಿರಿ, ಕವಿಕುಂಚ ಪ್ರಕಾಶನ, ಗೋಗಿ, ೧೯೯೬. 'ಜಿನದನಿ' ಪಾವನ ಪ್ರಕಾಶನ, ಗುಲಬರ್ಗಾ, ೨೦೧೦. 'ಹಕ್ಕಲುತೆನೆ' ಕವಿಕುಂಚ ಪ್ರಕಾಶನ ಗೋಗಿ, ೨೦೧೧, 'ಗನ್ಧೋದಕ', ಕವಿಕುಂಚ ಪ್ರಕಾಶನ, ಗೋಗಿ, ೨೦೧೧ ಮತ್ತು 'ಗುಲ್ಬರ್ಗಾ ಜಿಲ್ಲೆಯ ಜೈನ ಪರಂಪರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦. ಇವು ಈ ಜಿಲ್ಲೆಯಲ್ಲಿರುವ ಕೆಲವು ಸ್ಥಳಗಳ ಕುರಿತು ಆಂಶಿಕವಾದ ವಿವರವುಳ್ಳ ಸಂಶೋಧನೆಗಳನ್ನು ಕಟ್ಟಿಕೊಟ್ಟಿರುವ ಗ್ರಂಥಗಳಾಗಿವೆಯೆಂದರೆ ತಪ್ಪಾಗಲಾರದು. ಅಲ್ಲದೇ ಮುಖ್ಯವಾಗಿ ಗಮನಿಸಬಹುದಾದ ವಿಚಾರಗಳೆಂದರೆ ಇಂಥ ಗ್ರಂಥಗಳಲ್ಲಿ ಈ ಪ್ರದೇಶದ ಕುರಿತು ಅವ್ಯಕ್ತ ರೂಪದಲ್ಲಿ ಗರಿಗೊಂಡಿರುವ ಸಂಶೋಧನಾ ಸಾಧ್ಯತೆಗಳನ್ನು ಸೂಚಿಸುವ ವಿವರಗಳನ್ನು ನೀಡಲಾಗಿದೆ.

ಶಹಾಪುರ ತಾಲೂಕಿನ ಶಿರವಾಳ ಗ್ರಾಮದಲ್ಲಿರುವ ದೇವಾಲಯಗಳ ಕುರಿತಂತೆ ವಿಸ್ತೃತವಾದ ಅಧ್ಯಯನವೊಂದು ಪ್ರಕಟಗೊಂಡಿದೆ. 'ಪಾಟೀಲ ಸಿ.ಎಸ್. ಮತ್ತು ಬಾಲಸುಬ್ರಹ್ಮಣ್ಯ 'ಶಿರವಾಳ– ಇಟ್ಸ್ ಮಾನ್ಯುಮೆಂಟ್ಸ್, ಸ್ಕಲ್ಪಚರ್ಸ್ ಆ್ಯಂಡ್ ಇನ್ಸ್ಕ್ರಿಪ್ಷನ್ಸ್, ಡೈರೆಕ್ಟೋರೇಟ್ ಆಫ್ ಆರ್ಕಿಯಾಲಾಜಿ ಆ್ಯಂಡ್ ಮ್ಯೂಸಿಯಂ, ಮೈಸೂರು, ೨೦೦೧, ಇದು ಆ ಗ್ರಾಮದಲ್ಲಿರುವ ದೇವಾಲಯಗಳನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದಂಥದ್ದು. ಯಾದಗಿರಿ ತಾಲೂಕಿನ ಬಗೆಗೆ ದೊಣ್ಣೆಗೌಡ್ರು ವೆಂಕಣ್ಣ ಮತ್ತು ಸಿದ್ಧಯ್ಯ ಕಲಾಲ, 'ಯಾದಗಿರಿ ತಾಲೂಕಿನ ದೇವಾಲಯಗಳು ವಾಸ್ತುಶಿಲ್ಪ' ಸೋನಿ ಪ್ರಕಾಶನ ಯಾದಗಿರಿ, ೨೦೦೧, ಇದು ಸಹ ಕೇವಲ ನಾಲ್ಕೈದು ಗ್ರಾಮಗಳಲ್ಲಿರುವ ದೇವಾಲಯಗಳ ಕುರಿತು ಪರಿಚಯಾತ್ಮಕ ವಿವರ ನೀಡುವ ಉದ್ದೇಶವನ್ನಿಟ್ಟುಕೊಂಡು

ಪ್ರಕಟಗೊಂಡಿರುವಂಥದ್ದು. ಈ ಎರಡು ಗ್ರಂಥಗಳನ್ನು ಹೊರತುಪಡಿಸಿದರೆ ಈ ಜಿಲ್ಲೆಯಲ್ಲಿರುವ ದೇವಾಲಯಗಳ ಕುರಿತು ಸಮಗ್ರವಾಗಿ ವಿವರಿಸುವ ಆಂಶಿಕವಾಗಿದ್ದರೂ ಸರಿ ಒಂದೇ ಒಂದು ಗ್ರಂಥವು ಈವರೆಗೂ ಪ್ರಕಟಗೊಂಡಿಲ್ಲವೆಂದೇ ಹೇಳಬಹುದು.

ಯಾದಗಿರಿ ಜಿಲ್ಲೆಯ ಪ್ರಮುಖ ತಾಲೂಕುಗಳಲ್ಲಿ ಒಂದಾಗಿರುವ ಸುರಪುರ ತಾಲೂಕಿನ ಇತಿಹಾಸ ಕುರಿತಂತೆ ವಿವೇಚಿಸುವ ಒಂದೆರಡು ಗ್ರಂಥಗಳು ಪ್ರಕಟಗೊಂಡಿವೆ. ಕಪಟರಾಳ ಕೃಷ್ಣರಾಯರ 'ಸುರಪುರ ಸಂಸ್ಥಾನದ ಇತಿಹಾಸ', (ಸಂ)ಧ್ರುವನಾರಾಯಣ ಎಂ, ಅನಂತ ಪ್ರಕಾಶನ, ಬೆಂಗಳೂರು, ೨೦೦೯. ಮತ್ತು ಡಾ. ಅರುಣಿ ಎಸ್.ಕೆ., ಅವರ 'ಸುರಪುರ ಸಂಸ್ಥಾನ'– ಹಿಸ್ಟಾರಿಕಲ್ ಆ್ಯಂಡ್ ಆರ್ಕಿಲಾಜಿಕಲ್ ಸ್ಟಡಿ ಆಫ್ ಪಾಳೇಗಾರ ಸ್ಟೇಟ್ ಇನ್ ಸೌಥ್ ಇಂಡಿಯಾ, ಭಾರತೀಯ ಕಲಾ ಪ್ರಕಾಶನ, ದೆಹಲಿ, ೨೦೦೪. ಇವು ಹದಿನೇಳನೆಯ ಶತಮಾನಾನಂತರದ ಸಾಂಸ್ಕೃತಿಕ ಇತಿಹಾಸವನ್ನು ಸಮಗ್ರವಾಗಿ ಕಟ್ಟಿಕೊಡುವ ಉದ್ಗ್ರಂಥಗಳಾಗಿವೆ. ಅಲ್ಲದೇ ದಖನಿ ಚಿತ್ರಕಲೆ ಹಾಗೂ ಸುರಪುರ ಚಿತ್ರಕಲೆ ಕುರಿತು ವಿವರಿಸುವ ಇನ್ನೆರಡು ಗ್ರಂಥಗಳು ಸಹ ಪ್ರಕಟಗೊಂಡಿವೆ.[೫]

ಈ ಭಾಗದ ಗ್ರಾಮಗಳ ಕುರಿತು ಸಂಕ್ಷಿಪ್ತ ಮಾಹಿತಿ ನೀಡುವ ಉದ್ದೇಶವನ್ನಿಟ್ಟುಕೊಂಡು ರಚನೆಯಾಗಿರುವ ಗುಲಬರ್ಗಾ ಜಿಲ್ಲೆಯ ಗ್ಯಾಜಿಟಿಯರ್ ತುಂಬಾ ಉಪಯುಕ್ತವಾಗಿದೆ. ಪಾಟೀಲ ಎಂ.ಬಿ(ಸಂ) ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಗುಲಬರ್ಗಾ ಜಿಲ್ಲೆ(ಕಲಬುರ್ಗಿ ಜಿಲ್ಲೆ) (ಪರಿಷ್ಕೃತ) ಆವೃತ್ತಿ, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು, ೧೯೯೭. ಅಲ್ಲದೇ ನಿಜಾಂ ಆಡಳಿತಾವಧಿಯಲ್ಲಿದ್ದ ಈ ಪ್ರದೇಶಗಳ ಕುರಿತು ಸಂಕ್ಷಿಪ್ತ ಮಾಹಿತಿಗಳನ್ನು ನೀಡುವ ಇನ್ನೊಂದು ಗ್ಯಾಸೆಟಿಯರ್ ಆ ಮೊದಲೇ ಪ್ರಕಟವಾಗಿದೆ. ಆದರೆ ಅದು ಈ ದಿನಗಳಲ್ಲಿ ಲಭ್ಯವಿರುವುದಿಲ್ಲ.

ಕಾಪಾಲಿಕರು ಮತ್ತು ಕಾಳಾಮುಖರು: ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು, ಲಾರೆಂಜೆನ್ ಡೆವಿಡ್(ಮೂಲ) ಅನು: ಕುಲಕರ್ಣಿ ವಿರೂಪಾಕ್ಷ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫ ಎಂಬ ಗ್ರಂಥವು ಈ ಪ್ರದೇಶದ ಆ ಕಾಲ ಸಂದರ್ಭದ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವಲ್ಲಿ ಸಹಾಯಕವಾಗುತ್ತದೆ. ಈ ಜಿಲ್ಲೆಗೆ ಸಂಬಂಧಿಸಿದ ಹಲವಾರು ಶಾಸನಗಳಲ್ಲಿರುವ ಮಾಹಿತಿಗಳನ್ನು ಆ ಗ್ರಂಥದಲ್ಲಿ ಬಳಸಿಕೊಳ್ಳಲಾಗಿದೆ. ಇವುಗಳಲ್ಲದೇ ಈ ಜಿಲ್ಲೆಯ ಕುರಿತಂತೆ ಆಂಶಿಕ ಮಾಹಿತಿಗಳನ್ನು ಸಾಂದರ್ಭಿಕವಾಗಿ ನೀಡುವ ಕೆಲವು ಗ್ರಂಥಗಳೆಂದರೆ, ಕೊಪ್ಪಾ ಎಸ್.ಕೆ, ತರ್ದವಾಡಿನಾಡು, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦ ಹಾಗೂ ನಾಗಯ್ಯ ಜೆ.ಎಂ, ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ, ೧೯೯೨. ಗೋಪಾಲ್ ಆರ್(ಸಂ) ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೭. ಕುಷ್ಟಗಿ ವಸಂತ 'ಕಾಗಿಣಾ, ಭೀಮಾ ಕೃಷ್ಣಾನದಿಕೊಳ್ಳದ ಸಾಂಸ್ಕೃತಿಕ ಪದರುಗಳು, ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು

ಪ್ರಕಾಶನ, ಗುಲಬರ್ಗಾ, ೨೦೧೧. ನಾಗಭೂಷಣ ಸಿ, ಕಲ್ಯಾಣ ಕರ್ನಾಟಕ ಸಾಹಿತ್ಯ-ಸಂಸ್ಕೃತಿ, ಅವಿರತ ಪುಸ್ತಕ-ಬೆಂಗಳೂರು, ೨೦೦೯, ಸುಂದರ ಅ(ಸಂ) 'ಕರ್ನಾಟಕ ಚರಿತ್ರೆ' ಸಂಪುಟ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಕಲಬುರ್ಗಿ ಎಂ.ಎ 'ಮಾರ್ಗ ಸಂಪುಟ-೧,೨,೩ ಮತ್ತು ೪, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೦, ರೇವಣಸಿದ್ದಯ್ಯ ಆರ್.ಶೋರಾಪುರ ತಾಲೂಕು ದರ್ಶನ, ಐಬಿಹೆಚ್ ಪ್ರಕಾಶನ ಬೆಂಗಳೂರು. ೧೯೮೬. ಶಾಂತಪ್ಪ ಬೂದಿಹಾಳ, ಸುರಪುರ, ಬಸವ ಪ್ರಕಾಶನ ಗುಲಬರ್ಗಾ. ೨೦೦೮. ನಾಗರಾಜಪ್ಪ ಕೆ.ಜಿ(ಸಂ) ದೇವರ ದಾಸಿಮಯ್ಯನ ವಚನ ಸಂಗ್ರಹ, ಬೆಂಗಳೂರು, ೨೦೦೯. ಮಾಲಾ ರಮೇಶ, ತವನಿಧಿ, ಗಾಯಿತ್ರಿ ಪ್ರತಿಷ್ಠಾನ, ಗುಲಬರ್ಗಾ, ೨೦೦೫. ಶಂಕಿನ್ ಚಂದ್ರಶೇಖರಯ್ಯ, ಶ್ರೀ ಬನದೇಶ್ವರ ಚರಿತ್ರೆ, ಶ್ರೀ ಬನದೇಶ್ವರ ದೇವಸ್ಥಾನ ಸಮಿತಿ, ಕಾಳೇಬೆಳಗುಂದಿ, ೨೦೧೧, ಪತ್ತಾರ ದೇವು(ಸಂ) ಮಹಾದೇವ ಬಾಬಾ, ಮೆಡೋಸ್ ಟೇಲರ್, ವಾರ್ತಾ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, ೨೦೦೯ ಉಲ್ಲೇಖಿತ ಈ ಗ್ರಂಥಗಳೆಲ್ಲವು ಈ ಪ್ರದೇಶದ ಕುರಿತು ಕೆಲವು ಮಾಹಿತಿಗಳನ್ನು ನೀಡುವಲ್ಲಿ ಸಹಾಯಕವಾಗುತ್ತವೆ.

ಈ ಭಾಗದಲ್ಲಿ ಆಗಿಹೋದ ಶಿವಶರಣರ ಕುರಿತು ಪ್ರಕಟವಾಗಿರುವ ಅದರಲ್ಲೂ ಮುಖ್ಯವಾಗಿ ಶಿವಾನಂದ ವಿ, ಅವರು ರಚಿಸಿದ ಸಗರ ನಾಡಿನ ಶಿವಶರಣರು, ಧಾರವಾಡ, ೧೯೭೨. ಪಡಶೆಟ್ಟಿ ಎಂ.ಎಂ, ತಿಂಥಣಿ ಮೋನಪ್ಪಯ್ಯ-ಒಂದು ಅಧ್ಯಯನ, ವೀರಶೈವ ಸಂಸ್ಥೆ ತೋಂಟದಾರ್ಯಮಠ, ಗದಗ, ೧೯೯೨, ಸೊಪ್ಪಿಮಠ ಬಸವಲಿಂಗ, ಕೊಡೇಕಲ್ಲು ಬಸವಣ್ಣ: ಒಂದು ಅಧ್ಯಯನ, ಕೊಡೇಕಲ್ಲು ಪೀಠ, ಕೊಡೇಕಲ್ಲು-೧೯೯೫ ಹಾಗೂ ಕಡಕೋಳ ಸಿ.ಬಿ ಮತ್ತು ಈರಣ್ಣ ಕೆ.ಪಿ.(ಸಂ) ತಿಂಥಣಿ ಮೋನಪ್ಪಯ್ಯನ ವಚನಗಳು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫ ಈ ಗ್ರಂಥಗಳು ಆ ಪ್ರದೇಶದ ಸಮಾಜ ಮತ್ತು ಧಾರ್ಮಿಕ ವ್ಯವಸ್ಥೆಯನ್ನು ಆಂಶಿಕವಾಗಿ ಆದರೂ ಈ ಪ್ರದೇಶದ ಸಾಂಸ್ಕತಿಕ ಆಚರಣೆ ನೆಲೆಗಳನ್ನು ತಿಳಿದುಕೊಳ್ಳುವಲ್ಲಿ ತುಂಬಾ ಅನುಕೂಲಕರವಾಗಿ ನಿಲ್ಲುತ್ತವೆ ಎಂದರೆ ತಪ್ಪಾಗಲಾರದು.

## ವಿಧಾನ

ಈಗಾಗಲೇ ಅಧ್ಯಯನ ಸಮೀಕ್ಷೆ ಕುರಿತ ವಿವರಗಳಲ್ಲಿ ನಮೂದಿಸಿರುವ ಬಹುತೇಕ ಎಲ್ಲ ಗ್ರಂಥಗಳನ್ನು ಪ್ರಸ್ತುತ ಅಧ್ಯಯನ ಕಟ್ಟುವಲ್ಲಿ ಬಳಸಿಕೊಳ್ಳಲಾಗಿದೆ. ಪ್ರಕಟಗೊಂಡಿರುವ ಇಂಥ ಸಾಮಗ್ರಿಗಳು ಅಧ್ಯಯನದ ದಿಕ್ಕು ಅಥವಾ ರೂಪರೇಷೆಗಳನ್ನು ಗೊತ್ತುಪಡಿಸಿಕೊಳ್ಳುವಲ್ಲಿ ತುಂಬಾ ಸಹಾಯಕವಾಗಿ ನಿಲ್ಲುತ್ತವೆ. ಅಲ್ಲದೇ ಅವುಗಳಲ್ಲಿರುವ ಕೊರತೆಗಳನ್ನು ತಕ್ಕಮಟ್ಟಿಗೆ ನೀಗಿಸಿಕೊಂಡು ಪ್ರಸ್ತುತ ಅಧ್ಯಯನ ರೂಪಿಸುವ ಮುಖ್ಯ ಯತ್ನವು ಕಾರ್ಯಕ್ಕೆ ಇದು ಉತ್ತೇಜನ ನೀಡುತ್ತದೆ. ಈಗಾಗಲೇ ಉಲ್ಲೇಖಿಸಿರುವ ಗ್ರಂಥಗಳಲ್ಲಿಯೂ ಕೂಡ ಪ್ರಕಟವಾಗಿರಲಾರದ ವಿಷಯ, ವಸ್ತು ಹಾಗೂ ವಿಧಾನಗಳಿಗೆ ಹೆಚ್ಚಿನ ಇಂಬು ನೀಡುವ ಕ್ರಮಗಳನ್ನು ಅನುಸರಿಸುವ ಪ್ರಯತ್ನ ಮಾಡಲಾಗಿದೆ. ಪ್ರಕಟವಾಗಿರುವ ಹಲವಾರು ವಿವರಗಳು ಬೇರೆ ಬಗೆಯ ಆಲೋಚನೆ ಮತ್ತು

ಉದ್ದೇಶಗಳನ್ನು ಇಟ್ಟುಕೊಂಡು ರಚನೆಯಾಗಿರುವಂಥವು. ಹಾಗಾಗಿ ಪ್ರಸ್ತುತ ಅಧ್ಯಯನಕ್ಕೆ ಅವಶ್ಯಕವಿರುವ ವಿವರಗಳನ್ನು ಮಾತ್ರ ಅವುಗಳಿಂದ ಬಳಸಿಕೊಳ್ಳಲಾಗಿದೆ. ಅಲ್ಲದೇ ಪ್ರಕಟಗೊಂಡಿರುವ ಗ್ರಂಥಗಳಲ್ಲಿ ಉಲ್ಲೇಖಿತ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಯ ವಿವರಗಳನ್ನು ಒರಗೆ ಹಚ್ಚುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಮುಖ್ಯವಾಗಿ ಪ್ರಕಟಗೊಂಡಿರುವ ಶಾಸನಗಳ ಮಾಹಿತಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿಕೊಳ್ಳಲಾಗಿದೆ. ಆದರೆ ಈ ಜಿಲ್ಲೆಯಲ್ಲಿ ದೊರಕಿರುವ ಶಾಸನಗಳನ್ನು ಈಗಾಗಲೇ ಪ್ರಕಟಪಡಿಸಿರುವ ಮೂಲಕೃತಿಗಳಾಗಲಿ, ಸಂಚಿಕೆ ಹಾಗೂ ಸಂಪುಟಗಳಾಗಲಿ ಪ್ರಸ್ತುತ ಸಂದರ್ಭದಲ್ಲಿ ಸಿಗುವುದು ತುಂಬಾ ತುಂಬಾನೇ ವಿರಳ. ಹಾಗಾಗಿ ಪ್ರಕಟಗೊಂಡಿರುವ ಶಾಸನಗಳನ್ನೇ ಇಟ್ಟುಕೊಂಡು ಮರುಮುದ್ರಿಸಿದ, ಸಂಗ್ರಹಿಸಿದ ಹಾಗೂ ಹೊಸದಾಗಿ ಕಂಡುಬಂದ ಕೆಲವು ಶಾಸನಗಳನ್ನೊಳಗೊಂಡು ಪ್ರಕಟಗೊಂಡಿರುವ ಇತ್ತೀಚಿನ ಗ್ರಂಥಗಳಲ್ಲಿರುವ ಮಾಹಿತಿಗಳನ್ನೇ ಬಹುತೇಕ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬಳಸಿಕೊಳ್ಳಲಾಗಿದೆ. ಅವು ಸಹ ಅನುಷಂಗಿಕ (Secondary)ಸಂಪನ್ಮೂಲಗಳಾದರೂ ಅವುಗಳನ್ನೇ ಮೂಲ ಆಕರಗಳ ಪ್ರತಿನಿಧಿಗಳಂತೆಯೇ ಪರಿಭಾವಿಸಿ ಉಪಯೋಗಿಸಿಕೊಳ್ಳಲಾಗಿದೆ.

ಸಾಂಸ್ಕೃತಿಕ ಅಧ್ಯಯನಗಳನ್ನು ಕಟ್ಟಿಕೊಡುವಲ್ಲಿ ಬಹುಮುಖ್ಯ ಪಾತ್ರವಹಿಸುವ ದೇವಾಲಯ, ಮೂರ್ತಿಶಿಲ್ಪ, ಬುರುಜು, ಬಾವಿ, ಕೋಟೆ, ಕೊತ್ತಲುಗಳು, ಹಾಗೂ ದರ್ಗಾ ಮಸೀದಿಗಳ ಕುರಿತು ಖುದ್ದಾಗಿ ಸ್ಥಳಭೇಟಿ ನೀಡಿ ಕ್ಷೇತ್ರಕಾರ್ಯ ಮಾಡುವುದರ ಮೂಲಕ ವಿವರಗಳನ್ನು ಸಂಗ್ರಹಿಸಲಾಗಿದೆ. ಅವುಗಳ ಶೈಲಿ, ವಿನ್ಯಾಸ, ಸ್ಥಿತಿಗತಿ ಹಾಗೂ ಮಹತ್ವದ ಕುರಿತು ವಿವರಗಳನ್ನು ಸಂಗ್ರಹಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಹಾಗಾಗಿ ಈ ಅಧ್ಯಯನವು ಬಹುತೇಕ ಹೆಚ್ಚಿನ ಪ್ರಮಾಣದಲ್ಲಿ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಫಲಿತಗಳನ್ನು ಅವಲಂಬಿಸಿ ರಚನೆಯಾಗಿದ್ದು ಎಂದರೆ ತಪ್ಪಾಗಲಾರದು. ಇಂಥ ತಿರುಗಾಟದಲ್ಲಿ ಅಧ್ಯಯನಕ್ಕೆ ಸಂಬಂಧಿಸಿ ಕಂಡುಬಂದ ಹಲವು ಮೌಖಿಕ ಹಾಗೂ ಐತಿಹ್ಯ ವಿವರಗಳನ್ನು ಒಳಗೊಳಿಸಿಕೊಳ್ಳುವ ರೀತಿ ಅನುಸರಿಸಲಾಗಿದೆ. ಆದರೆ ದೇವಾಲಯಗಳ ತಲವಿನ್ಯಾಸ ಹಾಗೂ ರಚನಾ ವಿನ್ಯಾಸ ಕುರಿತು ನಿರ್ದಿಷ್ಟವಾದ ನಕ್ಷೆ ಮತ್ತು ಚಿತ್ರಗಳನ್ನು ಸಿದ್ಧಪಡಿಸಿಕೊಳ್ಳಲು ಆಗಿಲ್ಲ. ಹಾಗಾಗಿ ಈಗಾಗಲೇ ಬೇರೆ ಬೇರೆ ಉದ್ಗ್ರಂಥಗಳಲ್ಲಿರುವ ಮಾಹಿತಿಗಳನ್ನೇ ನೇರವಾಗಿ ಬಳಸಿಕೊಳ್ಳಲಾಗಿದೆ. ಜಿಲ್ಲೆಯ ಪ್ರತಿ ಗ್ರಾಮದಲ್ಲಿ ಅಸ್ತಿತ್ವದಲ್ಲಿರುವ ಪ್ರತಿ ದೇವಾಲಯ ಹಾಗೂ ಇತರ ಸಂಗತಿಗಳ ಕುರಿತು ವಿವರವಾದ ಮಾಹಿತಿಗಳನ್ನಂತೂ ಯಥೇಚ್ಛವಾಗಿ ಸಂಗ್ರಹಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಂಡಿರುವ ಕ್ಷೇತ್ರಕಾರ್ಯಾಧಾರಿತ ಮಾಹಿತಿಗಳು ಮೂಲ ಆಕರಗಳಾದರೆ, ಬೇರೆ ಬೇರೆ ಗ್ರಂಥಗಳಿಂದ ಪಡೆದಿರುವ ವಿವರಗಳು ಅನುಷಂಗಿಕ ಸ್ವರೂಪದವು.

ಪ್ರಸ್ತುತ ಪ್ರಬಂಧದಲ್ಲಿ ಸಂಬಂಧಿಸಿದ ವಿವರಗಳನ್ನೆಲ್ಲ ಅಂದರೆ ಶಾಸನ, ದೇವಾಲಯ, ಶಿಲ್ಪ, ಬಾವಿ, ಕೋಟೆ-ಕೊತ್ತಲು, ಬುರುಜು-ಹುಡೇವುಗಳು ಹಾಗೂ ದರ್ಗಾ ಮಸೀದಿಗಳನ್ನು ಪಟ್ಟಿಮಾಡಿಕೊಂಡು ಆ ವಿವರಗಳ ಹಿನ್ನೆಲೆಯಲ್ಲಿ ಅಧ್ಯಯನ ಪೂರೈಸುವ ಪ್ರಯತ್ನ ಮಾಡಲಾಗಿದೆ. ಒಟ್ಟಾರೆ ಸಾಂಸ್ಕೃತಿಕ ಅಧ್ಯಯನಗಳನ್ನು ಕಟ್ಟಿಕೊಡುವ ಚಾಲ್ತಿಯಲ್ಲಿರುವ ಮಾದರಿ ಅಥವಾ ವಿಧಾನಗಳನ್ನು ಹೆಚ್ಚಾಗಿ ಅವಲಂಬಿಸಿ ಬಳಸಿಕೊಳ್ಳಲಾಗಿದೆ.

**ಅಧ್ಯಯನ ಸ್ವರೂಪ**

ಪ್ರಸ್ತುತ ಅಧ್ಯಯನವನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ.

ಅಧ್ಯಾಯ: ಒಂದು

**ಪ್ರಸ್ತಾವನೆ**

**ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ**

ಅಧ್ಯಾಯ: ಎರಡು

**ಐತಿಹಾಸಿಕ ಹಿನ್ನಲೆ**

**ಭೌಗೋಳಿಕತೆ**

**ಪ್ರಾಗಿತಿಹಾಸ**

**ಇತಿಹಾಸ**

ಅಧ್ಯಾಯ: ಮೂರು

**ಪ್ರಾಚೀನ ಆಡಳಿತ ವಿಭಾಗಗಳು ಮತ್ತು ಆಡಳಿತ ವ್ಯವಸ್ಥೆ**

ಅಧ್ಯಾಯ: ನಾಲ್ಕು

**ಸಮಾಜೋ-ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳು**

ಅಧ್ಯಾಯ: ಐದು

**ವಾಸ್ತು ಮತ್ತು ಮೂರ್ತಿಶಿಲ್ಪ**

**ಮಸೀದಿ ಮತ್ತು ದರ್ಗಾ**

ಅಧ್ಯಾಯ: ಆರು

**ಸಾಂಸ್ಕೃತಿಕ ಆಚರಣೆ ನೆಲೆಗಳು**

ಅಧ್ಯಾಯ: ಏಳು

**ಸಮಾರೋಪ**

ಅನುಬಂಧ

**ಆಕರ ಸೂಚಿ**

**ಭೂಪಟ**

**ತಲನಕ್ಷೆ**

**ಛಾಯಾಚಿತ್ರ**

ಮೇಲ್ಕಾಣಿಸಿದ ರೀತಿಯಲ್ಲಿ ಅಧ್ಯಯನದ ಸ್ವರೂಪವನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ಕೊನೆಯ ಅಥವಾ ಸಂದರ್ಭ ಟಿಪ್ಪಣಿಗಳನ್ನು ನೀಡಲಾಗಿದೆ. ಅಲ್ಲದೇ ನಿಯೋಜಿಸಿಕೊಂಡಿರುವ ಎಲ್ಲಾ ಅಧ್ಯಾಯಗಳು ಪೂರ್ಣಗೊಂಡ ನಂತರ ಆಕರಸೂಚಿ ಅಥವಾ ಪರಾಮರ್ಶನ ಗ್ರಂಥಗಳ, ನಿಯತಕಾಲಿಕಗಳು ಹಾಗೂ ಶಾಸನ ಸಂಪುಟಗಳ ವಿವರ ನೀಡಲಾಗಿದೆ. ಭೂಪಟ, ತಲನಕ್ಷೆ ಹಾಗೂ ಛಾಯಾಚಿತ್ರ ವಿವರಗಳನ್ನು ಕೊನೆಯಲ್ಲಿ ಸೇರಿಸಲಾಗಿದೆ.

ಪ್ರಸ್ತಾವನೆ ರೂಪದ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಹಾಗೂ ಸ್ವರೂಪದ ಕುರಿತು ವಿವರಗಳನ್ನು ದಾಖಲಿಸಿ ಚರ್ಚಿಸಲಾಗಿದೆ.

ಐತಿಹಾಸಿಕ ಹಿನ್ನೆಲೆ ಶೀರ್ಷಿಕೆಯ ಅಡಿಯಲ್ಲಿ ರೂಪಗೊಂಡ ಎರಡನೆಯ ಅಧ್ಯಾಯವು ಜಿಲ್ಲೆಯ ಕುರಿತ ಭೌಗೋಳಿಕ ಸನ್ನಿವೇಶಗಳು, ಭೂರಚನೆ, ನದಿಗಳು, ವಾಯುಗುಣ, ಸಸ್ಯ ಸಂಪತ್ತು ಹಾಗೂ ಸಂಪರ್ಕ ಅಂಶಗಳ ಕುರಿತು ವಿವರಿಸಲಾಗಿದೆ. ಪ್ರಾಗಿತಿಹಾಸದ ವಿವರಗಳಲ್ಲಿ ಜಿಲ್ಲೆಯ ಆದಿ ಇತಿಹಾಸಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿಗಳ ವಿವರ ನೀಡಲಾಗಿದೆ. ಇತಿಹಾಸ ಕಾಲದಲ್ಲಾದ ರಾಜಕೀಯ ಹಾಗೂ ಇತರೆ ವಿದ್ಯಮಾನಗಳನ್ನು ಒಟ್ಟಾರೆ ಈ ವಿವರಗಳು ಪ್ರಮುಖವಾಗಿ ರಾಜಕೀಯ ನೋಟಗಳನ್ನು ವಿವರಿಸುತ್ತವೆ. ಇಂಥ ವಿಷಯಗಲನ್ನು ನಿರೂಪಿಸಲು ಶಾಸನ ಹಾಗೂ ಇತರ ಆಕರಗಳಲ್ಲಿರುವ ಸಂಗತಿಗಳನ್ನೇ ಹೆಚ್ಚಾಗಿ ಅವಲಂಬಿಸಲಾಗಿದೆ.

ಆಡಳಿತದ ಕುರಿತು ವಿವರವುಳ್ಳ ಮೂರನೆಯ ಅಧ್ಯಾಯವು ಪ್ರಮುಖವಾಗಿ ಎರಡು ಸಂಗತಿಗಳನ್ನು ಸುದೀರ್ಘವಾಗಿ ಚರ್ಚಿಸಿ ನಿರೂಪಿಸುವಲ್ಲಿ ಯಶಸ್ವಿಯಾಗಿದೆ ಎಂದು ಅಭಿಪ್ರಾಯಿಸಬಹುದು. ಈ ಜಿಲ್ಲೆಯು ಪ್ರಾಚೀನ ಇತಿಹಾಸ ಕಾಲಘಟ್ಟದಲ್ಲಿ ಒಟ್ಟು ಮೂರು ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಹರಿದು ಹಂಚಿಹೋಗಿತ್ತು. ಅಂಥ ಪ್ರತಿ ವಿಭಾಗದ ಇತಿಹಾಸ ಹಾಗೂ ಸ್ವರೂಪದ ಕುರಿತು ಚರ್ಚಿಸಲಾಗಿದೆ. ಅಲ್ಲದೇ ಈಗಾಗಲೇ ಈ ವಿಷಯಗಳ ಕುರಿತು ವ್ಯಕ್ತವಾದ ಅಭಿಪ್ರಾಯಗಳನ್ನು ಸಹ ದಾಖಲಿಸಲಾಗಿದೆ. ಸಗರನಾಡು, ಹಗರಟಗಿ ಹಾಗೂ ಕಲ್ಲಕೆಳಗೆ ನಾಡುಗಳ ಕುರಿತು ಅವುಗಳ ಇತಿಹಾಸದ ಹಿನ್ನೋಟವನ್ನು ಖಚಿತವಾಗಿ ವಿವರಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ. ಅವುಗಳ ಕುರಿತು ತಿಳಿದಿರುವ ಅಭಿಪ್ರಾಯಗಳಿಗೆ ಕೆಲವು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ. ಅಂಥ ವಿವರಗಳನ್ನು ವಿಶ್ಲೇಷಿಸುವ ಮೂಲಕ ಈ ಪ್ರದೇಶದ ಇತಿಹಾಸದ ವಿವರಗಳನ್ನು ಮರು ರೂಪಿಸುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಸ್ಥಿತಿಗತಿ ಎಂಬ ವಿವರಗಳ ಅಡಿಯಲ್ಲಿ ಆ ಕಾಲದ ಸಮಾಜ, ಧಾರ್ಮಿಕ ಹಾಗೂ ಆರ್ಥಿಕ ವಿಷಯಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಶಾಸಗಳಲ್ಲಿ ವ್ಯಕ್ತವಾದ ವಿವರಗಳ ಹಿನ್ನೆಲೆಯಲ್ಲಿ ಚರ್ಚಿಸಿ ವಿಶ್ಲೇಷಿಸಲಾಗಿದೆ. ಪ್ರಮುಖವಾಗಿ ಅಂದಿನ ಸಮಾಜದಲ್ಲಿದ್ದ ಹದಿನೆಂಟು ಜಾತಿಗಳು, ಎಂಟು ಹಿಟ್ಟುಗಳು, ಬ್ರಾಹ್ಮಣರು, ರಾಜಸತ್ತೆಗೆ ಸಂಬಂಧಿಸಿದ ಅಧಿಕಾರಿಗಳು ಸಮಾಜದಲ್ಲಿ ಅವರು ಹೊಂದಿದ್ದ ಸ್ಥಾನಮಾನಗಳ ಕುರಿತು ವಿವೇಚಿಸಲಾಗಿದೆ. ಧಾರ್ಮಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದ ಬಹು ಮಹತ್ವದ ಸಂಗತಿಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರದೇಶದಲ್ಲಿ ಕಾಳಾಮುಖ ಪಂಥಕ್ಕೆ ಸೇರಿದ ಸಿಂಹಪರ್ಷೆಯ ಪ್ರಭಾವ ತುಂಬಾ ದಟ್ಟವಾಗಿತ್ತು. ಅಲ್ಲದೇ ಸಗರನಾಡಿನಲ್ಲಿರುವ ಯಡ್ರಾಮಿ ಹಾಗೂ ಮುದನೂರು ಗ್ರಾಮಗಳು ಇದರ ಉದ್ಘೋದಕ ಕೇಂದ್ರಗಳಾಗಿದ್ದವೆಂಬ ಅಭಿಪ್ರಾಯಗಳು ಈಗಾಗಲೇ ಸಾಕಷ್ಟು ಪ್ರಮಾಣದಲ್ಲಿ ದಾಖಲಾಗಿವೆ. ಅಲ್ಲದೇ ಅವರಿಗೆ ಸಂಬಂಧಿಸಿದ ಇಂಥ ಹತ್ತು ಹಲವು ವಿವರಗಳು ಈ ನಾಡಿನಲ್ಲಿ ದೊರಕಿರುವ ಶಾಸನಗಳಲ್ಲಿಯೂ ವ್ಯಕ್ತವಾಗಿವೆ. ಅಂಥೆಲ್ಲಾ ವಿಚಾರಗಳನ್ನು ಅಧ್ಯಯನಗಳ ಹಿನ್ನೆಲೆಯಲ್ಲಿ ಚರ್ಚಿಸಿ

ಸಂದರ್ಭಕ್ಕೆ ತಕ್ಕಂತೆ ವಿಶ್ಲೇಷಿಸುವ ಕಾರ್ಯ ಮಾಡಲಾಗಿದೆ. ಸಿಂಹಪರ್ಷೆಯಲ್ಲಿದ್ದ ಒಳಗುದಿಯು ಆ ನಂತರ ನಾಥದ ಮೂಲಕ ಪ್ರವೇಶಿಸಿ ವಚನ ಚಳವಳಿಗಳಿಗೆ ಹೇಗೆ ಭೂಮಿಕೆ ಸಿದ್ಧವಾಯಿತು ಎಂಬ ಸಂಶೋಧನಾ ಸಾಧ್ಯತೆಗಳನ್ನು ಕೇಂದ್ರೀಕರಿಸುವ ಪ್ರಯತ್ನ ಮಾಡಲಾಗಿದೆ.

ಆರ್ಥಿಕ ಸ್ಥಿತಿಗತಿಗೆ ಸಂಬಂಧಿಸಿದ ಹಲವು ಮಹತ್ವದ ಸಂಗತಿಗಳು ಈ ಪ್ರದೇಶದಲ್ಲಿ ಕಂಡುಬಂದಿವೆ. ಈ ಪ್ರದೇಶದಲ್ಲಿರುವ ಕೆರೆ ಬಾವಿಗಳು ಬಹು ಪ್ರಾಚೀನ ಕಾಲದಿಂದಲೇ ರೂಪಗೊಳ್ಳುತ್ತಾ ಬಂದಿವೆ. ಅವು ಮಾನವನ ಖಾಯಂ ವಸತಿಗಳಿಗೆ ಹೇಗೆ ಪೂರಕವಾಗುತ್ತಾ ಬಂದವು ಎಂಬುದನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಅವು ಸಂಸ್ಕೃತಿಯ ನಿರ್ಮಾಣದಲ್ಲಿ ವಹಿಸಿದ ಮಹತ್ವದ ಪಾತ್ರವೇನು? ಎಂಬ ವಿವರಗಳನ್ನು ಕೂಲಂಕುಷವಾಗಿ ಚರ್ಚಿಸಲಾಗಿದೆ. ಕೃಷಿಗೆ ಸಂಬಂಧಿಸಿದ ಭೂಮಿ, ತೋಟ, ಅಳತೆ ಮಾಪನ ವಾಣಿಜ್ಯ-ವ್ಯಾಪಾರ, ಆರ್ಥಿಕ ಸಂಗತಿಗಳ ಕುರಿತು ಇಲ್ಲಿರುವ ಶಾಸನಗಳು ಮಾಹಿತಿ ನೀಡುತ್ತವೆ. ಅವುಗಳನ್ನೆಲ್ಲ ವಿವರವಾಗಿ ಚರ್ಚಿಸಿ ವಿಶ್ಲೇಷಿಸುವ ಪ್ರಯತ್ನ ನಾಲ್ಕನೆಯ ಅಧ್ಯಾಯದ ಆರ್ಥಿಕ ಸ್ಥಿತಿಗತಿಗಳು ಎಂಬ ವಿಚಾರದ ಹಿನ್ನೆಲೆಯಲ್ಲಿ ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

ಐದನೆಯ ಅಧ್ಯಾಯವು ಪ್ರಸ್ತುತ ಜಿಲ್ಲೆಯಲ್ಲಿರುವ ಪ್ರಾಚೀನ ದೇವಾಲಯ, ಶಿಲ್ಪ ಹಾಗೂ ಕೆಲವು ದರ್ಗಾ ಮತ್ತು ಮಸೀದಿಗಳ ಮಹತ್ವ ಮತ್ತು ಅವುಗಳ ನಿರ್ಮಾಣದ ಅವಶ್ಯಕತೆಗಳ ಸಂದರ್ಭಗಳನ್ನು ವಿವರವಾಗಿ ವಿಶ್ಲೇಷಿಸಿ ವಿವರಗಳನ್ನು ಪ್ರಕಟಿಸಲಾಗಿದೆ. ಕೆಲವು ಗ್ರಾಮಗಳಲ್ಲಿರುವ ಪ್ರಮುಖ ದೇವಾಲಯಗಳ ಕುರಿತು ವಿವರ ನೀಡಲಾಗಿದೆ. ಆದರೆ ಮೂರ್ತಿಶಿಲ್ಪಗಳ ಸಂದರ್ಭದಲ್ಲಿ ಅವು ಸಹ ದೇವಾಲಯಗಳ ಪ್ರಮುಖ ಅಂಗಗಳಾಗಿರುವುದರಿಂದ ಅವುಗಳ ವಿವರವನ್ನು ಪ್ರತ್ಯೇಕವಾಗಿ ವಿವರಿಸದೇ ದೇವಾಲಯಗಳ ಕುರಿತು ನೀಡಿರುವ ವಿವರಗಳ ಜೊತೆಯಾಗಿ ದಾಖಲಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಬಸದಿ, ವೈಷ್ಣವ ಹಾಗೂ ಶೈವ ಪಂಥಕ್ಕೆ ಸಂಬಂಧಿಸಿದ ವಿವರಗಳನ್ನು ಬಿಡಿಬಿಡಿಯಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಕಂಡುಕೊಂಡು ವಿವರಗಳನ್ನು ಸಾಮಾನ್ಯ ಲಕ್ಷಣಗಳು ಎಂಬ ಅಂಶದ ಅಡಿಯಲ್ಲಿ ವಿಶ್ಲೇಷಿಸಿ ನಿರೂಪಿಸಲಾಗಿದೆ. ಕೊನೆಯಲ್ಲಿ ಈ ಪ್ರದೇಶದಲ್ಲಿರುವ ಪ್ರಮುಖ ಸ್ಮಾರಕಗಳ ಕುರಿತು ವಿವರಗಳನ್ನು ಸಮಗ್ರ ರೂಪದಲ್ಲಿ ನೀಡಲಾಗಿದೆ.

ಶಿಷ್ಟ ದೇವಾಲಯ ಸಂಸ್ಕೃತಿ ಅಲ್ಲದೇ ಪರಿಶಿಷ್ಟ ಪರಂಪರೆಯ ಮೈಲಾರ, ವೀರಭದ್ರ, ತಿಂಥಣಿ ಮೋನಪ್ಪಯ್ಯ, ಕೊಡೇಕಲ್ಲು, ಸಗರ ಎಲ್ಲಮ್ಮ ಹಾಗೂ ಸೂಫಿಸಂತರ ಪರಂಪರೆಗಳು ಈ ಪ್ರದೇಶವನ್ನು ಪ್ರಭಾವಿಸಿವೆ. ಅವುಗಳ ಕುರಿತು ಸಾಂಸ್ಕೃತಿಕ ಆಚರಣೆ ನೆಲೆಗಳು ಎಂಬ ಶೀರ್ಷಿಕೆಯ ಆರನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಆದರೆ ಅವು ಮೊದಮೊದಲು ಶಿಷ್ಟರೂಪದಲ್ಲಿ ಇದ್ದಂತವುಗಳು. ಆದರೆ ಕಾಲ ಕ್ರಮೇಣ ಹೇಗೆ ಪರಿಶಿಷ್ಟ ಅಂದರೆ ಜನಸಾಮಾನ್ಯರ ಮಡಿಲಿಗೆ ಹೇಗೆ ಪರಿವರ್ತಿತಗೊಳ್ಳುತ್ತಾ ಹೋದವು ಎಂಬ ವಿವರಗಳನ್ನೆಲ್ಲ ವಿವರವಾಗಿ ಚರ್ಚಿಸಿ ವಿಶ್ಲೇಷಿಸಲಾಗಿದೆ. ಹಾಗಾಗಿ ಆಯಾ ಗ್ರಾಮದಲ್ಲಿರುವ ಸಂಬಂಧಿಸಿದ ದೇವಾಲಯಗಳ ವಿವರಗಳನ್ನು

ನೀಡಲಾಗಿದೆ. ಗೊಲ್ಲಾಳೇಶ್ವರ, ತಿಂಥಣಿ ಮೋನಪ್ಪಯ್ಯ, ಕೊಡೇಕಲ್ಲ ಬಸವಣ್ಣ, ಕಲಿಯುಗದ ಕಡೆ ಶರಣ ಬಸಲಿಂಗ, ಕಾಳೇಬೆಳಗುಂದಿಯ ವೀರಭದ್ರ ಅಥವಾ ಬನದೇಶ್ವರ, ರಾಜೋಟಿ ಸಂಪ್ರದಾಯದ ವೀರಭದ್ರ ಪರಂಪರೆ ಅಲ್ಲದೇ ಮಾಧ್ವ ಪರಂಪರೆಯಲ್ಲಿ ಬರುವ ಟೀಕಾಚಾರ್ಯರೆಂದೇ ಪ್ರಸಿದ್ಧರಾಗಿರುವ ಜಯತೀರ್ಥರು, ಹುಣಸಿಕೊಳ್ಳದ ಕಣ್ವಮಠ ಪರಂಪರೆಗಳೆಲ್ಲವು ಬಹುತ್ವದ ಧಾರ್ಮಿಕ ಪರಂಪರೆಯನ್ನು ಪ್ರಚುರಪಡಿಸಿರುವಂಥವು ಅವುಗಳೆಲ್ಲವುಗಳ ವಿಷಯಗಳನ್ನು ಸಾಂದರ್ಭಿಕವಾಗಿ ಈ ಅಧ್ಯಯನದಲ್ಲಿ ಒಳಗೊಳಿಸಿಕೊಳ್ಳುವ ಕ್ರಿಯೆಯನ್ನು ಮಾಡುವ ಪ್ರಯತ್ನ ಮಾಡಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪ ಸ್ವರೂಪದ್ದು. ಅದರಲ್ಲಿ ಮುಖ್ಯವಾಗಿ ಪ್ರಕಟಿತಗೊಂಡಿರುವ ಅಧ್ಯಾಯಗಳ ಒಟ್ಟು ಸ್ವರೂಪವನ್ನು ಅಥವಾ ಕಂಡುಕೊಂಡ ಅನುಭವಗಳನ್ನು ಸಂಕ್ಷಿಪ್ತವಾಗಿ ಮತ್ತೊಮ್ಮೆ ನಿರೂಪಿಸುವ ಪ್ರಯತ್ನ ಇದಾಗಿದೆ. ವ್ಯಕ್ತಪಡಿಸಿರುವ ವಿವರಗಳೆಲ್ಲವು ಅಧ್ಯಯನದ ಮೂಲಕವೇ ಕಂಡುಕೊಂಡವುಗಳು. ಹಾಗಾಗಿ ಇಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಅಂತಿಮವಾದವುಗಳೇನಲ್ಲ. ಸಂಶೋಧನೆ ಎಂಬುದು ನಿಂತ ನೀರಲ್ಲ. ಝರಿಯಾಗಿ ಆದರೂ ಸರಿ ಅದು ಸದಾ ಹರಿಯುತ್ತಿರಬೇಕು ಎಂಬುದು ಸಂಶೋಧಕರ ಬಹುಮುಖ್ಯ ಅಭಿಲಾಷೆಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿಯೇ ಹೆಚ್ಚಿನ ವಿವರಗಳನ್ನು ಗಮನಿಸಲಾಗಿದೆ. ಅಲ್ಲದೇ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಅಥವಾ ಅಭಿಪ್ರಾಯಗಳನ್ನು ಸಮಾರೋಪ ರೂಪದಲ್ಲಿ ನೀಡಲಾಗಿದೆ.

**ಕೊನೆ ಟಿಪ್ಪಣಿ**


೧. ಅರುಣಿ ಎಸ್.ಕೆ, ಸುರಪುರ ಸಂಸ್ಥಾನ, ಹಿಸ್ಟಾರಿಕಲ್ ಆ್ಯಂಡ್ ಆರ್ಕಿಯಾಲಾಜಿಕಲ್ ಸ್ಟಡೀ ಆಫ್ ಪಾಳೇಗಾರ ಸ್ಟೇಟ್ ಇನ್ ಸೌಥ್ ಇಂಡಿಯಾ, ಪುಟ.೨೧೬.

೨. ಗುರುರಾಜರಾವ್ ಬಿ.ಕೆ, ದಿ ಮೆಗಾಲಿಥಿಕ್ ಕಲ್ಚರ್ ಇನ್ ಸೌಥ್ ಇಂಡಿಯಾ ಪುಟ.೨೧.

೩. ಕಾಮತ್ ಸೂರ್ಯನಾಥ, ಹಿಸ್ಟೋರಿಯಾಗ್ರಾಫಿ ಆಫ್ ಕರ್ನಾಟಕ, ಪುಟ.೩೮.

೪. ಶಿವಾನಂದ ವಿ, ಹೈದರಾಬಾದು-ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು, ಪುಟ.೨.

೫. ಅರುಣಿ ಎಸ್.ಕೆ, 'ದಖನಿ ಚಿತ್ರಕಲೆ', ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೨೦೦೧ ಹಾಗೂ ಬಾಗೋಡಿ ಮಲ್ಲಿಕಾರ್ಜುನ, ಸುರಪುರ ಚಿತ್ರಕಲೆ, ಸರಚಂದ್ರ ಪ್ರಕಾಶನ, ಚಿತ್ತಾಪುರ, ೨೦೦೯.

# ಅಧ್ಯಾಯ ಎರಡು

# ಐತಿಹಾಸಿಕ ಹಿನ್ನೆಲೆ

ಒಂದು ನಿರ್ದಿಷ್ಟ ಪ್ರದೇಶದ ಅಧ್ಯಯನ ಕೈಗೊಳ್ಳುವ ಸಂದರ್ಭದಲ್ಲಿ ಅದರ ಬಗೆಗಿರುವ ಕೆಲವು ಹಿನ್ನೆಲೆಗಳನ್ನು ತಿಳಿಯುವ ಅವಶ್ಯಕತೆ ಇರುತ್ತದೆ. ಇತಿಹಾಸ ಮತ್ತು ಪುರಾತತ್ವ ಮಾದರಿಯ ಅಧ್ಯಯನಗಳಲ್ಲಂತೂ ಆ ಪ್ರದೇಶದ ಭೌಗೋಳಿಕ ವ್ಯಾಪ್ತಿಯಲ್ಲಿರುವ ಭೂರಚನೆ, ಹವಾಗುಣ, ನದಿಕೊಳ್ಳಗಳು, ಬೆಟ್ಟಗುಡ್ಡಗಳು, ಕಲು–ಮಣ್ಣು ಹಾಗೂ ನೈಸರ್ಗಿಕ ಸಂಪತ್ತಿನ ಬಗೆಗಿರುವ ಗುಣಾವಗುಣಗಳನ್ನು ಅರಿತುಕೊಳ್ಳುವುದು ಸೂಕ್ತವು ಮತ್ತು ಉಪಯೋಗಕಾರಿಯಾದುದೆಂದು ಅಭಿಪ್ರಾಯಿಸಬಹುದು. ಪ್ರಾಯಶಃ ಇಂಥ ಪ್ರಾಥಮಿಕ ವಿರಗಳನ್ನು ತಿಳಿದುಕೊಂಡಾಗಲೇ ಆಯಾ ಪ್ರದೇಶದಲ್ಲಿ ಮಾನವನ ಸಂಸ್ಕೃತಿಯ ಬೆಳವಣಿಗೆಯು ಕುರಿತಿರುವ ವಿವಿಧ ಆಯಾಮಗಳನ್ನು ಸೂಕ್ಷ್ಮವಾಗಿ ಗ್ರಹಿಸಬಹುದು. ಎಂಥೆಲ್ಲಾ ಸನ್ನಿವೇಶಗಳು ಆ ಪ್ರದೇಶದ ಜನಜೀವನದ ಸರ್ವತೋಮುಖ ಬೆಳವಣಿಗೆಗೆ ಹೇಗೆ ಕಾರಣವಾದವು ಎಂಬುದನ್ನು ಕರಾರುವಕ್ಕಾಗಿ ತಿಳಿಯಬಹುದು. ಕಠಿಣವಾದ ಹಲವು ಅಡತಡೆಗಳ ಮಧ್ಯೆಯೂ ಜೊತೆ ಜೊತೆಯಾಗಿ ಸಂಘರ್ಷ ಮಾಡುತ್ತಾ, ಮಾನವನು ಹಿತಾನುಭವದ ಕಡೆಗೆ ಹೇಗೆ ಚಲಿಸಿದ ಎಂಬುದನ್ನು ಗುರುತಿಸಬಹುದು. ಈ ಪ್ರದೇಶದಲ್ಲಿದ್ದ ಮಾನವನು ಸಹ ತನ್ನ ದೀರ್ಘ ಪ್ರಯಾಣವನ್ನು ಕಠಿಣ ಮಾರ್ಗವನ್ನು ಅನುಸರಿಸಿಯೇ ಕೈಗೊಂಡಿರುತ್ತಾನೆ. ಅಲ್ಲದೇ ಬೇರೆ ಬೇರೆ ಕಾಲಘಟ್ಟದಲ್ಲಿ ಅವನು ಮೂಡಿಸಿದ ಹೆಜ್ಜೆ ಗುರುತುಗಳನ್ನು ಸ್ಪಷ್ಟವಾಗಿ ಗುರುತಿಸುವ ಪ್ರಯತ್ನಗಳು ಆಗಿವೆ. ಹಲವು ಸಂಗತಿಗಳನ್ನು ಹಿನ್ನೆಲೆಯಾಗಿ ತಿಳಿದುಕೊಳ್ಳುವ ಅವಶ್ಯಕತೆ ಇದೆ. ಆ ವಿವರಗಳನ್ನು ಅರ್ಥೈಸುವುದರ ಮೂಲಕ ಅಧ್ಯಯನಕ್ಕೊಂದು ವಿಶೇಷ ಹರವು ನೀಡುವ ಉದ್ದೇಶಗಳುಂಟು. ಈ ಅಧ್ಯಾಯದಲ್ಲಿ ಭೌಗೋಳಿಕತೆ ಪ್ರಾಗಿತಿಹಾಸ ಹಾಗೂ ಇತಿಹಾಸ ಕಾಲ ಘಟ್ಟದಲ್ಲಿ ಈ ಪ್ರಾಚೀನ ಪ್ರದೇಶಗಳಲ್ಲಿ ರೂಪಗೊಂಡ ವಿವರಗಳನ್ನು ಸಾಕ್ಷಾಧಾರಗಳ ಹಿನ್ನೆಲೆಯಲ್ಲಿ ನಿರ್ವಚಿಸುವ ಕಾರ್ಯ ಮಾಡಲಾಗಿದೆ.

## ಭೌಗೋಳಿಕ ವಿವರ

ಅಖಂಡವಾಗಿದ್ದ ಗುಲಬರ್ಗಾ(ಕಲಬುರ್ಗಿ) ಜಿಲ್ಲೆಯನ್ನು ಇತ್ತೀಚೆಗೆ ವಿಭಾಗಿಸಲಾಯಿತು. ಆಡಳಿತ ಮತ್ತು ಅಭಿವೃದ್ಧಿಯ ಪ್ರಮುಖ ಉದ್ದೇಶಗಳು ಇಂಥ ಪ್ರತ್ಯೇಕಿಸುವಿಕೆಗೆ ಮುಖ್ಯ ಕಾರಣಗಳಾಗಿವೆ. ಕರ್ನಾಟಕ ರಾಜ್ಯದ ಮೂವತ್ತನೆಯ ಹೊಸ ಜಿಲ್ಲೆಯಾಗಿ ರೂಪುಗೊಂಡಿರುವ

ಇದು ಈ ಮೊದಲು ಗುಲಬರ್ಗಾ ಜಿಲ್ಲೆಯ ಕಂದಾಯ ವಿಭಾಗಗಳಲ್ಲಿ ಒಂದಾಗಿತ್ತು. ಯಾದಗಿರಿ, ಶಹಾಪುರ ಮತ್ತು ಸುರಪುರ ಎಂಬ ಹೆಸರಿನ ಮೂರು ತಾಲೂಕುಗಳೇ ಪ್ರಸ್ತುತ ಜಿಲ್ಲೆಯ ವ್ಯಾಪ್ತಿಯಾಗಿದೆ. ಯಾದಗಿರಿ ಪಟ್ಟಣವೇ ಇದರ ಆಡಳಿತದ ಮುಖ್ಯ ಕೇಂದ್ರವೂ ಸಹ ಆಗಿದೆ. ಈ ನಗರವು ರಾಜ್ಯದ ಬೇರೆ ಬೇರೆ ಭಾಗಗಳಿಗೂ ಉತ್ತಮ ಸಂಪರ್ಕ ಹೊಂದಿರುವ ಆಯಕಟ್ಟಿನ ಸ್ಥಳದಲ್ಲಿದೆ. ಅಲ್ಲದೇ ಹೊರ ರಾಜ್ಯಗಳೊಂದಿಗೂ ಅನುಕೂಲಕರ ರಸ್ತೆ ಮತ್ತು ರೈಲು ಸಾರಿಗೆ ವ್ಯವಸ್ಥೆಯನ್ನು ಹೊಂದಿರುವುದು.

ದಿನಾಂಕ ೩೧.೧೨.೨೦೦೭ರಂದು ಉದಯಗೊಂಡಿರುವ ಈ ಜಿಲ್ಲೆಯು ಭೌಗೋಳಿಕವಾಗಿ ನಮ್ಮ ನಾಡಿನ ಈಶಾನ್ಯ ಭಾಗದಲ್ಲಿ ಕೇಂದ್ರೀಕೃತವಾಗಿದೆ. ಸುಮಾರು ೫೨೨೩ ಚದುರ ಕಿಲೋಮೀಟರ್ ಒಟ್ಟು ವಿಸ್ತೀರ್ಣವನ್ನು ಹೊಂದಿರುವುದು. ಸಮುದ್ರಮಟ್ಟಕ್ಕಿಂತ ಅಂದಾಜು ಆರನೂರು ಮೀಟರ್ ಎತ್ತರದಲ್ಲಿದೆ. ರಕ್ಷಣಾ ಗೋಡೆಯಂತೆ ಜಿಲ್ಲೆಯ ಗಡಿಯುದ್ಧಕ್ಕೂ ಹರಿಯುವ ಕೃಷ್ಣಾನದಿಯು ರಾಯಚೂರು ಜಿಲ್ಲೆಯಿಂದ ಇದನ್ನು ಬೇರ್ಪಡಿಸುತ್ತದೆ. ಅಲ್ಲದೇ ಇದು ಸುಮಾರು ೧೬೦ ಕಿಲೋಮೀಟರ್‌ಗಳಷ್ಟು ಜಿಲ್ಲೆಯ ಗಡಿಗುಂಟ ಹರಿಯುತ್ತಿರುವುದು ಈ ಪ್ರದೇಶವು ಹೆಚ್ಚಿನ ಕಾಲ ಕೃಷಿ ಚಟುವಟಿಕೆಯಿಂದ ಕೂಡಿರುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟಂತಿದೆ. ಕೃಷ್ಣೆಯ ಉಪನದಿಯಾಗಿರುವ ಭೀಮೆಯು ಜಿಲ್ಲೆಯ ಶಹಾಪುರ ಹಾಗೂ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕುಗಳ ಮಧ್ಯೆಯೆ ಹರಿಯುವುದು. ಅಲ್ಲದೇ ಶಹಾಪೂರ ತಾಲೂಕಿನ ಆಗ್ನೇಯ ಅಂಚಿನಲ್ಲಿರುವ ಸಂಗಮ ಎಂಬ ಸ್ಥಳದಲ್ಲಿ ಈ ನದಿಯು ಕೃಷ್ಣೆಯನ್ನು ಕೂಡಿಕೊಳ್ಳುವುದು. ದಕ್ಷಿಣ ಭಾರತದ ಈ ಎರಡು ಪ್ರಮುಖ ನದಿಗಳು ಸಂಗಮಿಸುವ ಸ್ಥಳವು ರುದ್ರಮಣೀಯ ದೃಶ್ಯವನ್ನು ಸೃಷ್ಟಿಸುತ್ತದೆ. ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ, ಸೇಡಂ ಹಾಗೂ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕು ಪ್ರದೇಶಗಳು ಈ ಜಿಲ್ಲೆಯ ಗಡಿಗುಂಟ ವಿಸ್ತರಿಸಿಕೊಂಡಿವೆ. ಅಲ್ಲದೇ ನೆರೆಯ ತೆಲಂಗಾಣ ರಾಜ್ಯವು ಸಹ ಯಾದಗಿರಿ ತಾಲೂಕಿನ ಇನ್ನೊಂದು ಮೇರೆಯಾಗಿದೆ. ಹಾಗಾಗಿ ದ್ವಿಭಾಷಿಕ ಪರಿಸರವು ಗಡಿಹೊಂದಿಕೊಂಡಿರುವ ಗ್ರಾಮಗಳಲ್ಲಿ ಸಾಮಾನ್ಯ ಲಕ್ಷಣವಾಗಿ ಕಂಡುಬರುವುದು.

### ಭೂ ರಚನೆ

ಜಿಲ್ಲೆಯು ಮುಖ್ಯವಾಗಿ ಪೆನಿನ್‌ಸುಲಾರ ನೈಸ ಮತ್ತು ಕಣಶಿಲೆಗಳಿಂದ ಕೂಡಿರುವ ಶಿಲಾಶ್ರೇಣಿ ಹೊಂದಿರುವುದು. ಆದರೆ ಬಹಳಷ್ಟು ಎತ್ತರದ ಬೆಟ್ಟಶ್ರೇಣಿಗಳು ಈ ಪ್ರದೇಶದಲ್ಲಿ ಕಂಡುಬರುವುದಿಲ್ಲ. ಸುಮಾರು ೩೨ ಕಿಲೋಮೀಟರ್‌ನಷ್ಟು ಸಾಗಿ ಸೇಡಂ ತಾಲೂಕಿನ ಸರಹದ್ದಿನಲ್ಲಿ ಕೊನೆಗೊಳ್ಳುವವು. ಈ ಬೆಟ್ಟ ಸಾಲುಗಳು ಯಾದಗಿರಿ ತಾಲೂಕಿನ ಪಶ್ಚಿಮ ಭಾಗದಿಂದ ಪೂರ್ವಕ್ಕೆ ಹರಡಿಕೊಂಡಿವೆ. ಯರಗೋಳ, ಹತ್ತಿಕುಣಿ, ಮೋಟನಹಳ್ಳಿ, ಚಿಂತಕುಂಟಾದಿಂದ ಗಾಜರಕೋಟದವರೆಗೆ ಹಾಗೂ ಹತ್ತಿಕುಣಿಯಿಂದ ಪೋತಾಪುರದವರೆಗೆ

ಈ ಬೆಟ್ಟ ಸಾಲುಗಳಿವೆ. ಅಲ್ಲದೇ ಪೂರ್ವಭಾಗದಲ್ಲಿರುವ ಗುರುಮಿಠಕಲ್ ಪ್ರದೇಶವು ಸಹ ಕಡಿದಾದ ಬೆಟ್ಟ ಮತ್ತು ತಗ್ಗುಗಳಿಂದ ಕೂಡಿರುವುದನ್ನು ಗಮನಿಸಬಹುದು. ಯಾದಗಿರಿ ಪಟ್ಟಣವು ಸಹ ಕಡಿದಾದ ಬೆಟ್ಟದ ತಪ್ಪಲಿನಲ್ಲಿ ನಿರ್ಮಾಣಗೊಂಡಿರುವುದು. ಶಾಹಾಪುರ ಪಟ್ಟಣವು ಮಹ್ಮದಪುರ ಅಥವಾ ಸಗರ ಬೆಟ್ಟದ ಮಗ್ಗಲಲ್ಲಿಯೇ ರಚನೆಗೊಂಡಿದ್ದರೆ ಸುರಪುರ ಪಟ್ಟಣವು ಗುಡ್ಡದ ಮೇಲೆ ವಿಸ್ತರಿಸಿಕೊಂಡಿದೆ. ಶಹಾಪುರ ಪಟ್ಟಣದ ಪರಿಸರದಲ್ಲಿಯೇ ಹರಡಿಕೊಂಡಿರುವ ಬೆಟ್ಟವು ಬುದ್ಧನು ಮಲಗಿರುವಂತೆ ತೋರುತ್ತದೆ. ಈ ದೃಶ್ಯವು ಇಳಿ ಹೊತ್ತಿನಲ್ಲಿ ತುಂಬಾ ಕಂಡುಬರುವುದು.

ಸುರಪುರ ತಾಲೂಕಿನ ಹಗರಟಗಿಯಲ್ಲಿ ಪ್ರಾರಂಭಗೊಳ್ಳುವ ಕಡಿಮೆ ಎತ್ತರ ಹಾಗೂ ಮಟ್ಟಸದಿಂದ ಕೂಡಿರುವ ಗುಡ್ಡವು ಹುಣಸಗಿ ಪ್ರದೇಶವನ್ನು ದಾಟಿ ಮುದನೂರು ಪರಿಸರದವರೆಗೂ ಕಿರಿದಾಗುತ್ತಾ ಹೋಗುತ್ತದೆ. ಅಲ್ಲದೇ ಅದು ಅಲ್ಲಲ್ಲಿ ನೆಲಸಮಗೊಂಡಂತೆ ಕಾಣುವುದು. ಇದು ಅಖಂಡವಾಗಿ ಹಬ್ಬಿಕೊಂಡಿಲ್ಲ. ಈ ಪರಿಸರದಲ್ಲಿ ಬರುವ ಹುಣಸಗಿ ಮತ್ತು ಬೈಚಬಾಳ ಕೊಳ್ಳಗಳು ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ತುಂಬಾ ಮಹತ್ವದ ಹಾಗೂ ಅಮೂಲ್ಯ ಕುರುಹುಗಳನ್ನು ತನ್ನೊಡಲೊಳಗೆ ರಕ್ಷಿಸಿಕೊಂಡು ಬಂದಿರುವ ಸಂಗತಿಗಳು ತಿಳಿದಿರುವ ವಿಷಯಗಳೇ ಆಗಿವೆ.

ಯಾದಗಿರಿ ಜಿಲ್ಲೆಯ ಶಹಾಪುರ ಮತ್ತು ಸುರಪುರ ತಾಲೂಕು ಪ್ರದೇಶಗಳು ಸಗರ ದೋಆಬ್‌ದಲ್ಲಿ ಕೇಂದ್ರೀಕರಣಗೊಂಡಿವೆ. ಕೃಷ್ಣಾ ಮತ್ತು ಭೀಮಾ ನದಿಗಳ ನಡುವಿನ ಈ ಪ್ರದೇಶವನ್ನು ಸಗರ ದೋಆಬ್ ಅಥವಾ ಸಗರ ಗಡ್ಡೆ ಎಂದು ಕರೆಯಲಾಗುತ್ತದೆ. ಇದು ೭೬°೧೮–೭೭°೧೮ ಅಕ್ಷಾಂಶ ಹಾಗೂ ೧೬°೧೫–೧೭°೧೨ ರೇಖಾಂಶದಲ್ಲಿದ್ದು ಹೆಚ್ಚು ಕಡಿಮೆ ೫೩೭೦ ಚದುರಕಿಲೋಮೀಟರ ವಿಸ್ತೀರ್ಣ ಹೊಂದಿದೆ ಎಂಬ ಉಲ್ಲೇಖವಿದೆ[೧].

## ನದಿಗಳು

ಈ ಜಿಲ್ಲೆಯಲ್ಲಿ ಪ್ರಮುಖವಾಗಿ ಕೃಷ್ಣಾ, ಭೀಮಾ ಹಾಗೂ ಡೋಣಿ ಎಂಬ ಹೆಸರಿನ ಮೂರು ನದಿಗಳು ಹರಿದಿವೆ. ಅಲ್ಲದೇ ಹುಣಸಗಿ(ಸುರಪುರ ತಾಲೂಕು), ಹತ್ತಿಕುಣಿ ಮತ್ತು ಗುರುಮಿಟ್ಕಲ್(ಯಾದಗಿರಿ ತಾಲೂಕು) ಪ್ರದೇಶಗಳಲ್ಲಿ ಸಣ್ಣ ತೊರೆಗಳಾಗಿ ಹರಿದಿರುವ ಜಲ ಮೂಲಗಳು ಈ ಜಿಲ್ಲೆಯಲ್ಲಿವೆ. ಇವು ಪ್ರಾಚೀನ ನಾಗರಿಕತೆಗಳ ಆಡಂಬೋಲದ ಕಣಗಳಾಗಿದ್ದವಲ್ಲದೇ ಈ ಹೊತ್ತಿನ ಕೃಷಿ ಚಟುವಟಿಕೆಗಳಿಗೂ ಹೆಚ್ಚಿನ ಸಹಕಾರ ನೀಡಿವೆ.

### ಕೃಷ್ಣಾ

ದಕ್ಷಿಣ ಮಹಾರಾಷ್ಟ್ರದ ಮಹಾಬಳೇಶ್ವರ ಬಳಿ ಹುಟ್ಟುವ ಈ ನದಿಯು ಬೆಳಗಾವಿ ಜಿಲ್ಲೆಯ ಮೂಲಕ ಕರ್ನಾಟಕ ರಾಜ್ಯವನ್ನು ಪ್ರವೇಶಿಸುವುದು. ಬೆಳಗಾವಿ, ಬಾಗಲಕೋಟೆ, ವಿಜಯಪುರ

ಮತ್ತು ರಾಯಚೂರ ಜಿಲ್ಲೆಗಳ ಗಡಿಗಳ ಉದ್ದಕ್ಕೂ ಪ್ರವಹಿಸುತ್ತಾ ನಾರಾಯಣಪುರ ಬಳಿ ಯಾದಗಿರಿ ಜಿಲ್ಲೆಯನ್ನು ಪ್ರವೇಶಿಸುವುದು. ಇದಕ್ಕೆ ನಾರಾಯಣಪುರ ಬಳಿ 'ಬಸವ ಸಾಗರ' ಎಂಬ ಹೆಸರಿನ ಆಣೆಕಟ್ಟು ಕಟ್ಟಲಾಗಿದೆ. ಅಲ್ಲಿಂದ ಇದು ಹಲವು ಕವಲುಗಳಾಗಿ ಹರಿಯುತ್ತಾ ಎತ್ತರ ಪ್ರದೇಶದಿಂದ ತಗ್ಗಿನ ಕಡೆಗೂ ಧುಮುಕುತ್ತದೆ. ಆದ್ದರಿಂದ ಸಹಜವಾಗಿಯೇ ಕೆಲವು ಸ್ಥಳಗಳಲ್ಲಿ ನೈಸರ್ಗಿಕ ಜಲಪಾತಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ನಾರಾಯಣಪುರ ಬಳಿ ಇರುವ ಜಲದುರ್ಗವು ತುಂಬಾ ಮನೋಹರವಾದುದು. ಅಲ್ಲದೇ ಈ ಜಿಲ್ಲೆಯಲ್ಲಿ ಕೃಷ್ಣಾನದಿಯು ಕೆಲವು ಕಡೆಗಳಲ್ಲಿ ಕವಲಾಗಿ ಹರಿಯುವುದರಿಂದ ಸುರಪುರ ಪ್ರದೇಶದಲ್ಲಿ ಹಲವಾರು ನಡುಗಡ್ಡೆಗಳುಂಟಾಗಿರುವುದನ್ನು ಗಮನಿಸಬಹುದು. ಉದಾಹರಣೆಗೆ ನೀಲಕಂಟರಾಯನ-ಗಡ್ಡಿ ದೇವರಗುಡ್ಡಿ, ನೀರದೇವರ ಗಡ್ಡಿ, ಜನಗಿನ ಗಡ್ಡಿ, ಮೇಲಿನ ಗಡ್ಡಿ ಮತ್ತು ಬೆಣಚಿನ ಗಡ್ಡಿಗಳು. ಈ ನದಿಯ ಪಾತ್ರದಲ್ಲಿ ಉಂಟಾಗಿದ್ದ ಇಂಥ ಕವಲುಗಳು ಬಂಡೂರಿ ಅಥವಾ ಬಂಡೂರಿಯ ಬಳಿ ಕೂಡಿಕೊಂಡು ಮತ್ತೆ ಈ ನದಿಯು ದೊಡ್ಡ ಗಾತ್ರವನ್ನು ಪಡೆಯುತ್ತದೆ[೨].

ಲಿಂಗದಳ್ಳಿ, ತಿಂಥಣಿ, ಉರಳ್ಳಿಹಳ್ಳಿ, ಮುಸ್ತೇಹಳ್ಳಿ ಮತ್ತು ಬಂಡೊಡ್ಡಿ ಮುಂತಾದ ಹಳ್ಳಿಗಳು ಈ ನದಿಯ ದಂದಲ್ಲಿರುವುದನ್ನು ಗಮನಿಸಬಹುದು. ಸುರಪುರ ತಾಲೂಕು ಮುಕ್ತಾವಾಗುತ್ತಿದ್ದಂತೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನಲ್ಲಿ ಹರಿಯುತ್ತಾ ಮತ್ತೆ ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ಮರಮಕಲ್ ಗ್ರಾಮದ ಹತ್ತಿರ ಮಗದೊಮ್ಮೆ ಈ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಶಹಾಪುರ ತಾಲೂಕಿನ ದಕ್ಷಿಣ ಭಾಗದಲ್ಲಿರುವ ಚಂದ್ರಾಳ, ಹಯ್ಯಾಳ ಬಿ, ಬೆನ್ನೂರು, ಕೋಡಾಲ, ಗೋನಾಳ ಮತ್ತು ಶಿವಪುರ ಹಳ್ಳಿಗಳಗುಂಟಾ ಹರಿಯುತ್ತಾ ಈ ತಾಲೂಕಿನ ದಕ್ಷಿಣ ತೀರದ ಕಡೆಯ ಗ್ರಾಮವಾದ ಸಂಗಮದಲ್ಲಿ ಭೀಮಾ ನದಿಯು ಕೃಷ್ಣೆಯನ್ನು ಕೂಡಿ ಮುಂದೆ ರಾಯಚೂರಿನ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇದು ಪ್ರಮುಖವಾಗಿ ಸುರಪುರ ಮತ್ತು ಶಹಾಪುರ ತಾಲೂಕಿನ ದಕ್ಷಿಣ ಭಾಗದ ಹಳ್ಳಿಗಳಿಗೆ ಬಹುಮುಖ್ಯ ಜೀವ ಸೆಲೆಯಾಗಿ ಕಂಡುಬಂದಿವೆ. ಕೆಲವು ಶಾಸನಗಳಲ್ಲಿ ಈ ನದಿಯ ಕುರಿತು ಉಲ್ಲೇಖಗಳಿವೆ. ಕ್ರಿ.ಶ.೧೦೭೭ರ ಐವೂರು[೩] ಹಾಗೂ ಕ್ರಿ.ಶ.೧೦೧೭ರ ತಿಂಥಣಿ[೪] ಹಾಗೂ ಕ್ರಿ.ಶ.೧೧೪೩ರ ಸಂಗಮ(ಕ.ಜಿ.ಶಾ.ಶಾ.ಸಂ.೩೬, ಸಂಗಮ[೫] ಶಾಸನಗಳಲ್ಲಿ ಈ ನದಿಯ ಕುರಿತು ಪ್ರಸ್ತಾಪಗಳಿವೆ. ಅದನ್ನು ಹೆದ್ದೊರೆ ಅಥವಾ ಪೆದ್ದೊರೆ ಎಂತಲೂ ಉಲ್ಲೇಖಿಸಿರುವ ದಾಖಲೆಗಳುಂಟು.

**ಭೀಮಾ**

ಭೀಮಾ ನದಿಯು ಕೃಷ್ಣಾ ನದಿಯ ಉಪನದಿಯಾಗಿದ್ದು ಅದು ಸಹ ಪಶ್ಚಿಮ ಮಹಾರಾಷ್ಟ್ರದ ಸಹ್ಯಾದ್ರಿ ತಪ್ಪಲಿನ ಭೀಮಾ ತೀರದಲ್ಲಿ ಹುಟ್ಟುತ್ತದೆ. ಈ ರಾಜ್ಯದಲ್ಲಿರುವ ಸಾತಾರಾ, ಪಂಢರಪುರ ಹಾಗೂ ಸೊಲ್ಲಾಪುರ ಜಿಲ್ಲೆಗಳ ಮೂಲಕ ಹರಿದು ಕರ್ನಾಟಕ ರಾಜ್ಯ ಬಿಜಾಪುರ ಜಿಲ್ಲೆಯನ್ನು

ಪ್ರವೇಶಿಸುತ್ತದೆ. ಈ ಜಿಲ್ಲೆಯ ಇಂಡಿ ಮತ್ತು ಸಿಂದಗಿ ತಾಲೂಕಿನ ಮೂಲಕ ಹರಿಯುವ ಭೀಮಾ ನದಿಯು ಕಲಬುರಗಿ ಜಿಲ್ಲೆಯ ಅಫಜಲ್‌ಪುರ ತಾಲೂಕು ಮೂಲಕ ರಾಜ್ಯದ ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಪ್ರವೇಶ ಪಡೆಯುತ್ತದೆ. ಅಫಜಲ್‌ಪುರ ಮತ್ತು ಕಲಬುರಗಿ ತಾಲೂಕುಗಳಿಗೆ ಉಪಕಾರಿಯಾದ ಈ ನದಿಯು ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ಹೊಸೂರು ಗ್ರಾಮದ ಮೂಲಕ ಈ ಜಿಲ್ಲೆಗೆ ಪ್ರವೇಶ ಪಡೆಯುತ್ತದೆ. ಇದು ಅಣಬಿ, ಹುರುಸಗುಂಡಗಿ, ತಂಗಡಗಿ, ಬಲಕಲ್, ನಾಲ್ವಡಗಿ, ಬಿರನಾಳ, ಬೆನಕನಹಳ್ಳಿ, ಜೋಳದಡಗಿ, ಸೂಗೂರು, ಅಗಿಹಾಳ ಗ್ರಾಮ ಪರಿಸರದ ಮೂಲಕ ಹಾಯ್ದು ಸಂಗಮದಲ್ಲಿ ಕೃಷ್ಣೆಯನ್ನು ಕೂಡಿಕೊಳ್ಳುವುದು. ಯಾದಗಿರಿ ತಾಲೂಕಿನ ಯಾದಗಿರಿ ಪಟ್ಟಣ, ಕೋಳೂರು, ಲಿಂಗೇರಿ, ಮಲ್ಹಾರ, ಭೀಮನಹಳ್ಳಿ ಮತ್ತು ಗೋವಿಂದನಹಳ್ಳಿ ಗ್ರಾಮಗಳು ಇದೇ ನದಿಯ ದಂಡೆಯಗುಂಟ ಕೇಂದ್ರೀಕರಣಗೊಂಡಿವೆ. ಈ ನದಿಯು ಶಹಾಪುರ, ಯಾದಗಿರಿ ಮತ್ತು ಚಿತ್ತಾಪುರ (ಗುಲಬರ್ಗಾ ಜಿಲ್ಲೆ) ತಾಲೂಕುಗಳನ್ನು ಬೇರ್ಪಡಿಸುವ ಗಡಿರೇಖೆಯಂತೆ ಹರಿಯುವುದು. ಶಹಾಪುರ ತಾಲೂಕಿನ ಈಶಾನ್ಯ ಮತ್ತು ಆಗ್ನೇಯ ಭಾಗಗಳಿಗೆ ನೀರಾವರಿಯ ಹೆಚ್ಚಿನ ಸೌಕರ್ಯವನ್ನು ಈ ನದಿಯೇ ಕಲ್ಪಿಸಿದೆ. ತಾಲೂಕಿನ ಅಣಬಿ, ಶಿರವಾಳ ಹಾಗೂ ಹುರುಸಗುಂಡಗಿಯ ಗ್ರಾಮಗಳು ನದಿಯ ಬಲದಂಡೆಯಲ್ಲಿದ್ದರೆ ಆಚೆಯ ದಡದಲ್ಲಿ ಜಗತ್ಪ್ರಸಿದ್ಧ ಸನ್ನತಿ ಹಾಗೂ ಕಣಗಿನಾಳ ನೆಲೆಗಳು ಕೇಂದ್ರೀಕೃತವಾಗಿವೆ. ಈ ನದಿಯ ಕುರಿತು ಕ್ರಿ.ಶ.೧೧೪೩ರ ತೇದಿಯ ಸಂಗಮ ಶಾಸನದಲ್ಲಿ ಇದನ್ನು ಭೀಮನದಿ ಎಂದು ಕರೆಯಲಾಗಿದೆ[೬]. ಕ್ರಿ.ಶ.೧೦೪೦ರ ಬೆಳಗುಂದಿಯ ಶಾಸನದಲ್ಲಿಯೂ ಇದೇ ಮಾಹಿತಿ ಇದೆ[೭].

## ಡೋಣಿ

ಇದೊಂದು ಸಣ್ಣ ನದಿಯಾಗಿ ಕಂಡರು ಇದರ ಪಾತ್ರ ಮಾತ್ರ ಬಹುಮುಖ್ಯವಾದುದು. ವಿಜಾಪುರ ಜಿಲ್ಲೆಯಲ್ಲಿ ಹುಟ್ಟಿಕೊಳ್ಳುವ ಈ ಉಪ ನದಿಯ ದಂಡೆಯಲ್ಲಿ ಪ್ರಾಗಿತಿಹಾಸ ಕಾಲದ ಹಲವಾರು ಮಹತ್ವದ ನೆಲೆಗಳು ಬೆಳೆದು ಬಂದಿರುವುದನ್ನು ಅಧ್ಯಯನಕಾರರು ದಾಖಲಿಸಿದ್ದಾರೆ. ಎರೆಯ ಭೂಮಿಯ ಮಾದಿಗನು ರಾಜನಾಗಬೇಕಾದರೆ ಡೋಣಿ ಹರಿಯಬೇಕು ಎಂಬ ಮಾತುಗಳಿವೆ. ಹಾಗಾಗಿ 'ಡೋಣಿ ಹರಿದರೆ ಓಣಿಯಲ್ಲಿ ಕಾಳು' ಎಂಬ ನಾಣ್ನುಡಿ ಚಾಲ್ತಿಯಲ್ಲಿರುವುದು. ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ನೈಋತ್ಯ ಭಾಗದಲ್ಲಿ ಹರಿಯುವ ಡೋಣಿ ನದಿ ಪರಿಸರದಲ್ಲಿ ಹೆಚ್ಚಿನ ಪ್ರಸಿದ್ಧಿಯನ್ನು ಪಡೆದಿರುವ ಹಗರಟಗಿ, ತಾಳಿಕೋಟೆ(ಮುದ್ದೇಬಿಹಾಳ ತಾಲೂಕು) ಕೊಡೇಕಲ್ಲು, ರಾಯನಪಾಳ್ಯ ಹಾಗೂ ಹನುಮಸಾಗರ ಎಂಬ ಪ್ರಾಗಿತಿಹಾಸದ ನೆಲೆಗಳು ಕೇಂದ್ರೀಕೃತವಾಗಿರುವುದನ್ನು ಗಮನಿಸಬಹುದು.

## ಅರಣ್ಯ ಪ್ರದೇಶ

ಅತ್ಯಂತ ಹೆಚ್ಚಿನ ಅರಣ್ಯ ಪ್ರದೇಶವು(೨೩.೮೮೧ ಹೆಕ್ಟೇರ್) ಯಾದಗಿರಿ ತಾಲೂಕಿನಲ್ಲಿದೆ.

ಸುರಪುರ ಮತ್ತು ಶಹಾಪುರ ಪ್ರದೇಶಗಳಲ್ಲಿ ಕ್ರಮವಾಗಿ ೪,೮೯೭ ಹೆಕ್ಟೇರ್ ಮತ್ತು ೪.೯೬೫ ಹೆಕ್ಟೇರ್ ಪ್ರದೇಶವು ಕುರುಚಲು ಗಿಡಗಂಟಿಗಳಿಂದ ಕೂಡಿದ ಅರಣ್ಯ ಪ್ರದೇಶವಾಗಿದೆ. ತಿಂಥಣಿ, ಬೈಲಾಪುರ ತಾಂಡ, ರಾಜನಕೊಳ್ಳೂರು, ರಾಯನಪಾಳ್ಯ, ತೀರ್ಥ, ಕೊಡೇಕಲ್ಲು, ವಾಗಣಗೇರಿ ಹಾಗೂ ಮಾಲಗತ್ತಿ ಮುಂತಾದ ಗ್ರಾಮಗಳ ಪರಿಸರವು ಇಂಥ ಚಿಕ್ಕಪುಟ್ಟ ಗುಡ್ಡಗಳಲ್ಲಿ ವಿಸ್ತರಿಸಿಕೊಂಡಿರುವುದನ್ನು ಕಾಣುತ್ತೇವೆ.

**ಬಾವಿಗಳು**

ಈ ಪ್ರದೇಶದಲ್ಲಿ ಶಿಥಿಲೀಕರಣವಾಗಿರುವ ಅಗ್ನಿಶಿಲೆ ಮತ್ತು ರೂಪಾಂತರ ಶಿಲೆ ಮತ್ತು ಶಿಥಿಲೀಕರಣವಾಗದಿರುವ ಶಿಲೆಗಳ ಬಿರುಕಗಳ ಮತ್ತು ಸಂದುಗಳ ಪ್ರದೇಶಗಳಲ್ಲಿ ನೀರಿನ ಮಟ್ಟದ ಕೆಳಗೆ ಅಂತರ್ಜಲವು ದೊರೆಯುತ್ತದೆ. ನೀರಿನ ಹೇರಳ ಪ್ರಮಾಣದ ಲಭ್ಯತೆ ಪರಿಣಾಮದಿಂದಾಗಿಯೇ ಬಹುಶಃ ಈ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ನೀರಿನ ಆಶ್ರಯವಾಗಿ ಬಾವಿಗಳನ್ನು ತೋಡಿ ನೀರಾವರಿ ವ್ಯವಸ್ಥೆಯನ್ನು ಸಮೃದ್ಧವಾಗಿ ಬಳಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಹಲವು ಬಾವಿಗಳ ಕುರಿತು ಕೆಲವು ಉದಾಹರಣೆಗಳು ಶಾಸನಾಧಾರಗಳಲ್ಲಿಯೂ ದಾಖಲಾಗಿವೆ.

ಸುರಪುರ ತಾಲೂಕಿನ ಮುದನೂರಿನಲ್ಲಿರುವ ನೂರಾರು ಬಾವಿಗಳು, ಹಗರಟಗಿಯಲ್ಲಿರುವ ಹಲವಾರು ಬಾವಿಗಳ ಉಲ್ಲೇಖಗಳು ಕೋಟ್ಯಾಂತರ ವರುಷಗಳ ಹಿಂದಣಾವಧಿಯಲ್ಲಿ ರಚನೆಗೊಂಡಿರುವ ಪಂಥವು ಈ ಜಿಲ್ಲಾ ಪ್ರದೇಶದಲ್ಲಿರುವ ಏವೂರು ಶಿರವಾಳ ಮದ್ರಕಿಯ ಹಾಗೂ ಹಗರಟಗಿ ಪರಿಸರದಲ್ಲಿ ನೂರಾರು ಬಾವಿಗಳಿವೆ ಎಂಬ ಉದಾಹರಣೆ ಸ್ಥಳೀಯರು ನೀಡುತ್ತಾರೆ. ಈ ಪರಿಸರದಲ್ಲಿ ಸಿಗುವ ಸುಣ್ಣದ ಕಲ್ಲು ಸ್ತರಭಂಗಗೊಂಡಿರುವುದಲ್ಲದೆ ಕಾರ್ಸ್ಟೀಕರಣ(Carstification)ಗೊಂಡಿರುವುದರಿಂದ ಇಷ್ಟು ಅದ್ಭುತ ಪ್ರಮಾಣದ ಅಂತರ್ಜಾಲವನ್ನು ಸಂಗ್ರಹಿಸಿಡಲು ನಮ್ಮ ರಾಜ್ಯದಲ್ಲಿ ಇದೊಂದು ಅತ್ಯಂತ ವಿಪುಲವಾಗಿ ದೊರೆಯುವ ಅಂತರ್ಜಲದ ಉದಾಹರಣೆಯಾಗಿದೆ.

ಕೋಟ್ಯಾಂತರ ವರುಷಗಳ ಹಿಂದಣಾವಧಿಯಲ್ಲಿ ರಚನೆಗೊಂಡಿರುವ ಈ ಜಿಲ್ಲಾ ಪ್ರದೇಶವು ಬಾವಿಗಳಿಂದ ಮಾತ್ರವಲ್ಲ ವೈವಿಧ್ಯಮಯ ಖನಿಜ ನಿಕ್ಷೇಪಗಳಿಂದಲೂ ಸಂಪದ್ಭರಿತವಾಗಿರುವ ವಿವರಗಳನ್ನು ದಾಖಲಿಸಿರುವುದು ಉತ್ಪ್ರೇಕ್ಷಿತ ಸಂಗತಿಯಲ್ಲ. ಸುರಪುರ ತಾಲೂಕಿನಲ್ಲಿರುವ ಮಂಗಳೂರು ಗ್ರಾಮ ಪರಿಸರದಲ್ಲಿ ಚಿನ್ನದ, ತಿಂಥಣಿ ಪರಿಸರದಲ್ಲಿ ತಾಮ್ರದ ನಿಕ್ಷೇಪ ಇರುವ ಬಗೆಗೆ ಮಾಹಿತಿಗಳು ಪ್ರಕಟವಾಗಿವೆ. ಶಹಾಪುರ ತಾಲೂಕಿನ ಗೋಗಿ ಗ್ರಾಮ ಪರಿಸರವಂತೂ ಇತ್ತೀಚೆಗೆ ಅಂತರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದಿದೆ. ಇಲ್ಲಿ ಸಿಗುತ್ತಿರುವ ಯುರೇನಿಯಂ ನಿಕ್ಷೇಪ ಬಹು ಬಳಕೆಯ ವಿಧಾನಗಳಿಗೆ ಉಪಯೋಗವಾಗುತ್ತದೆ. ಅಲ್ಲದೇ ಈಗಾಗಲೇ ಈ

ಗ್ರಾಮ ಪರಿಸರದಲ್ಲಿ ಗಣಿಗಾರಿಕೆ ಮಾಡುವ ಪ್ರಯತ್ನಗಳು ಆಗಿದ್ದುಂಟು. ಈ ನಿಕ್ಷೇಪವು ವೈಜ್ಞಾನಿಕ ವಲಯದಲ್ಲಿ ಅತ್ಯಂತ ಬಹುಬೇಡಿಕೆಯ ಮೂಲವಸ್ತುವಾಗಿ ಪರಿಣಮಿಸಿದೆ. ಆದರೆ ಅದರಿಂದಾಗುವ ದುಷ್ಪರಿಣಾಮಗಳು ಸಹ ಜನರನ್ನು ಹೆಚ್ಚಿನ ಆತಂಕಕ್ಕೆ ಉಂಟುಮಾಡಿವೆ. ಸುರಪುರ ಹಾಗೂ ಶಹಾಪೂರ ತಾಲೂಕಿನ ತುಂಬೆಲ್ಲಾ ಹೇರಳ ಪ್ರಮಾಣದಲ್ಲಿ ಸುಣ್ಣದ ಕಲ್ಲಿನ ನಿಕ್ಷೇಪವು ಹರಡಿಕೊಂಡಿರುವುದು[10]. ಇದಲ್ಲದೇ ಜಿಲ್ಲೆಯ ಶಹಾಪುರ ತಾಲೂಕಿನ ರಾಜಾಪುರ ಗಂಗನಾಳ, ಹೊಸಗೇರಾ ನಾಗನಟಗಿ ಕರ್ಕಿಹಳ್ಳಿ ಹಾಗೂ ಸುರಪುರ ತಾಲೂಕುಗಳಲ್ಲಿರುವ ವಾಗಣಗೇರಾ, ಆಲದಹಳ್ಳಿ ಮತ್ತು ಎಡೆಯಾಪುರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕೆಂಪುಕಲ್ಲು ದೊರೆಯುತ್ತದೆ. ಇದು ಸಹ ಬಹು ಬೇಡಿಕೆಯ ಸಾಮಗ್ರಿಯೇ ಆಗಿದೆ.

ವಿಸ್ತಾರವಾದ ಸಮತಟ್ಟಾಗಿರುವ ಪ್ರದೇಶಗಳಿಂದ ಕೂಡಿರುವ ಈ ಜಿಲ್ಲಾ ಪ್ರದೇಶವು ಬಹುತೇಕ ಹೆಚ್ಚಿನ ಪ್ರಮಾಣದಲ್ಲಿ ಕಪ್ಪುಮಣ್ಣಿನಿಂದ ಕೂಡಿರುವುದನ್ನು ಕಾಣುತ್ತೇವೆ. ಅಪರೂಪವೆಂಬಂತೆ ಯಾದಗಿರಿ ತಾಲೂಕಿನ ಕೆಲವು ಪ್ರದೇಶಗಳಲ್ಲಿ ಕೆಂಪು ಮಣ್ಣಿನ ವಿಸ್ತರಣೆಯು ಸ್ವಲ್ಪಮಟ್ಟಿಗೆ ಇರುವುದು. ಆದರೆ ಶಹಾಪುರ ತಾಲೂಕು ಮಾತ್ರ ಸಂಪೂರ್ಣವಾಗಿ ಕಪ್ಪುಮಣ್ಣಿನಿಂದಲೇ ಕೂಡಿರುವ ಪ್ರದೇಶವೆಂದು ಭಾವಿಸಿದರೆ ತಪ್ಪಾಗಲಾರದು. ಹಾಗಾಗಿ ಬಹುಶಃ ಸಗರ ಸಾವಿರ ಏಕ ದೋರನಹಳ್ಳಿ(ಸಗರನಾಡಿನ ಸಾವಿರ ಹಳ್ಳಿಗಳಿಗೆ ಒಂದು ದೋರನಹಳ್ಳಿ ಸಮ) ಎಂಬ ಅರ್ಥದಲ್ಲಿ ನಾಣ್ನುಡಿಯೊಂದು ಹುಟ್ಟಿಕೊಂಡಿರಬಹುದು. ಕೃಷ್ಣಾ ಮತ್ತು ಭೀಮಾನದಿಗಳನ್ನು ತಾಲೂಕಿನ ಗಡಿಯಾಗಿ ಮಾಡಿಕೊಂಡಿರುವ ಈ ಪ್ರದೇಶವು ನಿರಂತರ ಸಮೃದ್ಧಿಯಿಂದ ಕಂಗೊಳಿಸುತ್ತಿರುತ್ತದೆ. ಈ ಪ್ರದೇಶವು ವರ್ಷದ ಎಲ್ಲ ದಿನಗಳಲ್ಲಿ ಕೃಷಿ ಚಟುವಟಿಕೆಯಿಂದ ಕೂಡಿರುತ್ತದೆ. ಕೃಷ್ಣಾ ಮತ್ತು ಭೀಮಾನದಿಗಳಲ್ಲದೇ, ಹುಣಸಗಿಹಳ್ಳ, ಗುರುಮಿಟ್ಕಲ್ ಹಾಗೂ ಹತ್ತಿಕುಣಿ ಪ್ರದೇಶದಲ್ಲಿ ಹರಿಯುವ ಚಿಕ್ಕ ತೊರೆಗಳು ಮಳೆಗಾಲ ಸಂದರ್ಭದಲ್ಲಿ ಈ ಜಿಲ್ಲೆಯಲ್ಲಿರುವ ನೀರಿನ ಬವಣೆಯನ್ನು ತಕ್ಕಮಟ್ಟಿಗೆ ಪರಿಹರಿಸುವಲ್ಲಿ ಸಫಲವಾಗಿವೆಯೆಂದು ಅಭಿಪ್ರಾಯಿಸಬಹುದು. ಆದರೂ ಅಪವಾದವೆಂಬಂತೆ ಕೆಲವು ಸಮಸ್ಯೆಗಳುಂಟು. ಕಾರಣ ಈ ಜಿಲ್ಲೆಯಲ್ಲಿ ಮುಖ್ಯವಾಗಿ ದಕ್ಷಿಣ ಭಾರತದ ಎರಡು ಪ್ರಮುಖ ನದಿಗಳು ಈ ಪರಿಸರದಲ್ಲಿ ಹರಿದರೂ ಒಣ(ಮಳೆ ಆಧಾರಿತ)ಬೇಸಾಯವು ಹೆಚ್ಚಿನ ಪ್ರಮಾಣದಲ್ಲಿದೆ. ಪ್ರಾಯಶಾ ಇಂಥ ಕಾರಣಗಳಿಗೆ ಹಲವಾರು ಕಾರಣಗಳನ್ನು ಕೊಡಬಹುದು. ಆದರೆ ಅವು ನಮ್ಮ ಅಧ್ಯಯನದ ಮಿತಿಯ ಆಚೆಗೆ ಇರುವಂಥವು. ಈ ಪ್ರದೇಶದಲ್ಲಿ ತೊಗರಿ, ಹತ್ತಿ, ಜೋಳ, ದ್ವಿದಳ ಧಾನ್ಯಗಳು ಹಾಗೂ ಭತ್ತ ಮತ್ತು ಎಣ್ಣೆಕಾಳುಗಳನ್ನು ಉತ್ಪಾದಿಸುವ ವ್ಯವಸಾಯವು ಹೆಚ್ಚಿನ ಪ್ರಮಾಣದಲ್ಲಿರುವುದು. ವೈವಿಧ್ಯಮಯ ಭೂರಚನೆ, ಹವಾಮಾನ ಜನ ಸಂಸ್ಕೃತಿ ಹೊಂದಿರುವ ಈ ಪರಿಸರವು ಪ್ರಾಗಿತಿಹಾಸ ಕಾಲದಿಂದಲೂ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಾ ಬಂದಿರುವುದು.

## ಪ್ರಾಗಿತಿಹಾಸ ಅಧ್ಯಯನ ವಿವರಗಳು

ಪುರಾತತ್ವ ಅಧ್ಯಯನದ ಭೀಷ್ಮರೆನಿಸಿಕೊಂಡಿರುವ ಕರ್ನಲ್ ಮೆಡೋಸ್ ಟೇಲರ್ ಅವರಿಂದ ಈ ಪರಿಸರದ ಪುರಾತತ್ವ ಅಧ್ಯಯನದ ಪುಟಗಳು ತೆರೆದುಕೊಳ್ಳುತ್ತವೆ. ಈತನನ್ನು 'ಮಹಾದೇವ ಬಾಬಾ' ಎಂತಲೂ ಸ್ಥಳೀಯರು ಪ್ರೀತಿಯಿಂದ ಕರೆಯುತ್ತಿದ್ದುಂಟು. ಕ್ರಿ.ಶ.೧೮೪೧ರಲ್ಲಿ ಅವರನ್ನು ಪೊಲಿಟಿಕಲ್ ಏಜೆಂಟ್‌ನೆಂದು ಸುರಪುರಕ್ಕೆ ಕಳುಹಿಸಲಾಯಿತು. ಅಲ್ಲಿಂದ ೧೮೫೩ರವರೆಗೆ ಸುರಪುರದ ರಾಜಕುಮಾರನ ಪರವಾಗಿ ಆಡಳಿತದ ಹೊಣೆಯನ್ನು ನಿರ್ವಹಿಸಿ ಜನರಿಂದ ಸೈ ಅನ್ನಿಸಿಕೊಂಡರು. ಆನಂತರ ಕೆಲವು ವರ್ಷಗಳ ಕಾಲ ಬೇರೆ ಪ್ರದೇಶಗಳಲ್ಲಿ ಆಡಳಿತ ನಿರ್ವಹಿಸಿ ಪುನಃ ೧೮೫೮ರಲ್ಲಿ ಸುರಪುರ ಕಮೀಷನರ್‌ನೆಂದು ಮತ್ತೆ ಮರಳಿ ಬಂದು ೧೮೬೦ರಲ್ಲಿ ನಿವೃತ್ತಿಯವರೆಗೂ ಅಲ್ಲಿಯೇ ಇದ್ದು ಇಂಗ್ಲೆಂಡಿಗೆ ಮರಳಿದರೆಂದು ದಾಖಲೆಗಳು ಉಲ್ಲೇಖಿಸುತ್ತವೆ. ಮೂಲತಹ ಅವನೊಬ್ಬ ಆಡಳಿತಗಾರನಾಗಿದ್ದರೂ ತನ್ನಲ್ಲಿರುವ ಹವ್ಯಾಸ ಮತ್ತು ಆಸಕ್ತಿಯಿಂದಾಗಿ ಪ್ರಾಗಿತಿಹಾಸ ಕುರಿತ ನೆಲೆಗಳ ಶೋಧನೆ ಮಾಡಿ ಈ ಕ್ಷೇತ್ರಕ್ಕೆ ಹೊಸ ಬಗೆಯ ಮಾರ್ಗವನ್ನು ತೋರಿದ ಕೀರ್ತಿ ಟೇಲರನಿಗೆ ಸಲ್ಲುತ್ತದೆ ಎಂದರೆ ಅತಿಶಯೋಕ್ತಿ ಆಗಲಾರದು. ಆಡಳಿತ ಸಂಬಂಧ ತಾನು ಹಾಕಿಕೊಂಡಿದ್ದ ಯೋಜನೆಗಳನ್ನು ಪರಿವೀಕ್ಷಿಸುವ ಸಂದರ್ಭದಲ್ಲಿ ಹಲವಾರು ಹೋಬಳಿ ಗ್ರಾಮಗಳಿಗೆ ಭೇಟಿ ನೀಡುವ ಪ್ರಸಂಗ ಉದ್ಭವವಾಗುತ್ತಿತ್ತು. ಅಂಥ ಸಂದರ್ಭಗಳಲ್ಲಿ ಅಲ್ಲಿದ್ದ ಪ್ರಾಗೈತಿಹಾಸಿಕ ನೆಲೆಗಳನ್ನು ಅಚ್ಚುಕಟ್ಟಾಗಿ ಮುತುವರ್ಜಿ ವಹಿಸಿ ಗುರುತಿಸಿ ಪ್ರಕಟಿಸುವ ಪ್ರಯತ್ನ ಮಾಡಿದರು.

ಹತ್ತೊಂಬತ್ತನೆಯ ಶತಮಾನದಲ್ಲಿ ಟೇಲರ ಕೈಗೊಂಡು ಪ್ರಕಟಿಸಿದ ಪುರಾತತ್ವ ಸಂಶೋಧನಾ ಲೇಖನಗಳು ಇಂಗ್ಲೆಂಡಿನ ಪ್ರಮುಖ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿವೆ. ಹೈದ್ರಾಬಾದ್ ನಿಜಾಮ ಸರ್ಕಾರದ ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದ ಹೆಸರಾಂತ ಚರಿತ್ರೆಕಾರ ಜಿಯಾವುದ್ದೀನ್ ಯಾಜ್ದಾನಿ ಅವರು ೧೯೪೧ರಲ್ಲಿ ಮೆಗಾಲಿಥಿಕ್ ಟೋಂಬ್ಸ್ ಆ್ಯಂಡ್ ಅದರ್ ಏನ್ಸೆಂಟ್ ರಿಮೆನ್ಸ್ ಇನ್ ಡೆಕನ್ (Megalithic Tombs and other Ancient Remains in the Deccan) ಎಂಬ ಶೀರ್ಷಿಕೆಯ ಗ್ರಂಥದಲ್ಲಿ ಅವರು ಬರೆದು ಪ್ರಕಟಿಸಿದ ಲೇಖಗಳನ್ನು ಮತ್ತೆ ಪ್ರಕಟಿಸಿದ್ದಾರೆ(೧). ಅವರು ಸುಮಾರು ಇಪ್ಪತ್ತಕ್ಕೂ ಹೆಚ್ಚು ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಿದ್ದಾರೆಂಬ ವಿವರಗಳು ಈ ಗ್ರಂಥದಲ್ಲಿ ಪ್ರಕಟವಾಗಿವೆ. ಮುಖ್ಯವಾಗಿ ಯಾದಗಿರಿ ಜಿಲ್ಲೆಯ ಹಗರಟಗಿ, ರಾಜನಕೊಳ್ಳೂರು(ಸುರಪುರ ತಾಲೂಕು), ಆಮ್ಲಾಪುರ(ಭೀಮರಾಯನಗುಡಿ) ಮತ್ತು ವಿಭೂತಿಹಳ್ಳಿ(ಶಹಾಪುರ ತಾಲೂಕು) ನೆಲೆಗಳನ್ನು ಅನ್ವೇಷಿಸಿ ಕಬ್ಬಿಣಯುಗಕ್ಕೆ ಸಂಬಂಧಿಸಿದ ಬೃಹತ್ ಶಿಲಾ ಸಮಾಧಿ ಸಂಸ್ಕೃತಿ ಕುರುಹುಗಳನ್ನು ಪತ್ತೆಹಚ್ಚಿ ಪ್ರಕಟಿಸುವ ಕಾರ್ಯ ಮಾಡಿದರೆಂದು ವಿವರಿಸಲಾಗಿದೆ. ಇವುಗಳಲ್ಲದೇ ಬೇರೆ ಬೇರೆ ನೆಲೆಗಳ ಕುರಿತು ಬೇರೆ ವಿವರಗಳನ್ನು ಪ್ರಕಟಿಸಿದ್ದಾರೆ. ಮುಖ್ಯವಾಗಿ ಹಗರಟಗಿ ಮತ್ತು ರಾಜನಕೊಳ್ಳೂರಿನಲ್ಲಿರುವ ಮೌರ್ಯರ

ಮನೆಗಳೆಂದು ಕರೆಯುತ್ತಿದ್ದ ಸಮಾಧಿ ಅವಶೇಷಗಳನ್ನು ಅನ್ವೇಷಿಸಿ ವಿವರಿಸುವ ಪ್ರಯತ್ನವನ್ನು ಟೇಲರ್ ಮಾಡಿದ್ದಾರೆ. ಶಹಾಪುರ ತಾಲೂಕಿನ ವಿಭೂತಿ ಹಳ್ಳಿಯಲ್ಲಿರುವ ಆ ಕಾಲದ ಅವಶೇಷಗಳು ಬೇರೆ ಬೇರೆ ಬಗೆಯಲ್ಲಿದ್ದಿರುವುದನ್ನು ತೋರಿಸಿ ಅವುಗಳ ನಕ್ಷೆಯನ್ನು ತಯಾರಿಸಿದ್ದಾರೆ[೨]. ಈತನ ಕುತೂಹಲ ಕೆರಳಿಸಿದ ಇಂಥ ಅವಶೇಷಗಳು ಬ್ರಿಟನ್(ಇಂಗ್ಲೆಂಡ್) ದೇಶದಲ್ಲಿ ಪ್ರಚಲಿತದಲ್ಲಿರುವ ಡ್ರೂಡಿಸವ್ ಸಂಸ್ಕೃತಿಯ ಕುರುಹುಗಳಿಗೆ ಸಾಮ್ಯತೆ ಹೊಂದಿರುವುದನ್ನು ಗುರುತಿಸುತ್ತಾ ಈ ಪುರಾತನ ಸಮಾಧಿಗಳು ಕೂಡ ಅಂಥವೇ ಸಂಸ್ಕೃತಿಯ ಅವಶೇಷಗಳೆಂದು ಪ್ರತಿಪಾದಿಸಿದರು. ಅದೇ ರೀತಿಯ ಕುರುಹುಗಳು ಅಮ್ಲಾಪುರ(ಭೀಮರಾಯನ ಗುಡಿ) ಗ್ರಾಮ ಪರಿಸರದಲ್ಲಿ ದೊರಕಿರುವ ವಿವರಗಳಾಗಿವೆ ಎಂದು ಮತ್ತಷ್ಟು ವಿವರಗಳನ್ನು ಸಂಶೋಧಿಸಿ ಪ್ರಕಟಿಸುವ ಕಾರ್ಯ ಮಾಡಿದರು[೩].

ಸಾಂಸ್ಕೃತಿಕ ಅಧ್ಯಯನದ ಹವ್ಯಾಸಿಯಾದ ಮೆಡೋಸ್ ಟೇಲರ್ ಉತ್ಖನನ ಕಾರ್ಯವನ್ನು ಮಾಡಿದ್ದು ಸಹ ವಿಶೇಷವೆಂದೇ ತೋರುತ್ತದೆ. ಆ ಸಂದರ್ಭದಲ್ಲಿ ನೂತನ ಶಿಲಾಯುಗ(Neo-Lithic Culture) ಸಂಸ್ಕೃತಿಯ ಆ ನಂತರ ಬೆಳೆದು ಬಂದ ಕಬ್ಬಿಣಯುಗದ ಬೃಹತ್ ಶಿಲಾ ಸಮಾಧಿ ಸಂಸ್ಕೃತಿಯ(Megalithic Cluture) ಕುರುಹುಗಳು ಆ ನೆಲೆಯಲ್ಲಿರುವುದನ್ನು ಸೂಕ್ಷ್ಮವಾಗಿ ಗಮನಿಸಿ ದಾಖಲಿಸಿದ್ದಾರೆ. ಅಲ್ಲಿದ್ದ ಸುಟ್ಟು ಕರಕಲಾದ ಮಡಿಕೆ, ಬೂದಿ, ಪ್ರಾಣಿಗಳ ಮೂಳೆಗಳಂತಹ ಅವಶೇಷಗಳನ್ನು ಪತ್ತೆ ಹಚ್ಚಿ ಅಧ್ಯಯನಕ್ಕೆ ಹೆಚ್ಚಿನ ಇನ್ನೂ ವಿಸ್ತಾರವನ್ನು ತಂದು ಕೊಡುವಲ್ಲಿ ಶ್ರಮಿಸಿದವರೆಂದು ಅಭಿಪ್ರಾಯಿಸಬಹುದು. ಹಾಗಾಗಿ ಈತನನ್ನು ನೂತನ ಶಿಲಾಯುಗದ ಬೂದಿ ದಿಬ್ಬಗಳ ಉತ್ಖನನ ಕೈಗೊಂಡ ಪ್ರಪ್ರಥಮ ಪುರಾತತ್ವಜ್ಞನೆಂಬ ಖ್ಯಾತಿಗೆ ಸೇರುತ್ತಾನೆಂದು ಅಭಿಪ್ರಾಯಿಸಲಾಗಿದೆ[೪]. ಈತನು ಪೂರೈಸಿರುವ ಕಾರ್ಯಗಳನ್ನು ಗಮನಿಸಿ ಈತನನ್ನು ಕರ್ನಾಟಕ ಪುರಾತತ್ವ ಅಧ್ಯಯನದ ಮುಂಗೋಳಿಯೆಂದರೆ ತಪ್ಪಾಗಲಾರದೆಂದು ಕೆಲವು ವಿದ್ವಾಂಸರು ಅಭಿಪ್ರಾಯಿಸುತ್ತಾರೆ.

ಮೆಡೋಸ್ ಟೇಲರ್ ಕೈಗೊಂಡ ಬೆಲೆಯುಳ್ಳ ಇಂಥ ಅನ್ವೇಷಣೆ ಹಾಗೂ ಉತ್ಖನನ ಕಾರ್ಯಗಳು ನಮ್ಮ ನಾಡಿನ ಪುರಾತತ್ವ ಅಧ್ಯಯನದ ಮೊದಲ ಮುನ್ನುಡಿಗಳಾದವುಯೆಂದರೆ ತಪ್ಪಾಗಲಾರದು. ಆ ನಂತರ ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ರಾಬರ್ಟ್ ಬ್ರೂಸ್‌ಫೂಟ್ ಅವರು ಇಂಥದ್ದೇ ಸ್ತುತ್ಯರ್ಹ ಕಾರ್ಯಗಳನ್ನು ಮಾಡಿದರು. ಅತೀ ಪುರಾತನವಾದ ಸಂಸ್ಕೃತಿಯ ಕುರುಹುಗಳನ್ನು ಇದೇ ಪರಿಸರದಲ್ಲಿ ಪತ್ತೆಹಚ್ಚಿ ಪ್ರಕಟಿಸಿದರು. ಅವರು ಮಾಡಿದ ಇಂಥ ಹಲವು ಶ್ಲಾಘನೀಯ ಕಾರ್ಯಗಳಿಂದ ಅವರನ್ನು ಭಾರತೀಯ ಪ್ರಾಗಿತಿಹಾಸದ ಪಿತಾಮಹರೆಂದು(Father of pre-History) ಕರೆಯಲಾಗುತ್ತದೆ. ಪುರಾತತ್ವ ಅಧ್ಯಯನಗಳಲ್ಲಿ ಪ್ರಸಿದ್ಧರಾಗಿರುವ ಅವರು ಮೂಲತಹ ಭೂಗರ್ಭ ವಿಜ್ಞಾನಿಯಾಗಿದ್ದವರು. ಸುರಪುರ ತಾಲೂಕಿನ ಬೈಚಬಾಳ ಕಣವಿ ಪ್ರದೇಶದ ಯಡಳ್ಳಿ ಗ್ರಾಮ ಪರಿಸರದಲ್ಲಿ ಮೊಟ್ಟಮೊದಲಿಗೆ ಆದಿ ಹಳೇ

ಶಿಲಾಯುಗದ(Lower Palaeolithic)ಕಲ್ಲಿನ ಕೊಡಲಿಗಳನ್ನು ಪತ್ತೆ ಹಚ್ಚಿದರು. ಶ್ರೀಯುತ ಆರ್.ಬಿ.ಫೂಟ್ ಅವರಿಗಿಂತ ಮೊದಲೇ ಡಾ.ಪ್ರಿಮೊರ್ರೊ (Dr.Primorose) ಅವರು ರಾಯಚೂರಿನ ಸರಕಾರಿ ವಸತಿ(Bungulow) ಗೃಹದ ಹಿಂಭಾಗದಲ್ಲಿ ಕೈಕೊಡಲಿ, ಚಕ್ಕೆ ಹಾಗೂ ಮೊನೆಗಳಂತಹ ಆಯೋಧೋಪಕರಣಗಳನ್ನು ಪತ್ತೆ ಹಚ್ಚಿದ್ದರು ಎಂಬ ಮಾಹಿತಿಗಳು ದಾಖಲಾಗಿವೆ[೨೨]. ಈ ಆಯುಧೋಪಕರಣಗಳು ಸೇದಿ ಕಲ್ಲು ಅಥವಾ ಶಹಾಬಾದ್ ಕಲ್ಲಿನವು. ಆದರೆ ಪುರಾತತ್ವಶಾಸ್ತ್ರಜ್ಞರು ಆದಿ ಹಳೇ ಶಿಲಾಯುಗದ ಮಾನವರಿಗೆ ತಮ್ಮ ಉಪಕರಣಗಳನ್ನು ಮಾಡಿಕೊಳ್ಳಲು ಈ ಕಲ್ಲು ಅಷ್ಟು ಯೋಗ್ಯವಲ್ಲದ್ದರಿಂದ ಯಡಳ್ಳಿಯಲ್ಲಿ ದೊರೆತ ಉಪಕರಣಗಳ ಬಗೆಗೆ ಪುರಾತತ್ವ ತಜ್ಞರು ಆ ಬಗೆಯಲ್ಲಿ ಅಷ್ಟಾಗಿ ಗಮನ ಗಮನಹರಿಸಲಿಲ್ಲ. ಹಾಗಾಗಿ ಈ ಪರಿಸರವು ಬಹು ವರ್ಷಗಳ ಕಾಲ ವಿದ್ವಾಂಸರು ಗಮನ ಸೆಳೆಯಲಿಲ್ಲ. ಆದರೆ ೧೯೭೦ರ ದಶಕದ ಆದಿ ಭಾಗದಲ್ಲಿ ಪ್ರಾಧ್ಯಾಪಕ ಹಾಗೂ ಸಂಶೋಧಕರಾದ ಡಾ.ಕೆ.ಪದ್ದಯ್ಯ(ಡೆಕನ್ ಸ್ನಾತಕೋತ್ತರ ಮತ್ತು ಸಂಶೋಧನಾ ಸಂಸ್ಥೆ, ಪುಣೆ) ಅವರು ಕೈಗೊಂಡ ಗಂಭೀರ ಹಾಗೂ ವಿಸ್ತಾರವಾದ ಅಧ್ಯಂಯನಗಳು ಈ ಪ್ರದೇಶದ ಇತಿಹಾಸ ಪುಟಗಳನ್ನೇ ಬದಲಾಯಿಸಿತೆಂದು ಅಭಿಪ್ರಾಯಿಸಬಹುದು. ಭೀಮಾ ಶಿಲೆಗಳ ಗುಂಪಿನ ಪ್ರದೇಶದಲ್ಲಿರುವ ಹುಣಸಗಿ-ಬೈಚಬಾಳ ಕೊಳ್ಳಗಳಲ್ಲಿ ಆದಿಹಳೆಯ ಶಿಲಾಯುಗದಿಂದ ಹಿಡಿದು ಅಂತ್ಯ ಹಳೆಯ ಶಿಲಾಯುಗದ ಹಾಗೂ ಸೂಕ್ಷ್ಮ ಶಿಲಾಯುಗದ ತನಕ ಸಂಸ್ಕೃತಿಯು ನಿರಂತರವಾಗಿ ಬೆಳೆದು ಬಂದು ಬಗೆಯನ್ನು ತುಂಬಾ ವೈಜ್ಞಾನಿಕ ಕ್ರಮದಲ್ಲಿ ಪ್ರಚುರಪಡಿಸಿದರು. ಈ ಪ್ರದೇಶದ ಪ್ರಾಗಿತಿಹಾಸ ವಿವರಗಳು ಮುಖ್ಯವಾಗಿ ಈ ಪ್ರಮುಖ ಗ್ರಂಥಗಳಲ್ಲಿ ಪ್ರಕಟಗೊಂಡಿವೆ[೨೩].

ಆದಿ ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ಐದು ಪ್ರಮುಖ ನೆಲೆಗಳನ್ನು ಅವರು ಹುಣಸಗಿ ಪರಿಸರದಲ್ಲಿಯೇ ಪತ್ತೆ ಮಾಡಿದರು. ಅಲ್ಲದೇ ಇಲ್ಲಿ ಉಪಕರಣಗಳನ್ನು ಸಿದ್ಧಮಾಡುವ ಕಾರ್ಯಾಗಾರಗಳಿವೆಯೆಂಬ ಮಹತ್ತರವಾದ ವಿಷಯವನ್ನು ಪ್ರಕಟಿಸಿದರು. ಆದ್ದರಿಂದ ಈ ಪರಿಸರದಲ್ಲಿರುವ ನೆಲೆಗಳು ಇಡೀ ಭಾರತದಲ್ಲಿರುವ ಇಂಥ ಕೆಲವೇ ನೆಲೆಗಳಲ್ಲಿ ಇವು ಸಹ ಅತ್ಯಂತ ಮಹತ್ವದ್ದಾಗಿವೆ ಎಂಬ ಅಭಿಪ್ರಾಯಗಳಿವೆ.

ಕರ್ನಲ್ ಮೆಡೋಸ್ ಟೇಲರ್ ಪ್ರಕಟಿಸಿದ ಅನ್ವೇಷಣಾ ವರದಿಗಳ ಹಿನ್ನೆಲೆಯಲ್ಲಿ ಪುರಾತತ್ವಜ್ಞರಾದ ಡಾ.ಕೆ.ಪದ್ದಯ್ಯ, ಡಾ.ಅ.ಸುಂದರ ಹಾಗೂ ಡಾ.ಎಮ್.ಎಸ್. ನಾಗರಾಜರಾವ್ ಅವರು ವಿಶೇಷವಾಗಿ ಈ ಪ್ರದೇಶದಲ್ಲಿ ಬೆಳೆದು ಬಂದ ನವಶಿಲಾಯುಗದ ಸಂಸ್ಕೃತಿಯ ಬೆಳವಣಿಗೆ ಹಾಗೂ ಅದೇ ಕಾಲದಲ್ಲಿ ನಿರ್ಮಾಣವಾಗಿರುವ ಬೂದಿ ದಿಬ್ಬದ ಸಂಸ್ಕೃತಿಗಳ ಕುರಿತಂತೆ ಇಪ್ಪತ್ತನೆಯ ಶತಮಾನದ ಎಪ್ಪತ್ತು ಮತ್ತು ಎಂಬತ್ತು ದಶಕದಲ್ಲಿ ವಿಸ್ತೃತವಾದ ಅಧ್ಯಯನ ಕೈಗೊಂಡು ವರದಿ ಪ್ರಕಟಿಸಿದರು.

ಮುಖ್ಯವಾಗಿ ಈ ಚರ್ಚೆಗಳು ಈ ಪ್ರದೇಶದಲ್ಲಿದ್ದ ಈ ನವಶಾಲಿಯುಗ ಸಂಸ್ಕೃತಿ ಮಾನವರಿಗೆ ಸಂಬಂಧಿಸಿದ ಕ್ರಮಿಸಿರುವ ದಾರಿಗಳನ್ನು ವಿವರಿಸಿದವು. ನವಶಿಲಾಯುಗ ಅವಧಿಯಲ್ಲಿಯೇ ದನಗಳ ಸೆಗಣಿಯಿಂದ ಬೂದಿ ದಿಬ್ಬಗಳು ಉದ್ಭವಗೊಂಡವು ಎಂಬ ಅಭಿಪ್ರಾಯಗಳಿಗೆ ಹೆಚ್ಚಿನ ವಿದ್ವಾಂಸರ ಸಮ್ಮತಿ ಸೂಚಿಸಿದರು. ಅಂಥ ಬೂದಿ ದಿಬ್ಬಗಳು ಜಿಲ್ಲೆಯ ಸುರಪುರ ತಾಲೂಕಿನ ಬೂದಿಹಾಳ ಮತ್ತು ಕಕ್ಕೇರಿ ಗ್ರಾಮ ಪರಿಸರದಲ್ಲಿ ಕಂಡುಬಂದಿವೆ. ಅಲ್ಲದೇ ಆ ನೆಲೆಗಳ ಕುರಿತು ವಿವರವಾದ ಉತ್ಖನನ ಕೈಗೊಂಡು ವರದಿಗಳನ್ನು ಪ್ರಕಟಿಸಲಾಗಿದೆ. ಬೂದಿಹಾಳ ನೆಲೆಯಲ್ಲಿ ಗಮನಾರ್ಹ ಅಂಶವು ಬೆಳಕಿಗೆ ಬಂದಿರುವುದನ್ನು ಡಾ.ಕೆ.ಪದ್ದಯ್ಯ ಅವರು ಪ್ರಕಟಿಸಿದ್ದಾರೆ. ಅಲ್ಲಿಯ ಜನರ ವಾಸಸ್ಥಾನದ ಬದಿಯಲ್ಲಿಯೇ ಅವರು ಬೇಟೆಯಾಡಿದ ಅಥವಾ ಸಾಕಿದ ಪ್ರಾಣಿಗಳನ್ನು ತಮ್ಮ ಆಹಾರಕ್ಕಾಗಿ ಕತ್ತರಿಸಿ ಮಾಂಸವನ್ನು ಸ್ವಚ್ಛಮಾಡುತ್ತಿದ್ದ ಪ್ರತ್ಯೇಕ ಕಸಾಯಿ ಖಾನೆಗಳಿರುವ ಕುರುಹುಗಳನ್ನು ಗುರುತಿಸಲಾಗಿದೆ. ಈ ನೆಲೆಯ ಕಾಲಮಾನ ಕ್ರಿಸ್ತಪೂರ್ವ ೨೪೦೦ ಎಂದು ನಿರ್ಧರಿಸಲಾಗಿದೆ[೯].

ಈ ಕಾಲಮಾನದ ಜನರು ಕಲ್ಲಾಸರೆ ಅಥವಾ ಗವಿಗಳಲ್ಲಿ ಕೆಮ್ಮಣ್ಣಿನ ಬಣ್ಣಗಳಿಂದ ಕೂಡಿದ ನಾನಾ ರೀತಿಯ ಚಿತ್ರಗಳನ್ನು ಬರೆಯುತ್ತಿದ್ದರೆಂದು ತಿಳಿದು ಬಂದಿದೆ. ಇಂಥ ವರ್ಣಚಿತ್ರಗಳು ಯಾದಗಿರಿ ತಾಲೂಕಿನ ಬಳಿಚಕ್ರ ಗ್ರಾಮಕ್ಕೆ ಹೊಂದಿಕೊಂಡಂತೆ ಇರುವ ಸಿದ್ಧರಬೆಟ್ಟದಲ್ಲಿ ಅದ್ಭುತವಾಗಿ ಮೂಡಬಂದಿವೆ ಎಂಬುದನ್ನು ಗಮನಿಸಬಹುದು. ಗರ್ಭಧರಿಸಿದ ಜಿಂಕೆ, ಕಾಡು ಪ್ರಾಣಿಗಳಾದ ಎಮ್ಮೆ, ಹುಲಿ, ಆನೆ ಹಾಗೂ ಮಾನವರ ಚಿತ್ರಗಳನ್ನು ಇಲ್ಲಿ ಬಿಡಿಸಲಾಗಿದೆ. ನೈಸರ್ಗಿಕವಾಗಿ ನಿರ್ಮಾಣವಾದ ಶಿಲಾಬಂಡೆಯ ಮೇಲೆ ಈ ರೇಖಾ ಚಿತ್ರಗಳು ಚಿತ್ರಿಸಲ್ಪಟ್ಟಿವೆ. ಅಲ್ಲದೇ ಈ ಶಿಲಾ ಬಂಡೆಗೆ ಮಂಜೂರಿನಂತೆ ಇನ್ನೊಂದು ಶಿಲಾ ಬಂಡೆಯು ಹಬ್ಬಿಕೊಂಡಿದೆ. ಹಾಗಾಗಿ ಈ ವರ್ಣ ಚಿತ್ರಗಳು ಎಲ್ಲ ಋತುಮಾನಗಳಿಂದ ನೈಸರ್ಗಿಕವಾಗಿ ರಕ್ಷಿಸಲ್ಪಟ್ಟಿರುವುದನ್ನು ಗಮನಿಸಬಹುದು. ಹಾಗಾಗಿ ಆ ಚಿತ್ರಗಳು ಈವರೆಗೂ ತುಂಬಾ ತಾಜಾತನದಿಂದ ಕೂಡಿದಂತೆ ಭಾಸವಾಗುತ್ತವೆ. ಇಂಥ ಅಪರೂಪದ ಚಿತ್ರಗಳ ನಿರ್ದಿಷ್ಟ ಕಾಲಮಾನ ಗುರುತಿಸುವುದು ಸ್ವಲ್ಪ ಕಷ್ಟವೆಂಬ ಅಭಿಪ್ರಾಯಗಳು ಸಹ ದಾಖಲಾಗಿವೆ.

ಈ ಪ್ರದೇಶದ ಪ್ರಾಗಿತಿಹಾಸದ ವಿವರಗಳು ಜಗತ್ಪ್ರಸಿದ್ಧಿಯನ್ನು ಪಡೆದಿರುವುದು ಇಲ್ಲಿರುವ ಶಿಲಾಸಮಾಧಿಗಳಿಂದ ಎಂದರೆ ತಪ್ಪಾಗಲಾರದು. ಜಿಲ್ಲೆಯ ರಾಜನಕೋಳೂರು, ಹಗರಟಗಿ, ವಿಭೂತಿಹಳ್ಳಿ ಹಾಗೂ ಆಮ್ಲಾಪುರ(ಭೀಮರಾಯನಗುಡಿ) ಗ್ರಾಮ ಪರಿಸರಗಳಲ್ಲಿ ಕ್ರಿ.ಶ.೧೮೬೦ರ ಸುಮಾರಿಗೆ ಕರ್ನಲ್ ಮೆಡೋಸ್ ಟೇಲರ್ ಇಂಥ ಕುರುಹುಗಳನ್ನು ಪತ್ತೆ ಹಚ್ಚಿ ಅವುಗಳ ಕುರಿತು ವರದಿ ಪ್ರಕಟಿಸಿದ. ಆ ನಂತರ ಸುಮಾರು ನೂರು ವರ್ಷಗಳ ತರುವಾಯ ಅಂದರೆ ೧೯೭೦ರ ದಶಕದಲ್ಲಿ ಇಂಥ ಅವಶೇಷಗಳ ಬಗೆಗೆ ವಿಸ್ತೃತ ಅಧ್ಯಯನಗಳನ್ನು ಕೆಲವು ವಿದ್ವಾಂಸರು ಕೈಗೊಂಡರು. ಡಾ.ಅಸುಂದರ, ಡಾ.ಜಿ.ಕೆ.ಗುರುರಾಜರಾವ್ ಹಾಗೂ ಡಾ.ಕೆ.ಪದ್ದಯ್ಯ ಅವರು ಆ ಕುರಿತು ವಿಸ್ತೃತವಾದ ವಿವರಗಳನ್ನು ಪ್ರಕಟಿಸಿದ್ದಾರೆ.

ಕಬ್ಬಿಣಯುಗದ ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿಗಳು ಹಗರಟಗಿ ಮತ್ತು ರಾಜಕೋಳೂರು ಪರಿಸರದಲ್ಲಿ ವಿಶೇಷವಾಗಿ ರಚನೆಗೊಂಡಿವೆ. ಮುಖ್ಯವಾಗಿ ಈ ಪರಿಸರದಲ್ಲಿ ಕಂಡಿಕೋಣೆ ಹಾಗೂ ದಾರಿಸಹಿತ ಕಂಡಿಕೋಣೆ ಗೋರಿಗಳು ನಿರ್ಮಾಣವಾಗಿವೆ. ದಕ್ಷಿಣ ಭಾರತದ ಎಲ್ಲಾ ಪ್ರಕಾರಗಳ ಕಲ್ಗೋರಿಗಳಲ್ಲಿ ಈ ಮೇಲಿನ ಎರಡು ಪ್ರಬೇಧಗಳು ಪ್ರಮುಖವಾದವು. ಅಲ್ಲದೇ ಇಂಥ ಎರಡು ಲಕ್ಷಣವುಳ್ಳ ಕುರುಹುಗಳು ಹಗರಟಗಿಯಲ್ಲಿ ಕಂಡುಬಂದಿರುವವು.ಹಾಗೂ ಅವೆರಡರ ಮಧ್ಯದ ಕೊಂಡಿಯಂತಿರುವ ಇನ್ನಿತರೆ ವಿವರಗಳು ಈ ನೆಲೆಯಲ್ಲಿವೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೧೮]. ಆದ್ದರಿಂದಲೇ ಹುಣಸಗಿ-ಬೈಚಬಾಳಕೊಳ್ಳ ಪ್ರದೇಶವು ವಿವಿಧ ಸಸ್ಯ ಹಾಗೂ ಪ್ರಾಣಿ ವರ್ಗಗಳು ಜೀವಿಸಲು ನಿಸರ್ಗ ನಿರ್ಮಿತ ತಾಣವಾಗಿದ್ದು, ಇಲ್ಲಿ ಪ್ರಾಚೀನ ಕಾಲದಿಂದಲೂ ಮಾನವನು ತನ್ನ ನೆಲೆಯನ್ನು ಹೊಂದಿದ್ದನ್ನು ಕಾಣಬಹುದೆಂದು ಅಭಿಪ್ರಾಯಿಸಲಾಗಿದೆ.

ಆದಿಶಿಲಾಯುಗ ಸಂಸ್ಕೃತಿಯ ಹಂತಗಳನ್ನು ದಾಟಿದ ನಂತರ ಮುಖ್ಯವಾಗಿ ಸೂಕ್ಷ್ಮ ಶಿಲಾಯುಗದ ನೆಲೆಗಳು ಸಹ ಈ ಪ್ರದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಆದರೂ ಪ್ರಧಾನವಾಗಿ ನವಶಿಲಾಯುಗ ಅಥವಾ ಒಕ್ಕಲು ಸಂಸ್ಕೃತಿಯ ಜನಸಮುದಾಯದ ಪ್ರಾಚೀನ ಪೂರ್ವ ಇತಿಹಾಸ ಈ ಸ್ಥಳದಲ್ಲಿ ವಿಸ್ತಾರವಾಗಿ ಹರಡಿಕೊಂಡಿರುವುದನ್ನು ಅಗಣಿತ ಸಂಖ್ಯೆಯಲ್ಲಿರುವ ಸಾಕ್ಷ್ಯಾಧಾರಗಳು ಸ್ಪಷ್ಟಪಡಿಸುತ್ತವೆಂಬುದು ತುಂಬಾ ಮುಖ್ಯವಾದುದು. ಈ ಕಾಲದ ಜನಸಂಸ್ಕೃತಿಯ ಬಹುಮುಖ್ಯ ಲಕ್ಷಣ ದನಕರುಗಳನ್ನು ಸಾಕುವುದು. ಇದು ಅವರ ಮೂಲ ವೃತ್ತಿಯಾಗಿತ್ತು. ಸಾವಿರಾರು ಸಂಖ್ಯೆಯಲ್ಲಿದ್ದ ದನಕರುಗಳಿಂದ ಉಪಲಬ್ಧವಾದ ಸೆಗಣಿಯನ್ನು ತಮ್ಮ ವಾಸ್ತವ್ಯದ ನೆಲೆಯ ಪಕ್ಕದಲ್ಲಿಯೇ ಸಂಗ್ರಹಿಸಲಾಗುತ್ತಿತ್ತು. ಅಲ್ಲದೇ ಪ್ರಾಣಿಗಳಿಂದ ಉದ್ಭವವಾದ ಸೆಗಣಿಯ ಸಂಗ್ರಹವನ್ನು ಕಾಲಾಂತರದಲ್ಲಿ ಉದ್ದೇಶಪೂರ್ವಕವಾಗಿ ಸುಟ್ಟಿದ್ದರಿಂದಲೇ ಬೂದಿ ದಬ್ಬಗಳು ಹೆಚ್ಚಿನ ಪ್ರಮಾಣದಲ್ಲಿ ಸೃಷ್ಟಿಯಾದವೆಂದು ವಿದ್ವಾಂಸರು ಅಭಿಪ್ರಾಯಿಸುತ್ತಾರೆ. ಅಲ್ಲದೇ ಈ ವಿಷಯ ಕುರಿತು ಇನ್ನು ಹಲವು ಬಗೆಯ ಚರ್ಚೆಗಳುಂಟು. ದನಕರುಗಳನ್ನೇ ಅವಲಂಬಿಸಿ ಆರಂಭವಾದ ನವಶಿಲಾಯುಗ ಸಂಸ್ಕೃತಿಯ ಜನರು ಖನಿಜಗಳಿಂದ ಉತ್ಪಾದಿತ ಲೋಹಗಳನ್ನು ಸಹ ಹೆಚ್ಚಿನ ಪ್ರಮಾಣದಲ್ಲಿ ಬಳಕೆ ಮಾಡಿದರು. ಇದು ವ್ಯವಸ್ಥಿತ ಮತ್ತು ಸುಧಾರಿತ ಕೃಷಿಗೆ ಹೆಚ್ಚಿನ ಇಂಬು ನೀಡಿತು. ಪೂರ್ಣ ಪ್ರಮಾಣದ ಬೇಸಾಯದ ಮಟ್ಟವನ್ನು ಮುಟ್ಟುವ ನವಶಿಲಾಯುಗ ಸಂಸ್ಕೃತಿಯ ಜನರು ಶಾಶ್ವತ ವಸತಿ ನೆಲೆಗಳನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. ಅಂಥ ಬೆಳವಣಿಗೆಯಲ್ಲಿ ಮೂರು ಪ್ರಮುಖ ಘಟ್ಟಗಳಿವೆ ಎಂದು ಅಭಿಪ್ರಾಯಸಲಾಗಿದೆ[೨೧]. ನವಶಿಲಾಯುಗದ ಪ್ರಥಮ ಘಟ್ಟದ ನೆಲೆಗಳಲ್ಲಿ ಸುರಪುರ ತಾಲೂಕಿನ ಕೊಡೇಕಲ್ಲು ಪರಿಸರವು ಸಹ ಪ್ರಮುಖವಾದುದು. ಇದರ ಕಾಲ ಹೆಚ್ಚು ಕಡಿಮೆ ಕ್ರಿ.ಪೂ. ೩೦೦೦ದಿಂದ ಕ್ರಿ.ಪೂ.೧೬೦೦ ನಡುವಿನ ಅವಧಿಯೆಂದು

ತೀರ್ಮಾನಿಸಲಾಗಿದೆ. ಎರಡನೆಯ ಮತ್ತು ಮೂರನೆಯ ಹಂತದ ನೆಲೆಗಳಲ್ಲಿ ತಾಮ್ರ ಮತ್ತು ಕಬ್ಬಿಣ ಲೋಹಗಳ ಅವಶೇಷಗಳು ಖಚಿತವಾಗಿಯೇ ಬಳಕೆಯಾಗಿರುವುದು ಕಂಡುಬರುತ್ತವೆ. ನವಶಿಲಾಯುಗದ ಜನರಿಂದಲೇ ಒಕ್ಕಲುತನ ಒಳಗೊಂಡ ವ್ಯವಸ್ಥಿತ ಜೀವನ ಆರಂಭವಾಗಿ ನಿರಂತರವಾಗಿ ಮುಂದುವರೆಯಿತೆಂದು ಅಭಿಪ್ರಾಯಿಸಬಹುದು. ಅಲ್ಲದೇ ಅದರ ಪರಿಣಾಮಗಳು ಬೃಹತ್‌ಶಿಲಾ ಸಮಾಧಿ ಸಂಸ್ಕೃತಿಯ ಕಾಲಕ್ಕೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಚಲನಗೊಂಡಿತು. ಕಬ್ಬಿಣಯುಗದ ಬೃಹತ್‌ಶಿಲಾ ನೆಲೆಗಳ ಭೌಗೋಳಿಕ ಸ್ಥಾನಗಳು ಕಬ್ಬಿಣ ಅದಿರಿನ ನಿಕ್ಷೇಪಗಳ ಸಮೀಪ ಬೃಹತ್ ಶಿಲಾಗೋರಿಗಳನ್ನು ಕಟ್ಟಲು ಅನುಕೂಲವಾಗುವ ಬಂಡೆಕಲ್ಲುಗಳ ಲಭ್ಯತೆ ಹಾಗೂ ಉಳುಮೆಗೆ ಯೋಗ್ಯವಾದ ಭೂಮಿ ಇವುಗಳಿಂದ ನಿರ್ಣಯಿತವಾಗಿದೆ ಎಂಬ ಅಭಿಪ್ರಾಯಗಳಿವೆ[೨]. ಇಂಥದ್ದೇ ಸ್ಪಷ್ಟ ಕುರುಹುಗಳನ್ನು ರಾಜನಕೋಳೂರು ಹಾಗೂ ಹಗರಟಗಿ ಪರಿಸರದಲ್ಲಿ ಕಾಣುತ್ತೇವೆ.

ಪುರಾತತ್ವ ಅಧ್ಯಯನಗಳಲ್ಲಿ ಬೂದಿದಿನ್ನೆಗಳು(Ashmound) ಅಥವಾ ಬೂದಿದಬ್ಬಗಳ ಸಮಸ್ಯೆ ಎಂಬ ವಿಚಾರವು ಹೆಚ್ಚಿನ ಸಂಖ್ಯೆಯ ವಿದ್ವಾಂಸರ ಕುತೂಹಲ ಕೆರಳಿಸಿದೆ. ಇಂಥ ವಿವರಗಳು ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಹಾಗೂ ಬೃಹತ್ ಶಿಲಾ ಸಮಾಧಿ ಸಂಸ್ಕೃತಿಗಳ ಎಲ್ಲ ಹಂತಗಳಲ್ಲೂ ಇಂಥ ಬೂದಿ ದಿಬ್ಬಗಳು ನಿರ್ಮಾಣವಾಗಿವೆ. ಅವುಗಳ ಕುರಿತ ವಿದ್ವಾಂಸರ ಸಾಮಾನ್ಯ ಅಭಿಪ್ರಾಯಗಳು ಹೀಗಿವೆ.

ಅಂತಾರಾಷ್ಟ್ರೀಯ ಮಟ್ಟದ ಖ್ಯಾತಿ ಹೊಂದಿರುವ ಪುರಾತತ್ವಜ್ಞರಾದ ಶ್ರೀಯುತ ಎಫ್ ಆರ್ ಅಲ್ಚೀನ್ ಅವರು ಈ ಬೂದಿದಿನ್ನೆಗಳ ನೆಲೆಗಳು ದನಕರುಗಳ ಕೊಂಡವಾಡೆಗಳು(ದನಗಳನ್ನು ನಿಲ್ಲಿಸುವ ಸ್ಥಳ) ಇಲ್ಲಿ ಕ್ರಮೇಣ ದೊಡ್ಡ ಪ್ರಮಾಣದಲ್ಲಿ ಸೆಗಣಿ ಸಂಗ್ರಹವಾಗುತ್ತಿತ್ತು. ಅದನ್ನೇ ಸುಡುತ್ತಿದ್ದರು. ಇಂಥ ಕ್ರಿಯೆಯು ಮೇಲಿಂದ ಮೇಲೆ ಅದೇ ಸ್ಥಳದಲ್ಲಿ ಜರುಗುತ್ತಿದ್ದರಿಂದ ಕಾಲಕ್ರಮೇಣ ಅದು ಪದರುಗಳಾಗಿ ರಚನೆಯಾಗುತ್ತಿತ್ತು ಎಂದು ಅಭಿಪ್ರಾಯಿಸಿದ್ದಾರೆ. ಶ್ರೀಯುತ ರಾಮಿರೆಡ್ಡಿ ಅವರು ಇವು ಮೂಲದಲ್ಲಿ ಕಬ್ಬಿಣ ಅದಿರನ್ನು ಸಂಗ್ರಹಿಸಿ ಲೋಹ ಮಾಡುವುದಕ್ಕೋಸ್ಕರ ಸುಟ್ಟಿದ್ದರಿಂದ ಉಂಟಾದ ದಿನ್ನೆಗಳು ಎಂದು ವಿವರಿಸಿದ್ದಾರೆ. ಶ್ರೀಯುತ ಕೆ.ಪದ್ದಯ್ಯ ಅವರು ಇದು ದನಗಳ ಸೆಗಣಿ ಸುಡುವುದರಿಂದ ಉಂಟಾಗಿದ್ದು, ಆದರೆ ಅದರ ಉದ್ದೇಶವು ಇದರ ಬೆಂಕಿಯು ದಿನಗಟ್ಟಲೆ ಇದ್ದುದರಿಂದ ಸಾಕಿದ ಪ್ರಾಣಿಗಳನ್ನು ಹಾಗೂ ಮನುಷ್ಯರನ್ನು ಹಿಡಿಯಲು ಬರುತ್ತಿದ್ದ ಕಾಡು ಪ್ರಾಣಿಗಳನ್ನು ದೂರವಿಡಲು ಇದೊಂದು ಕ್ರಮವಾಗಿತ್ತೆಂದು ಅಭಿಪ್ರಾಯಿಸುತ್ತಾರೆ. ಆದರೆ ಶ್ರೀಯುತ ಅ.ಸುಂದರ ಅವರು ಇಂಥ ದಿನ್ನೆಗಳು ಬಹುಶಃ ಆಚರಣೆಯ ದ್ಯೋತಕವಾಗಿ ನಿರ್ಮಾಣವಾಗಿದ್ದಿರಬಹುದೆಂದು ವಿವರಿಸಿದ್ದಾರೆ. ಇವುಗಳ ಕಾಲಮಾನ ಸುಮಾರು ಕ್ರಿಪೂ ೨೦೦೦-೭೦೦ರ ವರೆಗೆ ಎಂದು ಅಂದಾಜು ಮಾಡಲಾಗಿದೆ. ಇಂಥ ಬೂದಿ ದಿಬ್ಬಗಳು ಜಿಲ್ಲೆಯ ಬೂದಿಹಾಳ, ಕೊಡೇಕಲ್ಲು

ಮತ್ತು ಕಕ್ಕೇರಿ(ಸುರಪುರ ತಾಲೂಕು) ಹಾಗೂ ಶಹಾಪುರ ತಾಲೂಕಿನ ತಡಿಬಿಡಿ, ಹಾರಣಗೇರಿ, ವಿಭೂತಿಹಳ್ಳಿ ಹಾಗೂ ಆಮ್ಲಾಪುರ(ಭೀಮರಾಯನ ಗುಡಿ) ಪ್ರದೇಶದಲ್ಲಿ ಪತ್ತೆಯಾಗಿರುವ ಮಾಹಿತಿಗಳಿವೆ[೨೩].

ಬೂದಿಗುಡ್ಡಗಳ ಬಗೆಗೆ ಮೊಟ್ಟಮೊದಲಿಗೆ ರಾಬರ್ಟ್ ಬ್ರೂಸ್ ಫೂಟ್ ಅವರು ಅಧಿಕೃತ ಮಾಹಿತಿ ನೀಡಿದವರೆಂಬ ಅಭಿಪ್ರಾಯಗಳಿದ್ದರೂ ಆ ಮೊದಲೇ ಮೆಡೋಸ್ ಟೇಲರನು ಶಹಾಪುರದ ಬಳಿ ಇರುವ ವಿಭೂತಿಹಳ್ಳಿ ಹಾಗೂ ಆಮ್ಲಾಪುರದಲ್ಲಿ ಕೈಗೊಂಡ ಅನ್ವೇಷಣೆ ಮತ್ತು ಉತ್ಖನನದಿಂದ ಆ ನೆಲೆಯಲ್ಲಿ ಜಿಡುಗಟ್ಟಿದ ಬೂದಿ ಹೆಂಟೆಗಳು ದೊರೆತವು ಎಂದು ವರದಿ ಮಾಡಿದ್ದಾರೆ ಎಂಬ ಅಭಿಪ್ರಾಯಗಳಿವೆ[೨೪].

ಮುಖ್ಯವಾಗಿ ಈ ಪ್ರದೇಶದಲ್ಲಿರುವ ಎರಡು ನೆಲೆಗಳ ಕುರಿತು ಶ್ರೀಯುತ ಡಾ.ಕೆ.ಪದ್ದಯ್ಯ ಅವರು ವೈಜ್ಞಾನಿಕ ಹಾಗೂ ವಿಸ್ತೃತ ಉತ್ಖನನ ಕಾರ್ಯವನ್ನು ಕೈಗೊಂಡಿದ್ದಾರೆ. ಕೊಡೇಕಲ್ಲು ನೆಲೆಯನ್ನು ಉತ್ಖನನದ ಮೂಲಕ ಪರೀಕ್ಷಿಸಿದ ಅವರು ಇದು ನವಶಿಲಾಯುಗದ ಮಾನವ ವಸತಿಯ ಕೊನೆಯ ಹಂತಕ್ಕೆ ಹೊಂದಿಕೊಂಡ ಬೂದಿದಿಬ್ಬದ ಅತ್ಯಂತ ಪ್ರಾಚೀನ ಪದರು ಇದೇ ಎಂಬುದು ಅವರ ಅಭಿಪ್ರಾಯವಾಗಿದೆ[೨೫]. ಇದೇ ವಿದ್ವಾಂಸರು ನಿರ್ವಹಿಸಿದ ಇನ್ನೊಂದು ನೆಲೆಯೆಂದರೆ ಸುರಪುರ ತಾಲೂಕಿನ ಬೂದಿಹಾಳ ಗ್ರಾಮ ಪರಿಸರದಲ್ಲಿರುವ ಪ್ರಮುಖ ನೆಲೆ. ಇಲ್ಲಿರುವ ಎರಡು ದಿನ್ನೆಗಳನ್ನು ಅವರು ಉತ್ಖನನ ಪರೀಕ್ಷೆಗೆ ಒಳಪಡಿಸಿದ್ದಾರೆ. ದಕ್ಷಿಣ ಭಾರತದ ನವಶಿಲಾಯುಗದ ಸಂಸ್ಕೃತಿಯ ಗ್ರಾಮ ವಾಸಿಗಳ ಬದುಕಿನ ಒಂದು ಪದ್ಧತಿಗನುಗುಣವಾಗಿ ಈ ಬೂದಿ ದಿನ್ನೆಗಳು ರಚನೆಗೊಂಡಿರಬಹುದು ಎಂದು ಸೂಚಿಸಲಾಗಿದೆ. ಅಲ್ಲದೇ ಇದು ಕ್ರಿ.ಪೂ.ಸುಮಾರು ೧೮೫೦ರಲ್ಲಿ ಆಗಿರುವಂಥದ್ದು ಎಂಬ ಖಚಿತ ತೀರ್ಮಾನಗಳನ್ನು ಪ್ರಕಟಿಸಿದ್ದಾರೆ[೨೬]. ಯಾದಗಿರಿ ಜಿಲ್ಲೆಯ ಸುರಪುರ ಮತ್ತು ಶಹಾಪುರ ತಾಲೂಕಿನಲ್ಲಿರುವ ಕೆಲವಾರು ಹಳ್ಳಿಗಳಲ್ಲಿ ನವಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಹಲವು ಬಗೆಯ ಕುರುಹುಗಳಿರುವುದನ್ನು ಕಾಣುತ್ತೇವೆ. ಅಲ್ಲದೇ ಕನ್ನಡ ನಾಡಿನ ಪ್ರಾಗಿತಿಹಾಸದಲ್ಲಿ ಬಹುಮುಖ್ಯವಾದ ಉದಾಹರಣೆಗಳಾಗಿವೆ. ಅಲ್ಲದೇ ಅವು ನಾಡಿನ ಪ್ರಾಗಿತಿಹಾಸದ ಅಧ್ಯಯನಗಳಲ್ಲಿ ಮೊದಲ ಪುಟದಲ್ಲಿಯೇ ದಾಖಲವಾಗುವಂಥವು. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಇಂಥ ನೆಲೆಗಳನ್ನು ಸಂದರ್ಶಿಸುವ ಕಾರ್ಯಮಾಡಲಾಗಿದೆ. ಉತ್ಖನನಗೊಂಡಿದ್ದ ಬೂದಿಹಾಳ, ಕೊಡೇಕಲ್ಲು ಹಾಗೂ ವಿಭೂತಿಹಳ್ಳಿಯಲ್ಲಿರುವ ನೆಲೆಗಳು ಭೂಮಿಯ ಮಟ್ಟಕ್ಕೆ ಬಂದುನಿಂತಿವೆ. ಮೇಲ್ಪದರಿನಲ್ಲಿ ಕೆಲವು ಮಡಿಕೆ ಚೂರುಗಳು ಈವರೆಗೂ ಲಭ್ಯವಾಗುತ್ತವೆ.

ಮಾನವ ಸಂಸ್ಕೃತಿಯ ಬೆಳವಣಿಗೆಯ ಹಂತಗಳಲ್ಲಿ ಬೃಹತ್ ಶಿಲಾಯುಗ ಅಥವಾ ಬೃಹತ್‌ಶಿಲಾ ಸಮಾಧಿ ಅವಧಿಯು ತುಂಬಾ ಮಹತ್ವವಾದುದು. ಅಂಥ ಪ್ರಾಚೀನ ಕುರುಹುಗಳು ಯಾದಗಿರಿ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಕಂಡುಬಂದಿವೆ. ಮುಖ್ಯವಾಗಿ ರಾಜನಕೋಳೂರು,

ಹಗರಟಗಿ, ಹುಣಸಗಿ, ವಿಭೂತಿಹಳ್ಳಿ, ಆಮ್ಲಾಪುರ, ಬಲಶೆಟ್ಟಿಹಳ್ಳಿ, ಹೆಬ್ಬಾಳ, ಗುರುಮಿಟ್ಕಲ್ ಮತ್ತು ರಾಜನಹಳ್ಳಿಯ ಗ್ರಾಮ ಪರಿಸರದಲ್ಲಿ ದಾಖಲಾಗಿವೆ. ಈ ಸಂಸ್ಕೃತಿಯಲ್ಲಿನ ಕಾಲಘಟ್ಟವು ವಾಸ್ತು ನಿರ್ಮಿತಿಯ (ನಿರ್ಮಾಣಗಳು) ಮೂಲ ಭೂಮಿಕೆಗಳಿಗೆ ಪರಿವರ್ತನೆಯಾಗುತ್ತಿದ್ದ ಕಾಲ ಎಂಬುದು ತುಂಬ ಮುಖ್ಯವಾದ ವಿಚಾರವಾಗುತ್ತದೆ. ಕಟ್ಟಡ ಅಥವಾ ರಚನೆ ಎಂಬ ಕುರುಹುಗಳಿಗೆ ಸಾಕ್ಷಿಯಾಗಿ ಸಿಗುವ ಸಂದರ್ಭಗಳೆಂದರೆ ಬೃಹತ್ ಶಿಲಾಸಂಸ್ಕೃತಿಯ ಹಂತಗಳು ಎಂಬುದು. ಆದಿ ಶಿಲಾಯುಗದಿಂದ ಹಿಡಿದು ನೂತನ ಶಿಲಾಯುಗದವರೆಗೆ ನಿರ್ಮಾಣವಾದ ಚಟುವಟಿಕೆಗಳು ಸತತವಾಗಿ ನಡೆದಿದ್ದರೂ ಆ ಕುರಿತ ಸ್ಪಷ್ಟ ಪರಿಕಲ್ಪನೆಗಳಂತೂ ಕಂಡು ಬರುವುದು ಬೃಹತ್ ಶಿಲಾಯುಗ ಕಾಲದಲ್ಲಿಯೆಂದರೆ ತಪ್ಪಾಗಲಾರದು. ಆದರೂ ಲಕ್ಷಾಂತರ ವರ್ಷಗಳ ಹಿಂದೆಯೇ ಇಂಥ ನಿರ್ಮಾಣ ಚಟುವಟಿಕೆಗಳು ಘಟಿಸಿದವು ಎಂದು ಅಭಿಪ್ರಾಯಪಡುತ್ತಾರೆ. ಆ ಸಂದರ್ಭದಲ್ಲಾದ ಅಂಥ ಒಂದು ಖಚಿತ ಸಾಕ್ಷಿಯ ಕುರಿತಂತೆ ತುಂಬಾ ಮುಖ್ಯವಾದ ಸಂಗತಿಯೊಂದು ಪ್ರಕಟವಾಗಿದೆ. ಮಾನವನು ನೈಸರ್ಗಿಕ ಗವಿಗಳನ್ನು, ಕಲ್ಲಾಸರೆಗಳನ್ನು ತನ್ನ ತಾತ್ಕಾಲಿಕ ವಾಸ್ತವ್ಯಕ್ಕೆ ಉಪಯೋಗಿಸಿಕೊಳ್ಳುತ್ತಿದ್ದ ಎಂಬುದನ್ನು ಸಂಶೋಧಕರು ಪತ್ತೆಹಚ್ಚಿದ್ದಾರೆ. ಅಂಥ ಕುರುಹುಗಳು ಆದಿಹಳೆಯ ಶಿಲಾಯುಗ ಜನರು ಕೃತಕವಾಗಿ ತಾತ್ಕಾಲಿಕ ನೆರಳಿನ ತಡೆಯನ್ನು ನಿರ್ಮಿಸಿದ ಕುರುಹುಗಳು ಹುಣಸಗಿಯಲ್ಲಿವೆಂಬುದನ್ನು ವಿವರಿಸಲಾಗಿದೆ. ಇದು ತೀರಾ ಸರಳ ಮತ್ತು ಪ್ರಪ್ರಥಮ ಪ್ರಯತ್ನವೆಂದು ಹೇಳಬಹುದು. ಇಂಥ ಪ್ರಯತ್ನವು ಭಾರತದ ಬೇರೆ ಯಾವ ನೆಲೆಗಳಲ್ಲಿಯೂ ಇದುವರೆಗೆ ತೋರಿಬಂದಿಲ್ಲ ಎಂಬ ಅಭಿಪ್ರಾಯಿಗಳು ದಾಖಲಾಗಿವೆ[೨]. ಆದರೂ ಈ ಸಂಸ್ಕೃತಿಗೆ ಸಂಬಂಧಿಸಿದ ಜನಸಮುದಾಯದ ಯಾವುದೇ ಪ್ರಕಾರದ ಮನೆಗಳು ಅಥವಾ ಲೌಕಿಕ ಕಟ್ಟಡಗಳು ಸ್ಪಷ್ಟವಾಗಿ ಉಳಿದುಕೊಂಡು ಬಂದಿರುವುದನ್ನು ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಅವರು ಸಹ ಹೆಚ್ಚಿನದಾಗಿ ಅಲೆಮಾರಿ ಜೀವನವನ್ನೇ ನಡೆಸಿರುತ್ತಾರೆಂಬುದು ವಿದ್ವಾಂಸರ ಅಭಿಮತವಾಗಿದೆ..

ಬೃಹತ್ ಶಿಲಾ ಕಾಲಘಟ್ಟದಲ್ಲಿ ಅವರು ನಡೆಸಿಕೊಂಡು ಬರುತ್ತಿದ್ದ ಶವಸಂಸ್ಕಾರದ ಕಲ್ಮನೆಗಳ ನೆಲೆಗಳು ಹೆಚ್ಚಾಗಿ ಈ ಪ್ರದೇಶದಲ್ಲಿ ಕಂಡುಬಂದಿರುವುದನ್ನು ಗಮನಿಸಬಹುದೆಂದು ಆದ್ದರಿಂದಲೇ ಈ ಸಂಸ್ಕೃತಿಯನ್ನು ಬೃಹತ್‌ಶಿಲಾ ಸಂಸ್ಕೃತಿಯೆಂದೇ ಹೆಸರಿಸಲಾಗಿದೆ. ಅಂಥ ಗೋರಿಗಳನ್ನು ಅಂದರೆ ಶವಸಂಸ್ಕಾರ ನಿರ್ಮಿತಿಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಂಗಡಿಸಲಾಗಿದೆ. ಈ ಪ್ರದೇಶದಲ್ಲಿರುವ ಇಂಥ ಕುರುಹುಗಳ ಕುರಿತು ಕರ್ನಲ್ ಮೆಡೋಸ್ ಟೇಲರ್ ತನ್ನ ಅಭಿಪ್ರಾಯಗಳನ್ನು ಪ್ರಕಟಿಸಿ ಇವು ಬ್ರಿಟನ್ ದೇಶದಲ್ಲಿರುವ 'ಡ್ರೂಡ್ರಿಸಮ್' ಸಮಾನ ಸಂಸ್ಕೃತಿಯ ಲಕ್ಷಣಗಳೆಂದು ಮೊಟ್ಟಮೊದಲಿಗೆ ಟೇಲರ್ ಅವರು ಅಭಿಪ್ರಾಯಪಟ್ಟರು. ಹತ್ತೊಂಬತ್ತನೆಯ ಶತಮಾನದ ಮಧ್ಯಾವಧಿಯಲ್ಲಿ ಹಗರಟಗಿ, ವಿಭೂತಿಹಳ್ಳಿ, ಆಮ್ಲಾಪುರ ಹಾಗೂ ರಾಜನಕೋಳೂರಿನ ನೆಲೆಗಳ ಕುರಿತು ವರದಿ ಸಂಗ್ರಹಿಸಿ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಿಸಿದರು.

ಹಲವಾರು ದಶಕಗಳ ನಂತರ ಈ ಸ್ಥಳಗಳಲ್ಲಿರುವ ಸಂಗತಿಗಳ ಕುರಿತು ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕದಲ್ಲಿ ಭಾರತೀಯ ಪುರಾತತ್ವಜ್ಞರಾದ ಡಾ.ಅ.ಸುಂದರ, ಡಾ.ಬಿ.ಕೆ.ಗುರುರಾಜರಾವ್ ಹಾಗೂ ಡಾ.ಎಮ್.ಎಸ್.ನಾಗರಾಜರಾವ ಅವರು ಇನ್ನು ವಿಸ್ತೃತವಾದ ವರದಿಗಳನ್ನು ಪ್ರಕಟಿಸಿದರು.

ಈ ಜಿಲ್ಲೆಯ ಪ್ರಾಗಿತಿಹಾಸ ಕುರಿತಂತೆ ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಪ್ರಚುರಪಡಿಸುವ ನೆಲೆಯೆಂದರೆ ಯಾದಗಿರಿ ತಾಲೂಕಿನ ಬಳಿಚಕ್ರ ಗ್ರಾಮದ ಸಿದ್ಧರಬೆಟ್ಟ. ಗ್ರಾಮದಿಂದ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿರುವ ಸಿದ್ಧರಬೆಟ್ಟದಲ್ಲಿ ನೈಸರ್ಗಿಕವಾದ ಕಲ್ಲು ಚಪ್ಪಡಿ ಅಥವಾ ಹಾಸುಗಳಿಂದ ಸ್ವಯಂ ರಕ್ಷಣೆಗೊಂಡಿರುವ ಕಲ್ಲಾಸರೆಗಳಲ್ಲಿ ಅತ್ಯದ್ಭುತವಾದ ರೇಖಾಚಿತ್ರಗಳು ಮೂಡಿಬಂದಿವೆ. ಅವು ತುಂಬಾನೇ ಸುರಕ್ಷಿತವಾದ ಸ್ಥಳಗಳಲ್ಲಿವೆ. ಬಣ್ಣದಿಂದಲೇ(ಕೆಂಪು) ರಚಿಸಿರುವ ಇಲ್ಲಿನ ರೇಖಾ ಚಿತ್ರಗಳಲ್ಲಿ ಗರ್ಭಧರಿಸಿದ ಜಿಂಕೆ, ಬೇಟೆಯ ಹುಲಿ, ಎಮ್ಮೆ, ಕೋಣ, ಮೇಕೆಗಳ ಹಾಗೂ ಸ್ತ್ರೀ ಮತ್ತು ಪುರುಷರ ಚಿತ್ರಗಳನ್ನು ಬಿಡಿಸಲಾಗಿದೆ. ಸುಮಾರು ಹತ್ತು ಮೀಟರ್ ಉದ್ಧದ ಕಲ್ಲಿನ ಮೇಲೆ ಇವುಗಳನ್ನು ಬಿತ್ತರಿಸಲಾಗಿದೆ. ಅವುಗಳನ್ನು ಬಹುದೂರದಿಂದಲೂ ಗಮನಿಸಿದರೂ ಚಿತ್ರಗಳು ಬರಿಗಣ್ಣಿಗೆ ಕಾಣುತ್ತವೆ. ಇವು ಪ್ರಾಯಶಃ ಶಿಲಾ ತಾಮ್ರಯುಗ ಸಂಸ್ಕೃತಿಯ(ಸುಮಾರು ಕ್ರಿ.ಪೂ.೩೦೦೦ ವರ್ಷಗಳ) ಕಾಲಾವಧಿಯಲ್ಲಿ ನಿರ್ಮಿತಗೊಂಡವು ಎಂದು ಅಭಿಪ್ರಾಯಿಸಲಾಗಿದೆ[೨೮].

## ಮೌರ್ಯ ಮತ್ತು ಶತವಾಹನರ ಕಾಲದ ನೆಲೆಗಳು

ಮೌರ್ಯ ಮತ್ತು ಶಾತವಾಹನ ನೆಲೆಗಳ ಕುರಿತು ವಿದ್ವಾಂಸರಲ್ಲಿ ಕೆಲವು ಜಿಜ್ಞಾಸೆಗಳಿವೆ. ಅಂಥ ನೆಲೆಗಳು ಪ್ರಾಗೈತಿಹಾಸಿಕ ಕಾಲದಿಂದಲೇ ನಡೆಯುತ್ತಿದ್ದ ಸರಕು ಸಾಮಗ್ರಿಗಳ ಹಾಗೂ ಜನರ ಚಲನವಲನಗಳಿಗೆ ಅನುಕೂಲವಾಗಿರುವ ಮಾರ್ಗಗಳಲ್ಲಿರುವ ಆಯಕಟ್ಟಿನ ಸ್ಥಳಗಳಲ್ಲಿಯೇ ನಿರ್ಮಾಣವಾದವು ಎಂಬುದು. ಅಲ್ಲದೇ ಆ ಕಾಲದ ಶಾಸನಗಳು ಸಹ ಇಂತಹ ಸೌಕರ್ಯಗಳನ್ನು ಹೊಂದಿದ ಆ ಕಾಲದ ನಗರ-ಪಟ್ಟಣಗಳ ವ್ಯಾಪ್ತಿಯಲ್ಲಿಯೇ ಹಾಕಿಸಲಾಯಿತು ಎಂಬ ವಿವರವು ಇತ್ತೀಚೆಗೆ ಸಾರ್ವತ್ರಿಕವಾಗಿ ಮೂಡಿಬರುತ್ತದೆ. ಮುಖ್ಯವಾಗಿ ಆ ನಗರಗಳು ಪರಿಣಾಮಕಾರಿ ಬೆಳವಣಿಗೆಗಳಿಗೆ ಖನಿಜ ಸಂಪನ್ಮೂಲಗಳು ಕಾರಣವಾಗಿದ್ದೆಂದು ಅಭಿಪ್ರಾಯಿಸಲಾಗಿದೆ. ಖನಿಜಗಳು ಲಭ್ಯವಿರುವ ಸಮೀಪವಿರುವ ನೆಲೆಗಳಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ವಸತಿ ನೆಲೆಗಳು ಪ್ರಾರಂಭವಾದವು ಎಂಬುದು. ಅಲ್ಲದೇ ಅಂಥ ವಸತಿಗಳಲ್ಲಿ ತೀವ್ರ ಬದಲಾವಣೆಗಳು ಕೆಲವೇ ಶತಮಾನಗಳಲ್ಲಿ ಕಂಡುಬಂದವು. ಆ ಜಾಗಗಳಲ್ಲಿ ಇಟ್ಟಿಗೆ ಕಟ್ಟಡಗಳು ನಿರ್ಮಾಣಗೊಂಡವು. ಈ ಇಟ್ಟಿಗೆಯ ಕಟ್ಟಡಗಳು ಆದಿ ಇತಿಹಾಸ ಕಾಲದ ಆರಂಭದ ನಿರ್ಮಿತಿಗಳ ಪ್ರಮುಖ ಲಕ್ಷಣಗಳಾಗಿವೆಂದು ಅಭಿಪ್ರಾಯಿಸಲಾಗಿದೆ. ಇವು ಅಂದರೆ ಇಟ್ಟಿಗೆಯ ಕಟ್ಟಡ ರಚನೆಗಳು ಪಟ್ಟಣಗಳಲ್ಲಷ್ಟೇ ಇದ್ದವು ಎಂಬುದು ಮುಖ್ಯವಾದ ಸಂಗತಿ. ಆ ಕಾಲದ ನೆಲೆಗಳಲ್ಲಿ ಉಂಗುರ ಬಾವಿಗಳು ಅಸ್ತಿತ್ವದಲ್ಲಿದ್ದವು. ಕಬ್ಬಿಣ ತಂತ್ರಜ್ಞಾನದಿಂದ ಅಂತರ ಜಲದ ಉಪಯೋಗವನ್ನು ಆ ಸಂಸ್ಕೃತಿ ಜನರು ಮಾಡುತ್ತಿದ್ದಾರೆಂಬುದನ್ನು ಆಧಾರಗಳು ಸಾಬೀತುಪಡಿಸುತ್ತವೆ ಎಂದು ಅಭಿಪ್ರಾಯಿಸಲಾಗಿದೆ[೨೯].

ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸಿರುವ ಬಹುಮುಖ್ಯ ಉದ್ದೇಶವೆಂದರೆ ಈ ಹೇಳಿಕೆಗಳಿಗೆ ಪೂರಕವಾಗಿರುವ ಮಾಹಿತಿಗಳೆಲ್ಲವು ಈ ಜಿಲ್ಲೆಯ ಹಲವು ನೆಲೆಗಳಲ್ಲಿ ಕಂಡುಬಂದಿರುವುದನ್ನು ಗಮನಿಸಬಹುದು. ಶಿರವಾಳ, ಅಣಬಿ, ಹುರುಸಗುಂಡಗಿ, ಗುರುಸುಣಗಿ, ಹಾರಣಗೇರಿ(ಶಹಾಪುರ ತಾಲೂಕು) ಸ್ಥಳಗಳಲ್ಲಿ ಇಟ್ಟಿಗೆಯ ಕಟ್ಟಡಾವಶೇಷಗಳು ಈಗಲೂ ಕಂಡುಬರುತ್ತವೆ. ಬಹುಶಃ ಆ ಕಾಲದಲ್ಲಿಯೇ ಈ ಸ್ಥಳಗಳಲ್ಲಿ ಪಟ್ಟಣ ನಿರ್ಮಾಣದ ಚಟುವಟಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಘಟಿಸಿವೆ. ಪ್ರಾಯಶಃ ಮೌರ್ಯ ಮತ್ತು ಶಾತವಾಹನ ಕಾಲದಲ್ಲಿಯೇ ಇವೆಲ್ಲ ನೆಲೆಗಳು ಪ್ರಾಚೀನ ಪ್ರಮುಖ ಪಟ್ಟಣಗಳಾಗಿರುವುದರಲ್ಲಿ ಅನುಮಾನಗಳಿಲ್ಲ ಎಂಬುದನ್ನು ತಿಳಿಯಬಹುದು. ಆದರೆ ಬೃಹತ್ ಶಿಲಾಯುಗಕ್ಕೆ ಸೇರಿದ ಹಾಗೂ ಶಾತವಾಹನ ಕಾಲದ ಸಂಸ್ಕೃತಿಗಳಿಗೆ ಸೇರಿದ ಅವಶೇಷಗಳು ದೊರೆತರೂ ಇವೆರಡರ ನಡುವಿನ ಕಾಲದ ಮೌರ್ಯ ಸಂಸ್ಕೃತಿಗೆ ಸೇರಿದ ಅವಶೇಷಗಳು ಸಿಗದೇ ಇರುವುದು ಗಮನಾರ್ಹ. ಹೀಗಾಗಿ ಮೌರ್ಯ ಸಂಸ್ಕೃತಿಯ ಪ್ರಭಾವ ಪಟ್ಟಣಗಳಿಗಷ್ಟೇ ಸೀಮಿತವಾಗಿತ್ತು ಎನ್ನಬಹುದು ಎಂಬ ಅಭಿಪ್ರಾಯಗಳು ದಾಖಲಾಗಿವೆ(ಅದೇ ಪುಟ.೭೮). ಅಲ್ಲದೇ ಗಂಗಾ ನದಿ ಬಯಲಿನಲ್ಲಿದ್ದ ಮೌರ್ಯ ಕಾಲಕ್ಕೂ ಹಾಗೂ ದಕ್ಷಿಣ ಭಾರತ ಅಥವಾ ಕರ್ನಾಟಕದಲ್ಲಿದ್ದ ಆ ಸಂದರ್ಭದ ನೆಲೆಗಳಿಗೂ ಕೆಲವೊಂದು ವ್ಯತ್ಯಾಸಗಳಿವೆಯೆಂದು ಅಭಿಪ್ರಾಯಿಸಲಾಗಿದೆ. ವ್ಯಾಪಕವಾದ ಕ್ಷೇತ್ರಕಾರ್ಯ ಮಾಡಿದರೇ ಅದಕ್ಕೊಂದು ಪರಿಹಾರ ಸಿಗುವ ಸಾಧ್ಯತೆಗಳು ಹೆಚ್ಚಾಗಿವೆಯೆಂಬ ಅನಿಸಿಕೆಗಳು ಸಹ ಉಂಟು.

ಈ ಪ್ರದೇಶದಲ್ಲಿ ಸ್ಥೂಲವಾದ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಹಾಗೂ ಈಗಾಗಲೇ ಈ ಕುರಿತಿರುವ ಪುರಾತನ ವರದಿಗಳನ್ನು ಅವಲೋಕಿಸಿದಾಗ ಇಂಥ ಅಭಿಪ್ರಾಯಗಳಿಗೆ ಹೆಚ್ಚಿನ ಪುಷ್ಠಿ ನೀಡುವಂತಹ ವಿವರಗಳು ಕಂಡುಬರುತ್ತವೆ. ಆದರೂ ಈ ಪ್ರದೇಶದಲ್ಲಿರುವ ಸಮಗ್ರ ವಿವರಗಳನ್ನು ಪರೀಕ್ಷಿಸಿದಾಗ ಕಂಡುಬರುವ ಮುಖ್ಯ ಅಂಶವೆಂದರೆ ಬೃಹತ್ ಶಿಲಾಯುಗ ಹಾಗೂ ಶಾತವಾಹನ ಕಾಲದ ಸಾಕ್ಷಿಗಳೇ ಹೆಚ್ಚಾಗಿ ಲಭ್ಯವಿವೆ ಹೊರತು ಮೌರ್ಯಕಾಲದ ಅವಶೇಶಗಳ ಲಭ್ಯತೆ ಅತ್ಯಂತ ದುರ್ಬಲವೆಂದೇ ಪರಿಭಾವಿಸಬಹುದು. ಆದ್ದರಿಂದ ಅಭಿಪ್ರಾಯಿಸಬಹುದಾದ ಸ್ಪಷ್ಟ ಸಂಗತಿಗಳೆಂದರೇ ಭಾಗಶಃ ಉಲ್ಲೇಖಿತಗೊಂಡಿರುವ ಈ ನೆಲೆಗಳು ಮೌರ್ಯ ನಂತರಾವಧಿ ಅಥವಾ ಶಾತವಾಹನ ಕಾಲದಲ್ಲಿಯೇ ಇವು ಪಟ್ಟಣಗಳ ಸ್ವರೂಪ ಪಡೆಯುತ್ತಾ ಬೆಳೆದವು ಎಂದು ತರ್ಕಿಸಬಹುದು. ಅಲ್ಲದೇ ಅಭಿಪ್ರಾಯಪಡಬಹುದಾದ ಇನ್ನೊಂದು ಮುಖ್ಯವಾದ ಸಂಗತಿಯೆಂದರೆ ಉತ್ತರ ಭಾರತ ನೆಲೆಗಳಿಂದ ದಕ್ಷಿಣಕ್ಕೆ ಹರಡಿದ ಬೌದ್ಧ ಮತ್ತು ಜೈನ ಧರ್ಮಾನುಯಾಯಿಗಳೇ ಈ ಭಾಗದ ಪಟ್ಟಣ ಸಂಸ್ಕೃತಿಯನ್ನು ಬೆಳೆಸುವಲ್ಲಿ ಪ್ರಾಯಶಃ ಕಾರಣ ಕರ್ತರಾಗಿಬಹುದೆಂದು ಖಚಿತವಾಗಿ ಹೇಳಬಹುದು. ಆ ಕುರಿತು ಸಹ ವ್ಯಾಪಕ ಅಧ್ಯಯನದ ಜರೂರು ಇದ್ದೇ ಇದೆ.

ಬೃಹತ್ ಶಿಲಾಯುಗೀಯ ಸಾಂಸ್ಕೃತಿಕ ಅಂಶಗಳು ಐತಿಹಾಸಿಕ ಕಾಲಾವಧಿಯ ಆರಂಭದವರೆಗೂ ನಿರಂತರವಾಗಿ ಹರಿದುಬಂದವು. ಅಂದರೆ ಐತಿಹಾಸಿಕ ಕಾಲಘಟ್ಟದ ಮೊದಲ ಹಂತದಲ್ಲಿ ರೂಪಗೊಂಡ ಮೌರ್ಯ ಮತ್ತು ಶಾಹವಾಹನರು ಬೃಹತ್‌ಶಿಲಾಯುಗ ಸಂಸ್ಕೃತಿಯ ಸುಧಾರಿತ ಮುಂದುವರೆದ ಭಾಗವೆಂಬ ಅರ್ಥದಲ್ಲಿ ಈ ವಿವರಗಳನ್ನು ಧ್ವನಿಸಲಾಗಿದೆ(ಅದೇ ಪುಟ.೭೯). ಇದಕ್ಕೆ ಕೊಡುವ ಪೂರಕ ಸಾಕ್ಷಿಗಳೆಂದರೆ ಬೃಹತ್ ಶಿಲಾಯುಗದ ಗೋರಿಗಳಲ್ಲಿ ಹುದುಗಿರುವ ಕುರುಹುಗಳನ್ನು ನಿದರ್ಶನಗಳ ರೂಪದಲ್ಲಿ ನೀಡುತ್ತಾರೆ. ಈ ಸಂಸ್ಕೃತಿಯ ಜನರಿಗೆ ಕುದುರೆ ನಿಕಟವರ್ತಿಯಾದುದೆಂದು ಗೊತ್ತಾಗುತ್ತದೆ ಎಂಬ ಸುಳಿವಿನ ಮೇಲೆ ಈ ಅಭಿಪ್ರಾಯಗಳನ್ನು ಕಟ್ಟಲಾಗಿದೆ. ಶಾತವಾಹನರು ಕುದುರೆ ಸವಾರರಾಗಿಯೇ ಚರಿತ್ರೆಯಲ್ಲಿ ಗುರುತಿಸಿಕೊಂಡವರು. ಹಾಗಾಗಿ ಇವರು ಸಹ ಬೃಹತ್ ಶಿಲಾಯುಗದಿಂದ ಮುಂದುವರೆದ ಸುಧಾರಿತ ಜನಸಮುದಾಯಗಳೆಂಬ ಅರ್ಥದಲ್ಲಿ ಈ ವಿವರಗಳನ್ನು ಕಟ್ಟಿಕೊಡಲಾಗಿದೆ.

ಆ ಕುರಿತು ಸಹ ಹೆಚ್ಚಿನ ಅಧ್ಯಯನಗಳ ಅವಶ್ಯಕತೆ ಇದೆ. ಶಾಸನಗಳು ಹಾಗೂ ಕೃಷ್ಣಾ ನದಿಯ ಕೆಳ ದಂಡೆಯ ಪ್ರದೇಶದಲ್ಲಿ ದೊರಕಿದ ನಾಣ್ಯಗಳು ಸ್ಥಳೀಯ ಜನರು ಮೌರ್ಯ-ಶಾತವಾಹನರೊಡನೆ ಸಂಪರ್ಕವನ್ನಿಟ್ಟು ಕೊಂಡಿದ್ದರೆಂದು ಸೂಚಿಸುತ್ತವೆ ಎಂಬ ಅಭಿಪ್ರಾಯಗಳಿವೆ. ಈ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಶಹಾಪುರ ತಾಲೂಕಿನ ಹಾರಣಗೇರಿಯಲ್ಲಿ ಮೌರ್ಯ ಮತ್ತು ಶಾತವಾಹನ ಕಾಲದ ಹಲವಾರು ನಾಣ್ಯಗಳು ದೊರಕಿರುವ ವರದಿಗಳು ಪ್ರಕಟವಾಗಿವೆ[೦]. ಈ ಜಿಲ್ಲೆಯ ಪ್ರಾಗಿತಿಹಾಸದ ವಿವರಗಳನ್ನು ಸಹ ಈ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಪ್ರಮುಖ ಪ್ರಯತ್ನಗಳಾಗಬೇಕು. ಅಲ್ಲದೇ ಈ ಗ್ರಾಮದ ಪರಿಸರದಲ್ಲಿರುವ ಪುರಾತನ ನಿವೇಶನಗಳಲ್ಲಿ ನವಶಿಲಾಯುಗಕ್ಕೆ ಸೇರಿದ ಮಡಿಕೆ-ಕುಡಿಕೆಗಳೂ ಸಹ ಕಂಡುಬರುತ್ತವೆ. ಅದೇ ನೆಲೆಗಳಲ್ಲಿ ಬೃಹತ್ ಶಿಲಾಸಂಸ್ಕೃತಿಯ ಕುರುಹುಗಳೂ ಕಂಡುಬಂದಿರುವುದುಂಟು. ಹಾಗಾಗಿ ಈ ನೆಲೆಯು ಪ್ರಾಚೀನ ಕಾಲದಿಂದಲೂ ಹೊಂದಿರಬಹುದಾದ ಸಾಂಸ್ಕೃತಿಕ ನಿರಂತರತೆಯನ್ನು ಮನಗಾಣಬಹುದು. ಹಾರಣಗೇರಿ ನೆಲೆಯು ಪ್ರಾಚೀನ ಪ್ರಸಿದ್ಧಿ ಪಡೆದಿದ್ದ ಶಿರವಾಳ, ಅಣಬಿ, ಹುರಸಗುಂಡಗಿ ಹಾಗೂ ಸನ್ನತಿ(ಚಿತ್ತಾಪುರ ತಾಲೂಕು) ಆಸುಪಾಸಿನಲ್ಲಿ ಇರುವಂಥದ್ದು. ಹಾಗಾಗಿ ಆ ನೆಲೆಗಳಂತೆ ಇದು ಸಹ ಶಾತವಾಹನ ಕಾಲದ ವ್ಯಾಪಾರಿ ಪಟ್ಟಣವಾಗಿತ್ತು ಎಂಬುದರಲ್ಲಿ ಯಾವ ಅನುಮಾನಗಳಿಲ್ಲ. ಇಂಥ ಸಾಕ್ಷಿಗಳು ಗ್ರಾಮದ ಹೊರ ವಲಯದಲ್ಲಿ ಈಗಲೂ ಕಂಡುಬರುತ್ತವೆ. ಇವು ಇಂಗನಾಳು ಎಂಬ ಬೇಚರಾಕ್ ಗ್ರಾಮ ವ್ಯಾಪ್ತಿಯಲ್ಲಿರುವ ಹಳ್ಳದ ದಂಡೆಯ ಮೇಲೆ ಈ ವಸತಿ ನೆಲೆಯ ಕುರುಹುಗಳು ಕಂಡುಬಂದಿವೆ ಎಂಬ ಅಭಿಪ್ರಾಯವನ್ನು ಗಮನಿಸಬಹುದು. ಕ್ಷೇತ್ರಕಾರ್ಯ ಸಂದರ್ಭದಲ್ಲಿಯೂ ಸಹ ಪ್ರತ್ಯಕ್ಷವಾಗಿ ಗಮನಿಸಿ ಅದು ಹೊಂದಿರಬಹುದಾದ ವ್ಯಾಪ್ತಿಯನ್ನು ಪರೀಕ್ಷಿಸಲಾಗಿದೆ. ಈ ಮೊದಲು ಉಲ್ಲೇಖಿವಾಗಿರುವ ಉದ್ದೇಶಗಳನ್ನಿಟ್ಟುಕೊಂಡು ಈ ಪ್ರದೇಶದಲ್ಲಿ ವಿಸ್ತೃತವಾದ ಅಧ್ಯಯನ ಕೈಗೊಂಡರೆ ಬಹುಶಃ

ಈ ವಿವರಗಳನ್ನು ಇನ್ನೂ ಪುಷ್ಟಿದಾಯಕವಾಗಿ ಪ್ರತಿಪಾದಿಸುವ ಹತ್ತು ಹಲವು ಸಾಕ್ಷಿಗಳು ದೊರಕುವುದರಲ್ಲಿ ಅನುಮಾನಗಳಿಲ್ಲ.

ಶಾತವಾಹನ ಕಾಲಕ್ಕೆ ಸಂಬಂಧಿಸಿದ ಇಟ್ಟಿಗೆಯ ಅವಶೇಷಗಳು ಈ ಜಿಲ್ಲೆಯ ಕೆಲವು ನೆಲೆಗಳಲ್ಲಿ ಕಂಡುಬಂದಿವೆ. ಮುಖ್ಯವಾಗಿ ಹಾರಣಗೇರಿ, ಗುರುಸುಣಗಿ, ಅಣಜಿ, ಶಿರವಾಳ, ಹುರುಸುಗುಂಡಗಿ ಹಾಗೂ ತಡಿಬಿಡಿ ಗ್ರಾಮ ಪರಿಸರದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಈ ಕುರುಹುಗಳು ಕಂಡುಬಂದಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಬಹುಶಃ ಈ ನೆಲೆಗಳಲ್ಲಿ ವ್ಯಾಪಕವಾದ ನಗರೀಕರಣ ಪ್ರಕ್ರಿಯೆಗಳು ನಡೆದಿರುವುದನ್ನು ಖಚಿತಪಡಿಸಬಹುದು. ಇಟ್ಟಿಗೆಯ ಅವಶೇಷಗಳು ಆ ಕಾಲದ ಬೇಕಾದ ಪ್ರಮುಖ ಸಾಕ್ಷಿಗಳಾಗಿವೆ ಎಂದರೆ ತಪ್ಪಾಗಲಾರದು.

ಮೌರ್ಯ ಮತ್ತು ಶಾತವಾಹನ ಸಂಪರ್ಕದಿಂದ ಈ ಭಾಗದಲ್ಲಿ ನಗರೀಕರಣ ಪ್ರಕ್ರಿಯೆ ಹೆಚ್ಚಿನ ವೇಗದಲ್ಲಿ ತೀವ್ರಗೊಂಡಿರಬಹುದು. ಆದರೆ ಉತ್ತರ ಭಾರತದಲ್ಲಿ ಹೆಚ್ಚಾಗಿ ಕಂಡುಬರುವಂತೆ ಈ ಕ್ರಿಯೆಯು ನದಿದಂಡೆಗಳಲ್ಲಿ ಮಾತ್ರವಲ್ಲದೇ ಈ ಪ್ರದೇಶದ ಬಯಲು ಸ್ಥಳಗಳು, ಗುಡ್ಡದ ಮೇಲೆ ಹಾಗೂ ನದಿದಂಡೆಗಳ ಮೇಲೆ ಹೀಗೆ ಎಲ್ಲ ಕಡೆಗಳಲ್ಲಿ ಇಂಥ ಸಾಕ್ಷಿಗಳು ರೂಪಗೊಂಡಿರುವುದು ತುಂಬಾ ಗಮನಾರ್ಹ ವಿಷಯವಾಗುತ್ತದೆ. ಅಣಬಿ, ಶಿರವಾಳ ಹಾಗೂ ಹುರಸಗುಂಡಗಿ ಬಿಟ್ಟರೆ ಉಳಿದೆಲ್ಲ ವಸತಿ ನೆಲೆಗಳ ಕುರುಹುಗಳು ವಿಸ್ತಾರವಾದ ಜಮೀನನಲ್ಲೋ, ಎತ್ತರ ಗುಡ್ಡದ ಮೇಲೋ ರೂಪಗೊಂಡಿರುವುದನ್ನು ಕಾಣುತ್ತೇವೆ. ಉದಾಹರಣೆಗಾಗಿ ಹಾರಣಗೇರಿ, ವಜ್ಜಲ, ಹಾಗೂ ತಡಬಿಡಿ ನೆಲೆಗಳನ್ನು ಉದಾಹರಿಸಬಹುದು. ಗುರುಸುಣಗಿಯಲ್ಲಿ ಮಾತ್ರ ಈ ನೆಲೆಯು ಎತ್ತರದ ಬೆಟ್ಟದ ವಿಸ್ತಾರ ಪ್ರದಶದಲ್ಲಿ ಸ್ಥಾಪಿತಗೊಂಡಿದೆ. ಆದರೆ ಇವೆಲ್ಲವು ನೀರಿನ ಮೂಲ ಸೌಕರ್ಯವನ್ನು ಗಮನಿಸಿಯೇ ನಿರ್ಮಾಣಗೊಂಡಿರುವಂಥವುಗಳು ಎಂಬುದು ಬಹು ಮುಖ್ಯವಾದುದು. ವಿವರಿಸಿದ ನೆಲೆಗಳಲ್ಲಿ ಇಂಥೆಲ್ಲ ಸೌಕರ್ಯಗಳು ಇದ್ದಿರಬಹುದಾದ ಸಾಕ್ಷಿಗಳನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ.

ಐತಿಹಾಸಿಕ ಕಾಲದ ಆರಂಭ ಅವಧಿಯಲ್ಲಿ ಬಹುಕಾಲ ಬಾಳುವ ಕಟ್ಟಡಗಳನ್ನು ಕಟ್ಟಲು ಇಟ್ಟಿಗೆಗಳ ಉಪಯೋಗ ಹೆಚ್ಚಿನ ಮಹತ್ವ ಪಡೆಯಿತು. ಅಲ್ಲದೇ ಉಂಟಾಗುತ್ತಿದ್ದ ಅಡತಡೆಗಳನ್ನು ಈ ಸಂದರ್ಭವು ಸುಗಮಗೊಳಿಸಿತು. ಇಂಥ ಅವಶೇಷಗಳು ಹೆಸರಿಸಿದ ಬಹುತೇಕ ನೆಲೆಗಳಲ್ಲಿ ಕಂಡುಬರುವುದನ್ನು ಗಮನಿಸಬಹುದು. ಗುರುಸುಣಗಿಯ ಸಿದ್ದೇಶ್ವರ ಗುಡಿಯ ಬೆಟ್ಟದಲ್ಲಿ ವಿಶಾಲವಾಗಿ ಹರಡಿಕೊಂಡಿರುವ ಇಟ್ಟಿಗೆಯ ಅವಶೇಷಗಳು ಈಗಲೂ ಸಾಕಷ್ಟು ಸಂಖ್ಯೆಯಲ್ಲಿರುವುದನ್ನು ಗಮನಿಸಬಹುದು. ಅಲ್ಲದೇ ಈ ನೆಲೆಯಲ್ಲಿ ಬೌದ್ಧಧರ್ಮಕ್ಕೆ ಸಂಬಂಧಿಸಿದ ಸ್ತೂಪಗಳು ಸಹ ನಿರ್ಮಾಣವಾಗಿದ್ದಿರಬಹುದೆಂದು ತರ್ಕಿಸಲಾಗಿದೆ. ಈ ನೆಲೆಯ ಆಸುಪಾಸಿನ ಪ್ರದೇಶದಲ್ಲಿ ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಾವಧಿಗೆ

ಸಂಬಂಧಿಸಿದ ಕುರುಹುಗಳು ಕಂಡುಬಂದಿರುವುದು ಗಮನಾರ್ಹ ಸಂಗತಿಗಳಾಗಿವೆ. ಅಂಥದ್ದೇ ಅವಶೇಷಗಳು ಅಣಬಿ ಮತ್ತು ಹುರುಸಗುಂಡಗಿ ನೆಲೆಗಳಲ್ಲೂ ಕಂಡುಬಂದಿವೆ.

ಪೂರ್ವಭಾವಿ ಐತಿಹಾಸಿಕ(ಆದಿ ಇತಿಹಾಸ) ಕಾಲಘಟ್ಟದಲ್ಲಿ ಉತ್ತರ ಭಾರತದಿಂದ ಹಲವಾರು ಕಾರಣಗಳನ್ನಿಟ್ಟುಕೊಂಡು ದಕ್ಷಿಣ ಭಾರತದ ಕಡೆಗೆ ವ್ಯಾಪಕವಾದ ವಲಸೆ ಪ್ರಾರಂಭವಾಯಿತು. ಅಗಣಿತ ಸಂಖ್ಯೆಯಲ್ಲಿ ಪ್ರಯಾಣಿಸಿದ ಆ ಜನಸಮುದಾಯಗಳಿಗೆ ಬಹುಮುಖ್ಯವಾಗಿ ವ್ಯಾಪಾರ ಹಾಗೂ ಧರ್ಮಪ್ರಸಾರದ ಕಾರಣಗಳಿದ್ದವು. ವೇಗವಾಗಿ ಬೆಳೆದ ಇಲ್ಲಿನ ನಗರೀಕರಣ ಪ್ರಕ್ರಿಯೆಯೆಗಳಿಗೆ ಇಂಥ ವಲಸೆಗಳು ಪೂರಕ ಕಾರಣಗಳಾದವು. ವ್ಯಾಪಾರದ ದೂರಾಲೋಚನೆಗಳನ್ನು ಇಟ್ಟುಕೊಂಡು ಕರ್ನಾಟಕ ಸೇರಿದಂತೆ ದಕ್ಷಿಣ ಭಾರತದ ತುಂಬೆಲ್ಲಾ ಹಲವು ನಗರ-ಪಟ್ಟಣಗಳು ರೂಪುಗೊಳ್ಳಲು ಇಂಥ ವಲಸೆಗಳೇ ಪ್ರಮುಖ ಕಾರಣವಾದವು. ಆಯಕಟ್ಟಿನ ಜಾಗದಲ್ಲಿ ನಿರ್ಮಾಣಗೊಂಡ ಈ ಪಟ್ಟಣಗಳ ಬಹುಮುಖ್ಯ ಉದ್ದೇಶಗಳೆಂದರೆ ವ್ಯಾಪಾರವೇ ಆಗಿತ್ತು. ಬಹುದೃಷ್ಟಿಕೋನಗಳಲ್ಲಿ ವ್ಯಾಪಾರಿ ವರ್ಗಗಳಿಂದ ಬೆಂಬಲಿತವಾದ ಧರ್ಮ ಪ್ರಸಾರವೂ ಸಹ ಮುಂಚೂಣಿಯಲ್ಲಿ ಬಂದು ನಿಂತಿತು. ಇಂಥ ಪರಿಣಾಮಗಳಿಂದ ದಕ್ಷಿಣ ಭಾರತದಲ್ಲಿ ಆದಿ ಇತಿಹಾಸ ಕಾಲಘಟ್ಟದಲ್ಲಿ ಅಂದರೆ ಕ್ರಿಸ್ತಪೂರ್ವ ೪-೩ನೇ ಶತಮಾನದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಬೌದ್ಧ ಮತ್ತು ಜೈನ ಧರ್ಮಗಳ ಪ್ರಸಾರದ ನೆಲೆಗಳು ಪ್ರಾರಂಭಗೊಂಡದ್ದನ್ನು ಕಾಣಬಹುದು. ಅಲ್ಲದೇ ಅದೇ ಕಾಲದಲ್ಲಿ ಬಹು ಬಾಳಿಕೆಯ ಹಾಗೂ ಕಷ್ಟದಾಯಕವಲ್ಲದ ಕಟ್ಟಡಗಳು ಇಟ್ಟಿಗೆಗಳಿಂದ ರೂಪಗೊಂಡವು. ಇಂಥ ಉಪಯೋಗವು ಹೆಚ್ಚಿನ ಪ್ರಮಾಣದಲ್ಲಿ ನಗರಗಳ ನಿರ್ಮಾಣ ಹಾಗೂ ಅವು ಇನ್ನೂ ವೇಗವಾಗಿ ವೃದ್ಧಿಗೊಳ್ಳಲು ಸಹಾಯಕವಾದವೆಂದು ಅಭಿಪ್ರಾಯಿಸಲಾಗುತ್ತದೆ. ಅಂಥ ಪಟ್ಟಣಗಳಲ್ಲಿ ಬೌದ್ಧ ಮತ್ತು ಜೈನ ಮತ-ಪಂಥಗಳಿಗೆ ಸೇರಿದ ಭವ್ಯವಾದ ಸ್ಮಾರಕಗಳು ನಿರ್ಮಾಣವಾದವು. ಬಹುಮುಖ್ಯವಾಗಿ ಹೊಸಧರ್ಮವನ್ನು ಪ್ರಸಾರ ಮಾಡುವ ಉದ್ದೇಶವನ್ನಿಟ್ಟುಕೊಂಡು ಮೌರ್ಯ ಅಶೋಕ ಭಾರತದ ತುಂಬೆಲ್ಲಾ ಶಾಸನಗಳನ್ನು ಹಾಕಿಸಿದನು. ಇಂಥ ಪರಿಣಾಮಗಳಿಂದ ಕರ್ನಾಟಕವು ಹೊರತಾಗಿಲ್ಲ. ಮಸ್ಕಿ, ಬ್ರಹ್ಮಗಿರಿ, ಸಿದ್ದಾಪುರ, ಸನ್ನತಿ, ಕೊಪ್ಪಳ, ನಿಟ್ಟೂರು ಮತ್ತು ಉದಯಗೋಳಂ ನೆಲೆಗಳಲ್ಲಿ ಇಂಥ ಶಾಸನಗಳು ಕಂಡುಬಂದಿವೆ. ಮೌರ್ಯ ಅಶೋಕನ ಕಾಲದಲ್ಲಿಯೇ ಉತ್ತರ ಮತ್ತು ದಕ್ಷಿಣ ಭಾರತದ ಜೊತೆಗಿನ ನಿರಂತರ ಸಂಪರ್ಕ ಪ್ರಾರಂಭವಾಯಿತೆಂಬ ಅಭಿಪ್ರಾಯಗಳಿವೆ. ಅದರಂತೆ ನಮ್ಮ ನಾಡಿನ ರಾಜಕೀಯ ಚರಿತ್ರೆಯ ಪುಟಗಳು ಸಹ ತೆರೆದುಕೊಳ್ಳುವುದು ಅಲ್ಲಿಂದಲೇ ಎಂಬುದು. ಈ ಕುರಿತು ಈಗಾಗಲೇ ಪೂರ್ವಭಾವಿ ಐತಿಹಾಸಿಕ ಕಾಲಘಟ್ಟದ ವಿವರಗಳಲ್ಲಿ ಈ ಪ್ರದೇಶದಲ್ಲಿರುವ ವಿವಿಧ ಬಗೆಯ ವಿವರಗಳನ್ನು ದಾಖಲಿಸಲಾಗಿದೆ. ಮೌರ್ಯ ಮತ್ತು ಶಾತವಾಹನ ನಂತರ ನಮ್ಮ ನಾಡನ್ನು ಆಳಿದ ಅವಕಾಶ ಕದಂಬರಿಗೆ ಸಲ್ಲುತ್ತದೆ.

ಆದಿ ಕದಂಬರ ಬಗೆಗಾಗಲಿ, ಮಹಾರಥಿ ಮತ್ತು ಚುಟುಗಳ ಕುರಿತಾಗಲಿ ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ಮಾಹಿತಿಗಳು ಈವರೆಗೂ ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿರುವ ದಾಖಲೆಗಳಿಲ್ಲ. ಆದರೆ ಸುರಪುರ ತಾಲೂಕಿನ ವಜ್ಜಲ ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.೨ನೇ ಶತಮಾನದ ಶಾಸನವೊಂದರಲ್ಲಿ ಕಠೀ ಮತ್ತು ಮಹಾರಠೀ ಎಂಬ ಉಲ್ಲೇಖ ದಾಖಲಾಗಿರುವುದನ್ನು ಶಾಸನ ತಜ್ಞರು ಪತ್ತೆಹಚ್ಚಿದ್ದಾರೆ. ಅದೇ ತರಹದ ಉಲ್ಲೇಖಗಳು ಶಿರವಾಳ ಮತ್ತು ಅಣಬಿ ಗ್ರಾಮಗಳಲ್ಲಿಯೂ ಕಂಡುಬಂದಿರುವ ಪ್ರಾಕೃತ ಶಾಸನಗಳಲ್ಲಿ ಕಂಡುಬಂದಿವೆ. ಆದರೆ ಅವು ಶಾತವಾಹನ ಕಾಲದ್ದೆಂದು ಅಭಿಪ್ರಾಯಿಸಲಾಗಿದೆ. ಹಾಗಾಗಿ ಕದಂಬರ ಕಾಲದ ಇತಿಹಾಸ ಪುಟಗಳು ಈ ಭಾಗದಲ್ಲಿ ತೆರೆಯಲೇ ಇಲ್ಲ ಎಂದು ಅಭಿಪ್ರಾಯಸಬಹುದು. ಆದರೆ ಕನ್ನಡ ನಾಡಿನ ಅಖಂಡ ಕಲ್ಪನೆಯನ್ನು ಸಾಕಾರಗೊಳಿಸುವ ಮೊದಲ ಹೆಜ್ಜೆಯನ್ನಿಟ್ಟ ಬಾದಾಮಿ ಚಾಲುಕ್ಯರ ಕಾಲದ ಆಡಳಿತದ ಬಗೆಗೂ ವಿವರಿಸುವ ಒಂದೇ ಒಂದು ಸ್ಪಷ್ಟವಾದ ಕುರುಹುಗಳು ಈ ಭಾಗದಲ್ಲಿ ಕಂಡುಬಂದಿರುವ ಮಾಹಿತಿಗಳಿಲ್ಲ. ಗುಲಬರ್ಗಾದಿಂದ ವರದಿಯಾಗಿರುವ ಚಾಳುಕ್ಯ ವಿನಯಾದಿತ್ಯನ ಕಾಲದ ತಾಮ್ರಶಾಸನವು ಕೂಟ ಶಾಸನವಾಗಿರುವುದರಿಂದ ಅದು ಅಗಣ್ಯವೆನಿಸುತ್ತದೆ ಎಂದು ಅಭಿಪ್ರಾಯಿಸಲಾಗಿದೆ[೨]. ಸುದೀರ್ಘವಾದ ಇತಿಹಾಸಪೂರ್ವ ಪ್ರಾಚೀನ ಸಂಸ್ಕೃತಿಯ ಹೆಜ್ಜೆಗುರುತುಗಳನ್ನು ಸ್ಪಷ್ಟವಾಗಿ ಗುರುತಿಸಿಕೊಂಡಿರುವ ಯಾದಗಿರಿ ಜಿಲ್ಲಾ ಪರಿಸರವು ಅದರಂತೆ ಆದಿ ಐತಿಹಾಸಿಕ ಕಾಲದ ಸಂಸ್ಕೃತಿಯ ಸಂಗತಿಗಳನ್ನು ಅಷ್ಟಾಗಿ ಉಳಿಸಿಕೊಂಡು ಬಂದಿಲ್ಲ. ಆದರೆ ರಾಷ್ಟ್ರಕೂಟ ನಂತರಾವಧಿಯ ಕುರುಹುಗಳನ್ನು ಯಥೇಚ್ಛವಾಗಿ ತನ್ನ ಒಡಲಲ್ಲಿ ಕಾಪಾಡಿಕೊಂಡು ಬಂದಿರುವುದನ್ನು ಗಮನಿಸಬಹುದು.

ಕನ್ನಡನಾಡಿನ ಇತಿಹಾಸ ಕುರಿತಿರುವ ಆಕರಗಳ ಸಂದರ್ಭದಲ್ಲಿ ಐತಿಹಾಸಿಕ ಕಾಲ ಘಟ್ಟವು ಮೌರ್ಯರ ಆಳ್ವಿಕೆಯೊಂದಿಗೆ ಪ್ರಾರಂಭವಾಗುತ್ತದೆ. ಸಂಬಂಧಿಸಿದ ಅಂಥ ಪ್ರಮುಖ ವಿವರಗಳು ನಮ್ಮ ನಾಡಿನ ಮಸ್ಕಿ, ಬ್ರಹ್ಮಗಿರಿ, ಉದಯಗೋಳಂ, ಕೊಪ್ಪಳ, ನಿಟ್ಟೂರು ಹಾಗೂ ಸನ್ನತಿ ಪ್ರದೇಶಗಳಲ್ಲಿ ಕಂಡುಬಂದಿವೆ. ಆ ಕಾಲದ ಪ್ರಸಿದ್ಧ ನೆಲೆಗಳಾದ ಸನ್ನತಿ ಮತ್ತು ಕಣಗಿನಹಾಳ ಗ್ರಾಮಗಳು(ಚಿತ್ತಾಪುರ ತಾಲೂಕು) ಈ ಪರಿಸರದಲ್ಲಿಯೇ ಬರುವಂಥವುಗಳು. ಆದರೆ ಭೀಮಾ ನದಿ ಮಾತ್ರ ಇವುಗಳ ನಡುವೆ ಇರುವ ಅಂತರವನ್ನು ವಿಭಾಗಿಸಿದೆ. ಶಹಾಪುರ ತಾಲೂಕಿನ ಅಣಬಿ, ಶಿರವಾಳ ಹಾಗೂ ಹುರಸಗುಂಡಗಿ ಗ್ರಾಮಗಳು ನದಿಯ ಈ ದಂಡೆ ಆದರೆ ಅವು ಆ ದಂಡೆಯ ಮೇಲೆ ಕೇಂದ್ರೀಕೃತವಾಗಿವೆ. ಆದರೆ ಇಲ್ಲಿರುವ ನೆಲೆಗಳಲ್ಲಿ ಇತಿಹಾಸ ಪ್ರಸಿದ್ಧ ಸನ್ನತಿ ಮತ್ತು ಕಣಗಿನಹಾಳ ಗ್ರಾಮಗಳಲ್ಲಿ ಸಿಕ್ಕಿರುವಷ್ಟು ಅವಶೇಷಗಳು ಈ ಪರಿಸರದಲ್ಲಿ ಲಭ್ಯವಿರಲಿಕ್ಕಿಲ್ಲ. ಆದರೆ ಸಿಗಬಹುದಾದ ಸಾಧ್ಯತೆಗಳನ್ನು ಸಹ ಅಲ್ಲಗಳೆಯಲಾಗದು. ಅಂಥ ಸೂಚನೆಗಳು ಕ್ಷೇತ್ರದಲ್ಲಿ ಹೆಚ್ಚಾಗಿಯೇ ಕಂಡುಬರುತ್ತವೆ. ಅಲ್ಲದೇ ಈಗಾಗಲೇ ಈ ನೆಲೆಗಳಿಂದ ವರದಿಯಾಗಿರುವ ಸಾಕ್ಷಿಗಳು ಸಹ ಮೌರ್ಯ ಮತ್ತು ಶಾತವಾಹನ ಕಾಲದ ವಿವರಗಳನ್ನು ದೃಢಪಡಿಸುತ್ತವೆ.

ಕನ್ನಡ ನಾಡಿನ ಬಹುಭಾಗಗಳನ್ನು ಆಳಿದ ಶಾತವಾಹನರ ಕಾಲದ ಪಳೆಯುಳಿಕೆಗಳು ಈ ಪರಿಸರದಲ್ಲಿ ಸಿಗುತ್ತವೆ. ಆ ಕಾಲಕ್ಕೆ ಸಂಬಂಧಿಸಿದ ಕುರುಹುಗಳು ಪ್ರಮುಖವಾಗಿ ಅಣಬಿ, ಶಿರವಾಳ, ಹುರಸಗುಂಡಗಿ(ಶಹಾಪುರ ತಾಲೂಕು) ಹಾಗೂ ಸುರಪುರ ತಾಲೂಕಿನ ವಜ್ಜಲ, ಹೆಬ್ಬಾಳ, ಚೆನ್ನೂರು, ಕಲ್ಲೇದೇವನಹಳ್ಳಿ, ಬಾಚಿಮಟ್ಟಿ ಹಾಗೂ ಚಿನ್ನಹಳ್ಳಿ ಪರಿಸರದಲ್ಲಿ ಕಂಡುಬಂದಿವೆ. ಅಣಬಿ, ಶಿರವಾಳ ಹಾಗೂ ಹುರಸಗುಂಡಗಿ, ಗುರುಸಣಗಿ, ತಡಿಬಿಡಿ ಮತ್ತು ವಜ್ಜಲದಲ್ಲಿ ಶಾತವಾಹನ ಕಾಲಕ್ಕೆ ಸಂಬಂಧಿಸಿದ ಸ್ಪಷ್ಟ ಕುರುಹುಗಳು ದಾಖಲಾಗಿರುವುದನ್ನು ಗಮನಿಸಬಹುದು[೩೩]. ಅಲ್ಲದೇ ಅವುಗಳ ಬಗೆಗೆ ಆಂಶಿಕ ಅಧ್ಯಯನಗಳನ್ನು ಪ್ರಕಟಿಸುವ ಪ್ರಯತ್ನವು ಸಹ ಆಗಿರುವುದುಂಟು[೩೪]

ಸುರಪುರ ತಾಲೂಕಿನ ವಜ್ಜಲ ಗ್ರಾಮದಲ್ಲಿ ಸುಮಾರು ಕ್ರಿ.ಶ.೨ನೇ ಶತಮಾನದ ಎನ್ನಬಹುದಾದ ಶಾಸನವೊಂದು ಪತ್ತೆಯಾಗಿದೆ[೩೫] "ಮುಕುಲಿಯಾನ ರಠಿನೀಯ ಸೇಬನಿಕಾಯ" ಎಂದು ಪ್ರಾಕೃತದಲ್ಲಿರುವ ಈ ಶಾಸನಕ್ಕೆ ಮುಕುಲಿ ಗ್ರಾಮ ಅಥವಾ ವಂಶಕ್ಕೆ ಸೇರಿದ ರಠಿನೀ(ಅಧಿಕಾರಿಣಿ ಅಥವಾ ಅಧಿಕಾರಿಯ ಪತ್ನಿ)ಯಾದ ಸೇಬನಿ ಕಾಲದ್ದು ಎಂದು ಅರ್ಥೈಸಬಹುದಾಗಿದೆ ಎಂದು ಅಭಿಪ್ರಾಯಿಸಲಾಗಿದೆ. ಈಗಾಗಲೇ ಆಂಧ್ರಪ್ರದೇಶದ ಭಾಗವನ್ನಾಳಿದ ಶಾತವಾಹನರಿಗೆ ರಠೀ, ಮಹಾರಠೀ ಎನ್ನುವ ಅಧಿಕಾರಿಗಳಿದ್ದುದನ್ನು ವಿದ್ವಾಂಸರು ಗುರುತಿಸಿದ್ದಾರೆ ಎಂದು ಅಭಿಪ್ರಾಯಿಸಲಾಗಿದೆ. ಎಲ್ಲಕ್ಕಿಂತ ಮುಖ್ಯವಾದ ವಿಷಯವೆಂದರೆ ಈ ಭಾಗದಲ್ಲಿ ಶಾತವಾಹನರು ಆಳಿದರೆಂಬುದಕ್ಕೆ ಮೊಟ್ಟ ಮೊದಲ ಪುರಾವೆಯಿದು. ಈ ತಾಲೂಕಿನಲ್ಲಿ ಬ್ರಾಹ್ಮಿಲಿಪಿ ಪ್ರಾಕೃತ ಭಾಷೆಯಲ್ಲಿ ದೊರೆತ ಮೊದಲ ಶಾಸನವಿದು ಎಂದು ಶ್ರೀಮತಿ ಹನುಮಾಕ್ಷಿ ಗೋಗಿ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಸುಮಾರು ಕ್ರಿ.ಶ. ಎರಡನೆಯ ಶತಮಾನದ ಮತ್ತೊಂದು ಪ್ರಾಕೃತ ಶಾಸನವು ಶಹಾಪುರ ತಾಲೂಕಿನ ಅಣಬಿ ಗ್ರಾಮದಲ್ಲಿರುವುದನ್ನು ಗುರುತಿಸಲಾಗಿದೆ. ಇದು ಸಹ ಬ್ರಾಹ್ಮಿ ಲಿಪಿಯಿಂದ ಕೂಡಿದ್ದು 'ಘರತಯಶೋಪಾಲಾಯ' ಎಂಬ ಎಂಟು ಅಕ್ಷರಗಳಿರುವುದನ್ನು ಪ್ರಕಟಿಸಿದ್ದಾರೆ[೩೬]. ಅಲ್ಲದೇ ಶಹಾಪುರ ತಾಲೂಕಿನ ಹಾರಣಗೇರಿ, ಗುರುಸುಣಗಿ, ಶಿರವಾಳ, ತಡಿಬಿಡಿ ಹಾಗೂ ಹುರಸಗುಂಡಗಿ ಗ್ರಾಮಗಳಲ್ಲಿ ಶಾಹವಾಹನ ಕಾಲದ ಕುರುಹುಗಳು ಕಂಡುಬಂದಿರುವುದನುಡೀಗಾಗಲೇ ಸವಿವರವಾಗಿಯೇ ಪ್ರಸ್ತಾಪಿಸಲಾಗಿದೆ. ಶಾತವಾಹನ ಕಾಲಾವಧಿಗೆ ಸಂಬಂಧಿಸಿದ ಸಾಕ್ಷಿಗಳು ಸಿಗುವಷ್ಟು ಕದಂಬರ ಬಗೆಗಾಗಲಿ ಆ ನಂತರ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯ ಮತ್ತು ರಾಷ್ಟ್ರಕೂಟ ಅರಸರ ಅವಧಿಗೆ ಸಂಬಂಧಪಟ್ಟ ಸಂಗತಿಗಳು ಇಲ್ಲವೇ ಇಲ್ಲ ಎನ್ನುವಷ್ಟು ಗಾತ್ರದಲ್ಲಿವೆ.

**ಇತಿಹಾಸ ಕಾಲದ ಹೆಜ್ಜೆ ಗುರುತುಗಳು**

**ರಾಷ್ಟ್ರಕೂಟರು**

ಯಾದಗಿರಿ ಜಿಲ್ಲೆಗೆ ಹೊಂದಿಕೊಂಡಿರುವ ಚಿತ್ತಾಪುರ ಹಾಗೂ ಸೇಡಂ(ಗುಲಬರ್ಗಾ ಜಿಲ್ಲೆ) ತಾಲೂಕಿನ ಕೆಲವು ಗ್ರಾಮಗಳಲ್ಲಿ ರಾಷ್ಟ್ರಕೂಟರ ಆಡಳಿತಾವಧಿಯ ಹಲವು ಆಕರಗಳು ಈಗಾಗಲೇ

ಪ್ರಕಟಗೊಂಡಿರುವುದನ್ನು ಗಮನಿಸಬಹುದು[೩೨]. ಮುಖ್ಯವಾಗಿ ಸೇಡಂ ತಾಲೂಕಿನ ಮಳಖೇಡ(ಮಾನ್ಯಖೇಟ) ಗ್ರಾಮವು ಅವರ ರಾಜಧಾನಿ ಪಟ್ಟಣವಾಗಿತ್ತೆಂಬ ಅಭಿಪ್ರಾಯಗಳು ಹೆಚ್ಚು ಚಾಲ್ತಿಯಲ್ಲಿವೆ. ಮೂರನೆಯ ಗೋವಿಂದನ ಉತ್ತರಾಧಿಕಾರಿಯಾದ ಅಮೋಘವರ್ಷನು ಮಾನ್ಯಖೇಟ ಸ್ಥಳವನ್ನು ಸಾಮ್ರಾಜ್ಯದ ರಾಜಧಾನಿ ಪಟ್ಟಣವನ್ನಾಗಿ ನಿರ್ಮಿಸುವ ಕಾರ್ಯವನ್ನು ಪೂರ್ಣಗೊಳಿಸಿದನೆಂಬ ಅಭಿಪ್ರಾಯಗಳಿವೆ. ಕರ್ಕನ ಕಾಲದ ಕರಾಡಿನ(ನವಸಾರಿ) ತಾಮ್ರ ಶಾಸನವು ರಾಜಧಾನಿ ಮಾನ್ಯಖೇಟನ್ನು ಇಂದ್ರನ(ಅಮರಾವತಿ) ರಾಜಧಾನಿಗಿಂತಲೂ ಮಿಗಿಲಾದದ್ದು ಎಂದು ವಿವರಿಸಿದೆ. ಆದರೆ ಆ ಕುರಿತು ಈ ಪರಿಸರದಲ್ಲಿ ಅನ್ವೇಷಿಸಿ ಸಂಶೋಧಿಸಿದ ಕುರುಹುಗಳು ಆ ಮಟ್ಟಿಗೆ ದೊರೆತಿಲ್ಲ ಎಂಬ ಅಭಿಪ್ರಾಯಗಳು ಸಹ ದಾಖಲಾಗಿವೆ[೩೩]. ಅಲ್ಲದೇ ಇಂಥ ಅಭಿಪ್ರಾಯಗಳನ್ನು ಬೆಂಬಲಿಸಬಹುದಾದ ಶಾಸನಗಳು ಸಹ ಈ ಪರಿಸರದಲ್ಲಿ ಕಂಡುಬಂದಿರುವ ಸಾಧ್ಯತೆಗಳು ತುಂಬಾ ವಿರಳವೇ ಆಗಿವೆ. ಆದರೆ ಆ ಕಾಲಕ್ಕೆ ಸಂಬಂಧಿಸಿದ ಪ್ರಾಚೀನ ಶಾಸನವೊಂದು ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ(ಶಿರವಾಳ ಗ್ರಾಮದ)ಲ್ಲಿ ಕಂಡುಬಂದಿದೆ. ಗ್ರಾಮದ ಈಶ್ವರ ದೇವಾಲಯದ ಮುಂಭಾಗದಲ್ಲಿರುವ ಈ ಶಾಸನವು ಅಕಾಲವರ್ಷ ಮೂರನೆಯ ಕೃಷ್ಣನ (ಕ್ರಿ.ಶ.೯೩೯-೯೬೭) ಕಾಲದ್ದು. ಕ್ರಿ.ಶ.೯೪೦ರ ತೇದಿವುಳ್ಳ ಈ ಶಾಸನವು ಬಹಳ ಮುಖ್ಯವಾದ ವಿವರಗಳನ್ನು ನೀಡುತ್ತದೆ[೩೪]. ಈ ಅರಸನ ಮಹಾಸಾಮಂತನಾದ ಬುದ್ಧನು ಎಡದೊರೆಯನ್ನು ಆಳುತ್ತಿದ್ದ ಸಂದರ್ಭದಲ್ಲಿ ಸಗರನಾಡಿನ ನಾಳಗಾವುಂಡನಾಗಿದ್ದ ಚಂದಯ್ಯನಿಗೆ ಸ್ಥಳೀಯರಾದ ಮುಣ್ಡವಿಯ್ಯ, ಪುನರಯ್ಯನ ಮಗ ಪೊಟ್ಟಯ್ಯ ಹಾಗೂ ಅಜ್ಜಯ್ಯ ಎಂಬುವರು ಒಂದುನೂರು ಬಂಗಾರದ ಗದ್ಯಾಣ ಹಾಗೂ ಐವತ್ತು ಮತ್ತರ ಭೂಮಿಯನ್ನು ಕೊಟ್ಟರೆಂಬ ಉಲ್ಲೇಖ ನೀಡುತ್ತದೆ. ಈ ಶಾಸನದಲ್ಲಿ ಶಿರವಾಳವನ್ನು ಸಿರಿವೊಳಲು ಎಂದು ಉಲ್ಲೇಖಿಸಲಾಗಿದೆ. ರಾಷ್ಟ್ರಕೂಟ ಕಾಲಕ್ಕೆ ಸಂಬಂಧಿಸಿದಂತೆ ಈ ಜಿಲ್ಲೆಯಲ್ಲಿ ಸಿಗುವ ಮೊದಲ ಶಾಸನ ದಾಖಲೆಯೂ ಸಹ ಇದಾಗಿದೆ. ಅಲ್ಲದೇ ಈಗಾಗಲೇ ನೂರಾರು ಸಂಖ್ಯೆಯ ಪ್ರಮಾಣದಲ್ಲಿ ಪ್ರಕಟಗೊಂಡಿರುವ ಹಲವಾರು ಶಾಸನಗಳಲ್ಲಿ 'ಸಗರನಾಡ' ಕುರಿತು ಉಲ್ಲೇಖ ನೀಡುವ ಮೊದಲ ದಾಖಲೆಯು ಸಹ ಇದೆ ಆಗಿದೆ. ಒಟ್ಟಾರೆ ಈ ದಾಖಲೆಯಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಆಗಲೇ ಸಗರ ನಾಡಿನ ಕುರಿತು ಮಾಹಿತಿಗಳು ಜನರಲ್ಲಿ ಇದ್ದಿರಬಹುದೆಂಬುದು. ಆದರೆ ಅದರ ಉಲ್ಲೇಖವು ಸ್ಪಷ್ಟವಾಗಿ ಯಾವ ನಿರ್ದಿಷ್ಟ ಕಾಲದಲ್ಲಿ ಬಂದಿರಬಹುದೆಂದು ಖಚಿತವಾಗಿ ಅಭಿಪ್ರಾಯಿಸುವುದು ಕಷ್ಟಕರ. ಅಲ್ಲದೇ ಮುಂದಿನ ದಿನಮಾನಗಳಲ್ಲಿ ರಚನೆಗೊಂಡ ಹಲವಾರು ಶಾಸನಗಳಲ್ಲಿ ಉಲ್ಲೇಖವಾಗಿರುವ ಅದರ ಜೊತೆಗಿರುವ ಸಂಖ್ಯೆಯನ್ನು ಸಹ ಈ ಶಾಸನದಲ್ಲಿ ಉಲ್ಲೇಖಿಸಿದಂತಿಲ್ಲ. ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲ ಎರಡನೆಯ ಜಯಸಿಂಹನ (ಕ್ರಿ.ಶ.೧೦೧೪-೧೦೪೨)ಕಾಲಕ್ಕೆ ಸಂಬಂಧಿಸಿದ ಶಾಸನಗಳಲ್ಲಿಯೂ ಸಹ ಇವರ ವಿವರಗಳಿಲ್ಲ.

ಹಾಗಾದರೆ ತಿಳಿಯಬಹುದಾದ ಇನ್ನೊಂದು ಮಹತ್ವದ ಸಂಗತಿ ಏನೆಂದರೆ ಈ ನಾಡಿನ ಜೊತೆಗಿರುವ ಸಂಖ್ಯೆಯೂ ಸಹ ೧೧ನೇ ಶತಮಾನದ ನಂತರವೇ ಬಂದಿರಬಹುದೆಂದು ಊಹಿಸಬಹುದು. ಬಹುಶಃ ಹನ್ನೊಂದನೆಯ ಶತಮಾನದ ನಂತರವೇ ಈ ನಾಡಿನಲ್ಲಿದ್ದ ಗ್ರಾಮಗಳ ಕುರಿತ ನಿರ್ದಿಷ್ಟ ಸಂಖ್ಯೆಯ ಮಾಹಿತಿಯು ಶಾಸನಗಳಲ್ಲಿ ದಾಖಲಾಗಲು ಪ್ರಾರಂಭಿಸಿರಬಹುದೆಂದು ಅಭಿಪ್ರಾಯಪಡಬಹುದು.

ರಾಷ್ಟ್ರಕೂಟ ಕಾಲಕ್ಕೆ ಸಂಬಂಧಿಸಿದವುಗಳು ಎನ್ನಬಹುದಾದ ಇನ್ನೆರಡು ಶಾಸನಗಳು ಈ ಜಿಲ್ಲೆಯಲ್ಲಿ ಕಂಡುಬಂದಿವೆ. ಯಾದಗಿರಿ ತಾಲೂಕಿನ ನಂದಿ ಬೆಳಗುಂದಿ ಮತ್ತು ಶಹಾಪುರ ತಾಲೂಕಿನ ದೋರನಹಳ್ಳಿಯಲ್ಲಿ ಹಾಗೂ ಸುರಪುರ ತಾಲೂಕಿನ ರೆಳ್ಳಿಗೆ ಶಾಸನಗಳು ಆ ಕಾಲದವು ಎಂಬ ಸೂಚನೆಗಳು ವ್ಯಕ್ತವಾಗಿವೆ. ಅವುಗಳನ್ನು ಕ್ಷೇತ್ರಕಾರ್ಯದಲ್ಲಿಯೂ ಗಮನಿಸಲಾಗಿದೆ. ಅವುಗಳ ಲಿಪಿ ವಿನ್ಯಾಸದ ಹಿನ್ನೆಲೆಯಲ್ಲಿ ಈ ಅಭಿಪ್ರಾಯಕ್ಕೆ ಬಂದಿದ್ದಾರೆ.[೪೧] ಆದರೆ ಅವುಗಳಲ್ಲಿರುವ ವಿವರಗಳನ್ನು ಸ್ಪಷ್ಟವಾಗಿ ತಿಳಿಯಲಾಗಿಲ್ಲವೆಂದು ಹೇಳಲಾಗಿದೆ. ಹಾಗಾಗಿ ಈ ಪ್ರದೇಶದಲ್ಲಿದ್ದ ರಾಷ್ಟ್ರಕೂಟ ಅರಸರ ಚರಿತ್ರೆ ದೀಪದ ಕೆಳಗಿನ ಕತ್ತಲೆಯಲ್ಲಿ ಅಡಗಿದಂತೆ ಭಾಸವಾಗುತ್ತದೆ.

ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ ಈ ಪ್ರದೇಶದ ಇತಿಹಾಸ ಕುರಿತು ತಿಳಿ ಹೇಳುವ ಶಾಸನ ಆಕರಗಳು ಬೆರಳೆಣಿಕೆಯಲ್ಲಿ ದೊರೆತಿರಬಹುದು. ಆದರೆ ಅವರ ಕಾಲದಲ್ಲಿ ನಿರ್ಮಾಣವಾಗಿದ್ದಿರಬಹುದಾದ ಹತ್ತಾರು ದೇವಾಲಯಗಳಂತೂ ಈ ಜಿಲ್ಲಾ ಪರಿಸರದಲ್ಲಿ ಲಭ್ಯವಾಗಿರುವುದನ್ನು ಗಮನಿಸಬಹುದು. ಅವುಗಳ ರಚನಾ ವಿನ್ಯಾಸದ ಹಿನ್ನೆಲೆಯಲ್ಲಿ ಅವು ಆ ಕಾಲದವು ಎಂದು ಸ್ಪಷ್ಟವಾಗಿ ಅಭಿಪ್ರಾಯಿಸಬಹುದು. ಅಲ್ಲದೇ ಅವುಗಳ ಕುರಿತೇ ಪ್ರತ್ಯೇಕವಾಗಿ ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ಕಲ್ಯಾಣದ ಚಾಲುಕ್ಯರು

ಕಲ್ಯಾಣ ಚಾಲುಕ್ಯರು ನಮ್ಮ ನಾಡಿನಲ್ಲಿ ಆಳಿಹೋದ ಪ್ರಮುಖ ರಾಜಮನೆತನಗಳಲ್ಲಿ ಒಬ್ಬರು. ಅವರು ಉಳಿದೆಲ್ಲ ಸಾಮ್ರಾಜ್ಯಗಳಿಗಿಂತ ಹೆಚ್ಚಿನ ಪ್ರಸಿದ್ಧಿಯನ್ನು ಪಡೆದು ಇತಿಹಾಸದಲ್ಲಿ ದಾಖಲಾಗಿದ್ದಾರೆ. ಅವರ ಕಾಲದಲ್ಲಿ ಅಗಣಿತ ಸಂಖ್ಯೆಯ ಶಾಸನಗಳು ಸಾವಿರಾರು ಸಂಖ್ಯೆಯ ದೇವಾಲಯಗಳು ಹಾಗೂ ಶಿಲ್ಪಗಳು ನಿರ್ಮಾಣವಾದವು. ಇಂಥ ಸುಪ್ರಸಿದ್ಧ ಮನೆತನವೇ ಈ ಜಿಲ್ಲೆಯ ಸಾಂಸ್ಕೃತಿಕ ವಿವರಗಳನ್ನು ಸಹ ನಿರ್ಮಿಸಿತೆಂದರೆ ತಪ್ಪಾಗಲಾರದು. ಅವರು ಬೀರಿದ ಪರಿಣಾಮದಿಂದ ಈ ಜಿಲ್ಲೆಯು ಹೊರತಾಗಿರಲಿಲ್ಲ. ಆ ಕುರಿತು ವಿವರವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಕಲ್ಯಾಣದ ಚಾಲುಕ್ಯರು ರಾಷ್ಟ್ರಕೂಟರನ್ನು ಸೋಲಿಸುವ ಮೊದಲು ಅವರ ನೇತಾರನಾಗಿದ್ದ ಅಹಮಲ್ಲ ತೈಲಪನು ಅವರ ಸಾಮಂತನಾಗಿದ್ದನು. ಆದರೆ ಆ ಕುರಿತು ವಿವರ ನೀಡುವ ಶಾಸನಗಳಾವುವು ಬಹುಶಃ ಈ ಪ್ರದೇಶದಲ್ಲಿ ಕಂಡು ಬಂದಿರುವ ವರದಿಗಳೇನೂ ಪ್ರಕಟಿತವಾಗಿಲ್ಲ.

ಆದರೆ ಸಗರನಾಡು ಮತ್ತು ಹಗರಟಗಿ ಆಡಳಿತ ವಿಭಾಗಗಳಿಗೆ ಹೊಂದಿಕೊಂಡೇ ಇರುವ ತರ್ದವಾಡಿ ನಾಡಿನ ಬೇರೆ ಬೇರೆ ಸ್ಥಳಗಳಲ್ಲಿ ತೈಲಪನ ಕುರಿತಾದ ವಿವರಗಳನ್ನು ನೀಡುವ ಶಾಸನಗಳು ಪ್ರಕಟಗೊಂಡಿವೆ. ಅಲ್ಲದೇ ಇಂಥ ಸಂಗತಿಗಳಿಂದ ತಿಳಿಯಬಹುದಾದ ಮುಖ್ಯವಾದ ವಿಷಯಗಳೆಂದರೆ ತರ್ದವಾಡಿ, ಸಗರ ಹಾಗೂ ಹಗರಟಗಿ ನಾಡುಗಳು ಸಾಂಸ್ಕೃತಿಕವಾಗಿ ಎಂದೆಂದಿಗೂ ತುಂಬಾ ಅನ್ಯೋನ್ಯವಾಗಿರುವಂತಹ ಪ್ರದೇಶಗಳಾಗಿದ್ದವು ಎಂಬುದನ್ನು ಗಮನಿಸಬಹುದು. ತರ್ದವಾಡಿ ನಾಡಿನಲ್ಲಿರುವ ಕಾರ್ಜೋಳ, ನರಸಲಗಿ, ಕಾಖಂಡಕಿ ಮತ್ತು ರೂಗಿ ಗ್ರಾಮಗಳಲ್ಲಿ ಸಿಕ್ಕಿರುವ ಶಾಸನಗಳಲ್ಲಿ ತೈಲಪನ ಆಳ್ವಿಕೆ ಕುರಿತು ಮಾಹಿತಿಗಳಿರುವುದನ್ನು ಪ್ರಕಟಿಸಲಾಗಿದೆ[೪೧]. ಅಲ್ಲದೇ ಆ ಮೊದಲು ರಾಷ್ಟ್ರಕೂಟ ಅರಸರ ಸಾಮಂತನಾಗಿದ್ದು ನಂತರ ವರ್ಷಗಳಲ್ಲಿ ತಾನೊಬ್ಬ ಸ್ವತಂತ್ರ ಸಾಮ್ರಾಟ ಪದವಿ ಪಡೆದಿರುವ ಬಗೆಗೆ ಈ ಪ್ರದೇಶದಲ್ಲಿರುವ ಶಾಸನಗಳು ಹೆಚ್ಚಿನ ಅಧಿಕೃತ ಮಾಹಿತಿ ನೀಡುವಲ್ಲಿ ಸಫಲವಾಗುತ್ತವೆ. ಆದರೆ ತೈಲಪನ ನಂತರ ಆಳ್ವಿಕೆ ಮಾಡಿದ ಸತ್ಯಾಶ್ರಯ, ದಸವರ್ಮ, ಐದನೆಯ ವಿಕ್ರಮಾದಿತ್ಯ ಹಾಗೂ ಅಯ್ಯಣ ಅರಸರ ಕುರಿತಿರುವ ಯಾವುದೇ ಮಾಹಿತಿಗಳು ಕಂಡುಬರುವುದಿಲ್ಲ. ಅಲ್ಲದೇ ಯಾದಗಿರಿ ಜಿಲ್ಲಾ ಪ್ರದೇಶವು ಸಹ ಇದರಿಂದ ಹೊರತಾಗಿರಲಿಲ್ಲವೆಂದೇ ಅಭಿಪ್ರಾಯಿಸಬಹುದು.

ಕ್ರಿ.ಶ.೯೭೩ರಲ್ಲಿಯೇ ಈ ಮನೆತನವು ತನ್ನ ಆಡಳಿತದ ಶುಭಾರಂಭ ಮಾಡಿದ್ದರೂ ಈ ಪರಿಸರದಲ್ಲಿ ಆ ಅರಸರಿಗೆ ಸಂಬಂಧಿಸಿದ ಶಾಸನ ಕುರುಹುಗಳು ಮಾತ್ರ ಹೆಚ್ಚಾಗಿ ಕಂಡುಬರುವುದು ಜಗದೇಕಮಲ್ಲ ಬಿರುದಾಂಕಿತ ಎರಡನೆಯ ಜಯಸಿಂಹನ(೧೦೧೫-೧೦೪೪) ಕಾಲದಿಂದಲೇ ಎಂಬುದು ಮುಖ್ಯ. ಈಗಾಗಲೇ ಪ್ರಕಟಗೊಂಡಿರುವ ಶಾಸನಗಳ ಮಾಹಿತಿ ಅನ್ವಯ ಹೇಳಬಹುದಾದ ಸಂಗತಿ ಏನೆಂದರೆ ಕ್ರಿ.ಶ.೧೦೧೪ರ ತೇದಿವುಳ್ಳ ಶಾಸನವು ಸುರಪುರ ತಾಲೂಕಿನ ಮಲ್ಲಾ ಬಿ ಗ್ರಾಮದಲ್ಲಿ ಇದ್ದಿರುವ ಬಗೆಗೆ ವರದಿಗಳು ಪ್ರಕಟಗೊಂಡಿವೆ[೪೨]. ಆದರೆ ಅದರಲ್ಲಿರುವ ಅರಸನ ಹೆಸರು ತ್ರುಟಿತಗೊಂಡಿರುವುದರಿಂದ ಖಚಿತವಾಗಿ ಯಾರದ್ದು ಎಂದು ತಿಳಿದು ಬರುವುದಿಲ್ಲವೆಂದು ಅಭಿಪ್ರಾಯಿಸಲಾಗಿದೆ. ಆದರೂ ಅದರಲ್ಲಿ ನಮೂದಿತವಾಗಿರುವ ಕಾಲಮಾನದ ಹಿನ್ನೆಲೆಯಲ್ಲಿ ಇದು ಕ್ರಿ.ಶ.೧೦೧೪ಕ್ಕೆ ಸಂಬಂಧಿಸಿದ್ದೆಂದು ತಿಳಿಯಬಹುದೆಂದು ವಿವರಿಸಲಾಗಿದೆ. ಹಾಗಾಗಿ ಈ ಜಿಲ್ಲೆಗೆ ಸಂಬಂಧಿಸಿದ ಹಾಗೂ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ವಿವರಿಸಬಹುದಾದ ಮೊದಲ ಆಕರ ಇದೇ ಆಗಿದೆಯೆಂದು ತಿಳಿಯಬಹುದು.

ಕ್ರಿ.ಶ.೧೦೧೭ರ ತಿಂಥಣಿ ಶಾಸನವು ಎರಡನೆ ಜಯಸಿಂಹ ಹಾಗೂ ಅಲ್ಲಿದ್ದ ಅಗ್ರಹಾರದ ಕುರಿತು ಮಾಹಿತಿ ನೀಡುತ್ತದೆ[೪೩]. ಇದು ತಾಮ್ರಪಟ ಶಾಸನವಾಗಿದೆ. ನಾಗರಿಲಿಪಿ ಹೊಂದಿದ ಸಂಸ್ಕೃತ ಭಾಷೆಯಲ್ಲಿದೆ. ಇದರಲ್ಲಿ ಜಯಸಿಂಹನ ಕುರಿತು ಅತಿಶಯವೆನ್ನುವಷ್ಟು ಹೊಗಳಿಕೆಯ ಮಾತುಗಳಿವೆ. ಕ್ರಿ.ಶ.೧೦೧೮ರ ಹೆಮ್ಮಡಗಿ ಶಾಸನವು ಸಹ ಜಗದೇಕ ಮಲ್ಲನ ಕುರಿತು

ವಿವರಗಳನ್ನು ನೀಡುತ್ತದೆ[೪೪]. ಏವೂರಿನ ಶಾಸನಗಳಲ್ಲಿ ಮೂರು ಶಾಸನಗಳು ಜಗದೇಕಮಲ್ಲನ ಕಾಲದವು. ಅವು ಆತನ ಪ್ರಮುಖ ಮಹಾಮಂಡಳೇಶ್ವರನಾಗಿದ್ದ ಹೈಹಯ ರೇವರಸನ ಕುರಿತು ಮಾಹಿತಿ ನೀಡುತ್ತವೆ[೪೫]. ಅಲ್ಲದೇ ಎರಡನೆಯ ಜಯಸಿಂಹನು ಪೊಟ್ಟಲಕೆರೆ ನೆಲೆವೀಡಿನಿಂದ ಆಳುತ್ತಿದ್ದನೆಂಬ ಮಾಹಿತಿಗಳು ದಾಖಲಿಸಿವೆ. ಕಚಕನೂರಿನ ಶಾಸನವು ಕ್ರಿ.ಶ.೧೦೫೫ರ ತೇದಿ ಹೊಂದಿರುವಂಥದ್ದು. ಅದರಲ್ಲಿ ನಮೂದಿತವಾಗಿರುವ ವಿಷಯದನ್ವಯ ಅದು ಈತನ ಆಡಳಿತಕ್ಕೆ ಸಂಬಂಧಿಸಿದ ಇತರೆ ಮಾಹಿತಿಗಳನ್ನು ಉಲ್ಲೇಖಿಸುತ್ತದೆ ಎಂಬುದನ್ನು ಗಮನಿಸಬಹುದು. ಅಲ್ಲದೇ. ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾಗಿದ್ದ ಹೈಹಯ ಮಹಾಮಂಡಳೇಶ್ವರರ ಬಗೆಗೂ ಸಹ ಈ ಶಾಸನಗಳು ಮಾಹಿತಿ ನೀಡುತ್ತವೆ.[೪೬]

ಶಹಾಪುರ ತಾಲೂಕಿನ ದೋರನಹಳ್ಳಿ, ಮದ್ರಕಿ, ಮುಡಬೋಳ, ಭೀಮರಾಯನ ಗುಡಿ ಹಾಗೂ ಅಣಬಿ ಗ್ರಾಮಗಳಲ್ಲಿ ಎರಡನೆಯ ಜಯಸಿಂಹನ ಕಾಲಕ್ಕೆ ಸಂಬಂಧಿಸಿದ ಶಾಸನಗಳು ಕಂಡುಬಂದಿವೆ. ಕ್ರಿ.ಶ.೧೦೧೭ರ ದೋರನಹಳ್ಳಿ ಶಾಸನವು ನೀಲಶಿವಭಟ್ಟಾರಕರಿಗೆ ಸಗರನಾಡಿಗೆ ಸೇರಿದ ದೋರಹಳ್ಳಿಯ ಹತ್ತು ಮತ್ತರ ಭೂಮಿಯ ಮನ್ನೆಯವನ್ನು ಚಟ್ಟರಸನು ದಾನಕೊಟ್ಟ ವಿಷಯವನ್ನು ದಾಖಲಿಸುತ್ತದೆ. ಅಲ್ಲದೇ ಕಾಸಿಗ ದುಗ್ಗೋಜನ ಮಗ ಓಜನಿಗೆ ದಾನ ನೀಡಿರುವ ಉಲ್ಲೇಖವು ಇದರಲ್ಲಿದೆ[೪೭]. ಈ ಶಾಸನದಲ್ಲಿಯೂ ಅರಸ ಜಗದೇಕಮಲ್ಲ ಪೊಟ್ಟಕೆರೆ ನೆಲೆವೀಡಿನಿಂದಲೇ ಆಳುತ್ತಿದ್ದನೆಂಬ ಮಾಹಿತಿ ದಾಖಲಾಗಿದೆ. ಕ್ರಿ.ಶ.೧೦೬೭ರ ತೇದಿಯ ಮುಡಬೋಳ ಶಾಸನವು ಮಹಾಮಂಡಳೇಶ್ವರ ಚಣ್ಡರಸನು ಸಿದ್ದೇಶ್ವರ ದೇವರಿಗೆ ನೀಡಿದ ದಾನಗಳನ್ನಲ್ಲದೇ ನೆರೆಯ ಸಿರಿವೊಳಲು(ಸಿರಿವಾಳ) ಅಲ್ಮೇಶ್ವರ ಮಠದ ಶಾಖೆಯೊಂದು ಇಲ್ಲಿದ್ದ ಅಂಶವನ್ನು ತಿಳಿಸುತ್ತದೆಯೆಂದು ವಿವರಿಸಲಾಗಿದೆ[೪೮].

ಅಣಬಿ ಶಾಸನವು ಕ್ರಿ.ಶ.೧೦೩೪ರ ಕಾಲಮಾನದ್ದು. ಅದು ಅಗ್ರಹಾರ ಆಳಂಬೆಯ ಮಲ್ಲಿಕಾರ್ಜುನ ದೇವರಿಗೆ ಮಧುಸೂದನಯ್ಯ ನಾಯಕರು ದಾನಬಿಟ್ಟ ಬಗೆಗೆ ಮಾಹಿತಿ ನೀಡುತ್ತದೆ. ಈ ಶಾಸನದಲ್ಲಿಯೂ ಸಹ ಅರಸ ಜಗದೇಕಮಲ್ಲನು ಪೊಟ್ಟಲಕೆರೆ ನೆಲವೀಡಿನಿಂದ ಸುಖಸಂಕಥಾ ವಿನೋದದಿಂದ ಆಳುತ್ತಿದ್ದನೆಂಬ ವಿವರಗಳಿವೆ[೪೯]. ಜಗದೇಕಮಲ್ಲ ಎರಡನೆಯ ಜಯಸಿಂಹನಿಗೆ ಸಂಬಂಧಿಸಿದಂತೆ ಈ ತಾಲೂಕಿನಲ್ಲಿ ಕಂಡುಬಂದಿರುವ ಆ ಕಾಲದ ಶಾಸನಗಳಲ್ಲಿ ಮದ್ರಕಿಯಲ್ಲಿ ದೊರಕಿರುವ ಶಾಸನವು ತುಂಬಾ ಉಪಯುಕ್ತ ಮಾಹಿತಿ ನೀಡುತ್ತದೆ ಕ್ರಿ.ಶ.೧೦೨೮ರ ತೇದಿಯ ಈ ಶಾಸನವು ಅಗ್ರಹಾರ ಮೆಲ್ದರಿಕೆಯಲ್ಲಿ ನಿರ್ಮಿಸಿದ ಧರ್ಮದ ಬಾವಿಗೆಂದು ಮಹಾಮಂಡಳೇಶ್ವ ರೇವರಸರು ಅಲ್ಲಿಯ ಐದುನೂರು ಮಹಾಜನರ ಸಮ್ಮುಖದಲ್ಲಿ ಮೂವತ್ತು ಮತ್ತರ ಭೂಮಿ ಹಾಗೂ ನಿವೇಶನವನ್ನು ನೀಡಿರುವ ಬಗೆಗೆ ವಿವರಗಳು ದಾಖಲಾಗಿವೆ[೫೦]. ಅಲ್ಲದೇ ಇನ್ನೊಂದು ಮುಖ್ಯವಾದ ಸಂಗತಿ ಏನೆಂದರೆ ಏತಗಿರಿ ನೆಲವೀಡಿನೊಳ್ ಎಂಬ ಉಲ್ಲೇಖವು ಅಧ್ಯಯನಾಸ್ತಕರನ್ನು ಕೆರಳಿಸುತ್ತದೆ. ಕಾರಣ ಅವನ ಕಾಲದ ಹೆಚ್ಚಿನ ಸಂಖ್ಯೆಯ ಶಾಸನಗಳು

ಅವನು ಪೊಟ್ಟಳಕೆರೆಯಿಂದ ರಾಜ್ಯವಾಳುತ್ತಿದ್ದನೆಂದು ವಿವರಿಸಿದರೆ ಈ ಶಾಸನವು ಏತಗಿರಿ ಪಟ್ಟಣದಿಂದ ಎಂದು ಉಲ್ಲೇಖಿಸುತ್ತದೆ. ಬಹುಶಃ ಆತನ ಸಂದರ್ಭದಲ್ಲಿಯೇ ಏತಗಿರಿ ಅಥವಾ ಯಾದಗಿರಿ ಪಟ್ಟಣವು ರಾಜಧಾನಿ ಮಟ್ಟಕ್ಕೆ ಮೇಲ್ದರ್ಜೆಗೇರಿರಬಹುದೆಂದು ಅಭಿಪ್ರಾಯಿಸಬಹುದು. ಈ ನೆಲವೀಡುಗಳು ಅವರ ರಾಜಧಾನಿ ಪಟ್ಟಣಗಳಾಗಿದ್ದವು ಎಂಬ ಅಭಿಪ್ರಾಯಗಳನ್ನು ಕೆಲವು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಆ ಕಾಲದ ಬಾವಿಯೂ ಸಹ ಈ ಗ್ರಾಮದ ಸರಹದ್ದಿನಲ್ಲಿಯೇ ಇಂದಿಗೂ ಕಂಡುಬರುತ್ತದೆ. ಅದನ್ನು ಧರ್ಮೇತಿ ಅಥವಾ ಪಟೇಲ ಅವರ ಜಮೀನನಲ್ಲಿರುವ ಬಾವಿಯೆಂದು ಸ್ಥಳೀಯರು ಸಂಬೋಧಿಸುತ್ತಾರೆ. ಕ್ರಿ.ಶ. ೧೦೫೧ರ ತೇದಿಯ ಭೀಮರಾಯನ ಗುಡಿ ಶಾಸನವು ಸಹ ಇದೇ ಅರಸನ ಕುರಿತು ಉಲ್ಲೇಖಿಸುತ್ತದೆ. ಅವನ ಪ್ರಸಿದ್ಧ ಮಹಾಮಂಡಳೇಶ್ವರರಾಗಿದ್ದ ಹೈಹಯರ ಬಗೆಗೆ ಇದರಲ್ಲಿ ಉಲ್ಲೇಖಗಳಿವೆ[೫೧].

ಯಾದಗಿರಿ ತಾಲೂಕಿನಲ್ಲಿ ಕೆಲವು ಶಾಸನಗಳು ಈ ಅರಸನ ಕಾಲಕ್ಕೆ ಸಂಬಂಧಿಸಿದಂತೆ ಪ್ರಕಟಗೊಂಡಿವೆ. ನಂದಿ ಬೆಳಗುಂದಿ ಅಥವಾ ಬೆಳಗುಂದಿ ಶಾಸನ ತುಂಬಾ ಮುಖ್ಯವಾದುದೆಂದು ಹೇಳಬಹುದು[೫೨]. ಇದ ಸಹು ಎರಡನೆಯ ಜಯಸಿಂಹನು ಪೊಟ್ಟಲಕೆರೆಯಿಂದ ರಾಜ್ಯವಾಳುತ್ತಿದ್ದನು ಎಂಬ ಮಾಹಿತಿ ನೀಡುತ್ತದೆ. ಆ ಸಮಯದಲ್ಲಿ ಮಹಾಸಾಮಂತ ಚಟ್ಟರಸರು ಮತ್ತು ಮಹಾಸಾಮಂತ ಬರ್ಮರಸರು ಭೀಮರತಿಯಲ್ಲಿ ಸ್ನಾನಮಾಡಿ ಬ್ರಹ್ಮೇಶ್ವರ ದೇವರಿಗೆ ಅಲ್ಲಿನ ತಪೋಧನರಿಗೆ ವಿದ್ಯಾರ್ಥಿಗಳಿಗೆ ಗೌತಮ ಪಂಡಿತರ ಕಾಲ್ತೊಳೆದು ದತ್ತಿ ಬಿಟ್ಟಿರುವ ಉಲ್ಲೇಖವನ್ನು ನೀಡುತ್ತದೆ. ಇದರ ಕಾಲ ಕ್ರಿ.ಶ.೧೦೪೦ ಎಂದು ಅಂದಾಜಿಸಲಾಗಿದೆ.

ಕ್ರಿ.ಶ.೧೦೧೮ರ ಹೆಮ್ಮಡಗಿ(ಸುರಪುರ ತಾಲೂಕು) ಹಾಗೂ ಕ್ರಿ.ಶ.೧೦೧೭ರ ದೋರನಹಳ್ಳಿ(ಶಹಾಪುರ ತಾಲೂಕು) ಶಾಸನಗಳು ಇದೇ ಅರಸನ ಕಾಲಕ್ಕೆ ಸಂಬಂಧಿಸಿದವುಗಳು. ಕ್ರಿ.ಶ.೧೦೨೮ರ ಕಾಲಮಾನದ ಮದ್ರಕಿ(ಶಹಾಪುರ ತಾಲೂಕು) ಶಾಸನವು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಕಲ್ಯಾಣದ ಚಾಲುಕ್ಯರ ಅವಧಿಯ ಇತಿಹಾಸ ಅರಿಯುವಲ್ಲಿ ತುಂಬಾ ಮಹತ್ವದ ಆಕರವಾಗಿ ಪರಿಗಣಿಸಲ್ಪಡುತ್ತದೆ. ಕಾರಣ ಜಗದೇಕಮಲ್ಲನು 'ಏತಗಿರಿ'(ಯಾದಗಿರಿ) ನೆಲೆವೀಡಿನಿಂದ ರಾಜ್ಯವಾಳುತ್ತಿದ್ದನು ಎಂಬ ಮಾಹಿತಿಗಳು ದಾಖಲಾಗಿವೆ. ಇಂಥ ಹಲವು ನೆಲವೀಡುಗಳು ಕಲ್ಯಾಣದ ಚಾಲುಕ್ಯ ಅರಸರ ಕಾಲದಲ್ಲಿದ್ದವು ಎಂಬ ವಿವರಗಳು ಹಲವು ಶಾಸನಗಳಲ್ಲಿ ಉಲ್ಲೇಖವಾಗಿವೆ. ಉದಾ. ಪೊಟ್ಟಳಕೆರೆ (ತೆಲಂಗಾಣ ರಾಜ್ಯ) ಜಯಂತಿಪುರ ಅಥವಾ ಕಲ್ಯಾಣ (ಬಸವ ಕಲ್ಯಾಣ ತಾಲೂಕು), ಕಂಪಿಲೆ, ಸೆಲದಹಳ್ಳಿ ನೆಲವೀಡು ಮತ್ತು ಭೀಮರತಿಯ ತೀರದ ಕುಪ್ಪದಲು, ಗೋವಿಂದವಾಡಿ ನೆಲವೀಡಿನೋಳ್ ಹಾಗೂ ನಡವಿಯಪ್ಪಯಣ ವೀಡಿನೊಳ ಎಂಬ ವಿವರಗಳು ಹಲವು ಶಾಸನಗಳಲ್ಲಿ ದಾಖಲಾಗಿವೆ. ಇಂಥ ನೆಲವೀಡುಗಳ ಬಗೆಗೆ ವಿದ್ವಾಂಸರಲ್ಲಿ ಭಿನ್ನ ಬಗೆಯ ಅಭಿಪ್ರಾಯಗಳುಂಟು.

ನೆಲೆವೀಡುಗಳು ಅವರ ತಾತ್ಕಾಲಿಕ ರಾಜಧಾನಿಗಳಾಗಿದ್ದವು ಎಂಬ ವಿವರವನ್ನು ಕೆಲವು ವಿದ್ವಾಂಸರು ದಾಖಲಿಸಿದ್ದಾರೆ(ಡಾ.ಪಿ.ಬಿ.ದೇಸಾಯಿ ಅವರು ಇಂಥ ಅಭಿಪ್ರಾಯಗಳನ್ನು ಹೊಂದಿದ್ದರು). ಆದರೆ ಅಂಥ ಅನಿಸಿಕೆಗಳು ತಪುïŒಗ್ರಹಿಕೆಯಿಂದ ಕೂಡಿದವುಗಳೆಂಬ ಅಭಿಪ್ರಾಯಗಳು ಸಹ ಪ್ರಕಟಗೊಂಡಿವೆ. ಘಟನೆಗಳು ಜರುಗಿದಾಗ ಚಕ್ರವರ್ತಿಯು ಯಾವ ಊರಿನಲ್ಲಿ ಇದ್ದನೆಂಬುದನ್ನು ಮಾತ್ರ ಅವು ಸೂಚಿಸುತ್ತಿರಬೇಕು. ಅಂದರೆ ಆತನ ಪ್ರಯಾಣ ಪ್ರಸಂಗದಲ್ಲಿ ಒಂದು ದಿನವೋ ಹಲವು ದಿನವೋ ನೆಲೆನಿಂತ ಊರುಗಳಿವು. ಈ ಪದವು ಆಡಳಿತ ದೃಷ್ಟಿಯ ಗೌರವವಾಚಿ ಪ್ರಯೋಗವೆಂದು ಭಾವಿಸಬೇಕಾಗುತ್ತದೆ[೩೩]. ಎಂಬ ಅಭಿಪ್ರಾಯಗಳನ್ನು ದಾಖಲಿಸಲಾಗಿದೆ. ಇಂಥ ಅಭಿಪ್ರಾಯಗಳೇ ಸರಿಯಾದುವೆಂದು ಕೆಲವು ಸಂಶೋಧಕರು ಒಪ್ಪಿಕೊಂಡಿದ್ದಾರೆ[೩೪]. ಒಂದಂತ ಇಂಥ ವಿವರಗಳನ್ನು ಒಪ್ಪಬಹುದಾದರೂ ಅವು ರಾಜಧಾನಿಯ ಘನತೆ ಗೌರವಗಳನ್ನು ಪಡೆದಿರಲಾರವು ಎಂಬ ಸರಳವಾದ ಹೇಳಿಕೆಯನ್ನು ಅಷ್ಟು ಸಹಜವಾಗಿ ಒಪ್ಪಲಾಗದು. ಕಾರಣ ಮುಖ್ಯ ರಾಜರುಗಳು ತಮ್ಮ ಮೂಲ ಅಥವಾ ಪ್ರಮುಖ ಪಟ್ಟಣ ರಾಜಧಾನಿಯಿಂದ ಹಲವು ಕಾರಣಗಳಿಗಾಗಿ ಸ್ಥಳ ಪಲ್ಲಟಗೊಂಡಾಗ ಅಥವಾ ಹೊರದೂಡಲ್ಪಟ್ಟಾಗ ಇಂಥ ನೆಲವೀಡುಗಳನ್ನು ತಾತ್ಕಾಲಿಕ ರಾಜಧಾನಿಯಾಗಿ ಪರಿವರ್ತಸಿಕೊಂಡು ಆಳ್ವಿಕೆ ಮಾಡಿರುವ ಉಲ್ಲೇಖಗಳುಂಟು. ಚೋಳರ ಅತಿಕ್ರಮಣದಿಂದ ಕೆಂಗೆಟ್ಟ ಚಾಲುಕ್ಯ ಅರಸರು ಕಲ್ಯಾಣದಿಂದ ಹೊರದೂಡಲ್ಪಟ್ಟಾಗ ಏತಗಿರಿಯ(ಯಾದಗಿರಿ)ನ್ನು ಸ್ವಲ್ಪ ಕಾಲ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು ಎಂಬ ಸಂಗತಿಗಳು ಇತಿಹಾಸದಲ್ಲಿ ದಟ್ಟವಾಗಿ ದಾಖಲಾಗಿರುವುದನ್ನು ಗಮನಿಸಬಹುದು. ಬಹುಶಃ ಇಂಥ ಘಟನೆ ಎರಡನೆಯ ಜಯಸಿಂಹನ ಕಾಲದಲ್ಲಾಗಿರಬಹುದು. ಅಲ್ಲದೇ ಪ್ರಾರಂಭದಲ್ಲಿ ಕಲ್ಯಾಣವು ಸಹ ಒಂದು ನೆಲವೀಡೆ ಆಗಿತ್ತು. ಅದು ಒಂದನೆಯ ಸೋಮೇಶ್ವರನ ಕಾಲದಲ್ಲಿ ರಾಜಧಾನಿಯ ಸ್ಥಾನಮಾನ ಪಡೆದು ಹೆಚ್ಚಿನ ಪ್ರಸಿದ್ಧಿಗೆ ಬಂದಿತು. ಅಲ್ಲದೇ ಆಡಳಿತದ ಅನುಕೂಲಕ್ಕಾಗಿಯೇ ಇಂಥ ತಾತ್ಕಾಲಿಕ ರಾಜಧಾನಿಗಳನ್ನು ಮಾಡಿಕೊಂಡಿರುವ ಸಾಧ್ಯತೆಗಳುಂಟು. ಆದರೆ ಈ ನೆಲೆವೀಡುಗಳು ಮುಖ್ಯ ರಾಜಧಾನಿಯನ್ನು ಮೀರಿಸುವಷ್ಟು ಪ್ರಸಿದ್ಧಿ ಹಾಗೂ ಪ್ರಾಮುಖ್ಯತೆಯನ್ನು ಪಡೆಯದಿದ್ದರೂ ಅವು ಉಪರಾಜಧಾನಿ ಪಾತ್ರವಂಥೂ ವಹಿಸಿರುವುದನ್ನು ಅಲ್ಲಗಳೆಯಲಾಗದು.

ಐದನೆಯ ವಿಕ್ರಮಾದಿತ್ಯನ ತರುವಾಯ ಆತನ ಮಗ ಇಮ್ಮಡಿ ಜಯಸಿಂಹ ಕ್ರಿ.ಶ.೧೦೧೮ಕ್ಕೆ ಪಟ್ಟಕ್ಕೆ ಬಂದನು. ಈತನಿಗೆ ಮೂರು ಜನ ಹೆಂಡತಿಯರಿರುವ ಬಗೆಗೆ ದಾಖಲೆಗಳುಂಟು. ಅವರಲ್ಲಿ ಅರಸಿ ಸುಗ್ಗಲೆ ಕೂಡಾ ಒಬ್ಬಳು. ವಚನಕಾರ ದೇವರೂ ದಾಸಿಮಯ್ಯನ ಶಿಷ್ಯೆಯಾಗಿದ್ದ ಅವಳಿಗೆ ದೇವಿಯೆಂಬ ಮಗಳಿದ್ದಳು. ಅವಳನ್ನು ಸೇವುಣ ದೇಶವರಸು ಮುಮ್ಮಡಿ ಭಿಲ್ಲವನಿಗೆ ಕೊಟ್ಟು ಮದುವೆ ಮಾಡಲಾಗಿತ್ತು ಎಂಬ ಪ್ರತೀತಿ ಇದೆ. ಈತನ ಕಾಲದ ಶಾಸನಗಳು ಜಿಲ್ಲೆಯ ಮಲ್ಲಾ ಬಿ, ಹೆಮ್ಮಡಗಿ, ಏವೂರು, ಮದ್ದರಕಿ, ದೋರನಹಳ್ಳಿ, ಅಣಬಿ, ಭೀಮರಾಯನ

ಗುಡಿ, ಬೆಳಗುಂದಿ ಹಾಗೂ ಕಚಕನೂರಿನಲ್ಲಿ ಕಂಡುಬಂದಿವೆ. ಆ ವಿವರಗಳನ್ನು ಈಗಾಗಲೇ ವಿವರಿಸಲಾಗಿದೆ. ಆದರೆ ಆತನ ರಾಣಿಯಾಗಿದ್ದ ಸುಗ್ಗಲೆ ಹಾಗೂ ಅವಳ ಗುರುವಾಗಿದ್ದ ದಾಸಿಮಯ್ಯನ ಕುರಿತು ಅವುಗಳಲ್ಲಿ ಯಾವ ಉಲ್ಲೇಖವಿಲ್ಲ. ಹಾಗಾಗಿ ಈ ಕುರಿತು ವಿದ್ವಾಂಸ ವಲಯದಲ್ಲಿ ಹಲವು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ದಾಸಿಮಯ್ಯ ಎಂಬ ಹೆಸರಿನ ವ್ಯಕ್ತಿಗಳು ಇಬ್ಬರಿದ್ದರೆಂದೂ ಅಥವಾ ಅವರಿಬ್ಬರೆ ಒಬ್ಬರೇ ಎಂಬ ಅಭಿಪ್ರಾಯ ಭೇದಗಳಿವೆ.

ಸುರಪುರ ತಾಲೂಕಿನ ಮುದನೂರಿನಲ್ಲಿದ್ದ ವಚನಕಾರ ಜೇಡರ ದಾಸಿಮಯ್ಯ ಹಾಗೂ ದೇವರ ದಾಸಿಮಯ್ಯ ಇಬ್ಬರು ಒಬ್ಬರೆ ಎಂಬ ಅಭಿಪ್ರಾಯಗಳು ಹೆಚ್ಚು ಪ್ರಚಲಿತದಲ್ಲಿವೆ. ಆದರೆ ಅವರಿಬ್ಬರೂ ಬೇರೆ ಬೇರೆ ಕಾಲ ಸಂದರ್ಭದಲ್ಲಿ ಇದ್ದವರು ಎಂಬ ಭಿನ್ನಮತಗಳೂ ಇವೆ. ದೇವರ ದಾಸಿಮಯ್ಯ ಸಿಂದಗಿ ತಾಲೂಕಿನ ದೇವೂರು ಗ್ರಾಮದವನು(ಹಿಪ್ಪರಗಿ ಗ್ರಾಮದ ಹತ್ತಿರ ಇರುವ ಗ್ರಾಮ). ಅವನು ಎರಡನೆಯ ಜಯಸಿಂಹನ ಹೆಂಡತಿ ಸುಗ್ಗಲೆ ಗುರುವಾಗಿದ್ದ. ಈತನು ಗುಡಿಯ(ದೇವರ) ಅರ್ಚಕನಾಗಿದ್ದನು. ಇವನು ಘಟಸರ್ಪ ಪವಾಡ ಮೆರೆದವ. ರಾಣಿ ಸುಗ್ಗಲೆಯ ಮೂಲಕ ಜಯಸಿಂಹನನ್ನು ಪ್ರಭಾವಿಸಿ ಅವನಿಗೆ ಶೈವ ದೀಕ್ಷೆ ನೀಡಿದನೆಂಬ ಪ್ರತೀತಗಳಿವೆ. ಅಲ್ಲದೇ ಅವನ ಮತಾಂತರ ದೀಕ್ಷೆಗೆ ಒಳಗಾದ ಜಯಸಿಂಹನು ಏಳನೂರು ಬಸದಿಗಳನ್ನು ಭಗ್ನಗೊಳಿಸಿ ತನಗೆ ಇಷ್ಟವಾದ ಲಿಂಗಗಳನ್ನು ಪ್ರತಿಷಾ«ಪಿಸಿದನೆಂಬ ಅಭಿಪ್ರಾಯಗಳಿವೆ. ಆದರೆ ಇಂಥ ಅನಿಸಿಕೆಗಳಿಗೆ ಪುರಾಣಗಳೇ ಮುಖ್ಯ ಆಧಾರಗಳಾಗಿವೆ. ಶಾಸನ ಅಥವಾ ಆ ಕಾಲದಲ್ಲಿದ್ದ ನಂಬಿಕೆಗೆ ಅರ್ಹವಾದ ಯಾವುದೇ ದಾಖಲೆಯಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಲಾಗಿಲ್ಲ. ಅವನೊಬ್ಬ ವಚನಕಾರ ಎಂಬುದೇ ಸಂದೇಹವುಳ್ಳ ವಿಷಯ. ಈತನು ವಚನಕಾರ ಜೇಡರ ದಾಸಿಮಯ್ಯನಿಗಿಂತ ನೂರ ವರ್ಷಗಳ ಕಾಲ ಮೊದಲೇ ಇದ್ದವನು ಎಂದು ಹೇಳಲಾಗುತ್ತದೆ. ಆದರೆ ಜೇಡರ ದಾಸಿಮಯ್ಯನು ಬಸವಣ್ಣನವರ ಸಮಕಾಲೀನ. ತವನಿಧಿ ಪವಾಡ ಮೆರೆದವ. ಹಾಗಾಗಿ ಇವರಿಬ್ಬರು ಬೇರೆ ಬೇರೆಯಾಗಿದ್ದು ಹಾಗೂ ಬೇರೆ ಬೇರೆ ಕಾಲಮಾನದಲ್ಲಿ ಬದುಕಿದ್ದರೆಂಬ ಅನಿಸಿಕೆಗಳನ್ನು ವ್ಯಕ್ತಪಡಿಸಲಾಗಿದೆ. ಆದರೆ ಅವರಿಬ್ಬರ ಆರಾಧ್ಯ ದೈವ ಮಾತ್ರ 'ರಾಮನಾಥ' ಎಂಬ ಅಭಿಪ್ರಾಯಗಳಿವೆ[೫೫]. ಆದರೆ ಗೊಂದಲದಿಂದ ಕೂಡಿದ ಇಂಥ ಅನಿಸಿಕೆಗಳನ್ನು ಖಂಡತುಂಡಾಗಿ ನಿರಾಕರಿಸುವ ಹಾಗೂ ಒಪ್ಪಬಹುದಾದ ಆಕರಗಳು ಇದುವರೆಗೆ ಲಭ್ಯವಿಲ್ಲವೆಂದೇ ಅಭಿಪ್ರಾಯಿಸಬಹುದು. ಆದರೆ ಪ್ರಸ್ತುತ ಅಧ್ಯಯನಕ್ಕೆ ಅನ್ವಯಿಸಿಕೊಂಡು ವಿವರಿಸುವುದಾದರೆ ಮಾದನೂರಿನಲ್ಲಿ ಮಾತ್ರ ದಾಸಿಮಯ್ಯ ಸ್ತುತಿಸಿದ ರಾಮನಾಥನ ಗುಡಿ ಈವರೆಗೂ ಕಂಡುಬರುತ್ತದೆ. ಅಲ್ಲದೇ ಆ ಗ್ರಾಮದಲ್ಲಿರುವ ಎರಡು ಶಿಲ್ಪಗಳು ದಾಸಿಮಯ್ಯ ದಂಪತಿಗಳಿಗೆ ಸಂಬಂಧಿಸಿದವುಗಳೆಂದು ಹೇಳುವ ಸ್ಥಳೀಯ ಅಭಿಪ್ರಾಯಗಳಿವೆ. ಇದೇ ದೇವಾಲಯದ ಕಂಬಗಳಲ್ಲಿರುವ ಉಬ್ಬುಶಿಲ್ಪಗಳು ಅವರವು ಎಂದು ಹೇಳಲಾಗುತ್ತದೆ. ಆದರೆ ಈ ವಿವರಗಳು ಸಹ ಒಪ್ಪು1Eವಂಥವುಗಳಲ್ಲ. ಗ್ರಾಮದಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ಸಹ ಅವರ ಬಗೆಗೆ ಸ್ಪಷ್ಟ ವಿವರಗಳೇನಿಲ್ಲ.

ರಾಯಚೂರು ಜಿಲ್ಲೆಯ ಗೊಬ್ಬೂರು ಗ್ರಾಮದ ಶಾಸನವೊಂದರಲ್ಲಿ ಮಹಾಜನಗಳ ಪಾದಾರಾಧಕರಾಗಿದ್ದ ಸೋಮೇಶ್ವರ ದೇವರ ಭಕ್ತರಾದ ಜೇಡಕುಳ ತಿಲಕ ಜೇಡರ ದಾಸಿಮಯ್ಯನ ಪ್ರಿಯಪುತ್ರ ವಂಶದವರಾದ ಶ್ರೀ ಸಕಲ ಜೇಡ ಗೊತ್ತಾಳಿಗಳು ಸೇರಿ ತಮ್ಮ ಕುಲದೈವವಾದ ಗೊಜ್ಜೇಶ್ವರ ದೇವರಿಗೆ ದತ್ತಿಗಳನ್ನು ನೀಡಿರುವ ಉಲ್ಲೇಖವುಂಟು[೫೬]. ಹಾಗೆ ವಿಜಯಪುರ ಪಟ್ಟಣದ ವಸ್ತುಸಂಗ್ರಹಾಲಯದಲ್ಲಿರುವ ಶಾಸನವೊಂದರಲ್ಲಿಯೂ ತರ್ದವಾಡಿನಾಡಿನ ಮೂವತ್ತಾರುಂಬಡರ ಕಿರುದಿಂಡಿಯಲ್ಲಿ ದೇಡರ ದಾಸನ ಕುಲದಲ್ಲಿ ಚೀಲಯ್ಯ (ಚೀಲಾಳ್ಯ) ಎಂಬುವನು ಹುಟ್ಟಿದ ಎಂಬ ಉಲ್ಲೇಖವಿದೆ[೫೭]. ಅಲ್ಲದೇ ಹಗರಟಗಿ ಹಾಗೂ ಐವೂರು ಗ್ರಾಮಗಳಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಜೇಡ ಹಟಗಾರರ ಕುರಿತು ಸ್ಪಷ್ಟ ಉಲ್ಲೇಖಗಳಂತೂ ಇವೆ[೫೮]. ವಚನಕಾರ ಜೇಡರ ದಾಸಿಮಯ್ಯನ ಹೆಂಡತಿ ದುಗ್ಗಳೆಯ ತವರೂರು ದೇವದುರ್ಗ ತಾಲೂಕಿನ ಗೊಬ್ಬೂರು ಗ್ರಾಮವಾಗಿತ್ತೆಂಬ ವಿವರಗಳು ಪ್ರಕಟಗೊಂಡಿವೆ. ಇವಳು ಗೊಬ್ಬೂರು ಗ್ರಾಮದ ಮಲನಾಥ ಮಹಾದೇವಿಯರ ಮಗಳು ಎಂಬ ವಿವರಗಳು ಸಹ ಈತಳ ಗಂಡನಾದ ಜೇಡರ ದಾಸಿಮಯ್ಯ ಮುದನೂರಿನಿಂದ ಆಂಧ್ರಪ್ರದೇಶದ ಪೊಟ್ಟಲಕೆರೆಯವರೆಗೆ ಪ್ರಯಾಣ ಮಾಡಿ ಅನೇಕ ಜನರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡ. ಈತನ ಕೀರ್ತಿಯನ್ನು ಕೇಳಿ ಪೊಟ್ಟಲ ಕೆರೆಯ ಅರಸ ಜಯಸಿಂಹನ ರಾಣಿ ಸುಗ್ಗಲೆಯೂ ಈತನಿಂದ ಶಿವದೀಕ್ಷೆಯನ್ನು ಪಡೆದಳು ಎಂಬ ವಿವರಗಳು ದಾಖಲಾಗಿವೆ[೫೯]. ಈತ ವಚನ ಸಾಹಿತ್ಯದ ಪ್ರಥಮ ಶಿಲ್ಪಿ. ಬಸವಣ್ಣ ಮತ್ತು ಸರ್ವಜ್ಞ ಇನ್ನೂ ಅನೇಕ ಶರಣರು ಇವನು ರಚಿಸಿದ ವಚನಗಳಿಂದ ಪ್ರಭಾವಿತರಾಗಿದ್ದಾರೆಂದು ಅಭಿಪ್ರಾಯಿಸಲಾಗಿದೆ. ದಾಸಿಮಯ್ಯನ ಕೀರ್ತಿ ಉತ್ತುಂಗಕ್ಕೇರಿದ ಮೇಲೆ ಅವನ ಹೆಸರಿನ 'ದಾಸಕುಲ' ಎಂಬ ಒಂದು ಹೊಸ ಕುಲ ಆರಂಭವಾಯಿತೆಂಬ ವಿಚಾರಗಳು ತುಂಬಾ ಮುಖ್ಯವಾದುವುಗಳೆನಿಸುತ್ತವೆ. ಇಷ್ಟೆಲ್ಲ ವಿವರಗಳು ಸ್ಪಷ್ಟವಾಗಿ ದಾಖಲಾಗಿದ್ದರೂ ಅವರಿಬ್ಬರೂ ಬೇರೆ ಬೇರೆ ಎಂಬ ವಿಚಾರ ದಾಸಿಮಯ್ಯನ ಕುರಿತಂತೆ ವ್ಯಕ್ತಪಡಿಸಿರುವುದು ಅಷ್ಟು ಒಪ್ಪುವಂಥದ್ದಲ್ಲವೆಂದು ಪರಿಭಾವಿಸಬಹುದು. ಅವರಿಬ್ಬರೂ ಬೇರೆ ಬೇರೆ ಕಾಲಮಾನದಲ್ಲಿದ್ದವರೇ ಅಥವಾ ಬೇರೆ ಬೇರೆ ವ್ಯಕ್ತಿಗಳಾಗಿದ್ದರೇ ಎಂಬ ಸಂಗತಿಗಳ ಬಗೆಗೆ ನಂಬಲಾರ್ಹ ಆಕರಗಳು ಈ ವರೆಗೂ ಕಂಡುಬಂದಿಲ್ಲ. ಹೀಗಾಗಿ ಇಂಥ ಜಿಜ್ಞಾಸೆಗಳು ಕೇವಲ ಚರ್ಚಾರ್ಹ ವಿಷಯಗಳಾಗಿಯೇ ಉಳಿದುಕೊಳ್ಳುತ್ತವೆಯೆಂದು ಅಭಿಪ್ರಾಯಿಸಬಹುದು. ಇಷ್ಟೊಂದು ವಿವರವಾಗಿ ಈ ವಿಚಾರ ದಾಖಲಿಸಲು ಕಾರಣವೇನೆಂದರೆ ಜೇಡರ ದಾಸಿಮಯ್ಯ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಮುದನೂರಿನವನು ಎಂಬ ಕಾರಣಕ್ಕಾಗಿ ಹಾಗೂ ಈ ವಿವರಗಳು ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲಕ್ಕೆ ಸಂಬಂಧಿಸಿದವುಗಳು ಎಂಬ ಹಿನ್ನೆಲೆಯಿಂದ ಈ ವಿವರ ದಾಖಲಿಸಲಾಗಿದೆ.

ಜಯಸಿಂಹನ ನಂತರ ಅವನ ಮಗ ಒಂದನೆಯ ಸೋಮೇಶ್ವರ ಪಟ್ಟಕ್ಕೆ ಬಂದನು. ಅವನಿಗೆ ಆಹವಮಲ್ಲ ಮತ್ತು ತ್ರೈಲೋಕ್ಯಮಲ್ಲ ಎಂಬ ಬಿರುದುಗಳಿದ್ದವು. ಬಿಲ್ಹಣನ ಪ್ರಕಾರ

ಸೋಮೇಶ್ವರನು ಕಲ್ಯಾಣ ನಗರವನ್ನು ಎಷ್ಟರ ಮಟ್ಟಿಗೆ ಅಲಂಕರಿಸಿದ್ದನೆಂದರೆ ಅಂತಹ ಇನ್ನೊಂದು ನಗರವು ಹಿಂದೆ ಎಂದೂ ಇರಲಿಲ್ಲ. ಮುಂದೆ ಎಂದೂ ಇರುವುದಿಲ್ಲ. ಅಲ್ಲದೇ ಅದು ಆ ಮೊದಲು ಕೇವಲ ನೆಲವೀಡು ಆಗಿತ್ತು. ಆ ನಂತರ ಸಾಮ್ರಾಜ್ಯದ ರಾಜಧಾನಿಯಾಗಿ ರೂಪಗೊಂಡಿದ್ದು ಈತನ ಕಾಲದಲ್ಲಿ ಎಂದು ಅಭಿಪ್ರಾಯಿಸಲಾಗಿದೆ.[೬೦] ಈತನ ಕಾಲಾವಧಿಯಲ್ಲಿ ಚೋಳ ಮತ್ತು ಚಾಳುಕ್ಯರ ಯುದ್ಧಗಳು ಹೆಚ್ಚಿನ ಪ್ರಸಿದ್ದಿಪಡೆದವು. ಹಲವು ಸಲ ಜಯ ಅಪಜಯಗಳನ್ನು ಕಂಡುಂಡ ಒಂದನೆಯ ಸೋಮೇಶ್ವರನಿಗೆ ಉಗ್ರವಾದ ರೋಗವೊಂದು ಬಂದುದರಿಂದ ಕ್ರಿ.ಶ.೧೦೬೮ರಲ್ಲಿ ತುಂಗಭದ್ರೆಯಲ್ಲಿ ಅಕಾಲಿಕವಾಗಿ ಮುಳುಗಿ ಪ್ರಾಣತ್ಯಾಗ ಮಾಡಿದನೆಂಬ ವಿವರಗಳು ದಾಖಲಾಗಿವೆ. ಅಲ್ಲದೇ ಇಂಥ ವಿವರಗಳನ್ನು ಕವಿ ಚರಿತ್ರೆಕಾರ ಬಿಲ್ಹಣ ಕೂಡಾ ತನ್ನ ಗ್ರಂಥದಲ್ಲಿ ದಾಖಲಿಸಿದ್ದಾನೆಂಬ ವಿವರಗಳುಂಟು[೬೧].

ಈತನ ಕಾಲಾವಧಿಗೆ ಸಂಬಂಧಿಸಿದ ಕೆಲವು ಶಾಸನಗಳು ಯಾದಗಿರಿ ಜಿಲ್ಲೆಯಲ್ಲಿರುವುದರ ಕುರಿತು ಮಾಹಿತಿಗಳು ಪ್ರಕಟವಾಗಿವೆ. ಅಲ್ಲದೇ ಈತನ ಕುರಿತಾದ ಇನ್ನೊಂದು ದಾಖಲಾದ ಮುಖ್ಯವಾದ ಸಂಗತಿಯೆಂದರೆ ಈ ಜಿಲ್ಲೆಯಲ್ಲಿ ಆರನೆಯ ವಿಕ್ರಮಾದಿತ್ಯ ರಾಜನನ್ನು ಹೊರತುಪಡಿಸಿದರೆ ಈತನ ಕಾಲದ ಶಾಸನಗಳೇ ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಾಗಿವೆಂಬುವುದು. ಅದರಲ್ಲೂ ಶಾಹಾಪುರ ತಾಲೂಕಿನಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಈತನ ಕಾಲದವುಗಳೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಗಮನಿಸಬಹುದು. ಸುರಪುರ ತಾಲೂಕಿನ ಕೆಂಭಾವಿಯ ಕ್ರಿ.ಶ.೧೦೫೪ರ ಶಾಸನವು[೬೨]. ಮಹಾಮಂಡಳೇಶ್ವರರಾಗಿದ್ದ ಹೈಹಯರ ವಂಶಾವಳಿಯನ್ನು ಕುರಿತು ದೀರ್ಘವಾಗಿ ಪ್ರಸ್ತಾಪಿಸುತ್ತದೆ. ರಾಜಧಾನಿಯಾಗಿದ್ದ ಕೆಂಬಾವಿಯಲ್ಲಿ ರೇವರಸನ ಹೆಂಡತಿ ಮಾಳಿಯಬ್ಬರಸಿ ಮಾಳಿಬೇಶ್ವರ ದೇವಾಲಯ ಕಟ್ಟಿಸಿ ಅದಕ್ಕೆ ಹಲವು ದಾನ ನೀಡಿರುವ ಉಲ್ಲೇಖವಿದೆ. ಬಹುಶಃ ಕೆಂಬಾವಿಯ ಕಂಪಣವು ಹಗರಟಗಿ ನಾಡಿನಲ್ಲಿಯೇ ಹೆಚ್ಚಿನ ಪ್ರಾಮುಖ್ಯತೆ ಪಡೆದ ವಿಭಾಗಿವಾಗಿತ್ತೆಂದು ತಿಳಿಯಬಹುದು. ಅಲ್ಲದೇ ಅದು ಮಹಾಮಂಡಳೇಶ್ವರರಾದ ಹೈಹಯರ ಆಡಳಿತದ ಮುಖ್ಯ ರಾಜಧಾನಿಯಾಗಿತ್ತೆಂಬ ಮಾಹಿತಿಗಳು ಸಹ ಉಲ್ಲೇಖಗೊಂಡಿರುವ ವಿಚಾರ ಗಮನಾರ್ಹವಾದುದು. ತ್ರೈಲೋಕ್ಯಮಲ್ಲ ಅಥವಾ ಅಹವಮಲ್ಲ ಒಂದನೆಯ ಸೋಮೇಶ್ವರನು ಕಲ್ಯಾಣ ನೆಲೆವೀಡಿನೊಳನಿಂದ ರಾಜ್ಯವಾಳುತ್ತಿರುವ ಬಗೆಗೆ ಇದರಲ್ಲಿ ಉಲ್ಲೇಖವಿದೆ. ಕ್ರಿ.ಶ.೧೦೫೬ರ ತೇದಿಯು ಇನ್ನೊಂದು ಶಾಸನವು[೬೩] ದಾನದ ವಿವರಗಳನ್ನು ಕುರಿತು ವಿವರಿಸುತ್ತದೆ. ಉಲ್ಲೇಖಿಗೊಂಡ ಕಾಲಮಿತಿಯಿಂದಾಗಿ ಇದನ್ನು ತ್ರೈಲೋಕ್ಯಮಲ್ಲ ಮೊದಲ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದೆಂದು ಅಭಿಪ್ರಾಯಿಸಲಾಗಿದೆ. ಈ ಶಾಸನದಲ್ಲಿಯು ಸಹ ಮಹಾಮಂಡಳೇಶ್ವರ ರೇವರಸನ ಕುರಿತು ಉಲ್ಲೇಖವಿದ್ದರೂ ಇದರಲ್ಲಿರುವ ವಿಷಯ ಇನ್ನೊಂದು ಸಂಗತಿಗಾಗಿ ಬಹಳ ಮುಖ್ಯವಾದುದೆಂದೆನಿಸುತ್ತದೆ. ಈ ಶಾಸನದಲ್ಲಿ ಕಾಳಮುಖ ಪಂಥಕ್ಕೆ ಸಂಬಂಧಿಸಿದ ಕಿಟ್ಟಗಾವೆಯ ಶಾಖೆಯ ಕುರಿತು ಉಲ್ಲೇಖವಿದೆ. ಇಂಥ ವಿಷಯ ಕುರಿತು

ಈ ಪ್ರದೇಶದಲ್ಲಿ ಉಲ್ಲೇಖಿಸಿದ ಒಂದೇ ಒಂದು ಶಾಸನವು ಸಹ ಇದಾಗಿದೆ. ಕಿಟ್ಟಗಾವೆ ಸಂತತಿಯ ಶಿವಲಿಂಗಿ ಭಟ್ಟನ ಕರಗ್ರ ಶಿಷ್ಯ ಮತ್ತು ಅವರ ಪ್ರಶಿಷ್ಯರಾದ ಕಳೇಶ್ವರ ಪಂಡಿತರ ಕಾಲ್ತೊಳೆದು ಕಾಸಕಬ್ಬೆಯು ದೇವರಿಗೆ ದಾನಬಿಟ್ಟ ವಿವರಗಳನ್ನು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.



ಸುರಪುರ ತಾಲೂಕಿನ ಕನ್ನೆಳ್ಳಿ[೬೪]. ಗ್ರಾಮದಲ್ಲಿ ಆತನ ಕಾಲಕ್ಕೆ ಸಂಬಂಧಿಸಿದ ಶಾಸನವೊಂದು ಕಂಡುಬಂದಿದೆ. ಈ ಶಾಸನವು ಕ್ರಿ.ಶ.೧೦೭೬ರ ಕಾಲಮಾನ ಹೊಂದಿದ್ದರೂ ಅದರಲ್ಲಿರುವ ವಿವರಗಳ ಹಿನ್ನೆಲೆಯಲ್ಲಿ ಅದನ್ನು ಒಂದನೆಯ ಸೋಮೇಶ್ವರನ ಕಾಲಕ್ಕೆ ಸೇರಿಸಲಾಗಿದೆ. ಆತನ ಮಹಾಸಾಮಂತನೊಬ್ಬ ದೇವರಾಸಿ ಪಂಡಿತರ ಕಾಲ್ತೊಳೆದು ಕೇತೇಶ್ವರ ದೇವರಿಗೆ ದತ್ತಿ ನೀಡಿರುವ ಉಲ್ಲೇಖವಿದೆ. ಈ ಶಾಸನದಲ್ಲಿ ಉಲ್ಲೇಖವಾದ ಬಹುಮುಖ್ಯ ಸಂಗತಿಯೆಂದರೆ ಶ್ರೀತ್ರೈಳೋಕ್ಯಮಲ್ಲ ದೇವರು ಬಂಕಾಪುರದ ನೆಲೆವೀಡಿನೊಳ ಸುಖಸಂಕಥಾವಿನೋದದಿಂದ ರಾಜ್ಯವಾಳುತ್ತಿದ್ದನೆಂಬ ವಿವರ ದಾಖಲಾಗಿರುವುದು. ಈ ಶಾಸನದಲ್ಲಿ ವ್ಯಕ್ತವಾದ ವಿವರಗಳನ್ನು ಪ್ರಾಯಶಃ ಬೇರೆ ರೀತಿ ಅರ್ಥೈಸಬೇಕಾಗುತ್ತದೆ. ಈತನ ಆಡಳಿತಕ್ಕೆ ತಲೆಬಾಗಿ ಹೊಯ್ಸಳ ವಿನಿಯಾದಿತ್ಯನು ತನ್ನ ಮಗಳನ್ನು ಒಂದನೆಯ ಸೋಮೇಶ್ವರನಿಗೆ ಮದುವೆ ಮಾಡಿ ಕೊಟ್ಟನು. ಹಾಗಾಗಿ ಬಹುಶಃ ಅವರ ಸುಪರ್ದಿಯಲ್ಲಿದ್ದ ಬಂಕಾಪುರ ಪ್ರದೇಶವು ಸಹಜವಾಗಿ ಕಲ್ಯಾಣದ ಚಾಲುಕ್ಯರ ವಶವಾಗಿರಬಹುದು. ಇಂಥ ಕಾರಣದಿಂದಲೇ ಈ ಶಾಸನದಲ್ಲಿ ಬಂಕಾಪುರ ನೆಲೆವೀಡು ಎಂಬ ಉಲ್ಲೇಖವು ಮೂಡಿಬಂದಿರಬಹುದೆಂದು ಅಭಿಪ್ರಾಯಿಸಬಹುದು.

ಶಹಾಪುರ ತಾಲೂಕಿನ ಭೀಮರಾಯನಗುಡಿ(ಆಮ್ಲಾಪುರ)ಯ ಶಾಸನವು ಕ್ರಿ.ಶ.೧೦೫೧ರ ಕಾಲಮಾನದ್ದು[೬೫]. ಮಹಾಮಂಡಳೇಶ್ವರ ರೇವರಸನು ಸಗರ-೩೦೦ರಲ್ಲಿದ್ದ ಎಡವೊಳಲು ಗ್ರಾಮದಲ್ಲಿದ್ದ ಹೊಲದಲ್ಲಿ ೩೨ ಗೇಣಿ ಕೋಲಲ್ಲಿ ಶ್ರೀವೊಳಿನಲ್ಲಿ ಸೋಮಯ್ಯ ನಾಯಕನು ಕಟ್ಟಿಸಿದ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿದ ಎಂಬ ಉಲ್ಲೇಖವಿದೆ. ಶಾಸನದಲ್ಲಿ ಉಲ್ಲೇಖಿತ ಶ್ರೀವೊಳಲು ಇಂದಿನ ಶಿರವಾಳವಾಗಿದೆ. ಕ್ರಿ.ಶ.೧೦೬೭ರ ಮದ್ರಕಿ ಶಾಸನವು[೬೬]. ಪ್ರಭುದಂಡ ಲಕ್ಕಿ ಸಿದ್ಧಯ್ಯನು ಅಲ್ಲಿರುವ ಛತ್ರಕ್ಕೆ ದಾನ ಬಿಟ್ಟ ವಿಷಯ ತಿಳಿಸುತ್ತದೆ. ಅಲ್ಲದೇ ಪೊಟ್ಟಳಕೆರೆ ನೆಲೆವೀಡಿನಿಂದ ರಾಜ್ಯವಾಳುತ್ತಿದ್ದಿರುವ ಬಗೆಗೆ ಮಾಹಿತಿ ದಾಖಲಾಗಿದೆ. ಕ್ರಿ.ಶ.೧೦೬೭ರ ತೇದಿಯ ಸಂಗಮದ ಶಾಸನವು ತುಂಬಾ ಮಹತ್ವದ ಮಾಹಿತಿಗಳನ್ನು ಉಲ್ಲೇಖಿಸುತ್ತದೆ[೬೭]. ಒಂದನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದ ಗೊಗ್ಗರಸನು ಸಗರನಾಡನ್ನು ಆಳುತ್ತಿದ್ದನು. ಅಲ್ಲಿರುವ ಸಂಗಮೇಶ್ವರ ದೇವಾಲಯದ ಆಚಾರ್ಯ ಲಾಕುಳ ಪಂಥದ ರುದ್ರಶಕ್ತಿ ಪಂಡಿತರಿಗೆ ಹಾಗೂ ಅಲ್ಲಿರುವ ದೇವರ ಪೂಜಾವಿಧಿಗಳಿಗಾಗಿ ಸಗರ-೫೦೦ರಲ್ಲಿದ್ದ ಜಾಡ, ಕೋಬಾಳ ಹಾಗೂ ಗ್ರಾಮವನ್ನು ದಾನವಾಗಿ ನೀಡಿರುವ ಉಲ್ಲೇಖವಿದೆ. ಅಲ್ಲದೇ ವಾಮದೇವನಧಿಪತಿ ಮೂವರ ಕೋಣೆಯ ಮಠಕ್ಕೆ ಎಂಬ ವಿವರವು ದಾಖಲಾಗಿದೆ. ಇದೇ ಶಾಸನದಲ್ಲಿ ಉಲ್ಲೇಖಿತ

ಕಿಸುವೊಳಲು ಬಹುಶಃ ಇಂದಿನ ಪಟ್ಟದಕಲ್ಲು ಸ್ಥಳವೇ ಆಗಿದ್ದಿರಬಹುದು. ಅಲ್ಲದೇ ಅರಸನನ್ನು ಸ್ತುತಿಸುವ ಹತ್ತು ಹಲವು ಸಾಲುಗಳು ಈ ಶಾಸನದಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು. ಕ್ರಿ.ಶ.೧೦೫೬ರ ದೋರನಹಳ್ಳಿ ಶಾಸನವು ಅಲ್ಲಿದ್ದ ನೀಲ ಶಿವ ಭಟ್ಟಾರಕರಿಗೆ ದಾನ ನೀಡಿರುವ ಉಲ್ಲೇಖ ಹೊಂದಿದೆ[೬೯]. ಅಲ್ಲದೆ ಇದೇ ಭಟ್ಟಾರಕರಿಗೆಯೇ ಈ ಹಿಂದೆ ಆಳ್ವಿಕೆ ಮಾಡಿದ್ದ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಲ್ಲಿಯೂ ಪ್ರಕಟವಾದ ಶಾಸನದಲ್ಲಿಯೂ ಕ್ರಿ.ಶ. (೧೦೧೭) ದಾನ ನೀಡಿರುವ ಉಲ್ಲೇಖವುಂಟು.

ರಾಷ್ಟ್ರಕೂಟ ಕಾಲದಿಂದಲೂ ಐತಿಹಾಸಿಕ ಪ್ರಸಿದ್ಧಿ ಪಡೆದಿದ್ದ ದೋರನಹಳ್ಳಿಯು ಸಹಜವಾಗಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿಯೂ ಹೆಚ್ಚಿನ ಪ್ರಸಿದ್ಧಿ ಪಡೆದು ಬೆಳೆದಿದೆ. ಹಾಗಾಗಿ ಅಲ್ಲಿದ್ದ ಸ್ಥಾನಾಚಾರ್ಯರಾದ ಶಿವಭಟ್ಟಾರಕರಿಗೆ ಹಾಗೂ ಈ ವಂಶಕ್ಕೆ ಸಂಬಂಧಿಸಿದ ಇತರರಿಗೂ ಇಬ್ಬರು ರಾಜರ ಆಡಳಿತಾವಧಿಯಲ್ಲಿ ದಾನ-ದತ್ತಿಗಳನ್ನು ನೀಡಿದ್ದು ಸಹಜವಾಗಿಯೇ ಇದೆ.

ಈತನ ಕಾಲಾವಧಿಯ ಮೂರು ಶಾಸನಗಳು ಯಾದಗಿರಿ ತಾಲೂಕಿನ ಬೇರೆ ಬೇರೆ ಗ್ರಾಮಗಳಲ್ಲಿರುವ ಮಾಹಿತಿಗಳಿವೆ. ಕ್ರಿ.ಶ.೧೦೫೮ರ ಯರಗೋಳ ಶಾಸನದಲ್ಲಿ ದಾನ ನೀಡಿರುವ ಉಲ್ಲೇಖವಿದೆ[೭೦]. ತ್ರೈಲೋಕ್ಯಮಲ್ಲ ಅಥವಾ ಒಂದನೆಯ ಸೋಮೇಶ್ವರನು ರಾಜ್ಯವಾಳುತ್ತಿರಲು ತೊಟ್ಟಕಚೆಯ ಮಾಚಯನಾಯಕನು ಎರಗೋಳಿನ ಕೆರೆಯ ದಂಡೆಯ ಮೇಲಿರುವ ಸಿದ್ದೇಶ್ವರ ದೇವರಿಗೆ ದಾನಬಿಟ್ಟ ಉಲ್ಲೇಖ ನೀಡುತ್ತದೆ. ಹೆಡಗಿಮುದ್ರಾ ಗ್ರಾಮದ ಕ್ರಿ.ಶ.೧೦೩೩ರ ಶಾಸನವು ಹೈಹಯ ಅರಸ ಮಹಾಮಂಡಳೇಶ್ವರ ರೇವರಸನ ಕುರಿತು ಮಾಹಿತಿ ನೀಡುವುದು. ಅಲ್ಲದೇ ಕೊಲ್ಲೂರ ಸಿದ್ದೇಶ್ವರ ಮಠದ ಪ್ರಮದನಪಂಡಿತರ ಕಾಲ್ತೊಳೆದು ಬುದ್ಧರೆಯಲ್ಲಿನ ಬೋಧೇಶ್ವರ ದೇವರಿಗೆ ಕೋಲೂರು ಮತ್ತು ಕವಿಲಗೆರೆಗಳಲ್ಲಿ ಬಿಟ್ಟ ಭೂದತ್ತಿ ಇದಾಗಿದೆ. ಈ ಶಾಸನದ ಕಾಲಮಾನ ಕುರಿತು ಸ್ಪಷ್ಟತೆ ಇಲ್ಲದಿದ್ದರೂ ಅದರಲ್ಲಿ ಉಲ್ಲೇಖಗೊಂಡ ತಿಥಿ ಮತ್ತು ಸಂವತ್ಸರ ಹಿನ್ನೆಲೆಯಲ್ಲಿ ಅದನ್ನು ಕ್ರಿ.ಶ. ೧೦೩೩ರ ಕಾಲಮಾನಕ್ಕೆ ಗೊತ್ತುಪಡಿಸಿಕೊಳ್ಳಲಾಗಿದೆ. ಇದೇ ಶಾಸನದಲ್ಲಿ ಉಲ್ಲೇಖಗೊಂಡ ಇನ್ನೊಂದು ಸಂಗತಿಯು ಆರನೆಯ ಯುವರಾಜ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿ ಕೆಲವು ವಿವರಗಳನ್ನು ನೀಡುತ್ತಾನೆ. ಅವನ ಮಗ ಮಲ್ಲಿಕಾರ್ಜುನನ ಅಧೀನ ಅಧಿಕಾರಿಯಾಗಿದ್ದ ಮಂಚೆಯ ನಾಯಕನು ಮಲ್ಲಿಕಾರ್ಜುನ ದೇವರಿಗೆ ಭಿನ್ನಯಿಸಿಕೊಂಡು ನಾಲ್ಕು ಲಿಂಗಗಳನ್ನು ಪ್ರತಿಷ್ಠಾಪಿಸಿರುವ ವಿವರಗಳುಂಟು. ಅವುಗಳನ್ನು ನಿರ್ಮಿಸಿದ ಕಲ್ಲು ಕುಟಿಗ ಚಯೋಜನಿಗೆ ಮೂರು ಮತ್ತರ ಭೂಮಿ ನೀಡಿರುವ ಮಾಹಿತಿಗಳು ಸಹ ದಾಖಲಾಗಿವೆ. ಆತನ ಕಾಲದ ಇನ್ನೊಂದು ಶಾಸನವು ಬೆಳಗುಂದಿಯಲ್ಲಿ ಕಂಡುಬಂದಿದೆ[೭೦]. ಈ ಶಾಸನವು ಅವನ ಮಹಾಸಾಮಂತ ರಾಯರಸನು ಆನೆವರಿ ಮತ್ತು ಬೆಳಗುಂದಿಯಲ್ಲಿರುವ ದೇವಾಲಯಕ್ಕೆ ದತ್ತಿ ಬಿಟ್ಟ ಮಾಹಿತಿಗಳನ್ನು ತಿಳಿಸುತ್ತದೆ.

ತ್ರೈಲೋಕ್ಯ ಮಲ್ಲನು ಕಲ್ಯಾಣ ನೆಲವೀಡಿನಿಂದ ರಾಜ್ಯವಾಳುತ್ತಿದ್ದಿರುವ ಬಗೆಗೆ ಉಲ್ಲೇಖ ನೀಡುತ್ತವೆ. ಅವನ ಆಡಳಿತಾವಧಿಯ ಉಚ್ಛ್ರಾಯ ಕಾಲಾವಧಿಯಲ್ಲಿ ಬಹುಶಃ ಕಲ್ಯಾಣವೇ ಎಲ್ಲ ಪಟ್ಟಣಗಳಿಗಿಂತ ಹೆಚ್ಚಿನ ಪ್ರಸಿದ್ಧಿ ಪಡೆದಿರುವುದೆಂದು ಅಭಿಪ್ರಾಯಿಸಬಹುದು.

ಭುವನೈಕ್ಯ ಮಲ್ಲ ಬಿರುದಾಂಕಿತ ಎರಡನೆಯ ಸೋಮೇಶ್ವರ(೧೦೬೮-೭೬) ಅಷ್ಟೇನೂ ಪ್ರಸಿದ್ಧ ರಾಜನಾಗಿ ಹೆಸರು ಮಾಡಿರಲಿಲ್ಲವೆಂದೇ ಹೇಳಬಹುದು. ಸಹೋದರ ಆರನೆಯ ವಿಕ್ರಮಾದಿತ್ಯನ ಜೊತೆಗಿನ ಹಗೆತನ ಹಾಗೂ ಚೋಳರ ವಿರುದ್ಧ ಯುದ್ಧಗಳು ಅವನನ್ನು ಅಸ್ಥಿರನನ್ನಾಗಿ ಮಾಡಿದವು. ಅವನ ಕಾಲಕ್ಕೆ ಸಂಬಂಧಿಸಿದ ಕುರುಹುಗಳು ಈ ಜಿಲ್ಲೆಯಲ್ಲಿ ತುಂಬಾ ವಿರಳ. ಅವನ ಕಾಲದ ಏಕೈಕ ಶಾಸನ ಶಹಾಪುರ ತಾಲೂಕಿನ ಸಗರ ಗ್ರಾಮದಲ್ಲಿ ಕಂಡುಬಂದಿದೆ[೨೨]. ಕ್ರಿ.ಶ.೧೦೭೧ರ ಈ ಶಾಸನವು ರಾಣಿ ದೇವಲ ಮಹಾದೇವಿಯೂ ಸೇರಿದಂತೆ ಅಯ್ಯಾವೊಳೆ-೫೦೦ ವರ್ತಕರ ಹಾಗೂ ವಿವಿಧ ವರ್ತಕರು ನಕರೇಶ್ವರ ದೇವರ ಮಠದ ತಪೋವಧರಿಗೆ ಹಾಗೂ ವಿದ್ಯಾರ್ಥಿಗಳಿಗೆ ನಿರ್ವಹಣೆಗಾಗಿ ಅಲ್ಲಿನ ಸ್ಥಾನಾಚಾರ್ಯರಾದ ಅನಂತಶಕ್ತಿ ಸಿದ್ಧಾಂತ ದೇವರಿಗೆ ಸುಂಕ ದಾನದ ಬಾಬ್ತುಗಳನ್ನು ಬಿಟ್ಟ ಉಲ್ಲೇಖಗಳನ್ನು ಈ ಶಾಸನವು ನೀಡುತ್ತದೆ.

ಅಧ್ಯಯನ ದೃಷ್ಟಿಯಿಂದ ಈ ಶಾಸನವು ತುಂಬಾ ಮಹತ್ವದೆಂದು ತಿಳಿದುಬರುವುದು. ಕಾರಣ ಈ ಅರಸನು ಕಂಪಿಲೆಯ ನೆಲೆವೀಡಿನಿಂದ ಆಳುತ್ತಿದ್ದಿರುವ ಬಗೆಗೆ ಮಾಹಿತಿ ನೀಡುತ್ತದೆ. ಇದೇ ಕಾಲಕ್ಕೆ ಆರನೆಯ ವಿಕ್ರಮಾದಿತ್ಯನು ರಾಜಭ್ರಷ್ಟನಾಗಿ ತನ್ನ ಸಹೋದರ ಜಯಸಿಂಹನ ಜೊತೆಗೂಡಿ ಆ ಊರಿಂದ ಈ ಊರಿಗೆ ಅಲೆದಾಡಲಾರಂಭಿಸಿದ್ದ. ಅಂತಿಮವಾಗಿ ಕಂಪಿಲೆಯಿಂದಲೇ ಸಹೋದರ ಎರಡನೆಯ ಸೋಮೇಶ್ವರನನ್ನು ಸೋಲಿಸಿದನು. ಕಂಪಿಲೆಯು ಆಗ ನೊಳಂಬವಾಡಿ ಪ್ರಾಂತ್ಯದಲ್ಲಿದ್ದ ಬಹುಮುಖ್ಯ ಪಟ್ಟಣವಾಗಿತ್ತು. ಪ್ರಾಯಶಃ ಕ್ರಿ.ಶ. ೧೦೭೫ರ ಹೊತ್ತಿಗೆ ಕಂಪಿಲೆಯು ಎರಡನೆಯ ಸೋಮೇಶ್ವರನ ಕೈಬಿಟ್ಟಿರಬಹುದು. ಅಲ್ಲದೇ ಅವನು ಆಳುತ್ತಿದ್ದ ಕಂಪಿಲೆಯ ಕುರಿತು ಅವನ ಆಳ್ವಿಕೆಗೆ ಸಂಬಂಧಿಸಿದಂತೆ ವಿವರಿಸುವ ಕೊನೆಯ ಶಾಸನವು ಸಹ ಇದಾಗಿರಬಹುದು. ಈ ಶಾಸನವು ಕಾಳಮುಖರ ಬಗೆಗೂ ಮಹತ್ವದ ಮಾಹಿತಿಗಳನ್ನು ನೀಡುತ್ತದೆ. ಆ ಕುರಿತು ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಕಲ್ಯಾಣದ ಚಾಲುಕ್ಯ ಅರಸರುಗಳಲ್ಲಿಯೇ ತುಂಬಾ ಪ್ರಸಿದ್ಧ ದೊರೆ ಎಂದು ಸಾಬೀತಾಗಿರುವ ಆರನೆಯ ವಿಕ್ರಮಾದಿತ್ಯನು ಕ್ರಿ.ಶ.೧೦೭೬-೧೧೨೭ರ ವರೆಗೂ ರಾಜ್ಯಭಾರ ಮಾಡಿದನೆಂದು ದಾಖಲೆಗಳು ದೃಢಪಡಿಸುತ್ತವೆ. ಅಲ್ಲದೇ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಸುಮಾರು ಐವತ್ತು ವರ್ಷಗಳ ಕಾಲ ಸ್ಥಿರವಾಗಿ ರಾಜ್ಯವಾಳಿದ ಶ್ರೇಯವೂ ಸಹ ಈತನಿಗೆ ಸಲ್ಲುವುದು. ಸುಸ್ಥಿರ ಆಡಳಿತವಿದ್ದ ಪರಿಣಾಮವಾಗಿ ಈತನ ಅವಧಿಯಲ್ಲಿ ಅಗಣಿತ ಪ್ರಮಾಣದಲ್ಲಿ ಸಾಂಸ್ಕೃತಿಕ ಸಂಗತಿಗಳು ನಿರ್ಮಾಣವಾದವೆಂದು ಅಭಿಪ್ರಾಯಿಸಲಾಗುತ್ತದೆ. ತನ್ನ ಹೆಸರಿನಲ್ಲಿಯೇ ಹೊಸದಾದ

ಶಕೆಯನ್ನು ಪ್ರಾರಂಭಿಸಿ ಇತಿಹಾಸದಲ್ಲಿ ಎಂದೂ ಮರೆಯಲಾರದ ವ್ಯಕ್ತಿಯಾಗಿ ದಾಖಲಾಗಿದ್ದಾನೆ. ಇಂಥ ಪ್ರಮುಖ ರಾಜನ ಕಾಲಾವಧಿಗೆ ಸಂಬಂಧಿಸಿದಂತೆ ಹಲವಾರು ಆಕರಗಳು ಈ ಜಿಲ್ಲೆಯಲ್ಲಿಯೂ ಕಂಡುಬಂದಿವೆ. ಆತನ ಅವಧಿಯಲ್ಲಿ ರಚನೆಯಾದ ಶಾಸನಗಳು ಹಾಗೂ ದೇವಾಲಯಗಳು ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಗಮನಿಸಬಹುದು.

ಸುರಪುರ ತಾಲೂಕಿನಲ್ಲಿ ಲಭ್ಯವಿರುವ ಶಾಸನಗಳಲ್ಲಿ ಕ್ರಿ.ಶ.೧೦೭೪ರ ಬೈಚಬಾಳ ಶಾಸನವು ಈತನ ಕಾಲಕ್ಕೆ ಸಂಬಂಧಿಸಿದಂತೆ ದೊರೆತಿರುವ ಮೊದಲ ದಾಖಲೆಯಾಗಿದೆ[೨]. ಇದರಲ್ಲಿ ವ್ಯಕ್ತವಾಗಿರುವ ಮುಖ್ಯವಾದ ವಿಷಯವೆಂದರೆ ತ್ರಿಭುವನಮಲ್ಲನ ದಂಡನಾಯಕ ಸಿಂಗರಸನು ತನ್ನ ತಂದೆ ರೆಬ್ಬಣಯ್ಯನ ಪರೋಕ್ಷ ವಿನಯ ನಿಮಿತ್ತವಾಗಿ ಎಳಮೇಲ ಸಿಂಹಪರ್ಷನ್ಮಂಡಲಿಯ ಮಲೆಯಾಳದೇವರ ಪ್ರಶಿಷ್ಯರ ಶಿಷ್ಯರಾದ ತೋಜೋರಾಶಿ ಪಂಡಿತರ ಕಾಲ್ತೊಳೆದು ಕೆಂಭಾವಿ ಹನ್ನೆರಡು ವಿಭಾಗದಲ್ಲಿದ್ದ ಬೈಸಂಬಾಳ ಗ್ರಾಮವನ್ನು ಕಚ್ಚೆಗನೂರಿನ ರೆಬ್ಬೇಶ್ವರ ದೇವರಿಗೆ ದತ್ತಿಯಾಗಿ ನೀಡಿರುವ ಉಲ್ಲೇಖವಿದೆ. ಕಾಳಮುಖ ಪಂಥಕ್ಕೆ ಸೇರಿದ ಮಲಯಾಳ ಪಂಡಿತರ ಉಲ್ಲೇಖವುಳ್ಳ ಈ ವಿವರಗಳು ಮಹತ್ವವಾದವು. ಇನ್ನೊಂದು ಪ್ರಮುಖ ಸಂಗತಿಯೆಂದರೆ ಅದರ ಕಾಲಮಾನ ಕ್ರಿ.ಶ.೧೦೭೪ ಎಂದು ನಮೂದುಗೊಂಡಿರುವುದು. ಆದರೆ ತ್ರಿಭುವನಮಲ್ಲ ವಿಕ್ರಮಾದಿತ್ಯನು ಕ್ರಿ.ಶ. ೧೦೭೬ರಲ್ಲಿ ಪಟ್ಟಕ್ಕೇರಿದನೆಂಬ ವಿವರಗಳಿವೆ. ಹಾಗಾಗಿ ಬಹುಶಃ ಈ ವಿವರದಿಂದ ತಿಳಿದುಕೊಳ್ಳಬಹುದಾದ ಸಂಗತಿಯೆಂದರೆ ಆತನು ಕ್ರಿ.ಶ. ೧೦೭೬ರ ಪೂರ್ವದಲ್ಲಿಯೇ ತನ್ನ ಸಹೋದರ ಎರಡನೆಯ ಸೋಮೇಶ್ವರನ ವಿರುದ್ಧ ಬಲಗೊಂಡಿದ್ದನೆಂದು ತೋರುತ್ತದೆ. ಚಾಲುಕ್ಯ ಆಡಳಿತಕ್ಕೆ ನಿಷ್ಠರಾದ ಅಧಿಕಾರಿ ವರ್ಗವೂ ಆಗಲೇ ಆರನೆಯ ವಿಕ್ರಮಾದಿತ್ಯನನ್ನೇ ತಮ್ಮ ನಿಜಸಾರ್ವಭೌಮನೆಂದು ಒಪ್ಪಿದಂತೆ ಕಾಣುತ್ತದೆ. ಕ್ರಿ.ಶ.೧೦೭೭ರ ಏವೂರ[೩]. ಶಾಸನವು ಸಹ ತುಂಬಾ ಮಹತ್ವದ್ದು. ಇದರ ಕುರಿತಂತೆ ಒಂದು ಪ್ರಬಂಧವನ್ನೇ ಬರೆಯಬಹುದಾಗಿದೆ. ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ ಈ ಶಾಸನವು ಮೂಲತಃ ತಾಮ್ರಪಟಶಾಸನವಾಗಿತ್ತು. ಆ ನಂತರ ಅದನ್ನು ಶಿಲೆಯಲ್ಲಿ ಕಂಡರಿಸಲಾಗಿದೆ ಎಂಬ ವಿವರಗಳಿವೆ. ಸುಮಾರು ಮುನ್ನೂರು ಸಾಲುಗಳಷ್ಟು ದೀರ್ಘವಾಗಿ ವಿವರಗಳನ್ನು ಹೊಂದಿದೆ. ಅಲ್ಲದೇ ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ ಅರಸ ವಂಶಾವಳಿಯನ್ನು ಸಹ ಇದು ತಿಳಿಸುತ್ತವೆ. ಮುಖ್ಯವಾಗಿ ಆತನ ದಂಡನಾಯಕನಾಗಿದ್ದ ರವಿದೇವ(ರವಿಯಣ ಅಥವಾ ರವಿಗಣ)ನನಿಗೆ ಸಂಬಂಧಿಸಿದ ವಂಶಾವಳಿಯನ್ನು ತಿಳಿಸುತ್ತದೆ. ಈತನ ಆದೇಶದ ಮೇರೆಗೆ ಈ ಸ್ವಯಂಭು ಶಿವದೇವಾಲಯದ ನಿರ್ಮಾಣವನ್ನು ಆತನ ಪೆರ್ಗಡೆ ನಾಗವರ್ಮನು ಮಾಡಿದನೆಂಬ ಉಲ್ಲೇಖವಿದೆ. ಅಲ್ಲದೇ ಏವೂರು ಸುತ್ತಮುತ್ತಲಿನ ಹಲವು ಗ್ರಾಮಗಳ ಬಗೆಗೂ ಇದರಲ್ಲೂ ಉಲ್ಲೇಖಗಳುಂಟು. ಈ ಶಾಸನದಲ್ಲಿ ಬಾದಾಮಿ ಚಾಲುಕ್ಯರಿಂದ ಹಿಡಿದ ಆತನವರೆಗೂ ತಮ್ಮ ವಂಶವು ಬೆಳೆದು ಬಂದ ಬಗೆಯನ್ನು ವಿವರಿಸುತ್ತದೆ. ಅಲ್ಲದೇ ಆತನಿಗಿದ್ದ ಹಲವು ಬಿರುದು

ಶಾವಲಿಗಳ ಬಗೆಗೂ ಈ ಶಾಸನವು ಮಾಹಿತಿ ನೀಡುವುದು. ಕ್ರಿ.ಶ.೧೦೮೫ರ ಹಾವಿನಾಳ[೨೪] ಶಾಸನದಲ್ಲಿಯೂ ಸಹ ಕಲ್ಯಾಣದ ಚಾಲುಕ್ಯ ಮನೆತನದ ವಂಶಾವಳಿಯ ಉಲ್ಲೇಖವಿದೆ. ಈ ಶಾಸನದಲ್ಲಿ ಅಲ್ಲಿರುವ ಸ್ವಯಂಭುದೇವರ ದೇವಾಲಯಕ್ಕೆ ಸಂಬಂಧಿಸಿದ ಸ್ಥಾನಾಚಾರ್ಯ ಅಮೃತರಾಸಿ ಪಂಡಿತರಿಗೆ ದಾನಬಿಟ್ಟ ವಿವರನ್ನು ನೀಡುತ್ತದೆ. ಅಲ್ಲದೇ ತ್ರಿಭುವನಮಲ್ಲನು ಸೆಲೆಯಹಳ್ಳಿಯ ನೆಲೆವೀಡಿನೊಳ ರಾಜ್ಯವಾಳುತ್ತಿದ್ದಿರುವ ಬಗೆಗೆ ಉಲ್ಲೇಖವಿದೆ. ಇದರಲ್ಲಿರುವ ಸೆಲೆಯಹಳ್ಳಿ ಕುರಿತು ಕೆಲವು ವಿದ್ವಾಂಸರು ಜಿಜ್ಞಾಸೆಗಳನ್ನು ವ್ಯಕ್ತಪಡಿಸಿದ್ದಾರೆ. ಈ ಸ್ಥಳವು ಬಹುಶಃ ಚಿತ್ತಾಪುರ ತಾಲೂಕಿನಲ್ಲಿರುವ ಸಾಲಹಳ್ಳಿಯೇ ಆಗಿರಬೇಕೆಂಬುವುದು. ಆದರೆ ಇದರಲ್ಲಿ ಉಲ್ಲೇಖವಾದ ಸೆಲೆಯ ಹಳ್ಳಿಯು ಬಹುಶಃ ಸುರಪುರ ತಾಲೂಕಿನ ಶಾಸನಗಳಲ್ಲಿ ಉಲ್ಲೇಖವಾದ ಸೆಲೆದಹಳ್ಳಿ ಅಥವಾ ಇಂದಿನ ಶೆಳ್ಳಿಗೆಯೇ ಆಗಿತ್ತೆಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ[೨೫]. ಪ್ರಾಯಶಃ ಇದೇ ಸರಿಯಾದ ಅಭಿಪ್ರಾಯವಾಗಿದೆ. ಅಲ್ಲದೇ ಇದೇ ನೆಲವೀಡಿನ ಕುರಿತು ಸುರಪುರ ತಾಲೂಕಿನ ಹೆಮ್ಮಡಗಿ ಶಾಸನವು ಸಹ ವಿವರಿಸುತ್ತದೆ. ರಾಜ್ಯ ಕಳೆದುಕೊಂಡ ನಾಲ್ಕನೆಯ ಸೋಮೇಶ್ವರನು ತನ್ನ ಕೊನೆಯ ದಿನಗಳನ್ನು ಸಹ ಇದೇ ಸೆಲೆಹಳ್ಳಿ ಅಥವಾ ಶೆಳ್ಳಗಿಯಲ್ಲಿ ಕಳೆದನೆಂದು ಈ ಶಾಸನವು ವಿವರಿಸುತ್ತದೆ. ಕ್ರಿ.ಶ.೧೦೯೧ರ ರಾಜಕೋಳೂರಿನ[೨೬] ಶಾಸನವು ಆರನೆಯ ವಿಕ್ರಮಾದಿತ್ಯನ ಪಿರಿಯರಿಸಿ ಚಂದಲಮಹಾದೇವಿಯು ರಾಜನಕೋಳೂರಿನಲ್ಲಿದ್ದ ಬ್ರಾಹ್ಮಣರಿಗೆ ದಾನಬಿಟ್ಟ ಬಗೆಗೆ ಉಲ್ಲೇಖ ನೀಡುತ್ತದೆ. ಇದೊಂದು ಬ್ರಹ್ಮಪುರಿಯಾಗಿತ್ತಲ್ಲದೇ ಹಾಗೂ ಭತ್ತ ಗ್ರಾಮವು ಆಗಿತ್ತು ಎಂಬುದನ್ನು ಈ ಶಾಸನವು ಉಲ್ಲೇಖಿಸುತ್ತದೆ. ಅಲ್ಲದೇ ಈ ರಾಜನು ಕಲ್ಯಾಣ ನೆಲವೀಡಿನೊಳಗಿನಿಂದ ಆಳ್ವಿಕೆ ಮಾಡುತ್ತಿದ್ದಿರುವ ಬಗೆಗೆ ಮಾಹಿತಿ ನೀಡುತ್ತದೆ. ಆತನ ಪಿರಿಯರಿಸಿ ಚಂದಲ ಮಹಾದೇವಿಯ ಕುರಿತಂತೂ ಅದ್ಭುತವಾದ ವರ್ಣನೆಗಳನ್ನು ಈ ಶಾಸನದಲ್ಲಿ ದಾಖಲಿಸಲಾಗಿದೆ. ಕ್ರಿ.ಶ. ೧೦೯೭ರ ಹಗರಟಗಿ[೨೭] ಶಾಸನವು ಗ್ರಾಮಕ್ಕೆ ಸಂಬಂಧಿಸಿದಂತೆ ಸಿಕ್ಕಿರುವ ಶಾಸನಗಳಲ್ಲಿ ಇದೇ ಅತೀ ಪ್ರಾಚೀನ ಆಕರವಾಗಿ ಕಂಡುಬರುತ್ತದೆ. ಮಹಾಪ್ರಧಾನ ದಂಡನಾಯಕ ಅಹವಮಲ್ಲರಸನು ಹಗರಟಗಿ ಅಗ್ರಹಾರದ ನಖರೇಶ್ವರ ದೇವರಿಗೆ ದಾನ ಬಿಟ್ಟ ಉಲ್ಲೇಖ ನೀಡುತ್ತದೆ.

ಕ್ರಿ.ಶ. ೧೦೯೯ರ ಮದನೂರಿನ[೨೮] ಶಾಸನವು ಆತನ ಮಹಾಮಂಡಳೇಶ್ವರನಾಗಿದ್ದ ಗೋಮದೇವರಸನು ಹಾಗೂ ಅಲ್ಲಿದ್ದ ಮಹಾಜನರು ಸೇರಿ ಅಗಸ್ತ್ಯೇಶ್ವರ ದೇವರಿಗಾಗಿ ಮತ್ತು ಸ್ಥಾನಾಚಾರ್ಯ ತೇಜೋರಾಶಿ ಪಂಡಿತರಿಗೆ ದಾನ ನೀಡಿರುವ ಕುರಿತು ವಿವರಿಸುತ್ತದೆ. ಕಡಕಲ್ಲಿನ ಕ್ರಿ.ಶ.೧೦೯೬ರ[೨೯] ತೇದಿಯ ಶಾಸನವು ತ್ರಿಭುವನಮಲ್ಲನ ಸಕಲ ಬಿರುದಾವಳಿಗಳನ್ನು ಬಣ್ಣಿಸುತ್ತಾ ಅವನು ಕಲ್ಯಾಣಪುರದಿಂದ ರಾಜ್ಯವಾಳುತ್ತಿರುವ ಮಾಹಿತಿಯನ್ನು ನೀಡುತ್ತದೆ. ಅಲ್ಲದೇ ಆತನ ದಂಡನಾಯಕ ನಾಗವರ್ಮಯ್ಯನ ವಿನಂತಿ ಮೇರೆಗೆ ಅಲ್ಲಿರುವ ಸಿದ್ದೇಶ್ವರ ದೇವರಿಗೆ ಸಕಲ ದತ್ತಿಗಳನ್ನು ನೀಡುತ್ತಾನೆ. ಕ್ರಿ.ಶ.೧೦೯೭ರ ತೇದಿವುಳ್ಳ ರಾಜಕೋಳೂರಿನ ಇನ್ನೊಂದು[೩೦] ಶಾಸನವು

ಆತನು ಕಲ್ಯಾಣದಿಂದ ಆಳುತ್ತಿದ್ದ ಬಗೆಗೆ ಹಾಗೂ ಅರಸಿ ಚಂದಲದೇವಿಯು ಭತ್ತ ಗ್ರಾಮವಾಗಿದ್ದ ರಾಜನಕೋಳೂರಿನ ಶಂಕರನಾರಾಯಣ ದೇವರಿಗೆ ದತ್ತಿ ಬಿಟ್ಟಿರುವ ಉಲ್ಲೇಖವನ್ನು ನೀಡುತ್ತದೆ. ಕ್ರಿ.ಶ.೧೦೯೯ರ ಮುದನೂರು[೮೧] ಶಾಸನವು ಆತನ ದಂಡನಾಯಕನಾದ ಕೊಮಾರಸ್ವಾಮಿಯು ಪ್ರತಿಷ್ಠಾಪಿಸಿದ ಕುಮಾರೇಶ್ವರ ದೇವರ ಸೇವೆಗಳಿಗೆ ಹಾಗೂ ಜೀರ್ಣೋದ್ಧಾರಕ್ಕಾಗಿ ಹಗರಟಗಿಯ ಉಗ್ರಭೀಮೇಶ್ವರ ದೇವಾಲಯದ ಸ್ಥಾನಾಚಾರ್ಯರಾದ ಬ್ರಹ್ಮರಾಶಿ ಪಂಡಿತರ ಕಾಲ್ತೊಳೆದು ದಾನ ನೀಡಿರುವ ಉಲ್ಲೇಖವಿದೆ. ಅಲ್ಲದೇ ಅಲ್ಲಿದ್ದ ಮಹಾಜನರು ಊರೊಡೆಯರು, ನಖರರು ಹಾಗೂ ಬಣಜಿಗರು ಸೇರಿ ದಾನಬಿಟ್ಟ ವಿವರವನ್ನು ಸಹ ಈ ಶಾಸನದಲ್ಲಿದೆ. ಈತನು ಕಲ್ಯಾಣದಿಂದ ರಾಜ್ಯವಾಳುತ್ತಿದ್ದಾನೆಂಬ ವಿವರವಿದೆ. ಕ್ರಿ.ಶ.೧೧೦೦ರ ಮತ್ತಿ ಕ್ರಿ.ಶ. ೧೧೦೧ರ ತೇದಿವುಳ್ಳ ಎರಡು ಶಾಸನಗಳು ಏವೂರು[೮೨] ಮತ್ತು ಕ್ರಿ.ಶ.೧೧೦೦ರ ಮಾದನೂರ ಶಾಸನವು ಆತನ ಕಾಲದ್ದವು[೮೩] ಅವು ಸಹ ದಾನ ಶಾಸನಗಳಾಗಿವೆ. ಏವೂರಿನ ಶಾಸನದಲ್ಲಿ ಜಯನ್ತೀಪುರ ಅಥವಾ ಜಯಂತಿಪುರದ (ಕಲ್ಯಾಣ) ಉಲ್ಲೇಖ ಬರುತ್ತದೆ. ಈ ನೆಲವೀಡಿನಿಂದ ರಾಜನು ಆಳುತ್ತಿದ್ದಿರುವ ಬಗೆಗೆ ಮಾಹಿತಿ ದಾಖಲಾಗಿದೆ. ಈ ಪರಿಸರದಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಈ ನೆಲವೀಡಿನ ಕುರಿತು ಉಲ್ಲೇಖಿಸುವ ಮೊದಲ ಶಾಸನವು ಇದಾಗಿದೆಯೆಂದು ಅಭಿಪ್ರಾಯಿಸಬಹುದು. ಕ್ರಿ.ಶ.೧೧೦೧ರ ತೇದಿವುಳ್ಳ ಏವೂರಿನ ಇನ್ನೊಂದು[೮೪] ಶಾಸನವು ತ್ರಿಭುವನಮಲ್ಲನನ್ನು ಹೆಸರಿಸುವುದರ ಜೊತೆಗೆ ಕೆಂಬಾವಿ, ಕನ್ನೆಯಹಳ್ಳಿ, ಕಕ್ಕೇರಿ ಸೀವಪುರ(ಶಿವಪುರ) ಚೋಳನಹಳ್ಳಿ ಮತ್ತು ಏವೂರಿನ ಸೆಟ್ಟಿಯರು ಮತ್ತು ಬೇರೆ ಊರಿನ ವರ್ತಕರು ಗವರೇಶ್ವರ ದೇವರಿಗೆ ದತ್ತಿ ಬಿಟ್ಟ ಮಾಹಿತಿ ನೀಡುತ್ತದೆ. ಕ್ರಿ.ಶ.೧೧೦೫ರ ಏವೂರ[೮೫] ಹಾಗೂ ಮುದನೂರು[೮೬] ಶಾಸನಗಳಲ್ಲಿ ದಾನದ ವಿವರ ವ್ಯಕ್ತವಾಗಿವೆ. ಅಲ್ಲದೇ ಇನ್ನೊಂದು ಶಾಸನವು[೮೭]. ಆತನ ಮಹಾಮಂಡಳೇಶ್ವರನಾಗಿದ್ದ ಜೋಗರ್ಮರಸನ ಹೆಂಡತಿ ತಾರಾದೇವಿಯು ಅಲ್ಲಿದ್ದ ಮಹಾಜನರಿಗೆ ಗದ್ಯಾಣ ಕೊಟ್ಟ ಭೂಮಿ ಖರೀದಿಸಿ ಉತ್ತರೇಶ್ವರ ದೇವಾಲಯಕ್ಕೆ ದಾನ ನೀಡಿದ ಮಾಹಿತಿ ಇದೆ. ಕ್ರಿ.ಶ. ೧೧೦೫ರ ತೇದಿಯ ಮುದನೂರು ಹಾಗೂ ಏವೂರಿನ ಶಾಸನಗಳಲ್ಲಿ ಕಲ್ಯಾಣ ನೆಲನೀಡಿನಿಂದ ರಾಜ್ಯವಾಳುತ್ತಿದ್ದನೆಂದು ಉಲ್ಲೇಖಿಸಲಾಗಿದೆ. ಏವೂರಿನ ಶಾಸನವು ದಂಡನಾಯಕ ರವಿಗನನ್ನು ಉಲ್ಲೇಖಿಸಿದರೆ. ಮುದನೂರಿನ ಶಾಸನವು ಮಹಾಮಂಡಳೇಶ್ವರ ಜೋಗಮರಸ ಮತ್ತು ಆತನ ಪತ್ನಿ ತಾರಾದೇವಿಯನ್ನು ಕುರಿತು ದಾಖಲಿಸುತ್ತದೆ. ಕ್ರಿ.ಶ.೧೧೦೬ರ ಬೊಮ್ಮನಹಳ್ಳಿ[೮೮] ಶಾಸನವು ಆತನ ರಾಣಿ ಧಾರಲದೇವಿಯನ್ನು ದಾನಚಿಂತಾಮಣಿ ಅತ್ತಿಮಬ್ಬೆಯ ಬಿರುದು ಮಹಾಸತಿತಿಳಕೆ ಗುಣದಂಕರಾರ್ತಿ ಎಂಬ ಬಿರುದು ಅವಳಿಗೂ ಇದ್ದಿರುವುದು ಗಮನಾರ್ಹ. ಅಲ್ಲದೇ ಈ ಶಾಸನವು ಪುರುಷ ಸೌಂದರ್ಯದ ವರ್ಣನೆಯನ್ನು ನೀಡುವ ಮಹತ್ವದ ದಾಖಲೆಯಾಗಿದೆ ಎಂಬ ಉಲ್ಲೇಖಗಳಿವೆ. ತ್ರಿಭುವನಮಲ್ಲನನ್ನು ರಿಪುರಾಯಕಂಠೀರವ ಎಂಬ ಬಿರುದುನಿಂದ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೧೦೮ರ ಏವೂರಿನ ಶಾಸನವು[೮೯]. ದಂಡನಾಯಕ

ಮುದ್ದರಸನು ಐವೂರಿನ ಸ್ವಯಂಭೂ ಸೋಮೇಶ್ವರ ದೇವರ ಸೇವೆಗೆ ದಾನ ನೀಡಿರುವ ಉಲ್ಲೇಖವನ್ನು ಇದೇ ಶಾಸನದಲ್ಲಿ ಐವೂರಿನ(ಐವೂರಿನಲ್ಲಿರುವ ವೃತ್ತಿಸಮುದಾಯಗಳು ಅಲ್ಲಿರುವ ಕಮ್ಮಟೇಶ್ವರ ದೇವರಿಗೆ ದಾನಬಿಟ್ಟ ಮಾಹಿತಿಯು ದಾಖಲಾಗಿದೆ. ಕ್ರಿ.ಶ.೧೧೧೪ರ ದೇವಪುರ್ ಶಾಸನ್ ಅವರ ಆಡಳಿತ ಕುರಿತು ಮಾಹಿತಿ ನೀಡುತ್ತವೆ. ಕ್ರಿ.ಶ.೧೧೧೯ರ ಐವೂರನ್ನು ಕ್ರಿ.ಶ.೧೧೨೦ರ ಹುಣಸಗಿ ಶಾಸನವು ಆತನ ಪಿರಿಯರಸಿ ಪಟ್ಟಮಹಾದೇವಿ ಮಲೆಯಮತಿದೇವಿಯ ಉಲ್ಲೇಖ ನೀಡಿದರೆ ಅದೇ ಶಾಸನದಲ್ಲಿ ಸರ್ವನಮಶ್ಯದಗ್ರಹಾರ ವಿಕ್ರಮತೀರ್ಥದಲ್ಲಿ ಮಲ್ಲಪ್ಪಯ್ಯ ದಂಡನಾಯಕನು ಮಲ್ಲಿಕಾರ್ಜುನ ದೇವರಿಗೆ ಮತ್ತು ಕೇಶವ ದೇವರಿಗೆ ಭೂದತ್ತಿಯನ್ನು ಕೊಟ್ಟ ಉಲ್ಲೇಖ ನೀಡುತ್ತದೆ. ಅಲ್ಲದೇ ತ್ರಿಭುವನಮಲ್ಲನು ಜಯಂತಿಪುರ ನೆಲವೀಡಿನೊಳನಿಂದ ರಾಜ್ಯವಾಳುತ್ತಿರುವ ಬಗೆಗೆ ಮಾಹಿತಿಯು ದಾಖಲಾಗಿದೆ.

ಶಾಸನದಲ್ಲಿ ಉಲ್ಲೇಖವಾದ ವಿಕ್ರಮತೀರ್ಥದ ಬಗೆಗೆ ಕೆಲವು ಜಿಜ್ಞಾಸೆಗಳಿವೆ. ಹುಣಸಗಿ ಅಕ್ಕಪಕ್ಕದಲ್ಲಿ ಈ ಪ್ರಾಚೀನ ಪಟ್ಟಣವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಆದರೆ ಬಹುಶಃ ಬೈಲಾಪುರ ತಾಂಡದ ಸುತ್ತಮುತ್ತಲಿರುವ ಪ್ರದೇಶವೇ ವಿಕ್ರಮತೀರ್ಥವಾಗಿರಬಹುದೇ? ಎಂದು ಗ್ರಹಿಸಲು ಅವಕಾಶವಿದೆ. ಕಾರಣ ಅಂಥದ್ದನ್ನು ಬೆಂಬಲಿಸುವ ಕುರುಹುಗಳು ಈ ಸ್ಥಳದಲ್ಲಿ ಈಗಲೂ ಕಂಡುಬರುತ್ತವೆ. ಕ್ರಿ.ಶ.೧೧೨೩ರ ತೇದಿವುಳ್ಳ ಎರಡು ಶಾಸನಗಳು ಚೆನ್ನೂರು ಹಾಗೂ ಹಗರಟಗಿಯಲ್ಲಿ ಕಂಡುಬಂದಿವೆ. ಆತನ ಬೋಬಾಣಸಿಗನಾದ ಮಲ್ಲದೇವರಸರು ಚಣ್ಣವುರದ ಲಕ್ಕಣೇಶ್ವರ ದೇವರ ಸೇವೆಗೆ ದಾನ ನೀಡಿರುವ ಉಲ್ಲೇಖವಿದೆ. ಈ ಬೋಬಾಣಸಿಗನು ವಿಕ್ರಮಾದಿತ್ಯನ ಅಡುಗೆಯ ಮೇಲ್ವಿಚಾರಕನಾಗಿದ್ದಿರಬಹುದೆಂದು ಊಹಿಸಬಹುದು. ಹರಗಟಗಿ ಶಾಸನವು ಅಲ್ಲಿರುವ ನಖರೇಶ್ವರ ದೇವರಿಗೆ ದಾನಬಿಟ್ಟ ವಿವರ ನೀಡುತ್ತದೆ. ಕ್ರಿ.ಶ.೧೧೨೫ರ ತೇದಿಯ ಐವೂರು ಶಾಸನವು ದಂಡನಾಯಕ ಲಕ್ಷ್ಮಣಯ್ಯ ನೀಡಿದ ದಾನ ಕುರಿತು ಉಲ್ಲೇಖಿಸುತ್ತದೆ. ಚಾಲುಕ್ಯ ಅರಸ ವಿಕ್ರಮಾದಿತ್ಯನನ್ನು ಉಲ್ಲೇಖಿಸಿರುವ ಮೂರು ಶಾಸನಗಳು ಕ್ರಮವಾಗಿ ಚನ್ನೂರು ಹಾಗೂ ಮುದನೂರ್‌ನಲ್ಲಿ ಕಂಡುಬಂದಿವೆ. ಅವು ಅವನ ಮಹಾಮಂಡಳೇಶ್ವರರ ಹಾಗೂ ದಂಡನಾಯಕರುಗಳ ಹೆಸರನ್ನು ಸೂಚಿಸುತ್ತವೆ.

ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನಲ್ಲಿಯೂ ಸಹ ಈ ಅರಸನಿಗೆ ಸಂಬಂಧಿಸಿದ ಕೆಲವು ಶಾಸನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಪ್ರಮುಖವಾಗಿ ಈ ತಾಲೂಕಿನ ಧರಿಯಾಪುರ ಹಾಗೂ ಗೋಗಿ ಗ್ರಾಮಗಳಲ್ಲಿ ಕಂಡುಬಂದಿವೆ. ಕ್ರಿ.ಶ. ೧೧೦೫ರ ಧರಿಯಾಪುರ ಶಾಸನವು ಅರಸ ತ್ರಿಭುವನಮಲ್ಲನು ಕಲ್ಯಾಣ ನೆಲೆವೀಡಿನಿಂದ ರಾಜ್ಯವಾಳುತ್ತಿದ್ದನೆಂಬ ಮಾಹಿತಿ ನೀಡುತ್ತದೆ. ಈತನ ರಾಣಿ ಚಂದಲದೇವಿ ಹಾಗೂ ಅವಳ ಪರಮಪದ್ಮೋಪ ಜೀವಿಯಾದ ಮಹಾಮಂಡಳೇಶ್ವರ ನಾಗೇಲರಸನು ಕಾಳಾಮುಖ ತಪೋಧನರಾಗಿ ಶಿಗಿತರಸನು ಕಟ್ಟಿಸಿದ ದೇವಾಲಯಕ್ಕೆ ದಾನ ನೀಡಿದ ವಿವರವಿದೆ. ಇದೇ ತಾಲೂಕಿನ ಗೋಗಿ ಗ್ರಾಮದಲ್ಲಿ

ಕಂಡುಬಂದಿರುವ ಕ್ರಿ.ಶ.೧೧೦೯ರ ಶಾಸನವು ಸಹ ಈತನ ಆಡಳಿತಾವಧಿಗೆ ಸಂಬಂಧಿಸಿದ್ದು. ಇದು ಹೆಚ್ಚಿನ ಪ್ರಮಾಣದಲ್ಲಿ ತೃಟಿತಗೊಂಡಿದ್ದರಿಂದ ವಿವರಗಳು ಅಸ್ಪಷ್ಟವಾಗಿ ಮೂಡಿಬಂದಿವೆ. ಅರಸ ತ್ರಿಭುವನಮಲ್ಲನ ಮಹಾಮಂಡಳೇಶ್ವರರಾದ ಹೈಹಯರ ರೇವರಸನು ಇಲ್ಲಿರುವ ದೇವಾಲಯಕ್ಕೆ ದತ್ತಿ ನೀಡಿರುವ ವಿವರವನ್ನು ನೀಡುತ್ತದೆ. ಇವೆರಡನ್ನು ಬಿಟ್ಟರೆ ಉಳಿದಂತೆ ಹೆಚ್ಚಿನ ಸಂಖ್ಯೆಯ ಶಾಸನ ಮಾಹಿತಿಗಳು ಅವನ ಕಾಲಕ್ಕೆ ಸಂಬಂಧಿಸಿದಂತೆ ಈ ತಾಲೂಕಿನಲ್ಲಿ ಕಂಡುಬಂದಿಲ್ಲ. ಆದರೆ ಇದೇ ತಾಲೂಕಿಗೆ ಹೊಂದಿಕೊಂಡಂತೆ ಇರುವ ವಡಗೇರಿ(ಜೇವರ್ಗಿ ತಾಲೂಕು) ಗ್ರಾಮದಲ್ಲಿದ್ದ ಪ್ರಕಟಿತ ಶಾಸನವೊಂದು ತುಂಬಾ ಮುಖ್ಯವಾದ ಮಾಹಿತಿ ನೀಡುತ್ತದೆ[೯೮]. ಕ್ರಿ.ಶ.೧೦೭೬ರ ತೇದಿವುಳ್ಳ ಈ ಶಾಸನವು ಆತನ ಪಟ್ಟಬಂಧೋತ್ಸವದ ಬಗೆಗೆ ವಿವರ ನೀಡುವ ಮುಖ್ಯ ಶಾಸನಗಳಲ್ಲಿ ಒಂದಾಗಿದೆಯೆಂದು ಅಭಿಪ್ರಾಯಿಸಲಾಗಿದೆ. ಈ ಶಾಸನದಲ್ಲಿ "ಶ್ರೀಮಚ್ಚಾಳುಕ್ಯ ವಿಕ್ರಮ ವರುಷ ಪ್ರಥಮ ನಳ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿವಾರದಂದು ಪಟ್ಟಬಂಧೋತ್ಸವ ನಿಮಿತ್ತದಿಂ" ಹಲವು ಮಹಾದಾನಗಳನ್ನು ಮಾಡಿದನೆಂದು ವಿವರಿಸಲಾಗುತ್ತದೆ. ಅಲ್ಲದೇ ಇದೇ ಶಾಸನಗಳಲ್ಲಿ ಎಳರಾಮೆಯ(ಎಡ್ರಾಮಿ) ಸಿಂಹಪರಿಷನ್ಮಂಡಲಿಯ ಮಲಿಯಾಳ ಪಂಡಿತರ ಪ್ರಶಿಷ್ಯ ಯಳರಾಮೆಯ ಸೂರ್ಯರಾಶಿ ಪಂಡತರ ಪ್ರಶಿಷ್ಯ ಶ್ರೀಮನ್ ಮಹೇಶರಾಣಿ ಪಂಡಿತರಿಗೆ ಈ ದಾನಗಳನ್ನು ನೀಡಲಾಯಿತೆಂಬ ವಿವರಗಳು ದಾಖಲಾಗಿವೆ.

ಯಾದಗಿರಿ ತಾಲೂಕಿನಲ್ಲಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ ಸ್ಪಷ್ಟ ತೇದಿವುಳ್ಳ ಐದು ಶಾಸನಗಳು ಕಂಡು ಬಂದಿವೆ. ಅವು ಪ್ರಮುಖವಾಗಿ ಯಾದಗಿರಿ ಪಟ್ಟಣ, ಇಡ್ಲೂರು, ಏಲೇರಿ, ಮಧ್ವಾರ ಹಾಗೂ ಆನ್ಪುರ ಗ್ರಾಮಗಳಲ್ಲಿ ಕಂಡುಬಂದಿವೆ. ಕ್ರಿ.ಶ.೧೦೭೭ರ ಯಾದಗಿರಿ ಶಾಸನವು ತ್ರಿಭುವನಮಲ್ಲ ವಿಕ್ರಮಾದಿತ್ಯನು ತನ್ನ ತಮ್ಮನಾದ ನಾಲ್ಕನೆಯ ಜಯಸಿಂಹನ ಬಂಡಾಯವನ್ನು ಉಪಶಮನಗೊಳಿಸಿ ಸಾಮ್ರಾಜ್ಯವನ್ನು ಮತ್ತಷ್ಟು ಸುಭದ್ರಗೊಳಿಸಿಕೊಂಡನೆಂದು ಮಾಹಿತಿಗಳು ದಾಖಲಾವಿಗೆವೆ. ಅಲ್ಲದೇ ಯಾದ(ಏತ)ಗಿರಿಯಲ್ಲಿಯೇ ತುಲಾಪರುಷ ಮತ್ತು ಹಿರಣ್ಯಗರ್ಭ ಯಾಗಗಳನ್ನು ನೆರವೇರಿಸಿ ದಾನದತ್ತಿಗಳನ್ನು ನೀಡಿದನೆಂಬ ವಿವರಗಳು ದಾಖಲಾಗಿವೆ. ಅಲ್ಲದೇ ಆತನ ಪಟ್ಟಣವು ನೆಲವೀಡುಗಳಲ್ಲಿ ಒಂದಾಗಿತ್ತು ಎಂಬ(ಉಪರಾಜಧಾನಿ) ಉಲ್ಲೇಖವುಂಟು. ಇದನ್ನು ಶಾಸನಗಳಲ್ಲಿ ಏತಗಿರಿ ನೆಲವೀಡವೆಂದು ಸಂಬೋಧಿಸಲಾಗಿದೆ. ಕ್ರಿ.ಶ.೧೧೦೭ರ ತೇದಿಯ ಆನ್ಪುರ್[೯೯] ಶಾಸನವು ಆತನು ಕಲ್ಯಾಣದಿಂದ ರಾಜ್ಯವಾಳುತ್ತಿರುವಾಗ ಅವನ ಪಿರಿಯರಸಿ ಚಂದಲದೇವಿಯ ಮಗನಾದ ಜಗದೇಕಮಲ್ಲ ಕುಮಾರ ಸತ್ಯಾಶ್ರಯ ದೇವರು ಮಹಾಮಂಡಳೇಶ್ವರನಾಗಿ ರಾಜ್ಯವಾಳುತ್ತಿದ್ದನು ಎಂಬ ವಿವರಗಳನ್ನು ನೀಡುತ್ತದೆ. ಅವನು ಕಲ್ಲ-ಕೆಳಗು ನಾಡಿನ ರಾಜಧಾನಿ ಉಜ್ಜಿಗವೊಳಲಿನ ಆನೆಮೇಶ್ವರ ದೇವರ ಪೂಜೆ ಪುನಸ್ಕಾರಗಳಿಗೆ ಅಲ್ಲಿಯ ಆಚಾರ್ಯ ದಿವ್ಯಶಕ್ತಿ ಪಂಡಿತರ ಕಾಲ್ತೊಳೆದು ದತ್ತಿ ಬಿಟ್ಟಿರುವ

ಬಗೆಗೆ ಮಾಹಿತಿ ಕೂಡಾ ಇದರಲ್ಲಿ ದಾಖಲಾಗಿದೆ. ಕಲ್ಲಕೆಳಗು ನಾಡು ಯಾದಗಿರಿ ತಾಲೂಕಿನ ಪೂರ್ವ ಭಾಗ ಹಾಗೂ ಮೊಹಬೂಬನಗರ ಜಿಲ್ಲೆಯನ್ನು ಒಳಗೊಂಡ ಪ್ರದೇಶವಾಗಿತ್ತೆಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಅಲ್ಲದೇ ಇದೇ ಶಾಸನದಲ್ಲಿ ಮಹಾಪ್ರಧಾನ ದಂಡನಾಯಕ ಪೋತರಸನು ಕಲ್ಲಕೆಳಗುನಾಡ ಮೊದಲ ಬಾಡ ರಾಜಧಾನಿ ಉಜ್ಜಿಗವೊಳಲದ ಆನೆಮೇಶ್ವರ ಮಠದಲ್ಲಿ ಶ್ರೀ ಶಾರದಾದೇವಿಯನ್ನು ಪ್ರತಿಷ್ಠಿಪಿಸಿ ವಾಚಸ್ಪತಿ ಪಂಡಿತದೇವರ ಕಾಲ್ತೊಳೆದು ಬಿಟ್ಟ ಭೂದತ್ತಿ ಕುರಿತು ವಿವರಿಸುತ್ತದೆ. ಈ ಗ್ರಾಮದಲ್ಲಿ ಕಂಡುಬಂದಿರುವ ಇನ್ನೊಂದು ಶಾಸನವು ಸಹ ದಾನಶಾಸನವಾಗಿದ್ದು ಅದು ಮಹಾಪ್ರಧಾನ ದಂಡನಾಯಕ ಭೋಗಭಟ್ಟ ಮತ್ತು ಇಂದ್ರಭಟ್ಟಯ್ಯಗಳು ಮತ್ತು ಮಹಾಪ್ರಧಾನ ಗೋಪರಸರು ಕಲ್ಲಕೆಳಗು ನಾಡಿನ ರಾಜಧಾನಿಯಲ್ಲಿರುವ(ಉಜ್ಜಿಗವೊಳು) ಮೂಲಸ್ಥಾನ ಸ್ವಯಂಭೂ ಮಹಾಕಾಳ ದೇವರ ತ್ರಿಕಾಲ ಪೂಜೆಗೆ ದತ್ತಿ ನೀಡಿರುವ ಉಲ್ಲೇಖಗಳನ್ನೊಳಗೊಂಡಿದೆ[೧೦೦] ಕ್ರಿ.ಶ.೧೧೧೫ರ ಇಡ್ಲೂರಿನ[೧೦೧] ಶಾಸನವು ತುಂಬಾ ಮುಖ್ಯವಾದ ಮಾಹಿತಿ ನೀಡುತ್ತದೆ. ತ್ರಿಭುವನಮಲ್ಲನ ಪಿರಿಯರಿಸಿ ಚಂದಲದೇವಿಯ ಮಗನೂ ಮಹಾಮಂಡಳೇಶ್ವರನೂ ಆದ ಎರಡನೆಯ ಜಗದೇಕಮಲ್ಲ ಸತ್ಯಾಶ್ರಯನನ್ನು ಹೆಸರಿಸಿದೆ. ಅವನ ಸಾಮಂತನಾದ ಭೂತರಸನು ಅಲ್ಲಿರುವ ಜಡೆಯ ಶಂಕರದೇವರಿಗೆ ದಾನ ನೀಡಿರುವ ವಿವರವನ್ನು ನೀಡುತ್ತದೆ. ಈ ಶಾಸನದಲ್ಲಿರುವ ವಿವರಗಳಿಂದ ಒಂದು ಮುಖ್ಯವಾದ ವಿಷಯ ತಿಳಿದುಬರುತ್ತದೆಯೆಂದು ಶ್ರೀಮತಿ ಹನುಮಾಕ್ಷಿ ಗೋಗಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದುವರೆಗೆ ವಿದ್ವಾಂಸರು ಆರನೆಯ ವಿಕ್ರಮಾದಿತ್ಯನ ಪಿರಿಯರಿಸಿ ಚಂದಲದೇವಿಗೆ ನಾಲ್ಕು ಜನ ಮಕ್ಕಳಿದ್ದು ಅವರಲ್ಲಿ ಮೂರು ಜನ(ಭೂಲೋಕಮಲ್ಲ ಸರ್ವಜ್ಞ ಸೋಮೇಶ್ವರ, ತೈಲಪ ಹಾಗೂ ಜಯಕರ್ಣ) ಗಂಡು ಮಕ್ಕಳು ಹಾಗೂ ಒಬ್ಬಳು ಮಗಳಿದ್ದಳೆಂದು ಹೇಳಿದ್ದಾರೆ. ಅಲ್ಲದೇ ಅವಳ ಮಗನೇ ಕಳಚೂರ್ಯ ಬಿಜ್ಜಳ. ಆದರೆ ಇದೆಲ್ಲದರ ಜೊತೆಗೆ ಆಕೆಗೆ ಇನ್ನೊಬ್ಬ ಮಗನಿದ್ದನೆಂಬ ವಿಷಯವು ಈ ಶಾಸನವನ್ನು ಗಮನಿಸಿದಾಗ ಆತ ಮತ್ತು ಚಂದಲದೇವಿಯರಿಗೆ ನಾಲ್ಕನೆಯ ಮಗನು ಒಬ್ಬನಿದ್ದನೆಂದು ತಿಳಿಯುತ್ತದೆ. ಇದು ಹೊಸ ವಿಷಯ ಆಗಿದೆ ಎಂದು ಅಭಿಪ್ರಾಯಿಸಿದ್ದಾರೆ. ಅವನಿಗೆ ಇರಿವೆಡಂಗ ಸತ್ಯಾಶ್ರಯ ಅಥವಾ ಜಗದೇಕಮಲ್ಲನೆಂಬ ಬಿರುದಿತ್ತು. ಅಲ್ಲದೇ ಅವನು ಮಹಾಮಂಡಳೇಶ್ವರನಾಗಿದ್ದನೆಂಬ ವಿವರವನ್ನು ಈ ಶಾಸನವು ನೀಡುತ್ತದೆಯೆಂದು ಹೇಳಲಾಗಿದೆ. ಅದೇ ವೇಳೆಗೆ ಆರನೆಯ ವಿಕ್ರಮಾದಿತ್ಯನು ಜಯಂತಿಪುರ (ಕಲ್ಯಾಣ) ನೆಲವೀಡಿನಿಂದ ಆಳುತ್ತಿದ್ದಿರುವ ಬಗೆಗೂ ಇದರಲ್ಲಿ ಮಾಹಿತಿ ದಾಖಲಾಗಿದೆ[೧೦೨].

ಇಡ್ಲೂರಿನಲ್ಲಿರುವ ಶಾಸನಸ್ತಂಭದ ಮೇಲೆ ಇನ್ನೊಂದು ಶಾಸನವಿದ್ದು ಅದು ಜಡೆಯ ಶಂಕರದೇವರಿಗೆ ಸೌಧರೆ ಜೋವಯನಾಯಕ, ತಿಪ್ಪೆಯನಾಯಕ, ಹೆಗ್ಗಡೆ ಆಳುಪರಸರು, ತಿಮ್ಮರಸರು ಸೇರಿ ಹಣದ ದತ್ತಿ ಬಿಟ್ಟಿರುವ ಮಾಹಿತಿಗಳನ್ನು ದಾಖಲಿಸುತ್ತದೆ[೧೦೩]. ಎಲ್ಲಕ್ಕಿಂತ

ಮುಖ್ಯವಾಗಿ ಈ ಶಾಸನವು ಅವನ ಪಟ್ಟಬಂಧೋತ್ಸದ ವರ್ಷವನ್ನು ಬೇರೆ ಬಗೆಯಲ್ಲಿ ಉಲ್ಲೇಖಿಸುವಂಥ ಮಹತ್ವದ ಶಾಸನವಾಗಿದೆ. ನಮಗೆಲ್ಲ ತಿಳಿದಿರುವ ಹಾಗೆ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನು ಕ್ರಿ.ಶ. ೧೦೭೬ರಲ್ಲಿ ಪಟ್ಟವೇರಿದನು ಎಂಬ ಮಾಹಿತಿ ಇದೆ. ಇದನ್ನು ವಡೇಗೇರಿ(ಜೇವರ್ಗಿ ತಾಲೂಕು) ಮತ್ತು ಕುರುವ(ಹೊನ್ನಾಳಿ ತಾಲೂಕು) ಶಾಸನಗಳು ಮೊಟ್ಟ ಮೊದಲ ದಾಖಲಿಸುತ್ತವೆ. ಆದರೆ ಕ್ರಿ.ಶ. ೧೦೭೬ರ ಪೂರ್ವದಲ್ಲಿಯೇ ಆತನು ಪಟ್ಟಬಂಧೋತ್ಸವವನ್ನು ಮಾಡಿಕೊಂಡಿದ್ದ ಎಂಬ ಮಾಹಿತಿಯನ್ನು ಇಡ್ಲೂರಿನ ಈ ಶಾಸನವು ದೃಢಪಡಿಸುತ್ತದೆ. ಸ್ವಸ್ತಿ ಶ್ರೀಮತ್ತ್ರಿಕ್ರಮಚಕ್ರವರ್ತಿ ತ್ರಿಭುವನ ಚಾಳುಕ್ಯ ಮಲ್ಲದೇವರು ಬೆಣ್ಣೆಕಲ್ಲ ನೆಲೆನೀಡಿನೊಳು ಪಟ್ಟಮಂ ಕಟ್ಟಿಸಿಕೊಂಡು ಸುಕ(ಖ) ಸಂಕಥಾವಿನೋದಿಂ ರಾಜ್ಯಂಗೆಯ್ಯುತ್ತಾಮಿರೆ' ಎಂದು ಉಲ್ಲೇಖಿಸುತ್ತದೆ[೧೦೧]. ಈ ವಿವರಗಳಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಆತನ ಪಟ್ಟಾಭಿಷೇಕ ಆ ಮೊದಲೇ ಆಗಿದೆ. ಆದರೆ ಆತನು ತನ್ನ ಸಹೋದರ ಎರಡನೆಯ ಸೋಮೇಶ್ವರನೊಂದಿಗೆ ಹೊಂದಿದ್ದ ಭಿನ್ನಾಭಿಪ್ರಾಯಗಳನ್ನು ಶಮನಗೊಳಿಸಿ ತಾನೇ ಸ್ಥಾಪಿಸಿದ ಶಕ ವರ್ಷದ ಸಂಬಂಧವಾಗಿ ಕ್ರಿ.ಶ.೧೦೭೬ರಲ್ಲಿ ಮತ್ತೆ ವಿಜೃಂಭಣೆಯಿಂದ ಪಟ್ಟಬಂಧೋತ್ಸವವನ್ನು ಮಾಡಿಕೊಂಡಿರಬಹುದೆಂದು ಅಭಿಪ್ರಾಯಿಸಬಹುದು. ತೆಲಂಗಾಣ ರಾಜ್ಯದ ಗಡಿಗುಂಟ ಇರುವ ಯಾದಗಿರಿ ತಾಲೂಕಿನ ಪೂರ್ವದ ಭಾಗವು ಕಲ್ಲಕೆಳಗು-೫೦೦ರಲ್ಲಿತ್ತು. ಆ ವಿವರ ನೀಡುವ ಶಾಸನವು ಮದ್ವಾರ(ಮಹಾದ್ವಾರ)ದಲ್ಲಿದೆ. ತೀರ್ಥಂಕರನ ಶಿಲ್ಪದ ಕೆಳ ಭಾಗದಲ್ಲಿ ಈ ಶಾಸನವಿದೆಯೆಂದು ದಾಖಲಿಸಲಾಗಿದೆ. ಆರನೆಯ ವಿಕ್ರಮಾದಿತ್ಯನ ಕಾಲದ ಮದ್ವಾರದ ಈ ಶಾಸನವು[೧೦೨]. ಉಜ್ಜಿಗವೊಳಲಿನ ನಖರರು ಹಾಗೂ ಬಮ್ಮಿಸೆಟ್ಟಿ ಬಹುಶಃ ಇಲ್ಲಿರುವ ಜಿನಾಲಯಕ್ಕೆ ದತ್ತಿ ನೀಡಿರುವ ಉಲ್ಲೇಖವನ್ನು ದೃಢಪಡಿಸುತ್ತದೆಂದು ವಿವರಿಸಲಾಗಿದೆ. ಈ ಗ್ರಾಮವು ಕಲ್ಲಕೆಳಗು-೫೦೦ರ ನಾಡಿನ ಪಶ್ಚಿಮದ ಮಹಾದ್ವಾರ(ಮಾದ್ವಾರ) ಆಗಿರಬಹುದೆಂದು ಅಭಿಪ್ರಾಯಿಸಲಾಗಿದೆ. ಈ ಅಭಿಪ್ರಾಯವು ಸರಿಯೆಂದೆನಿಸುತ್ತದೆ. ತ್ರಿಭುವನಮಲ್ಲ ವಿಕ್ರಮಾದಿತ್ಯನ ಕಾಲಾವಧಿಯ ಇನ್ನೆರಡು ಶಾಸನಗಳು ಏಲೇರಿ (ಯಾದಗಿರಿ ತಾಲೂಕು) ಗ್ರಾಮದಲ್ಲಿ ಕಂಡುಬಂದಿವೆ. ಅವುಗಳಲ್ಲಿ ದಾಖಲಾದ ವಿವರದ ಹಿನ್ನೆಲೆಯಲ್ಲಿ ಅವುಗಳು ಕ್ರಿ.ಶ.೧೧೧೦ ಮತ್ತು ೧೧೧೯ ಎಂದು ಗೊತ್ತುಪಡಿಸಲಾಗಿದೆ. ಸ್ಥಳೀಯ ದೇವಾಲಯಗಳಿಗೆ ಗಾವುಂಡರಿಬ್ಬರು ದಾನ ನೀಡಿರುವ ವಿವರಗಳನ್ನು ಅವು ನೀಡುತ್ತವೆ. ಅಲ್ಲದೇ ತ್ರಿಭುವನಮಲ್ಲನು ಕಲ್ಯಾಣ ನೆಲವೀಡಿನಿಂದ ರಾಜ್ಯವಾಳುತ್ತಿರುವ ಬಗೆಗೂ ಸಹ ವಿವರಗಳಿವೆ[೧೦೩].

ಸಮರ್ಥ ಮತ್ತು ಬಲಿಷ್ಠ ರಾಜನಾಗಿದ್ದ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನು ಕ್ರಿ.ಶ. ೧೧೨೬ರಲ್ಲಿ ಅಂತ್ಯವಾದನೆಂದು ಹೇಳಲಾಗುತ್ತದೆ. ಹಾಗಾಗಿ ಆತನ ಮಗನಾದ ಮೂರನೆಯ ಸೋಮೇಶ್ವರನು (ಕ್ರಿ.ಶ.೧೧೨೭-೧೧೩೯) ಪಟ್ಟಕ್ಕೆ ಬಂದನೆಂದು ಹೇಳಲಾಗುತ್ತದೆ. ಅವನು ಸಹ ಭೂಲೋಕಮಲ್ಲ ಹಾಗೂ ಸರ್ವಜ್ಞ ಚಕ್ರವರ್ತಿ ಎಂಬ ಬಿರುದುಗಳನ್ನು ಧರಿಸಿದ್ದನು.

ತಂದೆಯ ಸಾಹಸಗಳಿಂದ ಸುಭದ್ರಗೊಂಡಿದ್ದ ಸಾಮ್ರಾಜ್ಯದಲ್ಲಿ ಸಹಜವಾಗಿ ಶಾಂತಿ ನೆಲೆಸಿತ್ತು. ಹೀಗಾಗಿ ಅವನ ಕಾಲದಲ್ಲಿ ದಾಖಲಾಗಬಹುದಾದ ಯುದ್ಧಗಳೇನು ನಡೆಯಲಿಲ್ಲವೆಂದು ಹೇಳಬಹುದು. ಆದರೆ ಅವನೊಬ್ಬ ಸೃಜನಶೀಲ ಬರಹಗಾರನಾದನೆಂದು ಅಭಿಪ್ರಾಯಿಸಲಾಗುತ್ತದೆ. ಅವನು ರಚಿಸಿದ 'ಮಾನಸೋಲ್ಲಾಸ' (ಅಭಿಲಿಷಿತಾರ್ಥ ಚಿಂತಾಮಣಿ) ಎಂಬ ವಿಶ್ವಕೋಶ ಹಾಗೂ ವಿಕ್ರಮಾಂಕಾಭ್ಯುದಯ' ಎಂಬ ಕಾವ್ಯಗಳು ತುಂಬಾ ಪ್ರಸಿದ್ದಿಯನ್ನು ಪಡೆದಿವೆ. ಅವನ ಆಳ್ವಿಕೆ ಕಾಲದ ಶಾಸನಗಳು ಸಹ ಸುರಪುರ ಹಾಗೂ ಶಹಾಪುರ ತಾಲೂಕಿನಲ್ಲಿ ಲಭ್ಯವಾಗಿವೆ. ಕ್ರಿ.ಶ.೧೧೨೭ರ ಕಕ್ಕೇರಿ[೧೦೭] ಶಾಸನವು ಆತನ ಮಹಾಮಂಡೇಶ್ವರನಾಗಿದ್ದ ಮಲ್ಲಿದೇವರಸ ಹಾಗೂ ಕಕ್ಕೇರಿಯ ಬಮ್ಮ-ಯನಾಯಕ ಮತ್ತು ಮಾದೆಯ ನಾಯಕರು ಸೇರಿ ರೇವೇಶ್ವರ ದೇವರ ದೇವಾಲಯಕ್ಕೆ ದತ್ತಿ ನೀಡಿರುವ ಉಲ್ಲೇಖ ನೀಡುತ್ತದೆ. ಅಲ್ಲದೇ ಅಲ್ಲಿದ್ದ ಬ್ರಹ್ಮರಾಶಿ ಪಂಡಿತರು ಮುದಿನೀರ (ಮುದನೂರು) ಕುಮಾರೇಶ್ವರ ದೇವರ ಹಾಗೂ ಕಕ್ಕೇರಿಯಲ್ಲಿರುವ ರಬ್ಬೇಶ್ವರ ಹಾಗೂ ಹಗರಟಗಿಯ ಉಗ್ರಭೀಮೇಶ್ವರ ದೇವಾಲಯದ ಸ್ಥಾನಪತಿಗಳಾಗಿದ್ದರು ಎಂಬುದು ಮುಖ್ಯ. ಅಲ್ಲದೇ ಅವರು ಸಿದ್ಧ ರೇವಣದೇವಣ ಶಿಷ್ಯರು ಆಗಿದ್ದಾರೆಂಬ ಉಲ್ಲೇಖ ಗಮನಾರ್ಹವಾದುದೆಂದು ಅಭಿಪ್ರಾಯಿಸಲಾಗಿದೆ. ಕ್ರಿ.ಶ.೧೧೩೬ರ ಹುಣಸಗಿ[೧೦೮] ಶಾಸನವು ಅಗ್ರಹಾರ ವಿಕ್ರಮಪುರದ ಕೇಶವದೇವರಿಗೆ ದತ್ತಿ ಬಿಟ್ಟಿರುವ ಉಲ್ಲೇಖಗಳನ್ನು ನೀಡುತ್ತದೆ. ಇದರಲ್ಲಿ ಉಲ್ಲೇಖವಾದ ವಿಕ್ರಮಪುರ ಬಹುಶಃ ಹುಣಸಗಿಯಿಂದ ಸುಮಾರು ಹದಿನೈದು ಕಿಲೋಮೀಟರ್ ದೂರದಲ್ಲಿರುವ ಬೈಲಾಪುರ ತಾಂಡದ ಸುತ್ತಲಿರುವ ಪ್ರದೇಶ ಆಗಿರಬಹುದೇ? ಎಂದು ಅಭಿಪ್ರಾಯಿಸಲು ಅವಕಾಶವಿದೆ. ಕ್ರಿ.ಶ.೧೧೩೯ರ ಏವೂರು[೧೦೯] ಶಾಸನವು ಅವನ ದಂಡನಾಯಕನಾಗಿದ್ದ ಕಂಚರಸನು ಅಲ್ಲಿರುವ ಸ್ವಯಂಭು ಸೋಮೇಶ್ವರ ದೇವರ ಸೇವೆಗಳಿಗೆ ಹೆರ್ಜುಂಕ ದಾನ ನೀಡಿರುವುದನ್ನು ವಿವರಿಸುತ್ತದೆ. ಕ್ರಿ.ಶ.೧೧೩೬ರ ಸಿರಿವಾಳ[೧೧೦] ಶಾಸನವು ಆತನು ಕಲ್ಯಾಣದಿಂದ ಆಳುತ್ತಿರುವ ಬಗೆಗೆ ಮಾಹಿತಿ ನೀಡುತ್ತದೆ. ಅಲ್ಲದೇ ಮಹಾದಂಡನಾಯಕ ತಿಕ್ಕರಸ, ಮಹಾಮಂಡಳೇಶ್ವರ ಅಲ್ಲಹುಲಿಯರಸರು ಸೇರಿ ಇಲ್ಲಿರುವ ಕದಂಬೇಶ್ವರ ದೇವರಿಗೆ ದಾನಬಿಟ್ಟ ವಿವರ ನೀಡುತ್ತದೆ. ಶಾಸನದಲ್ಲಿ ಉಲ್ಲೇಖಿತ ಕದಂಬೇಶ್ವರ ದೇವಾಲಯವೇ ಬಹುಶಃ ಇಂದಿನ ಮಲ್ಲಿಕಾರ್ಜುನನ ಗುಡಿಯಾಗಿರಬಹುದೆಂದು ಊಹಿಸಲಾಗಿದೆ.

ಕಲ್ಯಾಣದ ಚಾಲುಕ್ಯ ಅರಸ ಮೂರನೆಯ ಸೋಮೇಶ್ವರನು ಕ್ರಿ.ಶ.೧೧೨೬ರಿಂದ ೧೧೩೯ರವರೆಗೆ ಆಳ್ವಿಕೆ ಮಾಡಿದರೆ ಅವನ ಮಗ ಎರಡನೆಯ ಜಗದೇಕಮಲ್ಲ(ಕ್ರಿ.ಶ.೧೧೩೯-೧೧೪೯ರ ವರೆಗೆ ರಾಜ್ಯಭಾರ ಮಾಡಿದ). ಆನಂತರ ಅವನ ಸಹೋದರ ಮೂರನೇ ತೈಲಪ (೧೧೪೯-೧೧೬೨) ರಾಜ್ಯವಾಳಿದನು. ಆದರೆ ಕ್ರಿ.ಶ.೧೧೬೨ರಲ್ಲಿ ಮೂರನೆಯ ತೈಲಪನನ್ನು ಸೋಲಿಸಿದ ಬಿಜ್ಜಳನು ಕಲಚೂರ್ಯರ ಅಧಿಕಾರ ಸ್ಥಾಪಿಸಿ ಹೊಸ ರಾಜ್ಯಾಡಳಿತಕ್ಕೆ ಅಡಿಗಲ್ಲನ್ನಿಟ್ಟ. ಈತನು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಮೊಮ್ಮಗನೆಂದು ಹೇಳಲಾಗುತ್ತದೆ. ಕಲ್ಯಾಣದ

ಚಾಲುಕ್ಯರು ಪರಿಭಾವಿಸಲಾಗಿದೆ. ಸಹೋದರ ಸಂಬಂಧಿಯಾಗಿದ್ದರೂ ಅವರ ಕಾಲದಲ್ಲಿ ಹುಟ್ಟಿಕೊಂಡ ಅಸ್ಥಿರತೆಯ ಲಾಭ ಪಡೆದು ಕಳಚೂರ್ಯ ರಾಜ್ಯವನ್ನು ಪ್ರತಿಷ್ಠಾಪಿಸಿದ್ದು ತುಂಬಾ ಮುಖ್ಯವಾಗಿತ್ತು. ಆದರೆ ಆತನಿಗೂ ಸಹ ತನ್ನ ರಾಜ್ಯದಲ್ಲಿಯೇ ಹುಟ್ಟಿಕೊಂಡಿದ್ದ ಗೊಂದಲದಿಂದ ಸಾಮ್ರಾಜ್ಯ ಗೋಡೆಗೆ ಬಿರುಕುಬಿಟ್ಟಿತ್ತು. ಆನಂತರ ಕ್ರಿ.ಶ.೧೧೮೪ರಲ್ಲಿ ಕಳಚೂರ್ಯರು ಸಹ ರಾಜಕೀಯದಿಂದ ನಿರ್ಗಮಿಸಿ ಮತ್ತೆ ಚಾಲುಕ್ಯ ಸಾರ್ವಭೌಮತೆಯು ಪುನರ್ ಸ್ಥಾಪನೆಗೊಂಡಿತು. ಕಲ್ಯಾಣದ ಚಾಲುಕ್ಯ ಅರಸ ಇದರ ಲಾಭ ಪಡೆದು ನಾಲ್ಕನೆಯ ಸೋಮೇಶ್ವರ ಪಟ್ಟಕ್ಕೆ ಬಂದನು. ಅವನು ಸಹ ಹೆಚ್ಚಿನ ದಿನಗಳ ಕಾಲ ಆಡಳಿತ ನಿರ್ವಹಿಸಲು ಸಾಧ್ಯವಾಗಲಿಲ್ಲ. ಅವನ ಕಾಲದಲ್ಲಿ ಅವರ ಸೌರ್ವಭೌಮತ್ವವು ಕೇವಲ ನಾಮ ಮಾತ್ರವಾಗಿತ್ತು. ರಾಜ್ಯದಲ್ಲಿ ತಲೆದೋರಿದ ಅಸ್ಥಿರತೆಯ ಲಾಭ ಪಡೆದ ಹೊಯ್ಸಳ ಎರಡನೆಯ ಬಲ್ಲಾಳ ಕಲ್ಯಾಣದ ಚಾಲುಕ್ಯ ಸೈನ್ಯವನ್ನು ಸೋಲಿಸಿ ಅವರನ್ನು ಶಾಶ್ವತವಾಗಿ ಅಸ್ತಂಗತವಾಗುವಂತೆ ಮಾಡಿದ. ಅಲ್ಲಿಂದ ಚಾಲುಕ್ಯರ ಹೆಜ್ಜೆ ಗುರುತುಗಳು ಶಾಶ್ವತವಾಗಿ ಇಲ್ಲವಾದವು. ಅವರ ಆಡಳಿತದ ಕೊನೆ ಕಾಲಘಟ್ಟದಲ್ಲಿ ನಿರ್ಮಾಣವಾದ ಕೆಲವು ಶಾಸನಗಳು ಈ ಜಿಲ್ಲೆಯಲ್ಲಿ ಕಂಡುಬಂದಿವೆ.

ಕ್ರಿ.ಶ.೧೧೪೪ರ ಹಗರಟಗಿ[೧] ಶಾಸನವು ಎರಡನೆಯ ಜಗದೇಕಮಲನು ಕಲ್ಯಾಣದಿಂದ ಆಳುತ್ತಿರುವ ಬಗೆಗೆ ಮಾಹಿತಿ ನೀಡುತ್ತದೆ. ಅಗ್ರಹಾರ ಹಗರಟಗಿಯಲ್ಲಿದ್ದ ಸೂರ್ಯರಾಶಿ ಪಂಡಿತರ ಕಾಲ್ತೊಳೆದು ಗವರೇಶ್ವರ ದೇವರಿಗೆ ದತ್ತಿ ಬಿಟ್ಟಿರುವ ಉಲ್ಲೇಖವನ್ನು ಇದು ಹೊಂದಿದೆ. ಅವರು ಆ ದೇವಾಲಯದ ಸ್ಥಾನಾಚಾರ್ಯರಾಗಿದ್ದರು. ಈ ಆಚಾರ್ಯರು ಸಿಂಹಪರ್ಷೆಯ ಮಲೆಯಾಳ ಪಂಡಿತರ ಶಿಷ್ಯರಾಗಿದ್ದರು ಎಂಬ ಉಲ್ಲೇಖ ಮಹತ್ವದ್ದಾಗಿದೆ. ಅಲ್ಲದೇ ಗಂಗರ ಮಲ್ಲಿಸೆಟ್ಟಿ ಎಂಬ ಹೆಸರು ಇರುವುದು ಹೆಚ್ಚಿನ ಕುತೂಹಲ ಮೂಡಿಸುತ್ತದೆ ಎಂದು ಅಭಿಪ್ರಾಯಿಸಲಾಗಿದೆ[೨] ಬಹುಶಃ ಈತನು ಗಂಗರ ನಾಡಿನಿಂದ ಬಂದಿದ್ದವನಾಗಿದ್ದನೇ? ಎಂಬ ಕುತೂಹಲದ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಈ ಶಾಸನದಲ್ಲಿ ಪ್ರಸ್ತಾಪಿತವಾದ ಬಹುಮುಖ್ಯ ವಿಷಯವೆಂದರೆ ಹಲವಾರು ನಾಡುಗಳ ಕುರಿತಿರುವ ಉಲ್ಲೇಖಗಳು. ಇದರಲ್ಲಿ ಗಂಗ, ವಂಗ, ಕಳಿಂಗ, ಕಾಂಭೋಜ, ಕೊಂಗು, ಕೊಂಕಣ, ಚೇರ, ಚೋಳ, ಪಾಂಡ್ಯ, ಆಂಧ್ರ, ಕರ್ಣ್ನಾಟ ಎಂಬ ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ. ಇದರಲ್ಲಿ ಉಲ್ಲೇಖಿತವಾದ ತುರಸ್ಕ ಬಹುಶಃ ತುರ್ಕಿ ಅಥವಾ ಟರ್ಕಿ ಆಗಿರಬಹುದೆಂದು ಅಂದಾಜಿಸಲಾಗಿದೆ. ಆ ಕಾಲಘಟ್ಟದಲ್ಲಿಯೇ ತುರ್ಕಸ್ಥಾನ, ಅರಬ್ ಸ್ಥಾನ ಮತ್ತು ಅಫಘಾನಿಸ್ತಾನ ಪ್ರದೇಶಗಳಿಂದ ಮುಸ್ಲಿಂ ಆಡಳಿತಗಾರರು ಹೆಚ್ಚಿನ ಸಂಖ್ಯೆಯಲ್ಲಿ ಭಾರತವನ್ನು ಪ್ರವೇಶಿಸಿದರು. ಬಹುಶಃ ಈ ಪದವು ಅದನ್ನೇ ಸೂಚಿಸುತ್ತದೆಯೆಂದು ಅನುಮಾನಿಸಬಹುದು. ಅಲ್ಲದೇ ಇದೇ ಶಾಸನದಲ್ಲಿ ಉಲ್ಲೇಖಿತ ಚೌಸಷ್ಠಿಯೋಗಪೀಠ ಹಾಗೂ ಅದಕ್ಕೆ ಸಂಬಂಧಿಸಿದ ಅರವತ್ತ ನಾಲ್ಕು ಪೂಜಾಸ್ಥಾನಗಳಿದ್ದವು ಎಂಬ ವಿವರವು ಬಹುಮುಖ್ಯವಾದ ಸಂಗತಿಯೆಂದು ತಿಳಿಯಬಹುದು.

ಕನ್ನಡ ನಾಡಿನ ಚರಿತ್ರೆಯಲ್ಲಿ ಬಹುಮಹತ್ವದ ಪಾತ್ರವಹಿಸಿದ ಪ್ರಸಿದ್ಧ ವ್ಯಾಪಾರಿ ಶ್ರೇಣಿ ಅಯ್ಯಾವೊಳೆ ಐದನೂರರ ಕುರಿತು ಇದರಲ್ಲಿ ಉಲ್ಲೇಖವಿದೆ. ಅವರನ್ನು ಭಗವತಿದೇವಿಯ ಮಕ್ಕಳು ಮತ್ತು ಹದಿನೆಂಟು ನಾಡಿನ ಯಜಮಾನರು ಎಂದು ಉಲ್ಲೇಖಿಸಿರುವುದು ತುಂಬಾ ಮಹತ್ವವಾದ ವಿಚಾರವೇ ಆಗಿದೆ. ಈತನ ಕಾಲದ ಇನ್ನೆರಡು ಶಾಸನಗಳು ಮೂದನೂರಿನಿಂದ ವರದಿಯಾಗಿವೆ. ಕ್ರಿ.ಶ.೧೧೪೬ರ ಶಾಸನವು[೧೧೩]. ಅಲ್ಲಿರುವ ರಾಮೇಶ್ವರ ದೇವರಿಗೆ ದಾನ ಬಿಟ್ಟಿರುವ ಉಲ್ಲೇಖ ನೀಡುತ್ತದೆ. ಈ ಶಾಸನದಲ್ಲಿ ಮುದನೂರು ಅಗ್ರಹಾರವನ್ನು ಶ್ರೀರಾಮದತ್ತಿ, ಸರ್ವನಮಸ್ಯದ ಅಗ್ರಹಾರ, ದಕ್ಷಿಣ ವಾರಣಾಸಿ ಮತ್ತು ಶಾಸನದ ಮನೆ ಎಂದು ಉಲ್ಲೇಖಿಸಲಾಗಿದೆ. ಈ ಅಗ್ರಹಾರವು ಆ ಕಾಲದಲ್ಲಿ ಪ್ರಸಿದ್ಧ ವಾಣಿಜ್ಯ ಪಟ್ಟಣವಾಗಿತ್ತೆಂಬುದು ತುಂಬಾ ಮುಖ್ಯವಾದುದು. ಕಲ್ಯಾಣ ನೆಲೆವೀಡಿನಿಂದ ಎರಡನೆಯ ಜಗದೇಕಮಲ್ಲ ಆಳುತ್ತಿದ್ದನೆಂದು ಉಲ್ಲೇಖಿಸಲಾಗಿದೆ. ಇದೇ ಗ್ರಾಮದಲ್ಲಿ ಕಂಡು ಬಂದಿರುವ ಕ್ರಿ.ಶ.೧೧೪೨ ಮತ್ತು ಕ್ರಿ.ಶ.೧೧೫೪ರ ಶಾಸನವು ಆತನ ಮಹಾಮಂಡಳೇಶ್ವರನಾಗಿದ್ದ ಕಪ್ಪದೇವರಸನ ಉಲ್ಲೇಖ ನೀಡುತ್ತದೆ. ಅಲ್ಲಿನ ಸ್ಥಾನಾಚಾರ್ಯರಾದ ತೇಜೋರಾಶಿ ಪಂಡಿತರ ಪಾದ ತೊಳೆದು ಭೂಮಿಯನ್ನು ದಾನವಾಗಿ ಕೊಟ್ಟಿರುವ ಮಾಹಿತಿಗಳಿವೆ. ಆದರೆ ಈ ಶಾಸನದಲ್ಲಿ ಎರಡು ಬಗೆಯ ಕಾಲಮಾನವನ್ನು ನಮೂದಿಸಲಾಗಿದೆಯೆಂದು ತಿಳಿದು ಬರುತ್ತದೆ[೧೧೪]

ಶಹಾಪುರ ತಾಲೂಕಿನ ಸಂಗಮದಲ್ಲಿ ಈತನ ಕಾಲದ ಉಲ್ಲೇಖವೊಂದು ಕಂಡುಬಂದಿದ್ದು ಅದು ಅಲ್ಲಿರುವ ಗುಡಿಯ ಮುಂಭಾಗದಲ್ಲಿಯೇ ಇದೆ[೧೧೫]. ಇದೊಂದು ಬಹು ದೀರ್ಘವಾದ ವಿಷಯಗಳನ್ನು ಪ್ರಸ್ತಾಪಿಸಿರುವ ಶಾಸನವಾಗಿದೆ. ಕ್ರಿ.ಶ.೧೧೪೩ರ ಈ ಶಾಸನವು ಆತನ ಮಹಾಪ್ರಧಾನ ಬಂಮಣಯ್ಯಗಳು ತಮ್ಮ ಚಿದ್ದರಾಜನು ಸಗರನಾಡಿನಲ್ಲಿದ್ದ ಗುಂಡಲೂರು, ಸೂಗೂರು ಮತ್ತು ಕೋಬಾಳ ಗ್ರಾಮಗಳನ್ನು ದೇವರ ಸೇವೆಗೆ ಅರ್ಪಿಸುತ್ತಾನೆ. ಈ ದೇವಾಲಯದಲ್ಲಿ ಓದುವ ಮತ್ತು ಕೇಳುವ ಎರಡು ಬಗೆಯ ತಪೋಧನರಿದ್ದರೆಂದು ಉಲ್ಲೇಖಿಸುತ್ತದೆ. ಅಲ್ಲದೇ ತೈತ್ರೇಯವೇದ ಕಂಡಿಕೆ ಓದುವ ವಿದ್ಯಾರ್ಥಿಗಳು ಇಲ್ಲಿದ್ದರೆಂಬ ವಿವರವಿದೆ. ಅಲ್ಲದೇ ಕಾಳಾಮುಖ ರುದ್ರಶಕ್ತಿ ಪಂಡಿತರ ಉಲ್ಲೇಖವು ಈ ಶಾಸನದಲ್ಲಿದೆ. ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ವಂಶಾವಳಿಯನ್ನು ಕುರಿತು ಪ್ರಸ್ತಾಪಿಸಲಾಗಿದೆಯಲ್ಲದೇ ಅಂತಿಮವಾಗಿ ಎರಡನೆಯ ಜಗದೇಕಮಲ್ಲನು ಕಲ್ಯಾಣ ನೆಲೆವೀಡಿನಿಂದ ಆಳುತ್ತಿದ್ದನೆಂದು ವಿವರಿಸಲಾಗಿದೆ. ಈ ಸ್ಥಳದ ಸುತ್ತಮುತ್ತಲಿದ್ದ ಕೋಡಾಲ, ಹಯ್ಯಾಳ, ಹಡಗಿಲೆ, ಮುಡಬಾಳ ಮತ್ತು ಹೆಮ್ಮಡಗಿ ಗ್ರಾಮಗಳನ್ನು ಉಲ್ಲೇಖಿಸಲಾಗಿದೆ. ಈ ರಾಜನಿಗೆ ಸಂಬಧಿಸಿದಂತೆ ಯಾದಗಿರಿ ತಾಲೂಕಿನಲ್ಲಿ ಯಾವುದೇ ಶಾಸನ ಕುರುಹು ಕಂಡುಬಂದಿರುವ ವರದಿ ಇಲ್ಲ.

ಕಲ್ಯಾಣದ ಚಾಲುಕ್ಯ ಅರಸ ಎರಡನೆಯ ಜಗದೇಕಮಲ್ಲ ಪಟ್ಟಕ್ಕೆ ಬಂದಾಗಲೇ ಅವನಿಗೆ ತುಂಬಾ ವಯಸ್ಸಾಗಿತ್ತು. ಆಗಲೇ ಸಾಮಂತರೆಲ್ಲರೂ ದಂಗೆ ಪ್ರಾರಂಭಿಸಿದ್ದರು. ಕಾಕತೀಯ

ವಂಶದ ಎರಡನೆಯ ಪ್ರೋಲನು ತನ್ನ ಬಲ ಹೆಚ್ಚಿಸಿಕೊಂಡು ಪೂರ್ವ ಕರಾವಳಿಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡನು. ಅಲ್ಲದೇ ಮುಖ್ಯವಾಗಿ ಹೊಯ್ಸಳ ವಿಷ್ಣುವರ್ಧನನು ದಂಗೆಯೆದ್ದು ಬಂಕಾಪುರ ಹಾನಗಲ್ಲು ಮತ್ತು ಬನವಾಸಿಗಳನ್ನು ವಶಪಡಿಸಿಕೊಂಡ. ಇವೆಲ್ಲಕ್ಕಿಂತ ಮುಖ್ಯವಾಗಿ ಅವರ ದಾಯಾದಿಗಳಾದ ಕಲಚೂರ್ಯ ಬಿಜ್ಜಳನು ಸ್ವತಂತ್ರನಾಗಲು ಹವಣಿಸುತ್ತಿದ್ದನೆಂದು ಅಭಿಪ್ರಾಯಿಸಲಾಗಿದೆ[೧೧೬]. ಇಂಥ ಎಲ್ಲ ಜಟಿಲತೆಗಳ ಮಧ್ಯೆ ಬಸವಳಿದ ಎರಡನೆಯ ಜಗದೇಕಮಲ್ಲ ರಾಜಕೀಯದಿಂದ  ಬಹುಬೇಗನೆ ಅಸ್ತಂಗತನಾದ ಅವನಿಗೆ ಮಕ್ಕಳಿರದ ಕಾರಣ ಅವನ ಸಹೋದರ ಮೂರನೆಯ ತೈಲಪ ಕ್ರಿ.ಶ. ೧೧೪೯ರ ಪಟ್ಟಾಭಿಷಿಕ್ತನಾದ. ಇಂಥ ಕಠಿಣ ಸನ್ನಿವೇಶಗಳ ಮಧ್ಯೆಯು ಆತನು ಕ್ರಿ.ಶ.೧೧೬೨ರವರೆಗೂ ರಾಜನಾಗಿ ಮೆರೆದನು. ಕಲಚೂರಿ ಬಿಜ್ಜಳನು ಹೂಡಿದ ದಂಗೆಯಿಂದಾಗಿ ಮೂರನೆಯ ತೈಲಪ ರಾಜ್ಯ ಕಳೆದುಕೊಳ್ಳಬೇಕಾಯಿತು.

ಮೂರನೆಯ ತೈಲಪನಿಗೆ ಸಂಬಂಧಿಸಿದಂತೆ ಈ ತಾಲೂಕಿನಲ್ಲಿನ ಏಕೈಕ ಶಾಸನವು ಮುದನೂರಿನಲ್ಲಿ ಕಂಡುಬಂದಿದೆ. ಇದು ಕ್ರಿ.ಶ.೧೧೮೦ರ ತೇದಿ ಹೊಂದಿದೆ[೧೧೭]. ಆದರೆ ಆ ಸಂದರ್ಭಕ್ಕಾಗಲೇ ಕಲಚೂರಿಗಳೇ ರಾಜ್ಯವಾಳುತ್ತಿದ್ದರು. ಈ ಶಾಸನದಲ್ಲಿ ಚಾಳುಕ್ಯಭರಣಂ ಶ್ರೀಮತ್ತ್ರೈಲೋಕ್ಯಮಲ್ಲ ದೇವರು ಕಲ್ಯಾಣಪುರ ನೆಲೆವೀಡಿನಿಂದ ಸುಖಸಂಕಥಾ ವಿನೋದದಿಂದ ರಾಜ್ಯವಾಳುತ್ತಿದ್ದರೆಂದು ಉಲ್ಲೇಖಿಸಲಾಗಿದೆ. ಅಲ್ಲದೇ ಅಲ್ಲಿರುವ ಮಹಾಜನರು ಸಹ ಅವನನ್ನು ಸಂಬೋಧಿಸಿಯೇ ಅಲ್ಲಿದ್ದ ರಾಮೇಶ್ವರ ಹಾಗೂ ಲಕ್ಷ್ಮಣೇಶ್ವರ ದೇವಾಲಯಗಳಿಗೆ ಭೂಮಿ ದಾನ ಮಾಡಿದ ಉಲ್ಲೇಖವನ್ನು ನೀಡುತ್ತದೆ[೧೧೮]. ಆದರೆ ಈ ಶಾಸನದಲ್ಲಿ ಯಾವುದೇ ದಂಡನಾಯಕರದ್ದಾಗಲಿ ಅಥವಾ ಮಹಾಮಂಡಳೇಶ್ವರರ ಹೆಸರನ್ನಾಗಲಿ ಉಲ್ಲೇಖಿಸಿಲ್ಲವೆಂಬುದು ಮುಖ್ಯವಾದುದು. ಆದರೆ ಅಲ್ಲಿದ್ದ ಮಹಾಜನರನ್ನು ತುಂಬಾ ಹೊಗಳಿಕೆಯ ಮೂಲಕ ಅವರ ಕಾರ್ಯಗಳನ್ನು ಸ್ತುತಿಸಲಾಗಿದೆ. ಕಲ್ಯಾಣದ ಚಾಲುಕ್ಯರ ಅತಂತ್ರ ಸ್ಥಿತಿಯ ಕಾಲಘಟ್ಟದಲ್ಲಿದ್ದ ಇನ್ನೆರಡು ಶಾಶನಗಳು ಶಹಾಪೂರ ತಾಲೂಕಿನಿಂದ ವರದಿಯಾಗಿವೆ. ಕ್ರಿ.ಶ.೧೧೭೪ರ ತೇದಿಯ ಶಿರವಾಳದಲ್ಲಿರುವ ಈ ಶಾಸನವು[೧೧೯] ಮಹಾಮಂಡಳೇಶ್ವರ ಎಳಮೇಲ ಸಿಂಗಿದೇವರಸನ ತಾಯಿ ನಾಗಲಾದೇವಿ, ಮಹಾಪ್ರಧಾನ ಕೇತಯ ನಾಯಕರು ಹಾಗೂ ಯಾದವ ಭಿಲ್ಲಮದೇವನ ಅಧಿಕಾರಿ ಅಪ್ಪಯ್ಯನಾಯಕರೆಲ್ಲರೂ ಸೇರಿ ಎಳಮೇಲ-೫೦ರಲ್ಲಿದ್ದ ಮುರವಡಿ ಗ್ರಾಮವನ್ನು ಸಿರವೊಳಲು ಸಿದ್ಧಸಾಂತೇಶ್ವರ ದೇವರ ಪೂಜಾವಿಧಿಗೆಂದು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ. ಅಲ್ಲದೇ ಶಿವಯೋಗಿ ಶಾಂತಿಮಯ್ಯ ಹಾಗೂ ಅವನ ಮಗ ರೇವಣ ದೇವಯ್ಯಗಳು ಪವಾಡ ಪುರುಷರಾಗಿದ್ದರೆಂದು ಶಾಸನವು ವಿವರಿಸುತ್ತದೆ(ಇದರ ಕಾಲ ಕ್ರಿ.ಶ.೧೧೪೯. ಆದರೆ ೧೧೭೪ ಎಂದು ದಾಖಲಾಗಿದೆ). ಈ ಶಾಸನವು ಮೂಲತಹ ಸರ್ ವಾಲ್ಟರ್ ಎಲಿಯಟ್‌ನೇ 'ಕರ್ನಾಟಕ ದೇಶ್ ಇನ್ಸ್ಕ್ರಿಪ್ಶನ್ಸ್' ಎಂಬ ಗ್ರಂಥದಲ್ಲಿ ಪ್ರಕಟಿಸಿದ್ದಾನೆ ಎಂಬ ವಿವರವಿದೆ[೧೨೦]. ಇದರಲ್ಲಿ

ಕುತೂಹಲಕಾರಿ ಕೆಲವು ವಿಚಾರಗಳು ಪ್ರಸ್ತಾಪವಾಗಿರುವುದನ್ನು ವಿವರಿಸಲಾಗಿದೆ. ದಕ್ಷಿಣ ವಾರಣಾಸಿ ವಿಖ್ಯಾತಿಯ ಸಿರವಾಳದ ಸಿದ್ಧಸಾಂತೇಶ್ವರ ದೇವರರಂಗ ಭೋಗಕ್ಕೆ ದಾನ ಬಿಟ್ಟಿರುವ ಮಾಹಿತಿ ಇದೆ. ಅಲ್ಲದೇ ಇದನ್ನು ಧರ್ಮದ ಮನೆಯೆಂದು ಕರೆಯಲಾಗಿದೆ. ಈ ಶಾಸನದಲ್ಲಿ ಉಲ್ಲೇಖವಾದ, ಸಿದ್ಧರೇವಣ ಪಂಚಾಚಾರ್ಯರಲ್ಲಿ ಪ್ರಸಿದ್ಧವೀರಶೈವ ಗುರುವಾಗಿದ್ದ ರೇವಣಸಿದ್ದನೋ ಅಥವಾ ಭಿನ್ನವ್ಯಕ್ತಿಯೋ? ಎಂಬುದು ನಿಷ್ಕರ್ಷೆಯ ದೃಷ್ಟಿಯಿಂದ ತುಂಬಾ ಚಿಂತನೀಯವಾದುದೆಂದು ಅಭಿಪ್ರಾಯಿಸಲಾಗಿದೆ[೧೨೧]. ಆದರೆ ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿ ಅವರು ಪ್ರಕಟಗೊಂಡಿರುವ ಕೆಲವು ಶಾಸನಗಳನ್ನು ಅನುಲಕ್ಷಿಸಿ(ಶಹಾಪುರ ತಾಲೂಕಿನ ಸಿರವಾಳದ ಕ್ರಿ.ಶ.೧೧೭೩ ಮತ್ತು ಕ್ರಿ.ಶ.೧೧೮೯ರ ಹಾಗೂ ಜೇವರ್ಗಿ ತಾಲೂಕಿನ ಕೊಲ್ಲೂರಿನ ಕ್ರಿ.ಶ. ೧೧೭೫ರ ಹಾಗೂ ಕಕ್ಕೇರಿ(ಸುರಪುರ ತಾಲೂಕು) ಮತ್ತು ಭೂಯಾರ(ಇಂಡಿ ತಾಲೂಕು) ಶಾಸನಗಳನ್ನು ಸಾಂದರ್ಭಿಕವಾಗಿ ಬಳಿಸಿಕೊಂಡು) ಬೇರೆ ಬಗೆಯ ಆಲೋಚನೆಗಳನ್ನು ಪ್ರಕಟಿಸಿದ್ದಾರೆ[೧೨೨]. ಅವರು ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಮುಖ್ಯವಾಗಿ "ತಗರು ಪುರಾಣ"ವನ್ನು ಅವಲಂಬಿಸಿದ್ದಾರೆ. ಶಾಂತಯ್ಯ ಅಥವಾ ಶಾಂತಮುತ್ತಯ್ಯ ಮೂಲತಹ ಕುರುಬ ಸಮುದಾಯಕ್ಕೆ ಸಂಬಂಧಿಸಿದವರಾಗಿದ್ದು ಅವನ ಮಗನೇ ರೇವಣಸಿದ್ದ ಅಥವಾ ರೇವಣ ದೇವಯ್ಯ ಅಥವಾ ಸಿದ್ಧರೇವಣ ಎಂದು ವಿವರಿಸಿದ್ದಾರೆ. ಶೈವ ಪಂಥ ಪಾಶುಪತ ಸಿದ್ಧಾಂತಿಗಳು ಭಿನ್ನವಾದ ಸಿದ್ಧಾಂತಗಳನ್ನು ಪ್ರಕಟಿಸಿದವರು. ಕಾಲಾನಂತರ ಅದು ಸಹ ಲಾಕುಳ ಶೈವ ಅಥವಾ ಪಾಶುಪತದಲ್ಲಿ ವಿಲೀನಗೊಳ್ಳುತ್ತಾ ಮುಂದಿನ ದಿನಗಳಲ್ಲಿ ವಚನ ಚಳುವಳಿಯ ಪ್ರಭಾವದಿಂದ ಬೇರೊಂದರಲ್ಲಿ ಕವಲೊಡೆಯುತ್ತಾ ಬೆಳೆದು ಬಂದಿತೆಂದು ವಿವರಿಸುತ್ತಾರೆ. ಅಲ್ಲದೇ ದೈವಿಸ್ವರೂಪಿ ಪಡೆದ ಸರೂರಿನ(ಮುದ್ದೇಬಿಹಾಳ ತಾಲೂಕು) ಕುರುಬರ ಸಂಪ್ರದಾಯಕ್ಕೆ ಸೇರಿದ ಶಾಂತಿಮಯ್ಯನೇ ರೇವಣಸಿದ್ಧನ ತಂದೆ. ರೇವಣಸಿದ್ಧನ ವಿಚಾರಗಳು ಸಿದ್ಧರಾಮನ ನಾತಪಂಥದೊಂದಿಗೂ ಮೇಳೈಸಿ ಬೆಳೆದಿವೆ ಎಂದು ಅಭಿಪ್ರಾಯಿಸಲಾಗಿದೆ. ಕ್ರಿ.ಶ.೧೧೮೫ರ ಹೋತಗಲ್‌ನ[೧೨೩] ಶಾಸನವು ಸೌದೊರೆ ಬೊಮ್ಮಯ್ಯ ಹಾಗೂ ಇತರರು ಹೋತಗಲ್ಲನ್ನು ಸಿದ್ಧಶಾನ್ತೀಶ್ವರ ದೇವರಿಗೆ ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ[೧೨೪].

ಚಾಲುಕ್ಯ ಅರಸರ ಕೊನೆಯ ಕುಡಿಯಾಗಿ ಬಿಂಬಿತನಾಗಿರುವ ನಾಲ್ಕನೆಯ ಸೋಮೇಶ್ವರನಿಗೆ ಸಂಬಂಧಿಸಿದಂತೆ ಶಹಾಪುರ ತಾಲೂಕಿನ ಹೋತಗಲ್ಲಿನ ಕ್ರಿ.ಶ.೧೨೦೮ರ[೧೨೫] ಹಾಗೂ ಹೆಮ್ಮಡಿಗೆಯ ಕ್ರಿ.ಶ.೧೧೮೭ರ ಶಾಸನಗಳು ನಾಲ್ಕನೆಯ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದಹವುಗಳೆಂದು ತಿಳಿಯಬಹುದು. ಕ್ರಿ.ಶ.೧೧೭೫ರ ಹೋತಗಲ್ಲಿನ ಶಾಸನವು ವೀರ ಸೋಮೇಶ್ವರ ಅಥವಾ ನಾಲ್ಕನೆಯ ಸೋಮೇಶ್ವರನನ್ನು ಕಳಚೂರ್ಯ ರಾಜ್ಯ ನಿರ್ಮೂಲನಕಾರನೆಂದು ಸಂಬೋಧಿಸಿದೆ. ಅಲ್ಲದೇ ಅವನ ದಂಡನಾಯಕರಾದ ಕುಮಾರ ಬಮ್ಮಿದೇವರಸರ ದಂಡನಾಯಕ ಅಲ್ಲಪುಲಿದೇವರಸನು ಸಿದ್ಧಶಿವಯೋಗಿ ಶಾನ್ತಿಮಯ್ಯಂಗಳ ಭೂನಂತಮಪ್ಪ ಸಿರಿವೊಳಲ

ಶಾನ್ತೀಶ್ವರದೇವರ ದೇವರ ಕಾರ್ಯಕ್ಕಾಗಿ ಸಿದ್ಧ ರೇವಣಯ್ಯಗಳ ಕಾಲ್ತೊಳೆದು ಹೋತುಗಲ್ಲ ಗ್ರಾಮವನ್ನು ದಾನ ಕೊಟ್ಟ ಉಲ್ಲೇಖವನ್ನು ನೀಡುತ್ತಾರೆ. ಹೆಮ್ಮಡಗಿ ಶಾಸನವು ಕ್ರಿ.ಶ.೧೧೮೩ರ ತೇದಿಯದ್ದು ಈ ಶಾಸನ ಅಧ್ಯಯನ ದೃಷ್ಟಿಯಿಂದ ತುಂಬಾ ಮುಖ್ಯವಾದ ಮಾಹಿತಿ ನೀಡುತ್ತದೆ. ಕಾರಣ ಕಲಚೂರಿಗಳಿಂದ ರಾಜ್ಯವನ್ನು ಕಸಿದುಕೊಂಡ ಕಲ್ಯಾಣ ಚಾಲುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ಸೆಲೆಯಹಳ್ಳಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದನು. ಅಲ್ಲದೇ ಆತನ ಈ ಗೆಲುವಿನಲ್ಲಿ ಪ್ರಮುಖ ಪಾತ್ರವಹಿಸಿದ ದಂಡನಾಯಕರ ಹಾಗೂ ಮಹಾಮಂಡಳೇಶ್ವರರ ಕುರಿತು ಕೆಲವು ಮಹತ್ವದ ವಿವರಗಳು ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಪರಮ ಮಹೇಶ್ವರನೆಂದು ಕರೆದುಕೊಂಡಿರುವ ದಂಡನಾಯಕ ಬಮ್ಮಿದೇವನ (ಬರ್ಮದೇವ)ಹಾಗೂ ಮಹಾಮಂಡಳೇಶ್ವರರಾದ ಅಲ್ಲಹುಲಿದೇವರಸರು ಎಮ್ಮಡಗಿ ಹಂದೇಶ್ವರ ದೇವರಿಗೆ ದಾನಕೊಟ್ಟ ಮಾಹಿತಿಯನ್ನು ನೀಡುತ್ತದೆ. ಅಲ್ಲದೇ ಉಲ್ಲೇಖಿತ ಈ ಬರ್ಮರಸನು ಕಳಚೂರಿಗಳನ್ನು ಹೊಡದೋಡಿಸಿ ಚಾಲುಕ್ಯರನ್ನು ಪುನರ್ ಸ್ಥಾಪಿಸಿದ ಕೀರ್ತಿಗೆ ಪಾತ್ರನಾಗಿರುವ ಕುರಿತು ವಿವರಿಸುತ್ತದೆ.

ಶಾಸನದಲ್ಲಿರುವ ವಿಷಯ ಕುರಿತು ಇನ್ನು ಕೆಲವು ಜಿಜ್ಞಾಸೆಗಳು ಮೂಡಿಬಂದಿವೆ[೧೨೬] ಮುಖ್ಯವಾಗಿ ಪ್ರಸ್ತಾಪಿಸಬಹುದಾದ ವಿಷಯ ಎಂದರೆ ನಾಲ್ಕನೆಯ ಸೋಮೇಶ್ವರ ತನ್ನ ಕೊನೆಯ ದಿನಗಳನ್ನು ಸೇಲದಹಳ್ಳಿಯಲ್ಲಿ ಕಳೆದ ಎಂಬುದು. ಆ ಹೆಸರಿನ ಹಳ್ಳಿ ಸುರಪುರ ತಾಲೂಕಿನ ಸೆಲದಹಳ್ಳಿ ಅಥವಾ ಸೆಲೆ ಹಳ್ಳಿಯಾಗಿದ್ದು ಅದು ಇಂದು ಶೆಳ್ಳಗಿ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ ಎಂದು ಅಭಿಪ್ರಾಯಿಸಲಾಗಿದೆ.

**ಕಳಚೂರಿಗಳು**

ಕಲ್ಯಾಣದ ಚಾಲುಕ್ಯರ ರಕ್ತಸಂಬಂಧಿಗಳು ಹಾಗೂ ಅಧೀನ ಅರಸರಾದ ಕಲಚುರ್ಯ ಅಥವಾ ಕಲಚೂರಿಗಳು ದೀರ್ಘಾವಧಿಯಿಂದಲೇ ಕರ್ನಾಟಕ ಇತಿಹಾಸದಲ್ಲಿ ಇದ್ದವರು. ಚಾಲುಕ್ಯ ಅರಸ ಮೂರನೆಯ ತೈಲಪನ ಸೋಲು ಅವರನ್ನು ಸ್ವತಂತ್ರಗೊಳ್ಳುವಂತೆ ಮಾಡಿತು. ಎರಡನೆಯ ಬಿಜ್ಜಳನು ತನಗಿದ್ದ ಮಹಾಮಂಡಳೇಶ್ವರ ಬಿರುದಿನಿಂದ ಬಿಡುಗಡೆಗೊಂಡು ಕ್ರಿ.ಶ.೧೧೬೨ರಲ್ಲಿ ಕಲ್ಯಾಣ ವಶಪಡಿಸಿಕೊಳ್ಳುವುದರ ಮೂಲಕ ಕಳಚೂರಿಗಳ ಸಾಮ್ರಾಜ್ಯವು ಸ್ಥಾನಮಾನ ಪಡೆಯುವಂತೆ ಮಾಡಿದ ಎಂಬ ಅಭಿಪ್ರಾಯಗಳಿವೆ. ಈತನು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಮಗಳ ಮಗನಾಗಿದ್ದನೆಂಬ ಅಭಿಪ್ರಾಯಗಳುಂಟು. ಹಾಗಾಗಿ ಚಾಲುಕ್ಯರಿಗೆ ತುಂಬಾ ಹತ್ತಿರದ ಸಂಬಂಧಿಯಾಗಿದ್ದರಿಂದಲೇ ಸುಲಭವಾಗಿ ಅವರನ್ನು ಸೋಲಿಸಲು ಶಕ್ತನಾದನು. ಹಲವು ವಿರೋಧಗಳ ಮಧ್ಯೆಯು ಅವನು ಪಟ್ಟಾಧಿಕಾರಕ್ಕೆ ಬಂದನು. ಆದರೆ ಅಧಿಕಾರವು ಅಷ್ಟು ಸುಲಭವಾಗಿರಲಿಲ್ಲ. ಈ ಹಿಂದೆ ಕಲ್ಯಾಣದ ಚಾಲುಕ್ಯರಿಗೆ ದೃಢವಾದ ನಿಷ್ಠೆ ಹೊಂದಿದ್ದ ಸಾಮಂತರು ಅವನ ವಿರುದ್ಧವೇ ದಂಗೆಯೆದ್ದರು. ಅಲ್ಲದೇ ಅದೇ ಕಾಲಕ್ಕೆ ಹುಟ್ಟಿಕೊಂಡ

ಬಸವಣ್ಣನ ನೇತೃತ್ವದಲ್ಲಿ ನಡೆದ ಸಾಮಾಜಿಕ ಚಳವಳಿ ಎರಡನೆಯ ಬಿಜ್ಜಳನನ್ನು ಇನ್ನಷ್ಟು ಅಧೀನರನ್ನಾಗಿ ಮಾಡಿತು. ಹೀಗಾಗಿ ಆತನು ೧೧೬೭ರಲ್ಲಿ ಅಧಿಕಾರದಿಂದ ಕೆಳಗಿಳಿಯಲೇಬೇಕಾಯಿತು(ಆತನ ಕೊಲೆಯಾಯಿತು ಎಂಬ ವಾದಗಳುಂಟು). ಬಿಜ್ಜಳನ ರಕ್ತಸಿಕ್ತ ಅಧ್ಯಾಯವು ಕೊನೆಗೊಂಡ ನಂತರ ಅವನ ಮಗ ಸೋವಿದೇವ ೧೧೬೭ರಲ್ಲಿ ಅಧಿಕಾರ ಗ್ರಹಣ ಮಾಡಿದನು. ಆದರೂ ಆತನನ್ನು ಕೂಡಾ ಅಸ್ಥಿರತೆಯ ಪೆಡಂಭೂತವು ಬೆನ್ನತ್ತಿ ಕಾಡದೇ ಬಿಡಲಿಲ್ಲ. ಹಾಗಾಗಿ ಹನ್ನೆರಡನೆಯ ಶತಮಾನದ ಕೊನೆಯ ಕಾಲಘಟ್ಟದಲ್ಲಿ ಕಲ್ಯಾಣ ರಕ್ಷಣಾತ್ಮಕ ನಗರವಾಗಿ ಉಳಿಯಲಿಲ್ಲ. ಮಂಗಳವೇಡ, ಸೆಲೆಹಳ್ಳಿ(ಶೆಳ್ಳಗಿ-ಸುರಪುರ ತಾಲೂಕು) ಹಾಗೂ ಮೊದೆಗನೂರುಗಳಲ್ಲಿ ತಾತ್ಕಾಲಿಕ ರಾಜಧಾನಿ ಪಟ್ಟಣಗಳ ಮೂಲಕ ಬದುಕು ನಿರ್ವಹಿಸಬೇಕಾದ ಸ್ಥಿತಿ ನಿರ್ಮಾಣವಾಯಿತು. ಅಲ್ಲದೇ ಅದೇ ವೇಳೆಗೆ ಆತನ ಸಹೋದರ ಮಲ್ಲಿಕಾರ್ಜುನ ಹಾಗೂ ಮೊಮ್ಮಗ ಕರ್ಣ ಪ್ರತ್ಯೇಕತೆಯನ್ನು ಘೋಷಿಸಿಕೊಂಡರು. ಕೊನೆಗೆ ಕ್ರಿ.ಶ.೧೧೭೫ರಲ್ಲಿ ಇನ್ನೊಬ್ಬ ತಮ್ಮ ಸಂಕಮನು ಪಟ್ಟಕ್ಕೆ ಬಂದನು. ಆದರೆ ಅವನಿಗೂ ತಮ್ಮ ಸಂಬಂಧಿಕರ ಕಾಟ ತಪ್ಪಲಿಲ್ಲ. ಹಾಗಾಗಿ ಅವನು ಕೇವಲ ಐದು ವರ್ಶಗಳ ಕಾಲ ರಾಜ್ಯವಾಳುಲು ಸಾಧ್ಯವಾಯಿತು. ಅಲ್ಲದೇ ಬಿಜ್ಜಳನ ಇನ್ನೊಬ್ಬ ಮಗ ಅಹಮಲ್ಲ ದಂಗೆ ಎದ್ದು ಆತನು ಸಹ ಮೂರು ವರ್ಷಗಳ ಕಾಲ ಸ್ವತಂತ್ರ ರಾಜನೆಂದೇ ರಾಜ್ಯವಾಳಿದ. ಅಲ್ಲದೇ ಅದೇ ವೇಳೆಗೆ ನಾಲ್ಕನೆಯ ಸೋಮೇಶ್ವರನ ನೇತೃತ್ವದಲ್ಲಿ ಕಲ್ಯಾಣದ ಚಾಲುಕ್ಯರು ಕೆಳೆದು ಕೊಂಡಿದ್ದ ರಾಜ್ಯವನ್ನು ಮತ್ತೆ ಪಡೆಯಲು ಅವರ ನಿಷ್ಠ ಸಾಮಂತರೆಲ್ಲರೂ ಬೆಂಬಲಿಸಿ ಕಳಚೂರಿಗಳ ವಿರುದ್ಧ ಕದನ ಹೂಡಿದರು. ಪರಿಣಾಮ ಕ್ರಿ.ಶ.೧೧೮೪ರಲ್ಲಿ ಕಲ್ಯಾಣ ಮತ್ತೆ ಚಾಲುಕ್ಯರ ವಶವಾಯಿತು. ಸಂಕಮನ ಕೊಲೆಯಾಯಿತು. ಅಲ್ಲಿಂದ ಕಲಚೂರಿಗಳ ಇತಿಹಾಸಕ್ಕೆ ಬಹುತೇಕ ಶಾಶ್ವತ ತೆರೆಬಿದ್ದಾಯಿತು. ಅವರ ಅಳಿದುಳಿದ ಕುಡಿಗಳಾದ ವೀರಬಿಜ್ಜಳ ಹಾಗೂ ಸಿಂಘಣನ ಹೆಸರಿನ ಉಲ್ಲೇಖಗಳು ಒಂದೆರಡು ಶಾಸನಗಳಲ್ಲಿದ್ದರೂ ಅವರು ರಾಜರಾಗಿಯಂತೂ ನಮ್ಮ ನಾಡಿನ ಇತಿಹಾಸದಲ್ಲಿ ಏನೂ ದಾಖಲಿಸಲಿಲ್ಲ ಎಂದೇ ಹೇಳಬಹುದು. ಕಲಚೂರಿಗಳು ಆಳ್ವಿಕೆ ಕುರಿತಂತೆ ಈ ಜಿಲ್ಲೆಯ ಕೆಲವು ಊರುಗಳಲ್ಲಿ ಹತ್ತಾರು ಶಾಸನಗಳು ಕಂಡುಬಂದಿವೆ. ಅವುಗಳ ಹಿನ್ನೆಯಲ್ಲಿಯೇ ಆ ಸಂದರ್ಭದ ಇತಿಹಾಸವನ್ನು ಪುನರ್‌ಸೃಷ್ಟಿಸಿಕೊಳ್ಳಬೇಕಾಗಿದೆ.

ತ್ರಿಭುವನಮಲ್ಲ ಬಿರುದಾಂಕಿತ ಬಿಜ್ಜಳನ ಕ್ರಿ.೧೧೬೭ರ ಮುದನೂರಿನ[೨೨] ಶಾಸನವು ಚಿಕ್ಕಮೂದನೂರಿನ ಗೋಪಾಲಸ್ವಾಮಿಯ ಗುಡಿ ಕಂಬದಲ್ಲಿದೆ. ಮುದನೂರು ಮಹಾಜನರು ಅಲ್ಲಿರುವ ಲಕ್ಷ್ಮಣೇಶ್ವರ ದೇವರ ಸೇವೆಗೆಂದು ದತ್ತಿಬಿಟ್ಟಿರುವ ಉಲ್ಲೇಖ ಇದರರಲ್ಲಿ ಅಡಕವಾಗಿದೆ. ಅಲ್ಲಿಯ ಬಲ್ಲಜೀಯರಿಗೆ(ಪೂಜಾರಿ)ಗಳಿಗೆ ಮಾಣಿಕೇಶ್ವರದ ಮತ್ತರು(ಭೂಮಿ) ನೀಡಲಾಯಿತೆಂದು ಉಲ್ಲೇಖಿಸಲಾಗಿದೆ. ಈತನನ್ನು ಕಳಚುರ್ಯ್ಯ ಭುಬಳ ಚಕ್ರವರ್ತಿ ತ್ರಿಭುವನಮಲ್ಲದೇವನೆಂದು ಪ್ರಾರಂಭದ ಶಾಸನಗಳಲ್ಲಿ ಹೆಸರಿಸಿದರೆ ಮುಂದಿನ ದಿನಗಳಲ್ಲಿ ಕಾಳಾಂಜರಪುರವರಾಧೀಶ್ವರ,

ಡಮರುಗಡೂರ್ಯ ನಿರ್ಘೋಷಣ ಕಳಚೂರ್ಯ ಕುಳಕಮಳ ಮಾರ್ತಾಂಡ, ಪ್ರತಾಪಲಂಕೇಶ್ವರ, ಪರನಾರೀ ಸಹೋದರ ಮತ್ತು ಶನಿವಾರಸಿದ್ಧಿ ಮುಂತಾದ ಬಿರುದುಗಳಿಂದ ಹೊಗಳಿಸಿಕೊಂಡಿದ್ದಾನೆಂದು ಅಭಿಪ್ರಾಯಿಸಲಾಗಿದೆ. ಇದೇ ಗ್ರಾಮ ಇನ್ನೊಂದು ಶಾಸನವು[೧೨೮] ಕಲಚೂರಿಗಳ ಮೂಲ ಕಾಳಾಂಜರಪುರ (ಕಾಲಿಂಜರ)ದ ಬಗೆಗೆ ಉಲ್ಲೇಖಿಸುತ್ತದೆ.

ಎರಡನೆಯ ಬಿಜ್ಜಳನ ಆಳ್ವಿಕೆ ನಂತರ ಅಧಿಕಾರಕ್ಕೆ ಬಂದ ರಾಯಮುರಾರಿ ಸೋವಿದೇವನ ಕ್ರಿ.ಶ.೧೧೭೪ರ ಶಾಸನವು ಏವೂರಿನ ಬಾವಿ ಬಸವಣ್ಣ ಗುಡಿಯಲ್ಲಿದೆ[೧೨೯]. ಅಲ್ಲಿಯ ಮಹಾಪ್ರಭು ತ್ರಿಪುರಾಂಕದೇವರನ್ನು ಅವರ ಮಗ ತಳವಾರ ಚಂಡೆಯನಾಯಕ ಬಿನ್ನವಿಯಿಸಿಕೊಂಡು ತತ್ಪುರ್ಷದೇವರ ಕಾಲ್ತೊಳೆದು ಮಲ್ಲಿಕಾರ್ಜುನ ದೇವರಿಗೆ ದಾನ ಬಿಟ್ಟ ಬಗೆಗೆ ಉಲ್ಲೇಖ ನೀಡುತ್ತದೆ. ಕ್ರಿ.ಶ.೧೧೭೫ರ ತೇದಿಯ ಮುದನೂರಿನ ಇನ್ನೊಂದು[೧೩೦] ಶಾಸನವು ಸಹ ಅವನ ಕಾಲಕ್ಕೆ ಸಂಬಂಧಿಸಿದ್ದು. ಅಗ್ರಹಾರ ಮುದನೀರ ಗ್ರಾಮದ ಪ್ರಭು, ಆಶೇಸಮಹಾಜನರು, ಮಹಾಪ್ರಧಾನ ಸೇನಾಪತಿ, ದಂಡನಾಯಕ ಕುಮಾರ ಬಮ್ಮಿದೇವರಸ ಹಾಗೂ ಶ್ರೀಕರಣ ವೈಜಯ್ಯರು ಮತ್ತು ಇತರೆ ಅಧಿಕಾರಿಗಳು ಅಲ್ಲಿರುವ ಲಕ್ಷ್ಮಣೇಶ್ವರ ದೇವರ ಸೇವೆಗೆಂದು ದತ್ತಿ ಬಿಟ್ಟ ಮಾಹಿತಿ ನೀಡುತ್ತದೆ. ಅದೇ ವಂಶಕ್ಕೆ ಸೇರಿದ ಕಳಚೂರಿ ಅಹವಮಲ್ಲನ ಕ್ರಿ.ಶ.೧೧೮೨ರ ಕಾಲದ ಶಾಸನವು ಮುದನೂರನಲ್ಲಿದ್ದು ಅದು ಸಹ ಲಕ್ಷ್ಮಣೇಶ್ವರ ದೇವರಿಗೆ ಕೆಂಭಾವಿಯ ತೆಲ್ಲಿಗ ಕೇಶಿಯಣ್ಣ ಕಲ್ಲು ಗಾಣಮಾಡಿಸಿಕೊಟ್ಟ ಎಂಬ ಉಲ್ಲೇಖ ನೀಡುತ್ತದೆ[೧೩೧].

ಸಂಕಮನ ಆಳ್ವಿಕೆಗೆ ಸಂಬಂಧಿಸಿದಂತೆ ಕ್ರಿ.ಶ.೧೧೬೬ರ ಹಗರಟಗಿ ಶಾಸನವು[೧೩೨] ಸ್ಥಳೀಯ ತ್ರಿಕೂಟೇಶ್ವರ ದೇವರಿಗೆ, ಭೈರವ ದೇವರಿಗೆ ಹಾಗೂ ಗವರೇಶ್ವರ ದೇವರ ಸೇವೆಗೆ ದತ್ತಿ ಬಿಟ್ಟಿರುವ ಉಲ್ಲೇಖ ನೀಡುತ್ತದೆ. ಕ್ರಿ.ಶ.೧೧೭೯ರ ಏವೂರು[೧೩೩] ಶಾಸನವು ಏವೂರಿನ ಮಹಾಪ್ರಭುವಾಗಿದ್ದ ತ್ರಿಪುರಾಂತಕ ದೇವರಸನು ಎಳಮೇಲು ಸಿಂಹಪರ್ಷೆಯ ಮಲೆಯಾಳ ದೇವರ ಶಿಷ್ಯ ಪರಂಪರೆಗೆ ಸೇರಿದ ಜ್ಞಾನರಾಸಿ ಪಂಡಿತರಿಗೆ ನೀಡಿದ ದತ್ತಿಯನ್ನು ತಿಳಿಸುತ್ತದೆ. ಇವರು ಏವೂರು ಶ್ರೀಸ್ವಯಂಸೋಮನಾಥ ದೇವರ ಸ್ಥಾನಚಾರ್ಯರಾಗಿದ್ದರೆಂಬ ಉಲ್ಲೇಖವಿದೆ. ಇದೇ ತಾಲೂಕಿನ ಶ್ರೀನಿವಾಸಪುರದ ಕ್ರಿ.ಶ.೧೧೮೧ರ ತೇದಿಯ ಶಾಸನವು ಅಲ್ಲಿರುವ ಅಧಿಕಾರಿಗಳ ಕುರಿತು ವಿವರಣೆ ನೀಡುವುದು[೧೩೪].

ಈ ಜಿಲ್ಲೆಯ ಶಹಾಪುರ ತಾಲೂಕಿನ ಕೆಲವು ಗ್ರಾಮಗಳಿಗೂ ಸಂಬಂಧಿಸಿದಂತೆ ಕಳಚೂರಿಗಳ ಕಾಲದ ಶಾಸನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಕ್ರಿ.ಶ.೧೧೭೮ರ ಸಿರಿವಾಳ ಶಾಸನವು(ಈ ಶಾಸನದ ನಿಜವಾದ ತೇದಿ ಕ್ರಿ.ಶ.೧೧೮೯ ಎಂದು ಆಗಬೇಕಿತ್ತು) ಕೆಲವು ಮಹಾಮಂಡಳೇಶ್ವರನನ್ನು ಉಲ್ಲೇಖಿಸುತ್ತದೆ. ಅಲ್ಲದೇ ಮಹಾಮಂಡಳೇಶ್ವರ ಎಳಮೇಲ ಸಿಂಗಿದೇವರಸ ದಂಡನಾಯಕ ಕೇತಯ್ಯ, ಅಧಿಕಾರಿ ಪಯ್ಯನಾಯಕ ಇವರುಗಳ ಉಲ್ಲೇಖವಿದೆ. ಇವರೆಲ್ಲರೂ ಸೇರಿ ಅಲ್ಲಿರುವ ಸಿದ್ಧಶಾಂತೇಶ್ವರ ದೇವರಿಗೆ ಬಿಟ್ಟ ದತ್ತಿ ಕುರಿತು ತಿಳಿ ಹೇಳುವ

ಶಾಸನ ಇದಾಗಿದೆ. ಶಿವಯೋಗಿ ಶಾಂತಯ್ಯ ಹಾಗೂ ಆತನ ಮಗ ರೇವಣದೇವಯ್ಯ ಅಥವಾ ರೇವಣಸಿದ್ಧಯ್ಯನ ಕುರಿತು ಈಗಾಗಲೇ ಚರ್ಚಿಸಲಾಗಿದೆ. ಈ ಶಾಸನ ಕುರಿತು ಹೇಳಬಹುದಾದ ಇನ್ನೊಂದು ಮುಖ್ಯ ವಿಚಾರವೆಂದರೆ ಕಲ್ಯಾಣ ಚಾಲುಕ್ಯರನ್ನು ಬದಿಗೊತ್ತಿ ಕಳಚೂರಿಗಳು ಅಧಿಕಾರ ಹಿಡಿದಿದ್ದರೂ ಅವರು ಸಹ ಬಹಳ ಕಾಲ ಉಳಿಯಲಿಲ್ಲ. ಕಲ್ಯಾಣ ಕ್ರಾಂತಿ ಎಲ್ಲವನ್ನು ಬುಡಮೇಲು ಮಾಡಿತು. ತರುವಾಯ ಸೋವಿದೇವ ಹಾಗೂ ಆನಂತರ ಅಧಿಕಾರಕ್ಕೆ ಬಂದ ಸಂಕಮ ಹೇಳಿಕೊಳ್ಳುವ ಹಿಡಿತ ಸಾಧಿಸಲಾಗಲಿಲ್ಲ. ಹಾಗಾಗಿ ಅವರ ಬೆಂಬಲಿತ ಅಧಿಕಾರಿಗಳು, ಮಹಾಮಂಡಳೇಶ್ವರರು ಹಾಗೂ ದಂಡನಾಯಕರು ತಮ್ಮ ನಿಷ್ಠೆಯನ್ನು ಬದಲಾಯಿಸಿಕೊಂಡರು. ಅಂಥವರಲ್ಲ ಎಳಮೇಲಿನ ಶಿಲಾಹಾರರು ಮನೆತನವು ಒಂದು. ಅವರು ಮತ್ತೆ ತಮ್ಮ ಬೆಂಬಲ ನಿಷ್ಠೆಯನ್ನು ಅನಂತರ ಸೇವುಣ(ಯಾದವ)ರ ಕಡೆಗೆ ಬದಲಾಯಿಸಿದರು. ಅಂಥ ಕಾಲಘಟ್ಟದಲ್ಲಿ ಹುಟ್ಟಿಕೊಂಡ ಶಾಸನ ಇದಾಗಿದೆ. ಇಂಥ ಪರಿಣಾಮಗಳಿಂದ ಈ ಪ್ರದೇಶವು ಹೊರತಾಗಿರಲಿಲ್ಲವೆಂದೇ ಹೇಳಬಹುದು. ಕಳಚೂರಿ ಸಂಕಮ ಇನ್ನೂ ರಾಜ್ಯವಾಳುತ್ತಿರುವಾಗಲೇ ಸೇವುಣರಿಗೆ ನಿಷ್ಠೆ ವ್ಯಕ್ತಪಡಿಸಿ ತಮ್ಮ ಅಧಿಕಾರ ಭದ್ರಪಡಿಸಿಕೊಂಡ ಉದಾಹರಣೆ ಇದಾಗಿದೆಯೆಂದು ಅಭಿಪ್ರಾಯಿಸಬಹುದು. ಕ್ರಿ.ಶ.೧೧೮೯ರ ಹುಲಿಕಲ್‌ರ ಶಾಸನವು[೧೩] ಸಂಕಮನ ಕಾಲದ್ದಾಗಿದೆ. ಅಲ್ಲದೇ ಅವನು ಮೊದಗನೂರ ನೆಲವೀಡಿನಿಂದ ಆಳುತ್ತಿರುವ ಉಲ್ಲೇಖವಿದೆ. ಅವನ ದಂಡನಾಯಕರಿಗೆ ಸಗರ ಮತ್ತು ಹಗರಟಗಿಯ ಮನ್ನೆ(ಅಧಿಕಾರ) ನೀಡಿರುವ ವಿವರವನ್ನು ನೀಡುತ್ತದೆ. ಈ ಶಾಸನದ ಹೆಚ್ಚಿನ ಭಾಗವು ತೃಟಿತವಾಗಿದ್ದರಿಂದ ವಿವರಗಳೇನೂ ಹೆಚ್ಚಾಗಿ ತಿಳಿದುಬರುವುದಿಲ್ಲ. ಇದರಲ್ಲಿ ಸಗರ ಮತ್ತು ಹಗರಟಗಿಯ ನಾಡ ಮನ್ನೆಯ(ಅಧಿಕಾರ) ಕುರಿತು ಪ್ರಸ್ತಾಪಿಸಲಾಗಿದೆ. ಕ್ರಿ.ಶ.೧೧೭೫ರ ತೇದಿಯ ಹೋತಗಲ್‌ನ[೧೪] ಶಾಸನವು (ಕಲ್ಯಾಣ ಚಾಲುಕ್ಯ ನಾಲ್ಕನೆಯ ಸೋಮೇಶ್ವರ ಅಥವಾ ವೀರ ಸೋಮೇಶ್ವರನ ಕಾಲದ್ದಾಗಿದೆ). ಆತನ ಮಹಾಪ್ರಚಂಡ ದಂಡನಾಯಕನಾಗಿದ್ದ ಕುಮಾರ ಬಮ್ಮಿದೇವನ ಕುರಿತು ಅವನ ಉಲ್ಲೇಖ ನೀಡುತ್ತದೆ. ಅವರ ಸಹಾಯದಿಂದಲೇ ಕಳಚೂರಿಗಳನ್ನು ನಿರ್ಮೂಲನ ಮಾಡಿರುವ ವಿಚಾರಗಳು ಶಾಸನದಲ್ಲಿ ಉಲ್ಲೇಖವಾಗಿವೆ.

ಗುರುಸುಣಗಿಯ ಗುಡ್ಡದಲ್ಲಿರುವ ಸಿದ್ದೇಶ್ವರ ಗುಡಿಯ ಬಳಿ ಬಂಡೆಗಳ ಮೇಲೆ ಕಲಚೂರಿಗಳ ಕಾಲಕ್ಕೆ ಸಂಂಧಿಸಿದ ಮೂರು ಶಾಸನಗಳಿವೆ. ಆದರಲ್ಲಿ ಒಂದು ಸಿಂಗಣದೆವನ ಕಾಲಕ್ಕೆ ಸಂಬಂಧಿಸಿದ್ದರೆ ಇನ್ನೆರಡು ಸಂಕಮನ ಕಾಲಕ್ಕೆ ಸೇರಿದವುಗಳು. ಕ್ರಿ.ಶ.೧೧೭೭ರ ಶಾಸನವು ಗುರುಸುಣಗೆಯ ಸ್ವಯಂಭು ಸಿದ್ದೇಶ್ವರನಾಥ ದೇವರಿಗೆ ಹಾಗೂ ಅಲ್ಲಿಯ ವಿದ್ಯಾರ್ಥಿಗಳಿಗೆ ಮಹಾಸಾಮಂತ ಬಮ್ಮಿದೇವರಸನ ಬೇಡಿಕೆಯಂತೆ ಹಿಂದೆ ಕಲ್ಯಾಣದ ಚಾಲುಕ್ಯ ಅರಸ ಎರಡನೆಯ ಜಯಸಿಂಹ ಹಾಗೂ ರಾಣಿ ಸುಗ್ಗಲಾದೇವಿಯು ನೀಡಿದ್ದ ದಾನವನ್ನು ಗುಡಿಯ ಆಚಾರ್ಯರಿಗೆ ಪುನರ್ಭರಣ ಮಾಡಿದ ಎಂಬ ಉಲ್ಲೇಖ ನೀಡುತ್ತದೆ[೧೫]. ಕ್ರಿ.ಶ.೧೧೭೯ರ

ಇನ್ನೊಂದು ಶಾಸನವು ಸಹ ಸಂಕಮನ ಕಾಲಕ್ಕೆ ಸಂಬಂಧಿಸಿದ್ದು ಇದೊಂದು ದಾನಶಾಸನ. ಈ ಗುಡಿಯ ಆಚಾರ್ಯ ಶಂಕರ ಶಿವಪಂಡಿತರಿಗೆ ಗುರುಸಣಂಬೆಯ ಪ್ರಭು, ಮೂಲಿಗರಾದಿಯಾಗಿ ಇನ್ನಿತರ ಅಧಿಕಾರಿಗಳು ದೇವರ ಪೂಜಾವಿಧಿಗೆ ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಹಾಗೂ ಕ್ರಿ.ಶ.೧೧೮೨ರ ಶಾಸನವು ಸಂಕಮನನಾಗಿದ್ದ ಮಹಾಪ್ರಧಾನನಾಗಿದ್ದ ಪದ್ಮ ದೇವರಸ, ಅವನ ರಾಣಿ ಮಲ್ಲಹಣದೇವಿ ಹಾಗೂ ಇತರರು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ[೨೪].

ಕ್ರಿ.ಶ.೧೧೮೪ರ ಹೊತ್ತಿಗೆ ಕಲ್ಯಾಣದ ಚಾಲುಕ್ಯ ಅರಸ ನಾಲ್ಕನೆಯ ಸೋಮೇಶ್ವರನು ಕಲಚೂರಿಗಳ ಮಹಾಸಾಮಂತರ ಸಹಾಯ ಪಡೆದು ಪುನಃ ಅಧಿಕಾರಕ್ಕೇರುತ್ತಾನೆ. ಹಾಗಾಗಿ ಕಲಚೂರಿಗಳ ಅಧಿಕಾರ ಮೊಟಕಗೊಂಡು ಮುಂದಿನ ದಿನಗಳಲ್ಲಿ ಸಂಧಿ ಕಲಚೂರ್ಯ ಮನೆತನಕ್ಕೆ ಸೇರಿದ್ದರೂ ಈ ಭಾಗದಲ್ಲಿ ಆಳ್ವಿಕೆ ಮಾಡಿದ ಕರ್ಣ ಮತ್ತು ವೀರಬಿಜ್ಜಳ ಎಂಬ ಹೆಸರಿನ ಅರಸರು ಚಾಲುಕ್ಯರ ಅಧೀನರಾಗಿಯೇ ರಾಜ್ಯಭಾರ ಮಾಡಿರುವ ಉಲ್ಲೇಖಗಳುಂಟು. ಅಲ್ಲದೇ ಅದೇ ವೇಳೆಗೆ ೧೨ನೇ ಶತಮಾನದ ಕೊನೆಯ ಹೊತ್ತಿಗೆ ಕಲ್ಯಾಣದ ಚಾಲುಕ್ಯರು ಸಹ ಸಂಪೂರ್ಣವಾಗಿ ಸೋಲುತ್ತಾರೆ. ಅಲ್ಲದೇ ಕನ್ನಡ ನಾಡಿನಲ್ಲಿ ಸಂಭವಿಸಿದ ರಾಜಕೀಯ ರಂಗನಾಟಕದ ಬಲಾಬಲ ಪರೀಕ್ಷೆಯಲ್ಲಿ ಮತ್ತೆಂದು ಕಾಣದಂತೆ ಕಣ್ಮರೆಯಾಗುತ್ತಾರೆ. ಹೆಚ್ಚಿನ ಉಮೇದಿನಿಂದ ಮುನ್ನುಗ್ಗುತ್ತಿದ್ದ ಹೊಯ್ಸಳ ಮತ್ತು ಯಾದವರ(ಸೇವುಣ) ದಾಳಿಗಗಳು ಅವರನ್ನು ಜರ್ಜರಿತರನ್ನಾಗಿ ಮಾಡಿ ಎಂದೂ ತಲೆ ಎತ್ತದಂತೆ ಆಗುತ್ತದೆ. ಈ ಪ್ರದೇಶದ ಆಳ್ವಿಕೆಗೆ ಸಂಬಂಧಿಸಿದಂತೆ ಅವರ ಜಾಗದಲ್ಲಿ ದೇವಗಿರಿ ಸೇವುಣರು ಸಾರ್ವಭೌಮತ್ವ ಪಡೆದು ಮುಂದಿನ ಘಟನೆಗಳನ್ನು ನಿರೂಪಿಸುತ್ತಾರೆ.

ಕ್ರಿ.ಶ.೧೧೯೯ರ ಹೊತ್ತಿಗೆ ಕಲ್ಯಾಣದ ಚಾಲುಕ್ಯರು ಹಾಗೂ ಕೆಲವು ಕಾಲ ಮಧ್ಯಾವಧಿಯಲ್ಲಿ ತಟ್ಟನೆ ಎದ್ದು ಬಂದ ಹಾಗೂ ಅಷ್ಟೇ ವೇಗದಲ್ಲಿ ಮುಗಚಿ ಬಿದ್ದ ಕಳಚೂರಿಗಳು ಹೊಯ್ಸಳ ಮತ್ತು ಸೇವುರಣ ಹೊಡೆತದಿಂದ ಶಾಶ್ವತವಾಗಿ ಇತಿಹಾಸ ಪುಟ ಸೇರಿದರು. ಅವರಿಬ್ಬರ ಕಾಲದಲ್ಲಿದ್ದ ಅಖಂಡವಾಗಿದ್ದು ವಿಸ್ತಾರವಾದ ಕನ್ನಡ ನಾಡು ಉದ್ಭವಿಸಿದ ರಾಜಕೀಯ ಹೊಸ ಸಂಗತಿಗಳಿಂದ ರಾಜಕೀಯವಾಗಿ ಎರಡು ಹೋಳಾಯಿತು. ಹೊಸದಾಗಿ ಉದಯಿಸಿದ ಹೊಯ್ಸಳರ ಮತ್ತು ಸೇವುಣರ ಸಾಮ್ರಾಜ್ಯಗಳಿಗೆ ತುಂಗಭದ್ರಾನದಿಯು ಅಘೋಷಿತ ನಡು ಗಡಿರೇಖೆಯಾಗಿ ಮಾರ್ಪಟ್ಟಿತು. ಆದರೂ ಅದನ್ನು ಅಳಿಸಿ ಹಾಕಲು ಎರಡು ಶಕ್ತಿಗಳು ಸಾಕಷ್ಟು ಬಾರಿ ಬಡಿದಾಡಿದವು. ಆದರೆ ವಿಜಯಲಕ್ಷ್ಮಿ ಯಾರಿಬ್ಬರಿಗೂ ಒಲಿಯಲಿಲ್ಲ. ಬಂಕಾಪುರ ಬನವಾಸಿ, ಬಳ್ಳಾರಿ ಜಿಲ್ಲೆಯ ಹಂಪಿ ಹಾಗೂ ಸೋಗಿ ಪ್ರದೇಶಗಳು ಹೊಯ್ಸಳರ ಅಧೀನಕ್ಕೊಳಪಟ್ಟಿದ್ದವು. ಅದೇ ವೇಳೆಗೆ ಇವರಷ್ಟು ಪ್ರಬಲವಾಗಿ ಕಟ್ಟಿಕೊಂಡಿದ್ದ ಸೇವುಣ ಸಾಮ್ರಾಜ್ಯ ಈಗಿನ ಮಹಾರಾಷ್ಟ್ರದ ರಾಜ್ಯದ ಆಗ್ನೇಯ ದಿಕ್ಕಿನ ಕಡೆಗೆ ಹೆಚ್ಚಿನ ಪ್ರಮಾಣದಲ್ಲಿ

ವಿಸ್ತರಿಸಿಕೊಳ್ಳಲಾರಂಭಿಸಿತ್ತು. ಆದರೂ ಕಲ್ಯಾಣದ ಚಾಲುಕ್ಯರ ಸಾರ್ವಭೌಮತೆ ಕೊನೆಗೊಂಡ ನಂತರ ಈಗೀನ ಹೈದ್ರಾಬಾದ ಕರ್ನಾಟಕ ಪ್ರದೇಶವಂತೂ ಸಂಪೂರ್ಣವಾಗಿ ಸೇವುಣ ಅರಸರ ಅಧೀನಕ್ಕೊಳಪಟ್ಟಿತೆಂದರೆ ತಪ್ಪಾಗಲಾರದು. ಹಾಗಾಗಿ ಅವರ ಕಾಲದ ಕೆಲವು ಶಾಸನಗಳು ಈ ಪ್ರದೇಶದಲ್ಲಿ ಕಂಡುಬಂದಿರುವುದನ್ನು ಪರೀಕ್ಷಿಸಬಹುದು.

ಕ್ರಿ.ಶ.೧೧೭೦ರ ನಂತರ ಈ ಭಾಗದಲ್ಲಿ ಕಲ್ಯಾಣ ಚಾಲುಕ್ಯರು ಮತ್ತು ಕಲಚೂರಿಗಳು ಆಳ್ವಿಕೆ ಮಾಡಿದ್ದರೂ ಅವರು ನಿಜವಾದ ಸಾರ್ವಭೌಮರಾಗಿ ಉಳಿದಿರಲಿಲ್ಲ. ಕಾರಣ ಅವರಿಬ್ಬರಿಗೂ ನಿಷ್ಠರಾಗಿದ್ದ ಹಲವು ಮಹಾಮಂಡಳೇಶ್ವರರು ಮಹಾದಂಡನಾಯಕರು ಹಾಗೂ ಅಧಿಕಾರಿವರ್ಗವು ಆಗಲೇ ಸೇವುಣರಿಗೆ ನಿಷ್ಠೆ ವ್ಯಕ್ತಪಡಿಸಿ ಸಂಯೋಧಿಸಿಕೊಳ್ಳುತ್ತಿದ್ದ ಸೂಚನೆಗಳು ಅವರ ಶಾಸನಗಳಿಂದಲೇ ತಿಳಿದು ಬರುತ್ತವೆ. ಉದಾಹರಣೆಗೆ ತರ್ದವಾಡಿ ನಾಡಿನಲ್ಲಿದ್ದ ಎಳಮೇಲ ಶಿಲಾಹಾರ ಅರಸ ಸಿಂಗಿದೇವರಸ, ದಂಡನಾಯಕ ಬಮ್ಮಿದೇವರಸ ಹಾಗೂ ಮಹಾಮಂಡಳೇಶ್ವರ ಅಲಹುಲ್ಲಿದೇವರಸರು ನೇರವಾಗಿ ಅವರಿಗೆ ನಿಷ್ಠೆ ವ್ಯಕ್ತಪಡಿಸಿ ದಾನ-ದತ್ತಿಗಳನ್ನು ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ವ್ಯಕ್ತವಾಗಿವೆ. ಅಲ್ಲದೇ ಮುಖ್ಯವಾಗಿ ಅಗ್ರಹಾರ ಹಗರಟಗಿ, ಮುದನೂರು ಹಾಗೂ ಶಿರವಾಳದ ಮಹಾಜನರು ಸಹ ಸೇವುಣರಿಗೆ ಪ್ರತಿಬದ್ಧರಾಗಿ ದಾನ ನೀಡಿರುವ ಉಲ್ಲೇಖಗಳು ಸಹ ಶಾಸನಗಳಲ್ಲುಂಟು. ಒಟ್ಟಾರೆ ಅಭಿಪ್ರಾಯಿಸುವುದಾದರೆ ಕ್ರಿ.ಶ.೧೧೭೦ರ ಹೊತ್ತಿಗೆ ಆಗಲೇ ಯಾದಗಿರಿ ಜಿಲ್ಲಾ ಪರಿಸರದಲ್ಲಿ ಸೇವುಣರು ತಮ್ಮ ಪ್ರಾಬಲ್ಯ ಸ್ಥಾಪಿಸಿದ್ದಾರೆಂದು ಅಭಿಪ್ರಾಯಿಸಬಹುದು.

**ಸೇವುಣರು**

ಸೇವುಣರು ಸ್ವತಂತ್ರರಾಗಿ ಬೆಳಕಿಗೆ ಬಂದದ್ದು ಕ್ರಿ.ಶ.೧೨ನೆಯ ಶತಮಾನದ ಉತ್ತರಾರ್ಧದಲ್ಲಾದರೂ ಅವರ ರಾಜಕೀಯ ವೃತ್ತಿಯು ಮಾತ್ರ ಎರಡು ಶತಮಾನಗಳ ಹಿಂದೆಯೇ ಅಂದರೆ ಕ್ರಿ.ಶ.೧೦ನೆಯ ಶತಮಾನದಲ್ಲೇ ಆರಂಭವಾಗಿತ್ತೆಂದು ತಿಳಿಯಬಹುದು. ಸಾಮಾನ್ಯವಾಗಿ ಅವರನ್ನು ದೇವಗಿರಿ ಯಾದವರೆಂದು ಕರೆಯಲಾಗುತ್ತದೆ. ಅವರು ಸಹ ಮೂಲತಃ ಕನ್ನಡ ನಾಡಿನವರಾಗಿದ್ದರು ಅವರು ಆಳ್ವಿಕೆ ಮಾಡಿದ ಪ್ರದೇಶವು ಹೆಚ್ಚಾಗಿ ಆಗ್ನೇಯ ಮಹಾರಾಷ್ಟ್ರದ ಭಾಗವಾಗಿದ್ದರಿಂದ ಅವರನ್ನು ಮರಾಠ ದೇಶದ ವಾರಸ್ಸುದಾರರೆಂದು ಪರಿಗಣಿಸಲಾಗುತ್ತದೆ. ಅಲ್ಲದೇ ಮುಳುಗಿ ಹೋಗುತ್ತಿದ್ದ ಕನ್ನಡ ನಾಡನ್ನು ಪುನರ್ ಸ್ಥಾಪಿಸಿದ ಕೀರ್ತಿಯು ಸೇವುಣರಿಗೆ ಸಲ್ಲುತ್ತದೆ ಎಂಬ ಅಭಿಪ್ರಾಯಗಳುಂಟು. ಕನ್ನಡ ನಾಡಿನ ರಾಜಕೀಯ ರಂಗ ನಾಟಕದಲ್ಲಿ ತುಂಬಾ ಮುಂಚಿನಿಂದಲೇ ಇದ್ದವರು ಈ ಸೇವುಣರು. ಎರಡನೆಯ ಭಿಲ್ಲಮ, ಎರಡನೆಯ ಸಿಂಘಣ, ಐದನೆಯ ಭಿಲ್ಲಮ ಹಾಗೂ ಕನ್ನರದೇವ ಎಂಬ ಹೆಸರಿನ ರಾಜರುಗಳು ಈ ಮನೆತನದ ಆಳ್ವಿಕೆಯಲ್ಲಿ ಹೆಚ್ಚಿನ ಪ್ರಸಿದ್ಧಿ ಪಡೆದಿದ್ದರು. ಅವರ ಕಾಲದ ಆಳ್ವಿಕೆಯ ಕುರಿತು ಈ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಆಧಾರಗಳು ಕಂಡುಬಂದಿವೆ.

ಸುರಪುರ ತಾಲೂಕಿನ ಮುದನೂರಿನ ಕ್ರಿ.ಶ.೧೧೮೮ರ ಶಾಸನವು ಐದನೆಯ ಭಿಲ್ಲಮನಿಗೆ ಸಂಬಂಧಿಸಿದ್ದು ಬಹುಶಃ ಇದೇ ಶಾಸನವೇ ಅವರಿಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಸಿಗುವ ಮೊದಲ ಶಾಸನವಾಗಿದ್ದಿರಬಹುದೆಂದು ಅಭಿಪ್ರಾಯಿಸಬಹುದು. ಮುದನೂರಿನ[೧೪೦] ಈ ಶಾಸನವು ಭಿಲ್ಲಮನನ್ನು ಉಲ್ಲೇಖಿಸುತ್ತ ಸ್ಥಳೀಯರು ಲಕ್ಷ್ಮಣೇಶ್ವರ ದೇವರ ಸೇವೆಗೆ ದತ್ತಿ ಬಿಟ್ಟಿರುವ ಮಾಹಿತಿಯನ್ನು ನೀಡುತ್ತದೆ. ಇವರಲ್ಲಿ ವ್ಯಕ್ತವಾದ ವಿಷಯ ಕುರಿತು ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ. ಈ ಶಾಸನದಲ್ಲಿ ಆ ರಾಜನು ಸರಳವಾಗಿ, ಬಿರುದಾವಳಿಗಳಿಲ್ಲದೇ ಉಲ್ಲೇಖಗೊಂಡಿದ್ದಾನೆಂದು ಹೇಳಲಾಗಿದೆ[೧೪೧]. ಹಾಗಾಗಿ ಪಡಬಹುದಾದ ಅಭಿಪ್ರಾಯ ಎಂದರೆ ಪ್ರಾಯಶಃ ಅವನನ್ನು ಈ ಪ್ರದೇಶದ ಅಧಿಕಾರಿಗಳು ಅಷ್ಟಾಗಿ ಇನ್ನೂ ಆ ಕಾಲಕ್ಕೆ ಒಪ್ಪಿರಲಿಲ್ಲವೆಂದು ತೋರುತ್ತದೆ.

ಕ್ರಿ.ಶ.೧೨೦೬ರ ಎಡೆಯಾಪುರ[೧೪೨] ಶಾಸನವು ಎರಡನೆಯ ಸಿಂಘನ ಕಾಲಕ್ಕೆ ಸಂಬಂಧಿಸಿದ್ದಾಗಿದ್ದು, ಮಹಾಮಂಡಳೇಶ್ವರರಾದ ಹೈಹಯ ರೇವರಸನು ರಾಜಧಾನಿ ಕೆಂಭಾವಿಯಲ್ಲಿ ಆಳುತ್ತಿದ್ದಾಗ ಎಡೆಯಾಪುರ ಮಲ್ಲಿಕಾರ್ಜುನ ದೇವರಿಗೆ ದತ್ತಿ ನೀಡಿರುವ ಉಲ್ಲೇಖವನ್ನು ತಿಳಿಪಡಿಸುತ್ತದೆ. ಕೇವಲ ಹತ್ತು ಹದಿನೈದು ವರ್ಷಗಳಲ್ಲಿ ದೇವಗಿರಿ ಸೇವುಣರು ಈ ಪ್ರದೇಶದಲ್ಲಿ ತಮ್ಮ ಪ್ರಾಬಲ್ಯವನ್ನು ಬಲಗೊಳಿಸಿಕೊಂಡಿದ್ದರೆಂಬುದನ್ನು ಈ ಶಾಸನದ ಮೂಲಕ ತಿಳಿಯಬಹುದಾಗಿದೆ. 'ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಜಾರಾಧಿರಾಂ ಪರಮೇಶ್ವರಂ ಪರಮಭಟ್ಟಾರಕಂ ಯಾದವ ನಾರಾಯಣನಾ ಪ್ರತಾಪಚಕ್ರವರ್ತಿ ಸಿಂಗಣ ದೇವರಾಜ್ಯ ಮುತ್ತಕೋತ್ತರಾಭಿವೃದ್ಧಿ ಪ್ರವರ್ಧಮಾ ಚಂದ್ರಾರ್ಕ್ಕಾ ತಾರಂಬರಂ ದೇವಗಿರಿ ನೆಲೆವೀಡಿನೊಳು ಸುಖಸಂಕಥಾ ವಿನೋದಿಂ ರಾಜ್ಯಂಗೆಯ್ಯುತ್ತಾರೆ. ಎಂದು ಉಲ್ಲೇಖಿಸಲಾಗಿದೆ. ಅಲ್ಲದೇ ಚಾಲುಕ್ಯ ಮತ್ತು ಕಲಚೂರಿ ಅರಸರಿಗೆ ವಿಧೇಯರಾಗಿದ್ದ ಮಹಾಮಂಡಳೀಕರು ಹಾಗೂ ಅಧಿಕಾರ ವರ್ಗವು ಸಹ ಸಂಪೂರ್ಣವಾಗಿ ಸೇವುಣರ ಕಡೆಗೆ ವಾಲಿದ್ದನ್ನು ಈ ಶಾಸನದಲ್ಲಿರುವ ವಿಷಯದಿಂದ ತಿಳಿಯಬಹುದು. ಇದೇ ರಾಜನ ಇದೇ ಊರಿನಲ್ಲಿರುವ ಕ್ರಿ.ಶ.೧೨೦೦ರ ಶಾಸನ[೧೪೩] ಸಹ ಅದೇ ದೇವರಿಗೆ ದಾನಗಳನ್ನು ಬಿಟ್ಟಿರುವ ಮಾಹಿತಿಯನ್ನು ನೀಡುವುದು. ಕ್ರಿ.ಶ.೧೨೧೪ರ ತೇದಿಯುಳ್ಳ ಎರಡನೆಯ ಸಿಂಘಣನ ಕಾಲದ ರಾಜನಕೋಳೂರು[೧೪೪]. ಈ ಶಾನದಲ್ಲಂತೂ ಇನ್ನೂ ಹೆಚ್ಚಿನ ಮಾಹಿತಿಗಳು ಕಂಡುಬರುತ್ತವೆ. ಅಲ್ಲದೇ ಅವರಿಗೆ ಬೆಂಬಲ ಸೂಚಿಸುವ ಅಧಿಕಾರ ಮತ್ತು ವರ್ತಕ ವರ್ಗಗಳ ವಿವರಣೆಯನ್ನು ಸಹ ಇದರಲ್ಲಿ ವ್ಯಕ್ತವಾದ ವಿಷಯಗಳಿಂದ ತಿಳಿಯಬಹುದು. ಶಾಸನವು ಅಲ್ಲಿರುವ ನಾಡಪ್ರಭುಗಳನ್ನು, ವ್ಯಾಪಾರಿಗಳನ್ನು ಹೆಸರಿಸುತ್ತದೆ. ಅಲ್ಲದೇ ಯಾದವನಾರಾಯಣ ಪ್ರತಾಪ ಚಕ್ರವರ್ತಿ ಸಿಂಘಣದೇವ ಎಂಬ ಉಲ್ಲೇಖವನ್ನು ಈ ಶಾಸನದಲ್ಲಿ ನಮೂದಿಸಿರುವುದನ್ನು ಗಮನಿಸಬಹುದು. ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿಯೇ ಬಹುಪ್ರಸಿದ್ಧಿ

ಪಡೆದಿದ್ದ ಭತ್ತಗ್ರಾಮ ರಾಜನ ಕೋಳೂರಿನ ಶಂಕರನಾರಾಯಣ ದೇವರಿಗೆ ಆತನ ಪಿರಿಯರಿಸಿ ಚಂದಲ ಮಹಾದೇವಿಯು ಇದೇ ದೇವಾಲಯಕ್ಕೆ ದತ್ತಿ ಬಿಟ್ಟಿರುವುದನ್ನು ಸಹ ಇದೇ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಅಂಥ ಪ್ರಸಿದ್ಧಿ ಪಡೆದಿದ್ದ ದೇವಾಲಯಕ್ಕೆ ನಿರಂತರವಾಗಿ ದಾನ ದತ್ತಿಗಳನ್ನು ಆಳುವ ವರ್ಗವು ನೀಡುತ್ತಾ ಬಂದಿರುವುದನ್ನು ಗಮನಿಸಬಹುದು. ಮುದನೂರಿನಲ್ಲಿ ಈತನಿಗೆ (ಎರಡನೆಯ ಸಿಂಘಣದೇವ) ಸಂಬಂಧಿಸಿದ ಎರಡು ಶಾಸನಗಳು ಕಂಡುಬಂದಿವೆ[೧೪೫].

ಈ ಎರಡು ಶಾಸನಗಳು ಕ್ರಿ.ಶ. ೧೨೧೮ರಲ್ಲಿಯೇ ರಚನೆಗೊಂಡಂತವುಗಳು. ಹಾಗಾಗಿ ಅವುಗಳ ತೇದಿಯು ಸಹ ಒಂದೇ ಆಗಿದೆ. ಅಲ್ಲದೇ ಇವೆರಡು ಸಹ ದಾನ ಶಾಸನಗಳೇ ಆಗಿವೆ. ಯಾದನಾರಾಯಣಂ ಪ್ರತಾಪ ಚಕ್ರವರ್ತಿ ಸಿಂಘಣದೇವ ಎಂಬ ಹೆಸರಿನಿಂದ ರಾಜನನ್ನು ಸಂಬೋಧಿಸಲಾಗಿದೆ. ನಮ್ಮ ನಾಡಿನಲ್ಲಿದ್ದ ಪ್ರಸಿದ್ಧ ವ್ಯಾಪಾರಿ ಸಂಘ ಅಥವಾ ಶ್ರೇಣಿಗಳ ಉಲ್ಲೇಖವು ಸಹ ಶಾಸನದಲ್ಲಿ ವ್ಯಕ್ತವಾಗಿದೆ.

ಅಗ್ರಹಾರ ಹಗರಟಗಿಯ ಕ್ರಿ.ಶ.೧೨೧೮ರ ಶಾಸನವು[೧೪೬] ಯಾದವನಾರಾಯಣ ಪ್ರತಾಪ ಚಕ್ರವರ್ತಿ ಎರಡನೆಯ ಸಿಂಘಣದೇವನ ಉಲ್ಲೇಖ ನೀಡುತ್ತದೆ. ಇಲ್ಲಿದ್ದ ಮಹಾಜನಗಳು, ಸೆಟ್ಟಿಗುತ್ತಾರು ಹಾಗೂ ಬಿಲ್ಲಮುನ್ನೂರರು ಸಭೆ ಸೇರಿ ಉಗ್ರಭೀಮೇಶ್ವರ ದೇವಾಲಯದ ಸ್ಥಾನಾಚಾರ್ಯ ಬ್ರಹ್ಮರಾಸಿ ಪಂಡಿತರ ಕಾಲ್ತೊಳೆದು, ಕೆಲವು ದತ್ತಿಗಳನ್ನು ಬಿಟ್ಟ ಉಲ್ಲೇಖ ನೀಡುತ್ತದೆ. ಇದೇ ಊರಿನಲ್ಲಿರುವ ಕ್ರಿಶ ೧೨೨೦ರ ತೇದಿಯ ಶಾಸನವು[೧೪೭] ಯಾದವ ಚಕ್ರವರ್ತಿ ಇಮ್ಮಡಿ ಸಿಂಘಣದೇವನ ಕಾಲದ ಆಳ್ವಿಕೆಗೆ ಸಂಬಂಧಿಸಿದ್ದೇ ಆದರೂ ಅದರಲ್ಲಿ ಚಾಳುಕ್ಯ ಚಕ್ರವರ್ತಿ ಹಿರಿಯ ಪೆರ್ಮಾಡಿರಾಯನನ್ನು ಉಲ್ಲೇಖಿಸುತ್ತದೆ. ಅವನಿಗೆ ವಿಧೇಯನಾಗಿದ್ದ ಅಹಮಲ ಚಟ್ಟಯ್ಯನು ಈ ದತ್ತಿಯನ್ನು ಬಿಟ್ಟಿರುವ ಉಲ್ಲೇಖ ನೀಡುತ್ತದೆ. ಅಲ್ಲದೇ ಇದೇ ಶಾಸನದಲ್ಲಿ ಯಾದವ ರಾಜನನ್ನು ಸಹ ಉಲ್ಲೇಖಿಸಿ ಆತನಿಗೆ ವಿಧೇಯರಾಗಿಯೇ ಕೆಲವು ದತ್ತಿಗಳನ್ನು ಸ್ಥಳೀಯ ಮಹಾಜನರು ಹಾಗೂ ಸೆಟ್ಟಿಗುತ್ತರು ನೀಡಿರುವ ವಿವರಗಳಿವೆ. ಕ್ರಿ.ಶ.೧೨೨೯ರ ಕಾಲಮಾನ ಸೂಚಿಸುವ ಇನ್ನೊಂದು ಶಾಸನವು ಗ್ರಾಮದ ಬಸ್ ನಿಲ್ದಾಣ ಬಳಿ ಇರುವ ಹನುಮನ ದೇವರ ಗುಡಿಯ ಮಂಟಪದಲ್ಲಿ ಕಂಡುಬಂದಿದೆ. ಈ ಶಾಸನವು[೧೪೮] ತುಂಬಾ ಮಹತ್ವದ ವಿವರಗಳನ್ನು ಒಳಗೊಂಡಿರುವುದನ್ನು ಗಮನಿಸಬಹುದು. ಇದು ಸಹ ಎರಡನೆಯ ಸಿಂಘಣನ ಕಾಲದ್ದೇ ಆಗಿದೆ. ಹಗರಟಗಿ ಮುನ್ನೂರರ ಆಡಳಿತ ವಿಭಾಗದ ಕೇಂದ್ರವಾಗಿದ್ದ ಹಗರಟಗಿ ಪಟ್ಟಣವು ಸರ್ವನಮಸ್ಯದ ಅಗ್ರಹಾರವಾಗಿತ್ತಲ್ಲದೇ ಅದನ್ನು ಪಾಂಡವದತ್ತಿ ಎಂಬ ಹೆಸರು ಪಡೆದ ಅಗ್ರಹಾರವೆಂದು ಕರೆಯಲಾಗಿದೆ[೧೪೯]. ಇದೇ ಗ್ರಾಮದಲ್ಲಿ ಸಿಕ್ಕಿರುವ ಇನ್ನೊಂದು ಶಾಸನವು ಕ್ರಿ.ಶ. ೧೨೨೪ರ ತೇದಿಯದ್ದು. ಇದರಲ್ಲಿ ಅರಸನ ಹೆಸರನ್ನು ಉಲ್ಲೇಖಿಸಿಲ್ಲ. ಆದರೆ ಜೈನಧರ್ಮದ ಕುರಿತು ಮಹತ್ವದ ಮಾಹಿತಿ ನೀಡುವ ಶಾಸನ ಇದಾಗಿದೆ ಎಂದು ಅಭಿಪ್ರಾಯಿಸಬಹುದು.

ಸುರಪುರ ತಾಲೂಕಿನ ಬಿಜಾಸಪುರದ ಕ್ರಿ.ಶ.೧೨೪೯ರ ತೇದಿಯ ಶಾಸನವು[೫೦] ಯಾದವ ಚಕ್ರವರ್ತಿ ಎರಡನೆಯ ಸಿಂಘಣದೇವನ ಕಾಲದ್ದು. ಸಗರದ ಪ್ರಭು ಮಾದೆಯನಾಯಕನ ಮಗ ಬಬಯನಾಯಕ ಮತ್ತು ಇನ್ನಿತರ ನಾಲ್ವರು ಒಟ್ಟು ಐದು ಜನ ಸೇರಿ ದೇವಿಯ ಪೂಜೆಗೆ ಬಿಟ್ಟ ದತ್ತಿಯ ಕುರಿತು ಉಲ್ಲೇಖಿಸುತ್ತದೆ. ಕ್ರಿ.ಶ.೧೨೬೫ರ ಯಾಳಗಿ ಶಾಸನವು[೫೧] ಯಾದವ ಚಕ್ರವರ್ತಿ ಮಹದೇವರಾಯನ ಕಾಲಕ್ಕೆ ಸಂಬಂಧಿಸಿದ್ದು. ಈತನ ಆಳ್ವಿಕೆಯ ಕೊನೆಯ ಕಾಲಘಟ್ಟದಲ್ಲಿ ಈ ಶಾಸನವು ರಚನೆಯಾಗಿರುವ ಸೂಚನೆಗಳಿವೆ. ಕೆಲವು ವಿಶೇಷಣಗಳಿಂದ ತನ್ನನ್ನು ಕರೆದುಕೊಂಡಿದ್ದಾನೆ. ದ್ವಾರಾವತೀ ಪುರವಾರಾಧೀಶ್ವರ, ಗುಜ್ಜರಿರಾಯ ಭಯಂಕರ ಹಾಗೂ ಮುಖ್ಯವಾಗಿ ತೆಲುಂಗರಾಯ ಸ್ಥಾಪನಾಚಾರ್ಯನೆಂದು ಕರೆದುಕೊಂಡಿದ್ದಾನೆ. ಈ ಮಹಾದೇವರಾಯನು ದೇವಗಿರಿ ನೆಲೆನೀಡಿನಿಂದ ಆಳುತ್ತಿದ್ದಿರುವ ಬಗೆಗೆ ಉಲ್ಲೇಖಗಳು ಈ ಶಾಸನದಲ್ಲಿ ದಾಖಲಾಗಿವೆ.

ಅಸ್ಪಷ್ಟ ತೇದಿವುಳ್ಳ ಆ ಕಾಲದ ಕೆಲವು ಶಾಸನಗಳು ಸುರಪುರ ತಾಲೂಕಿನಲ್ಲಿ ಕಂಡುಬಂದಿವೆ. ಅರಕೇರಿ, ಬೈಲಾಪುರ, ಮುದನೂರು, ರಾಂಪುರ ಹಗರಟಗಿ ಹಾಗೂ ಹುಣಸಗಿ ಗ್ರಾಮಗಳಲ್ಲಿ ಇಂಥ ಶಾಸನಗಳು ಲಭ್ಯವಿರುವ ಬಗೆಗೆ ಮಾಹಿತಿಗಳು ಪ್ರಕಟವಾಗಿ ಅವುಗಳನ್ನು ಸಹ ಗಮನಿಸಲಾಗಿದೆ. ಅದರಲ್ಲಿರುವ ವಿವರಗಳಿಂದ ತಿಳಿಯಬಹುದಾದ ಸಂಗತಿಗಳೆಂದರೆ ರಾಜ ಅಥವಾ ಅರಸನ ಕುರಿತು ಅವುಗಳ ವಿವರಗಳಲ್ಲಿ ಸ್ಪಷ್ಟವಾಗಿ ದಾಖಲಿಸಲಾಗಿಲ್ಲ. ಆದರೆ ಅವು ಬೇರೆ ಬಗೆಯ ವಿಷಯಗಳನ್ನು ಹೊಂದಿರುವುದನ್ನು ಗಮನಿಸಬಹುದು.

ಸೇವುಣ ಯಾದವ ಚಕ್ರವರ್ತಿಗಳಿಗೆ ಸಂಬಂಧಿಸಿದಂತೆ ಶಹಾಪುರ ತಾಲೂಕಿನಲ್ಲಿ ಎರಡು ಶಾಸನಗಳು ಪ್ರಕಟಗೊಂಡಿರುವ ಮಾಹಿತಿಗಳುಂಟು. ಕ್ರಿ.ಶ. ೧೨೦೮ರ ತಳಿಬೀಡಿನ ಶಾಸನವು[೫೨] ಶಹಾಪುರ ತಾಲೂಕು ಯಾದವನಾರಾಯಣ ಸೇವುಣರಾಯ ಪ್ರತಾಪ ಚಕ್ರವರ್ತಿ ಸಿಂಘಣದೇವರ ಉಲ್ಲೇಖ ನೀಡುತ್ತದೆ. ಇಲ್ಲಿದ್ದ ಮಹಾಪ್ರಭುಗಳು ಸ್ಥಳೀಯವಾಗಿದ್ದ ಬ್ರಹ್ಮೇಶ್ವರ ದೇವರಿಗೆ ದಾನ ನೀಡಿದ ಉಲ್ಲೇಖ ನೀಡುತ್ತದೆ.

ಇದೇ ರಾಜನ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.೧೨೦೮ರ ತೇದಿಯ ಶಾಸನವೊಂದು ಹೋತಗಲ್‌ನಿಂದ ವರದಿಯಾಗಿದೆ[೫೩]. ಸಿಂಘಣದೇವರಸನಿಗೆ ಸಗರ ನಾಡಿನಲ್ಲಿದ್ದ ಹೈಹಯರು ಅಧೀನರಾಗಿ ತಮ್ಮನ್ನು ಗುರುತಿಸಿಕೊಂಡಿರುವ ವಿವರಗಳು ದಾಖಲಾಗಿವೆ. ಮಹಾಮಂಡಳೇಶ್ವರ ಚಂದಿಗಿದೇವರಸನ ಉಲ್ಲೇಖ ಇದರಲ್ಲಿದೆ. ಈ ಎರಡು ಶಾಸನಗಳನ್ನು ಬಿಟ್ಟರೆ ಉಳಿದಂತೆ ಮುಂದಿನ ಕಾಲದ ಇನ್ನಾವುದೇ ಶಾಸನಗಳು ಪ್ರಕಟವಾಗಿರುವ ಮಾಹಿತಿಗಳಿಲ್ಲ. ಅಲ್ಲದೇ ಯಾದಗಿರಿ ಜಿಲ್ಲೆಯಲ್ಲಂತೂ ಸೇವುಣ ಚಕ್ರವರ್ತಿಗಳ ಯಾವುದೇ ರೀತಿಯ ಹೆಜ್ಜೆ ಗುರುತುಗಳು ಮೂಡಿರುವ ಸಾಕ್ಷಿಗಳಂತೂ ಈವರೆಗೂ ಕಂಡುಬಂದಿಲ್ಲ.

ಮಹಾದೇವನ ನಂತರ ಯಾದವ ರಾಮಚಂದ್ರ ಸಿಂಹಾಸನಕ್ಕೆ ಬಂದನು. ಯಾದಗಿರಿ ಜಿಲ್ಲೆಯ ನೆರೆಯ ಅಫಜಲ್‌ಪುರ ತಾಲೂಕಿನ ಚಿನವಳ್ಳಿಯಲ್ಲಿ ಈತನ ಕಾಲದ ಕೊನೆಯ ಶಾಸನ ಕಂಡುಬಂದಿದೆ. ಕ್ರಿ.ಶ.೧೨೯೧ರ ತೇದಿಯ ಶಾಸನದ ನಂತರ ಅವರ ಗುರುತುಗಳು ಇಡೀ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿಯೇ ಕಂಡುಬಂದಿಲ್ಲವೆಂದೇ ಅಭಿಪ್ರಾಯಿಸಬಹುದು. ಅಷ್ಟೊತ್ತಿಗಾಗಲೇ ಅಂದರೆ ಕ್ರಿ.ಶ.೧೨೯೬ರಲ್ಲಿ ಅಲ್ಲಾವುದ್ದೀನ ಖಿಲ್ಜಿಯ ನೇತೃತ್ವದಲ್ಲಿ ಉತ್ತರದಿಂದ ಎರಗಿದ ದಾಳಿಗಳು ಮೊಟ್ಟಮೊದಲಿಗೆ ದೇವಗಿರಿಯ ಮೇಲೆ ಪ್ರಭಾವಿಸದವು. ಹಾಗಾಗಿ ಸೇವುಣರ ರಾಜ್ಯ ಆ ಸಂದರ್ಭಗಳಿಂದಲೇ ಅವನತಿಯ ಕಡೆಗೆ ಮುಖಮಾಡಿತ್ತು ಎಂದರೆ ತಪ್ಪಾಗಲಾರದು. ಆ ನಂತರ ಇಪ್ಪತ್ತು ವರ್ಷಗಳ ಕಾಲಾವಧಿಯಲ್ಲಿ ನಿರಂತರವಾಗಿ ಅವರ ಮೇಲೆ ದೆಹಲಿಯ ಅರಸರಿಂದ ಬಲವಾದ ಗದಪ್ರಹಾರಗಳಾದವು. ಮಲ್ಲಿಕಾಫರನಂತಹ ವೀರ ಸೇನಾನಿಯ ಹೊಡೆತಕ್ಕೆ ಇಡೀ ದಕ್ಷಿಣ ಭಾರತವೇ ತತ್ತರಿಸಿ ಹೋಗಿತ್ತು. ಅದಕ್ಕೆ ಮೊದಲು ಬಲಿಪಶುವಾಗಿದ್ದು ದೇವಗಿರಿ ರಾಜ್ಯ. ಕ್ರಿ.ಶ.೧೩೧೮ರಲ್ಲಿ ಸೇವುಣರು ಸಂಪೂರ್ಣವಾಗಿ ಇತಿಹಾಸದಿಂದ ಅಸ್ತಂಗತರಾದರು. ಅಲ್ಲದೇ ಕಾಕತಾಳಿಯವಾಗಿ ಕೆಲವೇ ವರ್ಷಗಳ ನಂತರ ಬಲಾಢ್ಯ ಖಿಲ್ಜಿ ಮನೆತನವು ಸಹ ಪತನಹೊಂದಿತು. ಹೊಸದಾಗಿ ಉದಯಗೊಂಡ ತುಗಲಕ್‌ರು ದಕ್ಷಿಣ ಭಾರತದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸ ಪುಟಗಳ ಮೇಲೆ ಅಳಿಸಲಾರದ ಶಾಹಿಯಿಂದ ವ್ಯಾಖ್ಯಾನುಗಳನ್ನು ಮೂಡಿಸಲಾರಂಭಿಸಿದರು.

ದೇವಗಿರಿ ಯಾದವರು ಮತ್ತು ವಾರಂಗಲ್‌ನ ಕಾಕತೀಯರು ರಾಜಕೀಯ ನಾಟಕದ ರಂಗ ಮಂಚದಿಂದ ತೆರವು ಗೊಂಡಾಗ ದಕ್ಷಿಣ ಭಾರತದ ಪ್ರವೇಶಕ್ಕೆ ಅಡೆತಡೆಯಾಗಿದ್ದ ಈ ಮೂಲಕ ಹೆಬ್ಬಾಗಿಲುಗಳು ತಾವೇ ಕಳಚಿಕೊಂಡು ಬಿದ್ದವು. ಹಾಗಾಗಿ ಅವರನ್ನೇ ನಂಬಿಕೊಂಡಿದ್ದ ಚಿಕ್ಕಪುಟ್ಟ ಆಡಳಿತಗಾರರು ಅಸಹಾಯಕರಾದರು. ಅಲ್ಲದೇ ಅವರಲ್ಲಿ ಕೆಲವರು ಅಸ್ಥಿರತೆಯ ಲಾಭ ಪಡೆದು ಸ್ವತಂತ್ರವನ್ನು ಘೋಷಿಸಿಕೊಂಡರು. ಆದರೆ ದೆಹಲಿ ಚುಕ್ಕಾಣಿ ಹಿಡಿದ ಹೊಸ ರಾಜನಿಗೆ ಇಂಥ ಸಂಗತಿಗಳು ಸಹಿಸಲಾರದ ಘಟನೆಗಳಾದವು. ಪರಿಣಾಮ ಉದ್ಭವಗೊಂಡ ಬಂಡಾಯಗಳನ್ನು ಹತ್ತಿಕ್ಕಲು ದೆಹಲಿ ಅರಸ ಮಹಮದ್ ಬಿನ್ ತುಗಲಕ್‌ನು ದಕ್ಷಿಣದ ಪ್ರಾಂತ್ಯಗಳ ಮೇಲೆ ಹಿಡಿತ ಸಾಧಿಸಲು ತನ್ನ ನಂಬಿಕೆಗೆ ಅರ್ಹರಾದ ಸಂಬಂಧಿಗಳನ್ನು ಆಡಳಿತಗಾರರನ್ನಾಗಿ ನೇಮಿಸಿದನು. ಅದರಲ್ಲೂ ಮುಖ್ಯವಾಗಿ ದಕ್ಷಿಣದಲ್ಲಿ ಅತೀ ಪ್ರಾಬಲ್ಯ ಸ್ಥಾಪಿಸಿದ್ದ ಕಂಪಿಲಿ ರಾಜ್ಯವನ್ನು ತುರ್ತಾಗಿ ಹತೋಟಿಗೆ ತೆಗೆದುಕೊಳ್ಳುವುದು ವನಿಗೆ ತುಂಬಾ ಅವಶ್ಯಕವಾಗಿತ್ತು. ಹೀಗಾಗಿ ಯಾದಗಿರಿ ಜಿಲ್ಲೆಯ ಸಗರನಾಡಿನ ಪ್ರಾಂತಾಧಿಕಾರಿ ಅಥವಾ ರಾಜ್ಯಪಾಲನನ್ನಾಗಿ ತನ್ನ ಸಹೋದರ ಸಂಬಂಧಿ ಬಹುಉದ್‌ದೀನ್ ಗುರುಷಾಸ್ಪನ ನೇಮಕ ಮಾಡಲಾಗಿತ್ತು. ಆದರೆ ಕೆಲವೇ ದಿನಗಳಲ್ಲಿ ಆತನೇ ದೆಹಲಿಯ ಅಧಿಪತ್ಯಕ್ಕೆ ತಲೆನೋವಾಗಿ ಪರಿಣಮಿಸಿದ. ಅಲ್ಲದೇ ತುಗಲಕನ ಕಡು ವಿರೋಧಿ ಕಂಪಿಲಿಯ ಕಂಪಿಲರಾಯನೊಡನೆ

ಸ್ನೇಹ ಸಹಕಾರ ಬೆಳೆಸಿದ. ಪರಿಣಾಮ ಸಗರ ಪ್ರದೇಶವು ಸ್ವಲ್ಪ ಕಾಲ ಕಂಪಿಲರಾಯನ ಮಗ ಕುಮಾರರಾಮನ ಆಡಳಿತಕ್ಕೂ ಒಳಪಟ್ಟಿತ್ತು ಎಂದು ಅಭಿಪ್ರಾಯಿಸಲಾಗುತ್ತದೆ. ಆದರೆ ಬಹುಶಃ ಈ ಹಿಡಿತ ತುಂಬಾ ದಿನಗಳ ಕಾಲ ಇದ್ದಂತೆ ಇರಲಿಲ್ಲ. ಯುದ್ಧೋತ್ಸಾಹಿಗಳಾದ ಕುಮ್ಮಟದ ಅರಸರು ವಾರಂಗಲ್ ದ್ವಾರಸಮುದ್ರ ಹಾಗೂ ದೆಹಲಿಯ ಅಧಿಪತ್ಯಗಳ ವಿರುದ್ಧ ಸದಾ ಕದನಕ್ಕಿಳಿದಿದ್ದರು. ಹೀಗಾಗಿ ಇಡೀ ದಕ್ಷಿಣ ಭಾರತದ ನೆಲವೇ ರಕ್ತದಿಂದ ತೋಯ್ದು ಹೋಗಿತ್ತು.

ಕದನ ಭೂಮಿಯಾಗಿ ಮಾರ್ಪಟ್ಟ ಕುಮ್ಮಟ ರಾಜ್ಯ ಕೆಲವು ಗೆಲವು ಮತ್ತು ಸೋಲುಗಳ ಮಧ್ಯೆ ಅಂತಿಮವಾಗಿ ದೆಹಲಿಯ ಸಾರ್ವಭೌಮತ್ವದ ವಿರುದ್ಧ ಪತನವಾಗಲೇಬೇಕಾಯಿತು. ಆಶ್ರಯ ಕೋರಿ ಬಂದ ಬಹು-ಲಾದ್-ದೀನ್‌ನನ್ನು ಹೊಯ್ಸಳ ಅರಸರ ಸಹಾಯದಿಂದ ತುಗಲಕನ ಸೈನ್ಯ ಸೆರೆ ಹಿಡಿಯಿತು. ದೆಹಲಿಗೆ ಕರೆದೊಯ್ದು ಆತನು ಇಡೀ ಕುಟುಂಬ ಸಹಿತ ಹತ್ಯೆ ಮಾಡಲಾಯಿತು. ಕ್ರಿ.ಶ. ೧೩೨೭ರ ಹೊತ್ತಿಗೆ ಸಗರನಾಡಿನ ಸಂಪೂರ್ಣ ಪ್ರದೇಶವು ತುಗಲಕ್ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು.

ತುಘಲಕ್‌ನ ಆಳ್ವಿಕೆಯ ಪ್ರಭಾವದಿಂದಾಗಿ ಸುರಪುರವನ್ನು ಶೋರಾಪುರವೆಂದು ಬದಲಾಯಿಸಿತು. ಹಾಗೂ ಅದೇ ವೇಳೇಗೆ ಶಹಾಪುರವನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಳ್ಳಲಾಯಿತು ಎಂಬ ವಿವರಗಳು ದಾಖಲಾಗಿವೆ.[೧೫] ಈ ಜಿಲ್ಲೆಯ ಎರಡು ಪ್ರಮುಖ ತಾಲೂಕುಗಳು ಮುಸ್ಲಿಂ ಆಡಳಿತಗಾರರ ಪ್ರಭಾವಕ್ಕೆ ಒಳಗಾದವು. ಹಾಗಾಗಿ ಪರ್ಶಿಯನ್ ಭಾಷೆಯ ಶಾಸನಗಳು ಸಹ ಈ ಪ್ರದೇಶದಲ್ಲಿ ಕಂಡುಬರುತ್ತವೆ. ಮುಖ್ಯವಾಗಿ ಮಲ್ಲಿಕಾಫರ್‌ನ ಜೊತೆಗೆ ಬಂದ ಮಿಲಟರಿ ಅಧಿಕಾರಿ ಸರ್ಮಸ್ತರನು ಯುದ್ಧದಿಂದ ವಿಮುಖಗೊಂಡ ಧರ್ಮಯುದ್ಧದ ಕಡೆಗೆ ಹೊರಳಿದ ಮಹಾನ್ ಅನುಭಾವಿ. ಈತನನ್ನು ದಕ್ಷಿಣ ಭಾರತದಲ್ಲಿ ನೆಲೆಯೂರಿದ ಮೊದಲ ಸೂಫಿ ಎಂದು ಭಾವಿಸಲಾಗಿದೆ.

ಹಲವು ರಾಜಕೀಯ ಕಾಣಗಳಿಗಾಗಿ ಮಹದಮ್-ಬಿನ್-ತುಘಲಕನು ಆಡಳಿತದಲ್ಲಿ ವೈಫಲ್ಯ ಕಂಡನು. ಪರಿಣಾಮ ದಕ್ಷಿಣ ಭಾರತದ ಪ್ರದೇಶಗಳಲ್ಲಿಯೂ ಆತನ ಹಿಡಿತ ಸಂಪೂರ್ಣ ಇಲ್ಲದಂತಾಯಿತು. ಹಾಗಾಗಿ ಬಲಾಢ್ಯ ಪ್ರಾಂತ್ಯಾಧಿಕಾರಿಗಳು ಪ್ರಬಲಗೊಂಡು ಸ್ವತಂತ್ರತೆಯನ್ನು ಘೋಷಿಸಿಕೊಂಡರು. ಅವರಲ್ಲಿ ದೇವಗಿರಿ ಅಥವಾ ದೌಲತಾಬಾದ ಅಧಿಕಾರಿಯಾಗಿದ್ದ ನಾಸಿರ್ ಊದೀನ್ ಷಾ ಕೂಡಾ ಒಬ್ಬನು. ಆದರೆ ಅವನು ಕೆಲವೇ ದಿನಗಳಲ್ಲಿ ತನ್ನ ನಂತರ ಸಮರ್ಥ ಅಧಿಕಾರಿಯಾಗಿದ್ದ ಹಸನ್‌ಗಂಗು ಎಂಬುವನಿಗೆ ನಾಯಕತ್ವವನ್ನು ಬಿಟ್ಟುಕೊಟ್ಟನು. ಈತನು ಕ್ರಿ.ಶ.೧೩೪೭ರಲ್ಲಿ ತನ್ನ ಜೊತೆಗಾರರ ಜೊತೆಗೆ ಗುಲಬರ್ಗಾ(ಕಲಬುರ್ಗಿ)ಯಲ್ಲಿ ಬಹಮನಿ ಸಾಮ್ರಾಜ್ಯ ಸ್ಥಾಪಿಸಿದನು. ಬಹಮನಿಗಳು ಪತನವಾಗುವರೆಗೂ ಯಾದಗಿರಿ ಪ್ರದೇಶವು ಅವರ ರಾಜ್ಯದಲ್ಲಿಯೇ ಇತ್ತು. ಇದೇ ವೇಳೆಗೆ ಹಂಪಿ(ವಿಜಯನಗರ)ಯನ್ನು ರಾಜಧಾನಿಯನ್ನಾಗಿ

ಮಾಡಿಕೊಂಡು ಕೃಷ್ಣಾನದಿಯ ದಕ್ಷಿಣ ಪ್ರದೇಶದಲ್ಲಿ ವಿಶಾಲವಾದ ವಿಜಯನಗರ ಸಾಮ್ರಾಜ್ಯ ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಗೊಂಡಿತು. ಪ್ರಸ್ತುತ ಪ್ರಬಂಧದ ಕಾಲಮಿತಿಯ ವ್ಯಾಪ್ತಿಯ ಹಿನ್ನೆಲೆಯಲ್ಲಿ ಚರಿತ್ರೆಗೆ ಸಂಬಂಧಿಸಿದ ಇಷ್ಟೊಂದು ವಿವರಗಳನ್ನು ಚರ್ಚಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

## ಮಹಾಮಂಡಳೇಶ್ವರರು

ವಿಸ್ತಾರವಾದ ರಾಜ್ಯವನ್ನು ಅಚ್ಚುಕಟ್ಟಾಗಿ ಆಳಲು ಮುಖ್ಯ ರಾಜನ ಅಧೀನನಾಗಿ ಕೆಲವು ಆಡಳಿತಗಾರರು ಇರುತ್ತಿದ್ದರು. ಅವರಲ್ಲಿ ಅತ್ಯಂತ ಪ್ರಮುಖ ಸ್ಥಾನ ಪಡೆದವರೆಂದರೆ ಮಹಾಮಂಡಳೇಶ್ವರರು. ಅಲ್ಲದೇ ಅವರಿಗೆ ಅಧೀನರಾಗಿ ಮಹಾಸಾಮಂತರು, ಪ್ರಭುಗಾವುಂಡರು, ಗಾವುಂಡರು ಹಾಗೂ ಇತರೆ ಅಧಿಕಾರ ವರ್ಗವು ಅಸ್ತಿತ್ವದಲ್ಲಿತ್ತು. ಇವರೆಲ್ಲರೂ ಚಕ್ರವರ್ತಿಯ ಪಾದಪದ್ಮೋಪಜೀವಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ತಮ್ಮ ಆಳ್ವಿಕೆಗೊಳಪಟ್ಟ ಪ್ರದೇಶವನ್ನು ಸರ್ವಸ್ವತಂತ್ರರಾಗಿ ಆಳುತ್ತಿದ್ದರೂ ತಮ್ಮ ತಮ್ಮ ಮೇಲಾಧಿಕಾರಿಗಳಿಗೆ ಅಧೀನರಾಗಿಯೂ ಮತ್ತು ವಿಧೇಯರಾಗಿಯೂ ಇರುತ್ತಿದ್ದರು. ಆಡಳಿತದ ಅನುಕೂಲಕ್ಕಾಗಿ ಕಟ್ಟಿಕೊಂಡ ವ್ಯವಸ್ಥೆ ಇದಾಗಿತ್ತೆಂದು ಪರಿಭಾವಿಸಬಹುದು. ಅಲ್ಲದೇ ಅವರು ತಮಗೆ ಅನುಕೂಲಕರ ಮಂತ್ರಿಮಂಡಳ, ಅಧಿಕಾರ ವರ್ಗ ಹಾಗೂ ಸೈನಿಕ ವ್ಯವಸ್ಥೆಯನ್ನು ಸಹ ಹೊಂದಿದ್ದರು. ಇಂಥ ಹುದ್ದೆಗಳು ಅವರ ಶಕ್ತಿ ಸಾಮರ್ಥ್ಯ ಹಾಗೂ ಅವರು ರಾಜನೊಂದಿಗೆ ಹೊಂದಿದ್ದ ಸಂಬಂಧಗಳ ಮೇಲೆ ನಿರ್ಧಾರವಾಗುತ್ತಿದ್ದವು. ಕೆಲವೊಮ್ಮೆ ಮೇಲ್ದರ್ಜೆಗೆ ಏರುವುದು ಅದೇ ರೀತಿ ರಾಜನ ಅವಕೃಪೆಗೆ ಒಳಗಾದಾಗ ಹಿಂಬಡಿ ಅಥವಾ ಉಚ್ಚಾಟನೆಗೊಳ್ಳುವುದು ಸರ್ವೆ ಸಾಮಾನ್ಯವಾಗಿತ್ತು. ಆದರೆ ಪ್ರತಿಯೊಬ್ಬ ಮಹಾಮಂಡಳೇಶ್ವರನು ತನ್ನ ಒಡೆಯನಿಗೆ ಕಪ್ಪ ಕೊಡುವುದು ಮಾತ್ರ ಕಡ್ಡಾಯವಾಗಿತ್ತು.

ಮಹಾಮಂಡಳೇಶ್ವರ ಪದದ ಶಬ್ದಶಃ ಅರ್ಥ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗಕ್ಕೆ ಒಡೆಯ ಎಂದಾಗುತ್ತದೆ ಎಂದು ಅರ್ಥೈಸಲಾಗಿದೆ.[೧೫೫] ಅವರು ಒಂದಕ್ಕಿಂತ ಹೆಚ್ಚು ವಿಭಾಗಗಳನ್ನು ಆಳುತ್ತಿದ್ದರು. ಈ ಹುದ್ದೆಯು ವಂಶಪಾರಂಪರ್ಯ ಹೊಂದಿದ್ದರೂ ಕೆಲವೊಮ್ಮೆ ಬಲಾಢ್ಯರು ಸಹ ತಮ್ಮ ಶಕ್ತಿ ಸಾಮಾರ್ಥ್ಯಗಳಿಂದ ಪಡೆದುಕೊಳ್ಳಬಹುದಾದ ಹುದ್ದೆಯು ಸಹ ಅದಾಗಿತ್ತು. ಅಧ್ಯಯನದ ಅನುಕೂಲಕ್ಕಾಗಿ ಕೆಲವು ಪ್ರಕಾರಗಳನ್ನು ಸಹ ಅಧ್ಯಯನಕಾರರು ಮಾಡಿದ್ದಾರೆ. ರಾಜವಂಶೀಯ ಮಹಾಮಂಡಳೇಶ್ವರರು, ಮಹಾಮಂಡಳೇಶ್ವರರ ಮಹಾಮಂಡಳೇಶ್ವರರು ಹಾಗೂ ಇತರೆ ಮಹಾಮಂಡಳೇಶ್ವರರು ಎಂದು ವಿಭಾಗಿಸಲಾಗಿದೆ. ತಮ್ಮ ಅಧಿಕಾರದ ದ್ಯೋತಕವಾಗಿ ರಾಜ್ಯ ಚಿಹ್ನೆ, ಧ್ವಜ, ಮುದ್ರೆ ಹಾಗೂ ವಾದ್ಯಗಳನ್ನು ಅವರು ಹೊಂದಿದ್ದರೆಂದು ಗಮನಿಸಬಹುದು.

## ಮಹಾಮಂಡಳೇಶ್ವರ ಹೈಹಯರು

ಪ್ರಸ್ತುತ ಯಾದಗಿರಿ ಜಿಲ್ಲೆಯು ಬಹುಭಾಗಗಳು ಪ್ರಾಚೀನ ಸಗರ ನಾಡಿನಲ್ಲಿದ್ದ ಪ್ರಮುಖ ಪ್ರದೇಶವಾಗಿತ್ತು. ಅಲ್ಲದೇ ಹಗರಟಗೆ ಮತ್ತು ಕಲ್ಲಿ-ಕೆಳಗು ನಾಡಿನಲ್ಲಿಯು ವಿಸ್ತರಣೆಗೊಂಡಿತ್ತು.

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಾಧಾರಗಳಿಂದ ತಿಳಿಯಬಹುದಾದ ಸಂಗತಿ ಎಂದರೆ ಸಗರನಾಡಿನ ಮನ್ನೆಯನ್ನು ಮಹಾಮಂಡಳೇಶ್ವರರಾದ ಹೈಹಯರು ಹೆಚ್ಚಿನ ಕಾಲ ಆಳ್ವಿಕೆ ಮಾಡಿರುವ ವಿಷಯವು ಉಲ್ಲೇಖಗೊಂಡಿದೆ. ಆಡಳಿತದ ಮುಖ್ಯ ಕೇಂದ್ರ ಅಥವಾ ಪಟ್ಟಣವು ಕೆಂಭಾವಿ ನಗರವಾಗಿತ್ತು. ತಮ್ಮನ್ನು ಶಾಸನಗಳಲ್ಲಿ “ಮಾಹಿಷ್ಮತಿ ಪಟ್ಟಣಪತಿ'ಗಳೆಂದು ಕರೆದುಕೊಂಡಿದ್ದಾರೆ. ಸುಮಾರು ಎರಡು ಶತಮಾನಗಳ ಕಾಲ ಅವರು ಉಲ್ಲೇಖ ಬರುತ್ತದೆ. ಈ ಜಿಲ್ಲೆಯಲ್ಲದೇ ಇತರ ಸ್ಥಳಗಳಲ್ಲಿ ಲಭ್ಯವಿರುವ ಕೆಲವು ಶಾಸನಗಳಲ್ಲಿಯೂ ಕೂಡಾ ಅವರ ಕುರಿತು ಮಾಹಿತಿಗಳು ದಾಖಲಾಗಿವೆ.

ಸಾಮಾನ್ಯವಾಗಿ ಇವರ ಶಾಸನಗಳಲ್ಲಿ ಹೈಹೆಯರನ್ನು ಮಹಿಷ್ಮತೀ ಪುರುವರಾಧೀಶ್ವರ ಎಂದು ಕರೆದಿರುತ್ತಾರೆ. ಅಂದರೆ ಇವರು ಉತ್ತರದ ಮಾಹಿಷ್ಮತೀ ನಗರದಿಂದ ಇಲ್ಲಿಗೆ ಬಂದು ನೆಲೆಸಿರಬೇಕು ಎಂಬ ಅಭಿಪ್ರಾಯವಿದೆ[೧೫೬]. ಪ್ರಮುಖವಾಗಿ ಇವರಿಗೆ ಸಂಬಂಧಿಸಿದ ಎರಡು ಶಾಖೆಗಳನ್ನು ಈಗಾಗಲೇ ಇತಿಹಾಸಕಾರರು ಗುರುತಿಸಿದ್ದಾರೆ. ಮೊರಟ ಮುನ್ನೂರು(ಸೇಡಂ ತಾಲೂಕು ಪ್ರದೇಶ)ರ ವಿಭಾಗದಲ್ಲಿ ಹೈಹಯ ಮಹಾಮಂಡಳೇಶ್ವರರು ಆಳುತ್ತಿದ್ದರೆಂಬ ವಿವರಗಳಿವೆ. ಅದರಂತೆ ಸಗರನಾಡಿನಲ್ಲಿಯ ಕೆಲವು ಶಾಸನಗಳಲ್ಲಿಯೂ ಹೈಹಯರ ಬಗೆಗೆ ಉಲ್ಲೇಖಗಳು ದಾಖಲಾಗಿದ್ದುಂಟು. ಆದರೆ ಅವರು ಮೇಲೆ ಹೆಸರಿಸಿದ ವಿಭಾಗಕ್ಕೆ ಸೇರಿದ್ದರ ತಾವಾಗಿದ್ದವರೂ ಎಂಬ ಬಗೆಗೆ ಶಾಸನಗಳಲ್ಲಿ ಪ್ರಸ್ತಾಪವಿಲ್ಲ. ಈ ಭಾಗದಲ್ಲಿ ಕಂಡುಬಂದಿರುವ ಶಾಸನಗಳಲ್ಲಿಯೂ ಕೇವಲ ಮಹಿಷ್ಮಾತಿ ಪುರಾವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಹೊರತು ಅರಳು ಮತ್ತು ಮೊರಟ ಆಡಳಿತ ವಿಭಾಗಗಳಲ್ಲಿದ್ದ ಆಡಳಿತಗಾರರೆಂದು ಅವರನ್ನು ಉಲ್ಲೇಖಿಸಿಲ್ಲ. ಇವರಲ್ಲದೇ ಹಗರಟಗಿ ನಾಡಿನ ಕೆಂಬಾವಿಯಿಂದ ಆಳುತ್ತಿರುವವರೆಂದು ಸಂಬೋಧಿಸಿಕೊಂಡಿರುವ ಮಾಹಿತಿಗಳುಂಟು. ಅಲ್ಲದೇ ಕೆಂಭಾವಿ ಕಂಪಣವು ಅವರ ಮುಖ್ಯ ಕೇಂದ್ರವಾಗಿದ್ದಿರುವ ಬಗೆಗೆ ಮಾಹಿತಿಗಳು ಸಹ ದಾಖಲಾಗಿವೆ.

ಸುರಪುರ ತಾಲೂಕಿನ ಮಲ್ಲಾ ಬಿ. ಗ್ರಾಮದ ಕ್ರಿ.ಶ. ೧೦೧೪ರ ತೇದಿಯ ಶಾಸನ ಒಂದರಲ್ಲಿ ಮಹಾಮಂಡಳೇಶ್ವರನಾಗಿದ್ದ ಚನ್ದರಸನ ಉಲ್ಲೇಖವಿದೆ[೧೫೭]. ಸಮಧಿಗತ-ಪಂಚಮಹಾಸಬ್ದ ಮಹಾಸಾಮನ್ತಂ ಮನ್ನೆಯವೀರಂ ನನ್ನಿವೆಡಂಗಾದಿ ಸಾಕಳ ನಾಮಾಂಕ-ಮಾಳಿಕಾಪ್ರಸಸ್ತಿ ವಂಶಿಕಾಪುಸಸ್ತಿ ಸಹಿತಂ ಶ್ರೀಮತು ಚನ್ದರಸಂ ಎಂದು ಉಲ್ಲೇಖಿಸಲಾಗಿದೆ. ಅಲ್ಲಿಯ ಊರೊಡೆಯನಾಗಿದ್ದ ತೈಲಪಯ್ಯ ನಾಯಕನು ದೇವರಿಗೆ ಬಿಟ್ಟ ದತ್ತಿಯನ್ನು ಈ ಶಾಸನವು ತಿಳಿಸುತ್ತದೆ. ಆದರೆ ಇದರಲ್ಲಿ ಉಲ್ಲೇಖಗೊಂಡಿದ್ದ ರಾಜನ ಹೆಸರು ತೃಟಿತಗೊಂಡಿದ್ದರಿಂದ ಅವನು ಯಾವ ರಾಜನ ಮಹಾಮಂಡಳೇಶ್ವರನಾಗಿದ್ದನೆಂದು ಸ್ಪಷ್ಟವಾಗಿ ಹೇಳಲಿಕ್ಕಾಗದೆಂದು ಅಭಿಪ್ರಾಯಿಸಲಾಗಿದೆ. ಹಾಗೆಯೇ ಅವನು ಹೈಹಯರ ವಂಶಕ್ಕೆ ಸಂಬಂಧಿಸಿದವನೆಂದು ಖಚಿತವಾಗಿ ಕೂಡಾ ಹೇಳಲಿಕ್ಕಾಗದು.

ಶಾಸನದಲ್ಲಿ ವ್ಯಕ್ತವಾದ ಕಾಲದ ಹಿನ್ನೆಲೆಯಲ್ಲಿ ಈ ಕುರಿತು ಚರ್ಚಿಸುವುದಾದರೆ ಅದು ಐದನೆಯ ವಿಕ್ರಮಾದಿತ್ಯನ ಆಡಳಿತಕ್ಕೆ ಸಂಬಂಧಿಸಿದ್ದಾಗುತ್ತದೆ. ಒಂದು ವೇಳೆ ಇದು ಹೆಚ್ಚಿನ ಖಚಿತತೆ ಪಡೆದರೆ ಹೈಹಯರ ವಂಶದ ಬಗೆಗೆ ವಿವರಿಸುವ ಮೊದಲು ಶಾಸನವು ಸಹ ಇದೇ ಆಗುತ್ತದೆ. ಈಗಾಗಲೇ ದಾಖಲಾದಂತೆ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಿಂದಲೇ ಮಾತ್ರ ಅವರಿಗೆ ಸಂಬಂಧಿಸಿದ ವಿವರಗಳು ಪ್ರಕಟಗೊಂಡಿವೆ. ಈ ಕುರಿತು ಇನ್ನು ವಿವರವಾದ ಅಧ್ಯಯನಗಳ ಅವಶ್ಯಕತೆ ಇದ್ದೇ ಇದೆ.

**ರೇವರಸ**

ಮಹಾಮಂಡಳೇಶ್ವರ ಹೈಹಯರ ಕುರಿತು ಉಲ್ಲೇಖಿಸುವ ಈ ಭಾಗದಲ್ಲಿರುವ ಹೆಚ್ಚಿನ ಶಾಸನಗಳಲ್ಲಿ ರೇವರಸನ ಬಗೆಗೆ ಹೆಚ್ಚು ವಿವರಗಳು ದಾಖಲೆಗೊಂಡಿವೆ. ಕ್ರಿ.ಶ.೧೦೪೦ರಿಂದ ೧೦೫೬ರ ವರೆಗಿನ ಅವಧಿಯಲ್ಲಿ ಈ ವಿವರಗಳು ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಗಮನಿಸಬಹುದು.

ಕ್ರಿ.ಶ.೧೦೪೦ ಏವೂರು ಕ್ರಿ.ಶ. ೧೦೫೪ರ ಕೆಂಭಾವಿ ಕ್ರಿ.ಶ. ೧೦೫೫ರ ಕಚಕನೂರು ಕ್ರಿ.ಶ. ೧೦೫೬ರ ಕೆಂಭಾವಿ ಕ್ರಿ.ಶ. ೧೧೦೬ರ ಬೊಮ್ಮನಹಳ್ಳಿ ಕ್ರಿ.ಶ.೧೧೦೭ರ ದೇವರಗೋನಾಳ ಕ್ರಿ.ಶ. ೧೧೨೭ರ ಕಕ್ಕೇರಿ ಕ್ರಿ.ಶ. ೧೧೯೯ರ ಮಾದನೂರು ಮತ್ತು ಕ್ರಿ.ಶ.೧೨೦೬ರ ಎಡೆಯಾಪುರ ಶಾಸನಗಳಲ್ಲಿ ಉಕ್ತವಾದ ವಿಷಯದ ಹಿನ್ನೆಲೆಯಲ್ಲಿ ಅಭಿಪ್ರಾಯಿಸುವುದಾದರೆ ಇವೆಲ್ಲವೂ ಮಹಾಮಂಡಳೇಶ್ವರರ ಕುರಿತು ಉಲ್ಲೇಖಿಸುತ್ತವೆ[೧೫೪]. ಅಲ್ಲದೇ ಹೆಚ್ಚಿನ ಶಾಸನಗಳಲ್ಲಿ ಸಮಧಿಗತ-ಪಂಚಮಹಾಶಬ್ದ ಮಹಾಮಂಡಳೇಶ್ವರಂ ಮಾಹಿಶ್ಮತೀ ಪುರವಾಧೀಶ್ವರಂ ಮಧ್ಯದೇಶಾಧೀರ ಅಗ್ನಿಹಯ ವಂಶೋದ್ಭವಂ ಎಂಬ ವಿವರಣೆಯು ಬಹುತೇಕ ಶಾಸನಗಳಲ್ಲಿ ವ್ಯಕ್ತವಾಗಿದೆ.

ಮುಖ್ಯವಾಗಿ ಪ್ರಸ್ತಾಪಿಸಬಹುದಾದ ವಿಷಯವೆಂದರೆ ಮೇಲೆ ಉಲ್ಲೇಖಿಸಿದ ಹೆಚ್ಚಿನ ಸಂಖ್ಯೆಯ ಶಾಸನಗಳಲ್ಲಿ ಉಲ್ಲೇಖಿತ ಮಹಾಮಂಡಳೇಶ್ವರ ರೇವರಸನು ಕ್ರಿ.ಶ. ೧೦೧೪ರ ಮಲ್ಲಾ ಬಿ. ಗ್ರಾಮದ ಶಾಸನದಲ್ಲಿ ವ್ಯಕ್ತವಾದ ಚನ್ದರಸನ ಮಗನೇ(ಚಂದಭೂಪಾಳಸುತಂ) ಈ ರೇವರಸನೆಂಬುದನ್ನು ತಿಳಿಯಬಹುದೆಂದು ಅಭಿಪ್ರಾಯಗಳಿವೆ. ಆದರೆ ಇದು ಒಪ್ಪಿತವಾಗುವ ವಿಷಯವಲ್ಲ ಎಂದು ತೋರುತ್ತದೆ. ಕಾರಣ ಕ್ರಿ.ಶ. ೧೦೬೭ರ ಶಹಾಪುರ ತಾಲೂಕಿನ ಮೂಡಬಾಳ ಗ್ರಾಮದ ಶಾಸನದಲ್ಲಿ ಚನ್ದರಸನ ಸ್ಪಷ್ಟ ಉಲ್ಲೇಖವಿದೆ[೧೫೫]. ಈ ಚನ್ದರಸನು ರೇವರಸನ ಕಾಲದ ಕೊನೆ ಕೊನೆಯಲ್ಲಿ ಬರುವಂತವನು. ಹಾಗಾಗಿ ರೇವರಸನು ಚನ್ದರಸನ ಮಗನು ಆಗಿರಲಿಕ್ಕಿಲ್ಲ ಎಂಬುದು ಮಲ್ಲಾ ಬಿ. ಗ್ರಾಮದ ಉಲ್ಲೇಖಿತ ಶಾಸನದಲ್ಲಿ ನಮೂದಾಗಿರುವ ಚಂದರಸನು ರೇವರಸನ ಕಾಲದ ನಂತರವೇ ಬರುವಂತವನು. ಆದ್ದರಿಂದ ಮಲ್ಲಾ ಬಿ. ಗ್ರಾಮದ ಶಾಸನದ ತೇದಿಯನ್ನು ಇನ್ನೊಮ್ಮೆ ಪರಿಶೀಲಿಸುವ ಅವಶ್ಯಕತೆ ಇದೆ ಎಂದೆನಿಸುತ್ತದೆ. ಅಲ್ಲದೇ ಕೆಂಭಾವಿಯ ಕ್ರಿ.ಶ. ೧೦೫೪ರ ತೇದಿಯ ಶಾಸನದಲ್ಲಿ ವ್ಯಕ್ತವಾದ

ವಂಶಾವಳಿಯಲ್ಲಿ ಅವನ ಮಗ ಚಂದನಾಗಿದ್ದನೆಂದು ಉಲ್ಲೇಖಿಸಿದೆ ಹೊರತು ಚನ್ದರಸ ಎಂಬ ಹೆಸರಿಲ್ಲ. ಹಾಗಾಗಿ ರೇವರಸನು ಕೆಂಭಾವಿ ಶಾಸನದಲ್ಲಿ ಉಲ್ಲೇಖಿತ ಚಂದನ ಮಗನೇ ಹೊರತು ಮಲ್ಲಾ ಜಿ. ಶಾಸನದಲ್ಲಿ ಉಲ್ಲೇಖಿತ ಚನ್ದರಸನು ರೇವರಸನ ತಂದೆ ಆಗಿರಲಿಕ್ಕಿಲ್ಲ. ಬಹುಶಃ ಅವರಿಬ್ಬರೂ ಬೇರೆ ಬೇರೆಯಾದ ವ್ಯಕ್ತಿಗಳೆಂದು ತಿಳಿಯುವುದೇ ಸೂಕ್ತ ಎನಿಸುತ್ತದೆ. ರೇವರಸನು ಜಗದೇಕಮಲ್ಲ ಎರಡನೆಯ ಜಯಸಿಂಹ ಹಾಗೂ ತ್ರೈಲೋಕ್ಯಮಲ್ಲ ಮೊದಲ ಸೋಮೇಶ್ವರನಿಗೆ ಮಹಾಮಂಡಳೇಶ್ವರನಾಗಿ ಕೆಂಭಾವಿಯನ್ನು ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದನೆಂಬ ವಿವರಗಳಿವೆ. ಇದು ಕೆಂಭಾವಿ ಕ್ರಿ.ಶ. ೧೦೫೪ರ ಶಾಸನದಲ್ಲಿ ಉಲ್ಲೇಖವಾಗಿದೆ[೧೦]. ಆದರೆ ಆ ನಂತರ ಕಾಲದ ಕೆಲವು ಶಾಸನಗಳಲ್ಲಿಯೂ ರೇವರಸ ಎಂಬ ಹೆಸರಿನ ಉಲ್ಲೇಖಗಳುಂಟು. ಅದರ ಆ ಬಗೆಗೆ ಕೆಲವು ಅನುಮಾನಗಳನ್ನು ವ್ಯಕ್ತಪಡಿಸಲಾಗಿದೆ. ಹಾಗಾಗಿ ರೇವರಸ ಎಂಬ ಹೆಸರಿನ ಮೂರು ಜನ ಮಹಾಮಂಡಳೇಶ್ವರರು ಬೇರೆ ಬೇರೆ ಕಾಲಾವಧಿಯಲ್ಲಿ ಆಳ್ವಿಕೆ ಮಾಡಿದರೆಂದು ಅಭಿಪ್ರಾಯ ವ್ಯಕ್ತಪಡಿಸಲಾಗಿದೆ[೧೧].

ಜಗದೇಕಮಲ್ಲ ಜಯಸಿಂಹ ಮತ್ತು ಮೊದಲನೆಯ ಸೋಮೇಶ್ವರರ ಕಾಲದಲ್ಲಿ ಮಹಾಮಂಡಳೇಶ್ವರ ರೇವರಸನೊಬ್ಬನಿದ್ದ. ಅದೇ ರೀತಿ ತ್ರಿಭುವನಮಲ್ಲ ವಿಕ್ರಮಾದಿತ್ಯ ಮತ್ತು ಭೂಲೋಕಮಲ್ಲ ಮೂರನೇ ಸೋಮೇಶ್ವರನ ಕಾಲದಲ್ಲಿ ಮಹಾಮಂಡಳೇಶ್ವರ ಮಲ್ಲಿರೇವರಸ ಹಾಗೂ ಯಾದವ ಚಕ್ರವರ್ತಿ ಎರಡನೆಯ ಸಿಂಘಣ ಮಹಾಮಂಡಳೇಶ್ವರನಾದ ರೇವರಸ ಮೂರನೆಯ ವ್ಯಕ್ತಿಯಾಗಿದ್ದ ಎಂಬ ಹೇಳಿಕೆಗಳುಂಟು[೧೨]. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಈ ಶಾಸನಗಳನ್ನು ಗಮನಿಸಲಾಗಿದೆ. ಹಾಗಾಗಿ ವಿದ್ವಾಂಸರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಒಪ್ಪಬಹುದಾದ ವಿಚಾರಗಳಾಗಿವೆ ಎಂದು ಹೇಳಬಹುದು.

ಕ್ರಿ.ಶ.೧೦೫೪ರ ಕೆಂಭಾವಿ ಶಾಸನವು ಹೈಹಯ ಮಹಾಮಂಡಳೇಶ್ವರರ ವಂಶಾವಳಿಯನ್ನು ಒಳಗೊಂಡಿರುವ ಮಹತ್ವದ ಶಾಸನ ಇದಾಗಿದೆ. ರೇವರಸನ ಹೆಂಡತಿ ಮಾಳಿಯಬ್ಬರಸಿ ಕೆಂಭಾವಿಯಲ್ಲಿ ಮಾಳಿಬೇಶ್ವರ ದೇವಾಲಯ ಕಟ್ಟಿಸಿ ದಾನ ನೀಡಿರುವ ಉಲ್ಲೇಖವಿದೆ. ಇದು ಕಲ್ಯಾಣ ಚಾಲುಕ್ಯ ಮೊದಲನೆಯ ಸೋಮೇಶ್ವರನ ಕಾಲದ್ದು.

ಈ ಶಾಸನದಲ್ಲಿ ಶ್ರೀ ರಾಜಾಗ್ರಣಿ ಚಂದನಾತನ ಮಗ ನಿಂಬ, ಅವನ ಮಗ ಶ್ರೀ ಚಂದ ಭೂಪಾಳಕಂ ಆತನ ತನಯಂ ರೇವರಸ ಅವನ ಹೆಂಡತಿ ಮಾಳಿಯಬ್ಬರಸಿಯ ಕುರಿತು ವಿವರವಾಗಿ ದಾಖಲಾಗಿದೆ. ಅಲ್ಲದೇ ರೇವರಸನನ್ನು ಕೆಲವು ಬಿರುದುಗಳಿಂದ ಸಂಬೋಧಿಸಲಾಗಿದೆ. ಅಲ್ಲದೇ ಅವನ ರಾಜಧಾನಿ ಕೆಂಭಾವಿ ಆಗಿತ್ತು ಎಂಬ ಉಲ್ಲೇಖವಿದೆ. ಇದರಿಂದ ತಿಳಿಯಬಹುದಾದ ವಿಷಯವೆಂದರೆ ಕೆಂಭಾವಿಯನ್ನು ಪ್ರಮುಖ ಕೇಂದ್ರವಾಗಿ ಮಾಡಿಕೊಂಡು ಪ್ರತ್ಯೇಕವಾದ ಅಸ್ತಿತ್ವ ಹೊಂದಿದ್ದ ಹೈಹಯ ಮಹಾಮಂಡಳೇಶ್ವರರು ಮೊರಟ ಹಾಗೂ ಅರಳು ಪ್ರದೇಶಕ್ಕೆ ಸಂಬಂಧಿಸಿದವರಲ್ಲ. ಬಹುಶಃ ಈ ಶಾಖೆಯೇ ಬೇರೆಯಾಗಿತ್ತು

ಅವರು ಹಗರಟಗಿ ಪ್ರದೇಶದ ಪ್ರಭುಗಳಾಗಿದ್ದರೆಂದು ಅಭಿಪ್ರಾಯಿಸಬಹುದು. ಅವರ ರಾಜಧಾನಿ ಕೆಂಬಾವಿ. ಈ ಮಹಾಮಂಡಳೇಶ್ವರರು ವಿಶೇಷವಾಗಿ ಸಗರನಾಡನನು ಆಳಿದರು.

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ಸಮಧಿಗತ ಪಂಚಮಹಾಶಬ್ದಂ ಮಹಾಮಂಡಳೇಶ್ವರಂ ಎಂದು ಉಲ್ಲೇಖಿಸಲಾಗಿದೆ. ಇದರಲ್ಲಿ ನಮೂದಾಗಿರುವ ಪಂಚಮಹಾಶಬ್ದವು ಗೌರವ ಅಥವಾ ಮರ್ಯಾದೆ ಸೂಚಕವಾಗಿ ವ್ಯಕ್ತವಾಗಿದೆ. ಇವರು ಐದು ಮಹಾವಾದ್ಯಗಳನ್ನು ಉಪಯೋಗಿಸುವ ಅಧಿಕಾರ ಹೊಂದಿದ್ದರೆಂಬ ಅರ್ಥ ಬರುತ್ತದೆ.

ಶಹಾಪುರ ತಾಲೂಕಿನ ಮದ್ರಕಿ ಗ್ರಾಮದ ಕ್ರಿ.ಶ.೧೦೨೮ರ ತೇದಿಯ ಶಾಸನವು[೧೬೩] ಮಹಾಮಂಡಳೇಶ್ವರ ರೇವರಸನ ಕುರಿತು ತುಂಬಾ ಮಹತ್ವದ ಮಾಹಿತಿ ನೀಡುತ್ತದೆ. ಜಗದೇಕಮಲ್ಲ ಎರಡನೆಯ ಜಯಸಿಂಹ ಏತಗಿರಿ(ಯಾದಗಿರಿ) ನೆಲೆವೀಡಿನಿಂದ ರಾಜ್ಯವಾಳುತ್ತಿದ್ದಾಗ ಅವನ ಮಹಾಮಂಡಳೇಶ್ವರನಾಗಿ ರೇವರಸನು ಆಳುತ್ತಿದ್ದ ಬಗೆಗೆ ಉಲ್ಲೇಖಗಳುಂಟು. ಈ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಈತನ ಬಗೆಗೆ ಉಲ್ಲೇಖಿಸುವ ಮೊದಲ ಶಾಸನವು ಸಹ ಇದೇ ಆಗಿದೆಯೆಂದು ಅಭಿಪ್ರಾಯಿಸಬಹುದು. ಅರಸ ಜಗದೇಕಮಲ್ಲನ ಪಾದಪದ್ಮೋಪಜೀವಿಯಾಗಿದ್ದನೆಂದು ವಿವರಿಸಲಾಗಿದೆ. ಅವನ ನಾಮಗಾವುಂಡನ ಕಟ್ಟಿಸಿದ ಧರ್ಮೇತಿ ಬಾವಿಗೆ ಅಗ್ರಹಾರ ಮದ್ರಕಿಯ ಒಡೆಯರಾಗಿದ್ದ ಸರ್ವದೇವಭಟ್ಟ ಹಾಗೂ ಮಹಾಜನರ ಸಮ್ಮುಖದಲ್ಲಿ ರೇವರಸನು ದತ್ತಿ ಬಿಟ್ಟಿರುವ ಬಗೆಗೆ ಉಲ್ಲೇಖಿಸುತ್ತದೆ.

ಕ್ರಿ.ಶ.೧೦೫೧ರ ತೇದಿಯ ಭೀಮರಾಯನಗುಡಿ[೧೬೪] ಶಾಸನದಲ್ಲಿಯು ಸಹ ಮಹಾಮಂಡಳೇಶ್ವರ ರೇವರಸನ ಉಲ್ಲೇಖವುಂಟು. ತ್ರಿಭುವನಮಲ್ಲ ವಿಕ್ರಮಾದಿತ್ಯನ ಅಧೀನನಾಗಿ ಕೆಲಸ ಮಾಡುತ್ತಿದ್ದ ಈ ರೇವರಸನನ್ನು ಗೊಂಕನಿರ್ಮೂಳನಕಾರನೆಂದು ಉಲ್ಲೇಖಿಸಲಾಗಿದೆ. ಅವನು ತನ್ನನ್ನು ಪರಪಕ್ಷ ಭೈರವನೆಂದು ಕರೆದುಕೊಂಡಿದ್ದಾನೆ.

ಇದೇ ತಾಲೂಕಿನ ಗೋಗಿ ಗ್ರಾಮದ ಕ್ರಿ.ಶ. ೧೧೦೯ರ ಶಾಸನವು[೧೬೫] ಸಹ ತ್ರಿಭುವನಮಲ್ಲ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು. ತೃಟಿತಗೊಂಡಿರುವುದರಿಂದ ಅಸ್ಪಷ್ಟ ವಿವರಗಳು ಮಾತ್ರ ತಿಳಿದುಬರುತ್ತವೆ. ಇದರಲ್ಲಿ ರೇವರಸನ ಉಲ್ಲೇಖವಿದೆ.

**ಕಪ್ಪದೇವರಸ**

ಕ್ರಿ.ಶ.೧೧೪೨ರ ಹಿರಿಯ ಮುದನೂರಿನ ಶಾಸನದಲ್ಲಿ ಮಹಾಮಂಡಳೇಶ್ವರ ಕಪ್ಪದೇವರಸನ ಉಲ್ಲೇಖವಿದೆ. ಈತನು ಎರಡನೆಯ ಜಗದೇಕಮಲ್ಲನ ಅಧೀನ ಅಧಿಕಾರಿಯಾಗಿದ್ದನು. ಅಲ್ಲದೇ ಜಯಸಿಂಹನ ಪಟ್ಟಮಹಾದೇವಿಯಣುಗಂ ಎಂದು ಆತನನ್ನು ಸಂಬೋಧಿಸಲಾಗಿದೆ. ಹಾಗಾಗಿ ಅವನು ಆಕೆಗೆ ಮಗನ ಸಮಾನನಾಗಿದ್ದನೆಂಬ ಅಥವಾ ಸಾಕು ಮಗನಾಗಿದ್ದನೆಂಬ ಅರ್ಥದಲ್ಲಿ ಈ ವಿವರವು ಉಲ್ಲೇಖಗೊಂಡಿವೆ ಎಂದು ಅರ್ಥೈಸಲಾಗಿದೆ[೧೬೬]. ಅಲ್ಲದೇ ಇದೇ ಊರಿನಲ್ಲಿರುವ

ಕ್ರಿ.ಶ.೧೨ನೇ ಶತಮಾನದ ಶಾಸನದಲ್ಲಿ[೮೬]. ಲಕ್ಷ್ಮರಸನ ಕುಮಾರ ಕಪ್ಪದೇವರಸನೆಂದು ಉಲ್ಲೇಖಿಸಲಾಗಿದೆ. ಈತನನ್ನು ಚಂದಲದೇವಿಯ ಆಣುಗಂ ಎಂದು ಸಂಬೋಧಿಸಲಾಗಿದೆ. ಹಾಗಾಗಿ ಉಲ್ಲೇಖಿತಗೊಂಡಿರುವ ಕಪ್ಪದೇವರಸ ಒಬ್ಬನೇ ಎಂಬ ಜಿಜ್ಞಾಸೆ ಉಂಟಾಗುತ್ತದೆ. ಇವರಿಬ್ಬರೂ ದಾನ ನೀಡಿರುವ ಕಾಲಮಾನದ ಉಲ್ಲೇಖವು ಸಹ ಒಂದೇ ಕಾಲದ್ದಾಗಿದೆ. ಹಾಗಾಗಿ ಬಹುಶಃ ದಂಡನಾಯಕ ಲಕ್ಷ್ಮರಸನ ಕುಮಾರ ಕಪ್ಪದೇವರಸನೇ ಪಟ್ಟಮಹಾದೇವಿ ಚಂದಲದೇವಿಯರ ಪ್ರಿಯಪುತ್ರ(ಸಾಕುಮಗ)ನಾಗಿರಬಹುದು ಎಂದು ಅಭಿಪ್ರಾಯಿಸಲಾಗಿದೆ.

**ಗೋಮದೇವರಸ**

ಕ್ರಿ.ಶ.೧೦೯೩ರ ಮುದನೂರಿನ ಶಾಸನದಲ್ಲಿ ಈತನ ಉಲ್ಲೇಖವಿದೆ. ಮಹಾಮಂಡಳೇಶ್ವರ ಗೋಮದೇವರಸನು ಶ್ರೀಮದಗ್ರಹಾರದ ಮುದಿನೀರೂರೊಡೆಯ ಪ್ರಮುಖ ಮಹಾಜನಗಳ ಸಮ್ಮುಖದಲ್ಲಿ ಅಲ್ಲಿರುವ ಅಗಸ್ತ್ಯೆಸ್ತರ ದೇವರಿಗೆ ಅವರ ಸ್ಥಾನಾಚಾರ್ಯರಾದ ತೇಜೋರಾಶಿ ಪಂಡಿತರ ಕಾಲ್ತೊಳೆದು ದಾನ ಬಿಟ್ಟ ಉಲ್ಲೇಖ ನೀಡುತ್ತಾರೆ[೮೭]. ಉಲ್ಲೇಖಿತ ಶಾಸನ ಒಂದನ್ನು ಬಿಟ್ಟು ಉಳಿದ ಯಾವ ಶಾಸನಗಳಲ್ಲಿ ಈತನ ಹೆಸರಿನ ಉಲ್ಲೇಖವಿಲ್ಲ. ಅಲ್ಲದೇ ಅವನು ಯಾವ ವಂಶಕ್ಕೆ ಸಂಬಂಧಿಸಿದವನೆಂಬ ವಿವರಗಳು ದಾಖಲಾಗಿಲ್ಲ.

**ಜೋಗಮರಸ**

ಜೋಗಮರಸನೆಂಬ ಉಲ್ಲೇಖಗಳು ನಮ್ಮ ನಾಡಿನಲ್ಲಿ ಲಭ್ಯವಿರುವ ಶಾಸನಗಳಲ್ಲಿ ಯಥೇಚ್ಛವಾಗಿ ಕಂಡುಬರುತ್ತವೆ. ಕ್ರಿಶ. ೧೧೦೫ರ ತೇದಿಯ ಹಿರಿಯ ಮುದನೂರಿನ ರಾಮನಾಥ ದೇವಾಲಯದ ಹೊರಗೆ ಈ ಶಾಸನವಿದೆ ಎಂದು ಉಲ್ಲೇಖಿಸಲಾಗಿದೆ[೮೮]. ತ್ರಿಭುವನಮಲ್ಲ ವಿಕ್ರಮಾದಿತ್ಯನ ಮಹಾಮಂಡಲೇಶ್ವರ ಜೋಗಮರಸನ ಹೆಂಡತಿ ತಾರಾದೇವಿ ಮಹಾರಾಜರಿಗೆ ಹಣಕೊಟ್ಟು ಪಡೆದ ಭೂಮಿಯನ್ನು ಉತ್ತರೇಶ್ವರ ದೇವಾಲಯಕ್ಕೆ ದಾನವಾಗಿ ನೀಡಿರುವ ಉಲ್ಲೇಖವಿದೆ. ಈ ಶಾಸನದಲ್ಲಿ ಮಹಾಮಂಡಳೇಶ್ವರ ಜೋಗಮರಸನನ್ನು ವಿಕ್ರಮಾದಿತ್ಯನ ಪದ್ಮೋಪಜೀವಿ ಪಂಚಮಹಾಶಬ್ದ ಮಹಾಮಂಡಳೇಶ್ವರ ಚಂದಲದೇವಿಯರಣುಗಂ ಎಂದು ವರ್ಣಿಸಲಾಗಿದೆ. ಅಲ್ಲದೇ ಮಹಾಕಾಳ ಮಹಾಲಕ್ಷ್ಮಿ ಲಬ್ದವರಪ್ರಸಾದಂ ಎಂದು ಬಣ್ಣಿಸಲಾಗಿದೆ. ಅವನ ಹೆಂಡತಿ ಶ್ರೀ ರಾಮೇಶ್ವರ ದೇವರ ಲಬ್ದವರಪ್ರಸಾದೇ ದಾನವಿನೋದೆಯಾದ ತಾರಾದೇವಿಯರು ಮಹಾ ಜನರಿಂದ ಭೂಮಿ ಕೊಂಡು ಶ್ರೀ ಮದುತ್ತರೇಶ್ವರ ದೇವರಿಗೆ ದಾನ ನೀಡಿದ ಬಗೆಗೆ ಉಲ್ಲೇಖವಿದೆ.

ಉತ್ತರೇಶ್ವರ ಹೆಸರಿನ ದೇವಾಲಯಗಳ ಬಗೆಗೆ ಕೆಲವು ಬೇರೆ ಬೇರೆ ಅಭಿಪ್ರಾಯಗಳನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಬಹುಶಃ ಇಂಥ ದೇವಾಲಯಗಳು ಆ ಮೊದಲು ಜೈನ ಬಸದಿಗಳಾಗಿದ್ದು ತದನಂತರ ಶೈವಮತಕ್ಕೆ ಮತಾಂತರಗೊಂಡವುಗಳೆಂದು ಹೇಳುವ ವಿವರಗಳುಂಟು.

ಶಾಸನದಲ್ಲಿ ಉಲ್ಲೇಖಿತಗೊಂಡಿರುವ ಜೋಗಮರಸನು ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿಯ ಪುತ್ರ ಸಮಾನನಾದ ಸಾಕು ಮಗನಾಗಿರಬಹುದೆಂದು ಊಹಿಸಬಹುದಾಗಿದೆ. ಆದರೆ ಈ ತರಹದ ವಿವರಗಳು ಹಲವಾರು ಮಹಾಮಂಡಳೇಶ್ವರರ ಕುರಿತಂತೆ ಸಮೂದಗೊಂಡಿವೆ. ಬಹುಶಃ ಮಹಾಮಂಡಳೇಶ್ವರರೇ ರಾಜನ ವಿಶೇಷ ಪ್ರೀತಿಸಹಕಾರ ಗಳಿಸುವುದಗೋಸ್ಕರ ತಮ್ಮನ್ನು ಹೀಗೆ ಕರೆದು ಕೊಂಡಿರಬಹುದೆಂದು ಅಭಿಪ್ರಾಯಿಸಬಹುದು.

**ಲಕ್ಷ್ಮರಸ**

ಸ್ಪಷ್ಟ ಕಾಲಮಾನ ಇಲ್ಲದ ಆದರೆ ೧೨ನೇ ಶತಮಾನಕ್ಕೆ ಸೇರಬಹುದಾದ ಶಾಸನವು ಮುದನೂರಿನಲ್ಲಿದೆ[೧೦]. ಅದು ಮಹಾಮಂಡಳೇಶ್ವರ ಲಕ್ಷ್ಮರಸನ ಉಲ್ಲೇಖ ನೀಡುತ್ತದೆ. ಅಲ್ಲದೇ ಅವನ ಮಗ ಕುಮಾರ ಕಪ್ಪದೇವರಸನ ಹೆಸರನ್ನು ಸಹ ಉಲ್ಲೇಖಿಸುತ್ತಾರೆ. ಈ ಶಾಸನದಲ್ಲಿಯೂ ಸಹ ಹಲವು ಶಾಸನಗಳಲ್ಲಿರುವಂತೆ ಅದೇ ವಿವರಗಳನ್ನು ವಿವರಿಸಲಾಗಿದೆ. ಅವುಗಳಲ್ಲಿರುವ ಮಾಹಿತಿಗಳನ್ನು ಅನುಲಕ್ಷಿಸಿ ಮಹಾಮಂಡಳೇಶ್ವರರಾದ ಜೋಗಮರಸ ಹಾಗೂ ಲಕ್ಷ್ಮರಸರು ಸೋದರರೆನ್ನಬಹುದೆಂದು ಅಭಿಪ್ರಾಯಿಸಲಾಗಿದೆ. ಅಲ್ಲದೇ ಮಹಾಮಂಡಳೇಶ್ವರ ಲಕ್ಷ್ಮರಸನ ಮಗನೇ ಕುಮಾರ ಕಪ್ಪದೇವರಸನೆಂದು ಹೇಳಲಾಗಿದೆ.

**ಅಲ್ಲಹುಲಿದೇವರಸ**

ಈತನ ಕುರಿತು ಕ್ರಿ.ಶ. ೧೧೮೨ರ ಹೆಮ್ಮಡಗಿ ಶಾಸನವು ಉಲ್ಲೇಖಿಸುತ್ತದೆ[೧೧]. ಕಲ್ಯಾಣದ ಚಾಲುಕ್ಯರು ಕಲಚೂರಿಗಳ ವಿರುದ್ಧ ಜಯಸಾಧಿಸಿ ನಾಲ್ಕನೆಯ ಸೋಮೇಶ್ವರ ಅಥವಾ ವೀರಸೋಮೇಶ್ವರ ಮತ್ತೆ ಪಟ್ಟಕ್ಕೆ ಬಂದಿರುವ ವಿವರ ನೀಡುತ್ತದೆ. ಇಂಥ ಕಾರ್ಯಕ್ಕೆ ಬೆನ್ನಲುಬಾಗಿ ನಿಂತವನು ಅವನ ದಂಡನಾಯಕ ಬಮ್ಮಿದೇವ ಅಥವಾ ಬಮ್ಮರಸ. ಅವನು ಈ ಅಲ್ಲಹುಲಿದೇವರಸನನ್ನು ಸೋಲಿಸಿದನೆಂದು ಶಾಸನವು ಉಲ್ಲೇಖಿಸುತ್ತದೆ. ಈ ಮಹಾಮಂಡಳೇಶ್ವರನು ಮೂರನೆಯ ಅಥವಾ ಸರ್ವಜ್ಞ ಬಿರುದಾಂಕಿತ ಸೋಮೇಶ್ವರನಿಗೆ ನಿಷ್ಠನಾಗಿದ್ದನು. ಹಾಗಾಗಿ ನಿಜಸಾರ್ವಭೌಮನಾದ ನಾಲ್ಕನೆಯ ಸೋಮೇಶ್ವರನ ದಂಡನಾಯಕನು ದೇವಾಪುರದಲ್ಲಿ ಯುದ್ಧ ಮಾಡ್ಧೀ ಮಹಾಮಂಡಳೇಶ್ವರರನ್ನು ಮತ್ತೆ ತಮಗೆ ವಿಧೇಯರಾಗುವಂತೆ ಮಾಡಲಾಯಿತು. ಅವನು ಮತ್ತೆ ನಾಲ್ಕನೆಯ ಸೋಮೇಶ್ವರನಿಗೆ ನಿಷ್ಠವಾಗುವಂತೆ ಮಾಡಿದನು. ಆ ಸಂದರ್ಭದಲ್ಲಿ ಅಲ್ಲಹುಲಿದೇವರಸನು ಸಗರನಾಡಿನ ಮಹಾಮಂಡಳೇಶ್ವರನಾಗಿ ಆಡಳಿತ ನಿರ್ವಹಿಸುತ್ತಿರಬೇಕು. ಶಾಹಾಪೂರ ತಾಲೂಕಿನ ಹೋತಗಲ್ ಗ್ರಾಮದ ಕ್ರಿ.ಶ. ೧೧೮೫ರ ಶಾಸನದಲ್ಲಿಯೂ ಸಹ ಅಲ್ಲಹುಲಿದೇವರಸನ ಕುರಿತು ಉಲ್ಲೇಖವಿದೆ. ಅಲ್ಲದೇ ದಂಡನಾಯಕ ಕುಮಾರ ಬಮ್ಮಿದೇವನ ಉಲ್ಲೇಖವು ಇದೇ ಶಾಸನದಲ್ಲಿದೆ. ಮಹಾಮಂಡಳೇಶ್ವರ ಮಹಾದೇವರ ಲಬ್ಧವರಪ್ರಸಾದ ಅಲ್ಲಪುಲಿದೇವರಸನು ಶಿರವಾಳದ ಸಿದ್ಧಶಿವಯೋಗಿ ಶಾನ್ತಿಮಯ್ಯಗಳಿಗೆ ಅಲ್ಲಿನ ಸಿದ್ದೇಶ್ವರ ದೇವರಿಗಾಗಿ ವಿವಾಹ ಕಾರ್ಯ ನಿರ್ವಹಿಸಲು ದತ್ತಿ ನೀಡಲಾಯಿತೆಂಬ ವಿವರವಿದೆ[೧೨].

## ಗಂಡಾರಾದಿತ್ಯ ದೇವ

ಕ್ರಿ.ಶ.೧೧೩೬ರ ಹುಣಸಗಿ ಶಾಸನದಲ್ಲಿ[೧೬೩] ಈ ಮಹಾಮಂಡಳೇಶ್ವರನ ಕುರಿತು ಉಲ್ಲೇಖಿಸಲಾಗಿದೆ. ಆದರೆ ಶಾಸನದ ಹೆಚ್ಚಿನ ಭಾಗವು ತೃಟಿತಗೊಂಡಿದ್ದರಿಂದ ಇನ್ನು ಸ್ಪಷ್ಟವಾದ ಮಾಹಿತಿಗಳ ಕೊರತೆ ಕಂಡುಬರುತ್ತದೆ. ಭೂಲೋಕ ವರಷ ಅಥವಾ ಸರ್ವಜ್ಞ ಸೋಮೇಶ್ವರ (ಮೂರನೆಯ ಸೋಮೇಶ್ವರ) ಕಾಲದ ಈ ಶಾಸನದಲ್ಲಿ ಅಲ್ಲಿದ್ದ ಸರ್ವನಮಸ್ಯದಗ್ರಹಾರ ವಿಕ್ರಮಪುರದ ಕೇಶವ ದೇವರಿಗೆ ದಾನ ನೀಡಿದ ಉಲ್ಲೇಖವನ್ನು ನೀಡುತ್ತದೆ. ಬಹುಶಃ ಈ ಶಾಸನದಲ್ಲಿ ಮಾತ್ರ ಈತನ ಹೆಸರಿನ ಉಲ್ಲೇಖವಿದೆಯೆಂದು ಅಭಿಪ್ರಾಯಿಸಬಹುದು.

## ಚಂದಿಮ(ಚಂದಿಗಿ) ದೇವರಸ

ಹಗರಟಗಿಯ ಕ್ರಿ.ಶ. ೧೨೨೬ರ ಶಾಸನದಲ್ಲಿ ಈ ಮಹಾಮಂಡಳೇಶ್ವರನ ಉಲ್ಲೇಖವಿದೆ. ಆತನ ರಾಯಭಾರಿ, ಅಧಿಕಾರವರ್ಗವೆಲ್ಲವೂ ಸೇರಿ ಚಂದ್ರಶಿವ ಪಂಡಿತರ ಕಾಲ್ತೊಳೆದು ದೇವರಿಗೆ ದಾನ ಬಿಟ್ಟ ಉಲ್ಲೇಖ ನೀಡುತ್ತದೆ[೧೬೪]. ಆದರೆ ಶಹಾಪುರ ತಾಲೂಕಿನ ಹೋತಗಲ್ ಗ್ರಾಮದ ಕ್ರಿ.ಶ. ೧೨೦೮ರ ತೇದಿಯ ಶಾಸನದಲ್ಲಿ ಮಹಾಮಂಡಳೇಶ್ವರ ಚಂದಿಗಿ ದೇವರಸನೆಂದು ಉಲ್ಲೇಖಿಸಲಾಗಿದೆ[೧೬೫]. ಬಹುಶಃ ಈ ಎರಡು ಹೆಸರುಗಳು ಒಬ್ಬನಿಗೆ ಸಂಬಂಧಿಸಿದವೇ ಆಗಿರಬಹುದು. ಅಲ್ಲದೇ ಈ ಶಾಸನಗಳು ಯಾದವ ಚಕ್ರವರ್ತಿ ಎರಡನೆಯ ಸಿಂಘಣನ ಕಾಲದಲ್ಲಿಯೇ ರಚಿಸಲ್ಪಟ್ಟಂತವು. ಹೋತಗಲ್‌ನ ಶಾಸನದಲ್ಲಿ ಮಹಾಮಂಡಳೇಶ್ವರ ಚಂದಿಗೆ ದೇವರಸನು ಹೈಹಯ ವಂಶಕ್ಕೆ ಸೇರಿದವನೆಂದು ನಮೂದಿಸಿರುವ ಸ್ಪಷ್ಟ ಉಲ್ಲೇಖವಿದೆ. ಈತನು ತನ್ನನ್ನು ಭೂತನಾಥದೇವ ಪಾದಾರಾಧಕಂ ಎಂದು ಕರೆದುಕೊಂಡಿದ್ದಾನೆ.

## ಮಲ್ಲಿರೇವರಸ

ಮಹಾಮಂಡಳೇಶ್ವರ ಮಲ್ಲಿರೇವರಸನ ಕುರಿತು ಎರಡು ಶಾಸನಗಳಲ್ಲಿ ಉಲ್ಲೇಖ ಬರುತ್ತವೆ. ಸುರಪುರ ತಾಲೂಕಿನ ಕಕ್ಕೇರಿಯ ಕ್ರಿ.ಶ. ೧೧೨೭ರ ಮತ್ತು ಮುದನೂರಿನ ಕ್ರಿ.ಶ.೧೧೨೯ರ ಕಾಲದ ಶಾಸನದಲ್ಲಿ ಈತನ ಕುರಿತು ಉಲ್ಲೇಖವಿದೆ[೧೬೬].

ಇವೆರಡು ಶಾಸನಗಳು ಕಲ್ಯಾಣ ಚಕ್ರವರ್ತಿ ಭೂಲೋಕಮಲ್ಲ ಮೂರನೆಯ ಸೋಮೇಶ್ವರನ ಕಾಲದಲ್ಲಿ ರಚನೆಯಾಗಿರುವಂಥವು. ಸ್ವಷ್ನ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಮಾಹಿಷ್ಮಾತಿಪುರವರಾಧೀಶ್ವರ ಮಧ್ಯದೇಶಾಧೀಶ್ವರ ಅಹಿಹಯ(ಹೈಹಯ)ವಂಶೋದ್ಭವಂ ಎಂಬ ವಿವರವು ಬರುತ್ತದೆ. ಈತನ ಅಧೀನ ಆಡಳಿತಗಾರರಾಗಿದ್ದ ಕಕ್ಕೇರಿಯ ಬಮ್ಮೆನಾಯಕ ಮತ್ತು ಮಾದನಾಯಕ ಸೇರಿ ಸ್ಥಳೀಯ ರೇವೇಶ್ವರ ದೇವರಿಗೆ ದತ್ತಿಗಳನ್ನು ನೀಡಿರುವ ಉಲ್ಲೇಖವಿದೆ.

ಈ ಶಾಸನದಿಂದ ಅಭಿಪ್ರಾಯಿಸಬಹುದಾದ ಸಂಗತಿ ಏನೆಂದರೆ ಬಹುಶಃ ಮಹಾಮಂಡಳೇಶ್ವರ ಮಲ್ಲಿರೇವರಸನ ಹೆಸರಿನಲ್ಲಿ ದೇವಾಲಯವನ್ನು ಅವನ ಬೆಂಬಲಿತ ಆಡಳಿತಗಾರರು

ಕಟ್ಟಿರಬಹುದೆಂಬುದು ಇದೇ ಮಹಾಮಂಡಳೇಶ್ವರನ ಉಲ್ಲೇಖವುಳ್ಳ ಕ್ರಿ.ಶ. ೧೧೨೯ರ ತೇದಿಯ ಮುದನೂರಿನ ಶಾಸನವು ಸಹ ಅಲ್ಲಿಯ ಮಾರ್ಕಾಂಡೇಶ್ವರ ದೇವರಿಗೆ ಮಹಾಜನರು ಮತ್ತು ಆಡಳಿತಗಾರರೆಲ್ಲರೂ ಸೇರಿ ದಾನ ನೀಡಿರುವ ದಾನಗಳ ಕುರಿತು ಮಾಹಿತಿಗಳುಂಟು. ಶಾಸನದಲ್ಲಿ ವ್ಯಕ್ತವಾದ ವಿಚಾರಗಳ ಹಿನ್ನೆಲೆಯಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಈತನನ್ನೇ ತ್ರಿಭುವನಮಲ್ಲ ವಿಕ್ರಮಾದಿತ್ಯ ಮತ್ತು ಭೂಲೋಕಮಲ್ಲ ಮೂರನೆಯ ಸೋಮೇಶ್ವರನ ಮಹಾಮಂಡೇಶ್ವರ ಮಲ್ಲಿರೇವರಸನೆಂದು ಅಭಿಪ್ರಾಯಿಸಲಾಗಿದೆ[೧೬೬].

**ಕುಮಾರ ಚಂಡುಗಿ ರೇವರಸ**

ಈ ಹೆಸರಿನ ಉಲ್ಲೇಖವುಳ್ಳ ಶಾಸನವು ಬಹುಶಃ ಇದೊಂದೇ ಆಗಿದೆಯೆಂದು ಅಭಿಪ್ರಾಯಿಸಬಹುದು. ಕ್ರಿ.ಶ.೧೨ನೇ ಶತಮಾನದ ತೇದಿಯ ಶಹಾಪುರ ತಾಲೂಕಿನ ಮರಮಕಲ್ಲನ ಈ ಶಾಸನವು[೧೬೮] ಕಲೂಚೂರಿ ರಾಯನಾರಾಯಣ ಅಹವಮಲ್ಲನ ಕಾಲಕ್ಕೆ ಸಂಬಂಧಿಸಿದೆಂದು ತಿಳಿಯಬಹುದು. ಇವನ ಪಾದಪದ್ಮೋಪಜೀವಿಯಾಗಿ ಮಹಾಪ್ರಧಾನ ಸೇನಾಪತಿಯಾದ ಈ ಕುಮಾರ ಚಂಡುಗಿ ರೇವರಸನಿದ್ದನೆಂಗು ಉಲ್ಲೇಖಿಸಲಾಗಿದೆ. ಇದೇ ಶಾಸನದಲ್ಲಿ ಹೈಹಯ ಮಹಾಮಂಡಳೇಶ್ವರರ ವಂಶಾವಳಿಯ ಕುರಿತು ಮಾಹಿತಿ ಇರುವುದನ್ನು ಗಮನಿಸಬಹುದು. ಅಲ್ಲದೇ ಶ್ರೀಮನ್ಮಹಾಮಂಡಳೇಶ್ವರ ಹುಲಿದೇವರಸರ ಬಗೆಗೆ ಈ ಶಾಸನದಲ್ಲಿ ಉಲ್ಲೇಖವಿದೆ.

ಸಗರ ಮತ್ತು ಹಗರಟಗಿ ಆಡಳಿತ ವಿಭಾಗಗಳನ್ನು ದೀರ್ಘ ಕಾಲ ಆಳ್ವಿಕೆ ಮಾಡಿದ ಮಹಾಮಂಡಳೇಶ್ವರರಾದ ಹೈಹಯ ಅರಸರು ಈ ವಿಭಾಗದ ಬೇರೆ ಬೇರೆ ಭಾಗದಲ್ಲಿದ್ದ ಪ್ರದೇಶಗಳ ಶಾಸನಗಳಲ್ಲಿಯೂ ವ್ಯಕ್ತವಾಗಿದ್ದರೂ ಮುಖ್ಯವಾಗಿ ಕೆಂಭಾವಿ ಮುದನೂರು, ಶಿರವಾಳ ಹಾಗೂ ಸಗರ ವಿಭಾಗಗಳಲ್ಲಿ ಹೆಚ್ಚಿನ ಪ್ರಾಬಲ್ಯ ಪಡೆದಿದ್ದರೆಂದು ಹೇಳಬಹುದು. ಇವರ ಮುಖ್ಯ ಕೇಂದ್ರ ಕೆಂಭಾವಿ ಆಗಿದ್ದಿರಬಹುದಾದ ಸಾಧ್ಯತೆಗಳನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಸುರಪುರ ಮತ್ತು ಶಹಾಪುರ ತಾಲೂಕಿನ ಬಹುತೇಕ ಪ್ರದೇಶಗಳನ್ನು ಹೈಹಯ ಮಹಾಮಂಡಳೇಶ್ವರರೇ ಆಳಿದರು. ಆದರೂ ಶಹಾಪುರ ತಾಲೂಕಿನ ಅಣಬಿಯ ಕ್ರಿ.ಶ.೧೦೩೪ರ ಶಾಸನದಲ್ಲಿ ಅಧಿಕಾರಿ ಕೇಸಿಯಸಿಂಗನ ಉಲ್ಲೇಖವನ್ನು ನೀಡುತ್ತದೆ. ಈತನು ಅವರಿಗೆ ಸಂಬಂಧಿಸಿದವನೊ ಅಥವಾ ಸ್ವತಂತ್ರವಾಗಿದ್ದವನೋ ಎಂಬುದು ತಿಳಿದುಬರುವುದಿಲ್ಲ[೧೬೯]. ಇಂಥ ಒಂದೆರಡು ಉದಾಹರಣೆಗಳನ್ನು ಬಿಟ್ಟರೆ ಈ ಎರಡೂ ತಾಲೂಕಿನ ಬಹುತೇಕ ಪ್ರದೇಶಗಳಲ್ಲಿ ಹೈಹಯ ಮಹಾಮಂಡಳೇಶ್ವರರೇ ಆಳಿದರೆಂದು ಪರಿಭಾವಿಸಬಹುದು. ಆದರೆ ಯಾದಗಿರಿ ಜಿಲ್ಲೆಯ ಯಾದಗಿರಿ ತಾಲೂಕಿನಲ್ಲಿ ಹೈಹಯರ ಉಲ್ಲೇಖಗಳು ಕಂಡುಬರುವುದಿಲ್ಲ.

ಕ್ರಿ.ಶ.೧೦೩೩ರ ತೇದಿಯ ಹೆಂಡಗಿ ಮುದ್ರಿ ಗ್ರಾಮದ ಶಾಸನದಲ್ಲಿ ಮಾತ್ರ ಮಹಾಮಂಡಳೇಶ್ವರ ರೇವರಸನ ಉಲ್ಲೇಖವಿರುವುದನ್ನು ಗಮನಿಸಬಹುದು. ಆದರೂ ಈ ಹೆಸರು ಕಂಡುಬರುವುದು ಕ್ರಿ.ಶ. ೧೦೯೮ರ ನಂತರದ ಉಲ್ಲೇಖಿತ ವರ್ಷಗಳಲ್ಲಿ ಎಂಬ ಸಂಗತಿಯನ್ನು ಗಮನಿಸಬಹುದು.

ಇದೊಂದು ಉದಾಹರಣೆ ಬಿಟ್ಟರೆ ಈ ತಾಲೂಕಿನ ಶಾಸನಗಳಲ್ಲಿ ಹೈಹಯರ ಉಲ್ಲೇಖಗಳು ಕಂಡುಬರುವುದಿಲ್ಲವೆಂದೇ ಅಭಿಪ್ರಾಯಿಸಬಹುದು.

ಯಾದಗಿರಿ ತಾಲೂಕಿನ ಬಹುತೇಕ ಭಾಗಗಳು ಕಲ್ಲ-ಕೆಳಗು ನಾಡಿನ ವಿಭಾಗದಲ್ಲಿದ್ದವುಗಳು. ಹಾಗಾಗಿ ಈ ಪ್ರದೇಶವು ಬಹುಶಃ ಹೈಹಯರ ಅಧೀನದಲ್ಲಿ ಇದ್ದಿರಲಾರದು. ಆದರೆ ನೇರವಾಗಿ ಯುವರಾಜನ ಸುಪರ್ದಿಯಲ್ಲಿಯೇ ಇದ್ದಿರುವ ಬಗೆಗೆ ಮಾಹಿತಿಗಳುಂಟು. ಕ್ರಿ.ಶ. ೧೧೧೨ರ ತೇದಿಯ ಅನಪೂರ ಗ್ರಾಮದ ಶಾಸನವು ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು ಅವನ ಪಿರಿಯರಸಿ ಚಂದಲದೇವಿಯ ಮಗನಾದ ಜಗದೇಕಮಲ್ಲ ಕುಮಾರ ಸತ್ಯಾಶ್ರದೇವರು ಈ ಭಾಗದ(ಕಲ್ಲ-ಕೆಳಗ ನಾಡು) ಮಹಾಮಂಡಳೇಶ್ವರನಾಗಿದ್ದನೆಂಬ ಉಲ್ಲೇಖವನ್ನು ನೀಡುತ್ತದೆ. ಕಲ್ಲ ಕೆಳಗು ನಾಡಿನ ರಾಜಧಾನಿಯಾಗಿದ್ದ ಉಜ್ಜಿಗವೊಳಲಿನಲ್ಲಿರುವ ಆನೆಮೇಶ್ವರ ಮಠದಲ್ಲಿ ಅವನ ಮಹಾಪ್ರಧಾನ ದಂಡನಾಯಕ ಪೋತರಸನು ಶಾರದಾದೇವಿ ವಿಗ್ರಹ ಪ್ರತಿಷ್ಠಾಪಿಸಿ ದಾನ ನೀಡಿರುವ ಉಲ್ಲೇಖವಿದೆ[೧೮೦].

ಇದೇ ತಾಲೂಕಿನ ಇಡ್ಲೂರಿನ ಕ್ರಿ.ಶ.೧೧೧೫ರ ತೇದಿಯ ಶಾಸನವು ಸಹ ಅದೇ ಜಗದೇಕಮಲ್ಲ ಕುಮಾರ ಸತ್ಯಾಶ್ರದೇವರ ಹೆಸರನ್ನು ಉಲ್ಲೇಖಿಸುತ್ತದೆ[೧೮೧]. ತನ್ನ ಮಹಾಸಾಮಂತ ಭೂತರಸನಿಗೆ ಇಡ್ಲೂರಿನ ಜಡೆಯ ಶಂಕರದೇವರಿಗೆ ಧಾರಪೂರಕವಾಗಿ ದಾನ ನೀಡುವಂತೆ ಸೂಚಿಸಿರುವ ಮಾಹಿತಿ ಇದೆ. ಮೇಲೆ ವಿವರಿಸಿದ ಈ ಎರಡು ಶಾಸನಗಳು ಮಾತ್ರ ನೇರವಾಗಿ ಯುವರಾಜನೇ ಮಹಾಮಂಡಳೇಶ್ವರನಾಗಿದ್ದಿರುವ ಬಗೆಗೆ ಉಲ್ಲೇಖಿಸುತ್ತವೆ.

ಮಹಾಮಂಡಳೇಶ್ವರರ ಕುರಿತಂತೆ ಒಟ್ಟಾರೆ ಅಭಿಪ್ರಾಯಿಸುವುದಾದರೆ ಪ್ರಸ್ತುತ ಯಾದಗಿರಿ ಜಿಲ್ಲೆಯ ಬಹುತೇಕ ಭಾಗದಲ್ಲಿ ಮಹಾಮಂಡಳೇಶ್ವರರಾದ ಹೈಹಯರೇ ಹೆಚ್ಚಿನ ಅವಧಿಯವರೆಗೂ ಆಳ್ವಿಕೆ ಮಾಡಿದರು. ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಿಂದ ತಾವು ಸಂಪೂರ್ಣ ಅಸ್ತಂಗತವಾಗುವವರೆಗೂ ಮಹಾಮಂಡಳೇಶ್ವರ ಸ್ಥಾನದಲ್ಲಿಯೇ ಇದ್ದಂತವರು. ಈ ಭಾಗದಲ್ಲಿ ಎಲ್ಲ ಅವಧಿಯಲ್ಲಿಯೂ ಆಳ್ವಿಕೆ ಮಾಡಿರುವ ಸ್ಪಷ್ಟ ಕುರುಹುಗಳಿವೆ. ಅಲ್ಲದೇ ದೇವಗಿರಿ ಸೇವುಣರ ಕಾಲದವರೆಗೂ ಅವರು ಮಹಾಮಂಡಳೇಶ್ವರರಾಗಿ ಆಳ್ವಿಕೆ ಮಾಡುತ್ತಾ ಬಂದಿರುವವರು. ಅವರ ಕುರಿತು ಚರ್ಚಿಸಬಹುದಾದ ಇನ್ನೊಂದು ವಿಷಯವೆಂದರೆ ರಾಜಸತ್ತೆಗಳು ಬದಲಾದರು ಅವರು ಮಾತ್ರ ಮಹಾಮಂಡಳೇಶ್ವರರಾಗಿ ಅಭಾದಿತವಾಗಿ ಮುಂದುವರೆದುಕೊಂಡು ಬಂದಿರುವುದನ್ನು ಗಮನಿಸಬಹುದು. ಹಾಗಾಗಿ ಅವರಿಗೆ ತಮ್ಮ ಅಧಿಕಾರದ ಉಳಿಯುವಿಕೆ ಮುಖ್ಯವಾಗಿತ್ತು ಹೊರತು ತನ್ನ ರಾಜನ ಅಳಿವು ಉಳಿವು ಅಲ್ಲವೆಂದೇ ಅಭಿಪ್ರಾಯಿಸಬಹುದು. ಈ ಭಾಗದಲ್ಲಿ ಅವರು ನಿರಂತರವಾಗಿ ಆಳಿದ್ದರಿಂದಲೇ ಸಾಂಸ್ಕೃತಿಕವಾಗಿ ಈ ಪ್ರದೇಶವನ್ನು ಸಮೃದ್ಧಿಯಾಗಿ ನಿರ್ಮಿಸಲು ಸಾಧ್ಯವಾಗಿದೆ. ಸಗರ ಮತ್ತು ಪಗರಟಗೆ ಪ್ರಾಚೀನ ನಾಡುಗಳ ಅಭಿವೃದ್ಧಿಯ ನಿಜವಾದ ಹರಿಕಾರರೆಂದರೆ ಮಹಾಮಂಡಳೇಶ್ವರರಾದ ಹೈಹಯ ಅರಸರುಗಳೆಂದು ತಪ್ಪಾಗಲಾರದು.

## ಮಹಾಸಾಮಂತರು ಮತ್ತು ದಂಡನಾಯಕರು

ಆಡಳಿತದ ಅನುಕೂಲಕ್ಕಾಗಿ ರಾಜರು ಇಲ್ಲವೇ ಮಹಾಮಂಡಳೇಶ್ವರರ ಅಧೀನರಾಗಿ ಮಹಾಸಾಮಂತ ಮತ್ತು ದಂಡನಾಯಕರು ಗಾವುಂಡರು, ನಾಡಪ್ರಭುಗಳು, ಹೆಗ್ಗಡೆಗಳು ಹಾಗೂ ಊರೊಡೆಯರು ಕಾರ್ಯನಿರ್ವಹಿಸುತ್ತಿದ್ದರು. ಆ ಹೆಸರಿನ ಅಧಿಕಾರಿಗಳ ಕುರಿತು ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳು ಉಲ್ಲೇಖಿಸುತ್ತವೆ.

ಮಹಾಸಾನಂತರ ಪದವಿಯ ಕುರಿತು ಹಲವು ಚರ್ಚೆಗಳನ್ನು ವಿದ್ವಾಂಸರು ಮಾಡಿದ್ದಾರೆ. ಇದು ಎರಡು ಪದಗಳಿಂದ ಕೂಡಿದ್ದಾಗಿದೆಯೆಂದು ಅರ್ಥೈಸಲಾಗಿದೆ. ಸಾಮಂತ ಎಂಬುದು ಸ್ವಾಮ್ಯವಂತ(ಒಡೆಯ, ಒಡೆತನ ಪಡೆದವ)ಸಾಮಂತ>ಸಾವಂತ ಎಂಬ ರೂಪಾಂತರ ಹೊಂದುತ್ತಾ ಬಂದಿದೆ. ಇದಕ್ಕೆ ಕೇವಲ ಗೌರವವಾಚಿಯಾಗಿ 'ಮಹಾ' ವಿಶೇಷಣ ಸೇರಿ ಮಹಾಸಾಮಂತ ಎಂಬ ಪದವಾಗಿದೆ. ಅಂದರೆ ಇಲ್ಲಿ ಸಾಮಂತ ಎಂದರೂ ಒಂದೇ, ಮಹಾಸಾಮಂತ ಎಂದರೂ ಒಂದೇ. ಇದು ಹುದ್ದೆಯನ್ನು ಸೂಚಿಸುವ ಪದವಾಗಿದೆ ಎಂದು ಅಭಿಪ್ರಾಯಿಸಲಾಗಿದೆ[೧೮೨]. ಅಲ್ಲದೇ ಇವರನ್ನು ಕೆಲವೊಮ್ಮೆ ಮಹಾಸಾಮಂತಾಧಿಪತಿ ಎಂದೂ ಕರೆಯಲಾಗಿದೆ. ಅದರಲ್ಲಿಯೂ ಸಹ ಅಂತಹ ವ್ಯತ್ಯಾಸಗಳೇನು ಇರಲಾರವು ಎಂದು ಹೇಳಬಹುದು. ಮಹಾಸಾಮಂತರನ್ನು ಮನ್ನೆಯ ಎಂದು ಸಹ ಕರೆಯಲಾಗಿದೆ. ಅಂದರೆ ಇವರು ರಾಜ ಇಲ್ಲವೇ ಮಹಾಮಂಡಳೇಶ್ವರರಿಂದ ಮಾನ್ಯತೆ ಪಡೆದವರೆಂದು ತಿಳಿಯಬಹುದು. ಮಹಾಸಾಮಂತರನ್ನು ಸಾಮಾನ್ಯವಾಗಿ ಎರಡು ಪ್ರಕಾರಗಳಲ್ಲಿ ವಿಭಾಗಿಸುವ ಪ್ರಯತ್ನ ಮಾಡಲಾಗಿದೆ. ಆಳುವ ಮಹಾಸಾಮಂತರು ಮತ್ತು ಸುಂಕದ ಮಹಾಸಾಮಂತರು ಎಂದು ಸ್ಥೂಲವಾಗಿ ವಿಂಗಡನೆಗಳಿವೆ[೧೮೩]. ಮಹಾಮಂಡಳೇಶ್ವರರ ಹಾಗೆಯೇ ಇವರು ಸಹ ಧ್ವಜ, ಲಾಂಛನ ಮತ್ತು ವಾದ್ಯಗಳನ್ನು ಹೊಂದಿದ್ದರೆಂದು ತೋರುತ್ತದೆ. ಅಂಥ ಮಹಾಸಾಮಂತರು ದಂಡನಾಯಕರು ಹಾಗೂ ಇನ್ನಿತರೆ ಆಡಳಿತಾಗರರ ಕುರಿತು ಕೆಲವು ಉಲ್ಲೇಖಗಳು ಈ ಪ್ರದೇಶದ ಶಾಸನಗಳಲ್ಲಿ ವ್ಯಕ್ತವಾಗಿವೆ.

ಮಹಾಸಾಮಂತರು, ಮಹಾಪ್ರಧಾನರು, ದಂಡನಾಯಕರು ಹಾಗೂ ಇತರೆ ಚಿಕ್ಕಪುಟ್ಟ ಆಡಳಿತ ನಿರ್ವಾಹಕರು ಕೇವಲ ಯುದ್ಧದಲ್ಲಿ ಭಾಗವಹಿಸುವ ಸೈನಿಕರಾಗಿರಲಿಲ್ಲ. ಅವರು ರಾಜನೀತಿಗೆ ಸಂಬಂಧಿಸಿದ, ಹಣಕಾಸು ವ್ಯವಹಾರಕ್ಕೆ ಸಂಬಂಧಪಟ್ಟ, ಸುಂಕಾಧಿಕಾರಿಗಳಾಗಿ ಹಾಗೂ ಸೇನಾಪತಿಗಳಾಗಿ ಕಾರ್ಯನಿರ್ವಹಿಸಿರುವ ಬಗೆಗೆ ಶಾಸನಗಳಲ್ಲಿ ವಿವರಗಳು ದಾಖಲಾಗಿವೆ. ಅಲ್ಲದೇ ಇವು ಶ್ರೇಣೀಕೃತ ಮಾದರಿಯಲ್ಲಿ ನಿರ್ವಹಿಸುವ ಜವಾಬ್ದಾರಿಗಳೇನಾಗಿರಲಿಲ್ಲ. ಉದಾಹರಣೆಗೆ ಸುರಪುರ ತಾಲೂಕಿನ ಎಡೆಯಾಪುರದ ಕ್ರಿ.ಶ. ೧೨೦೬ರ ತೇದಿಯ ಶಾಸನವನ್ನು ಗಮನಿಸಬಹುದು[೧೮೪]. ಯಾದವ ಚಕ್ರವರ್ತಿ ಎರಡನೆಯ ಸಿಂಗಣನು ದೇವಗಿರಿಯಿಂದ ಆಳುತ್ತಿರುವಾಗ ಆತನ ಪಾದಪದ್ಮೋಪಜೀವಿಯಾಗಿದ್ದ ಲಕುಮಿದೇವರಸ

ಸಗರನಾಡನ್ನಾಳುತ್ತಿದ್ದನೆಂದು ಆತನ ಕೆಳಗೆ ಕುಯ್ಯರಾಯನೆಂಬವನು ಅವನ ಅಧೀನ ಅಧಿಕಾರಿಯಾಗಿ ಆಳುತ್ತಿದ್ದನು. ಅಲ್ಲದೇ ಅದೇ ಕಾಲಕ್ಕೆ ಮಹಾಮಂಡಳೇಶ್ವರ ರೇವರಸನು ಸಹ ಕೆಂಭಾವಿಯನ್ನಾಳುತ್ತಿದ್ದ ಎಂಬ ಉಲ್ಲೇಖವನ್ನು ನೀಡುತ್ತಾನೆ.

ಕ್ರಿ.ಶ.೧೦೬೫ರ ತೇದಿಯ ಏವೂರ ಶಾಸನವು ಶ್ರೀಕರಣ ದಂಡನಾಯಕ ಸೋವರಸನ ಬಗೆಗೆ ವಿವರಿಸುತ್ತದೆ[೧೮೫]. ಈತನು ತನ್ನನ್ನು ಪರಮ ಮಾಹೇಶ್ವರನೆಂದು ಕರೆದುಕೊಂಡಿದ್ದಾನೆ.

**ದಂಡನಾಯಕ ರವಿಯಣಭಟ್ಟ**

ಈ ಪ್ರದೇಶದ ಪ್ರಾಚೀನ ವ್ಯವಸ್ಥೆಯಲ್ಲಿ ದಂಡನಾಯಕರ ಪಾತ್ರ ಕುರಿತಂತೆ ವಿವೇಚಿಸುವ ಸಂದರ್ಭದಲ್ಲಿ ಅತೀ ಮುಖ್ಯವಾಗಿ ಕಾಣಿಸಿಕೊಳ್ಳುವ ವ್ಯಕ್ತಿಯೆಂದರೆ ರವಿಯಣಭಟ್ಟ. ಈತನನ್ನು ಶಾಸನಗಳು ರವಿಗ, ರವಿಚಚಮೂಪ, ರವಿದೇವ, ಚಮೂಪತಿ, ರವಿಯಣಭಟ್ಟ ಮತ್ತು ರವಿಣಗದೇವ ಎಂದು ಸಂಬೋಧಿಸಿವೆ. ಹೆರಲಾಳಸನ್ಧಿವಿಗ್ರಹಿ ದಂಡನಾಯಕ ರವಿಯಣಭಟ್ಟನ ಕುರಿತು ಏವೂರಿನ ಕ್ರಿ.ಶ. ೧೦೭೭ರ ತೇದಿಯ ಶಾಸನವು ಸವಿಸ್ತಾರವಾಗಿ ವಿವರಿಸುತ್ತದೆ. ಅಹವಮಲ್ಲ(ಒಂದನೆಯ ಸೋಮೇಶ್ವರ)ನ ಮಗ ಎರಡನೆಯ ಸೋಮೇಶ್ವರನಿಂದ ಸೇನಾಧಿಪಟ್ಟದೊಡನೆ ಹೇರಿ ಸನ್ದಿವಿಗ್ರಹಪದವನ್ನು ಪಡೆದನು. ಅಲ್ಲದೇ ಸೋಮೇಶ್ವರನ ನಂತರ ಆಳ್ವಿಕೆಗೆ ಬಂದ ತ್ರಿಭುವನಮಲ್ಲ ವಿಕ್ರಮಾದಿತ್ಯನನ್ನು ಒಲಿಸಿಕೊಂಡು ಸಕಲ ರಾಜ ಚಿಹ್ನೆಗಳನ್ನು ಪಡೆದುಕೊಂಡನೆಂದು ಈ ಶಾಸನವು ವಿವರಿಸುತ್ತದೆ[೧೮೬]. ಅತ್ಯಂತ ದೀರ್ಘವಾಗಿ ರಚಿಸಲ್ಪಟ್ಟಿರುವ ಆತನ ಕಾಲದ ಈ ಶಾಸನವನ್ನು ನೋಡುವುದೇ ಒಂದು ಸೊಬಗು. ಅದಕ್ಕಾಗಿಯೇ ಒಂದು ಮಂಟಪವನ್ನು ಕಟ್ಟಲಾಗಿದೆ. ಸುಮಾರು ಎಂಟತ್ತು ಅಡಿ ಎತ್ತರ ಹಾಗೂ ಮೂರ್ನಾಲ್ಕು ಅಡಿ ಅಗಲವುಳ್ಳ ಈ ಶಾಸನದ ಎಲ್ಲ ಮಗ್ಗಲುಗಳಲ್ಲಿ ಅಕ್ಷರಗಳನ್ನು ಕಂಡರಿಸಲಾಗಿದೆ. ಮೊಟ್ಟಮೊದಲಿಗೆ ಶಾಸನ ತಜ್ಞರಾದ ಜೆ.ಎಫ್.ಫ್ಲೀಟ್ ಅವರು ಇದನ್ನು ಪ್ರಕಟಿಸಿದ್ದಾರೆ ಎಂಬ ವಿವರಗಳು ದಾಖಲಾಗಿವೆ.

ಈ ಶಾಸನದಲ್ಲಿ ತಾನು ಪಡೆದ ಮೇಲೇರಿದ ಹಂತಗಳನ್ನಲ್ಲದೇ ತನ್ನ ವಂಶಾವಳಿ ಹಾಗೂ ತನ್ನ ಅರಸರಾದ ಕಲ್ಯಾಣದ ಚಾಲುಕ್ಯರ ವಂಶಾವಳಿಯನ್ನು ಸಹ ದೀರ್ಘವಾಗಿ ಬರೆಯಲಾಗಿದೆ. ಎಡೆದೊರೆ ನಾಡಿನ ಕಿರುದೊರೆ ದಂಡೆಯಲ್ಲಿರುವ ಮುಕ್ಕುನ್ದೆಯೆಂಬ(ಮುಕ್ಕುಂದಿ) ಗ್ರಾಮವು(ಸಿಂಧನೂರು ತಾಲೂಕು)ದಲ್ಲಿಯ ಕಶ್ಯಪಗೋತ್ರದ ಬ್ರಾಹ್ಮಣ ವಂಶದವನೆಂದು ವಿವರಿಸಲಾಗಿದೆ. ಈ ಕೆಳಗಿನಂತೆ ಆತನ ವಂಶವೃಕ್ಷವು ಶಾಸನದಲ್ಲಿ ದಾಖಲಾಗಿದೆ[೧೮೭].

ಬ್ರಹ್ಮ

↓

ಮರೀಚಿ

↓

ಕಶ್ಯಪ ಪ್ರಜಾಪತಿ

↓

ರೇವಣ ಭಟ್ಟ-೧

↓

ಶಂಕರಾರ್ಯ-೧

↓

ಕೊಪ್ಪದೇವ+ಪಂಪಕಬ್ಬೆ

↓ ↓ ↓ ↓ ↓

ಪಾವಣಾರ್ಯ-೧ ಶಂಕರಾರ್ಯ-೨ ರೇವಣಭಟ್ಟ-೨ ಮಾಚಯಭಟ್ಟ ರವಿದೇವ+ದೇವಲಬ್ಬೆ

↓ ↓ ↓ ↓ ↓

ನಾಚಣ-೧ ಕೊಪ್ಪ-೨ ಪಾವಣ-೨ ರೇವಣ-೩ ಸೋವಣ

↓

ನಾಚಿಭಟ್ಟ ದಂಡನಾಯಕ-೨

↓

ಐಹೂರ-ಮಹಾಪ್ರಭು ತ್ರಿಪುರಾನ್ತಕ ದೇವರಸ

(ಕೃಪೆ: ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ-೧೯೯೯).

ಈ ಶಾಸನದಲ್ಲಿ ರವಿದೇವನ ತಂದೆ ಕೊಪ್ಪದೇವನನ್ನು ಸಹ ಹೊಗಳಲಾಗಿದೆ. ಈತನು ಕಲ್ಯಾಣ ಚಕ್ರವರ್ತಿ ಜಗದೇಕಮಲ್ಲ ಜಯಸಿಂಹನ ಕಾಲಕ್ಕೆ ಪ್ರಸಿದ್ಧ ವ್ಯಕ್ತಿಯಾಗಿದ್ದವನೆಂದು ಅಭಿಪ್ರಾಯಿಸಲಾಗಿದೆ. ಈತನ ಮಗನೆ ರವಿದೇವ.

ದಂಡನಾಯಕ ರವಿಯಣ್ಣ ಭಟ್ಟ ಮೂರು ಜನ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಿಗೆ ನಿಷ್ಠಾವಂತ ಅಧಿಕಾರಿಯಾಗಿ ದಕ್ಷತೆಯಿಂದ ಸೇವೆ ಸಲ್ಲಿಸಿದನೆಂದು ಶಾಸನವು ವಿವರವಾಗಿ ಉಲ್ಲೇಖಿಸುತ್ತದೆ. ಈತನು ಚಮೂಪತಿ ಸ್ಥಾನದಿಂದ ಲಾಳಸನ್ಧಿವಿಗ್ರಹಿಯಾಗಿ, ಹೇರಿಸನ್ದಿವಿಗ್ರಹಿಯಾಗಿ, ದಂಡನಾಯಕನಾಗಿ ಅಧಿಕಾರ ಸ್ಥಾನಗಳಲ್ಲಿ ಮೇಲೇರಿ ಶ್ರೀಮನ್ಮಪ್ರಧಾನ ಹೇರಿಲಾಳ ದಂಡನಾಯಕನೆನಿಸಿದ ಎಂದು ಈ ವಿವರಗಳಲ್ಲಿ ಉಲ್ಲೇಖಿಸಲಾಗಿದೆ[೧೮೮].

ಚಮೂಪ ಎಂದರೆ ಸೈನ್ಯದ ಅಧಿಕಾರಿಯೆಂಬ ಅರ್ಥವಿದೆ. ಆ ಸ್ಥಾನದಿಂದ ಲಾಳಸನ್ಧಿವಿಗ್ರಹಿಯಾಗಿ ಎಂಬ ಪದವು ಯುದ್ಧ ಒಪ್ಪಂದಗಳ ಜೊತೆಗೆ ಬೇಹುಗಾರಿಕೆಯನ್ನು ನೋಡಿಕೊಳ್ಳುವುದಾಗಿತ್ತು. ಆ ನಂತರ ದಂಡನಾಯಕನಾಗಿ ಮೇಲೇರುತ್ತ ಶ್ರೀಮನ್ಮಪ್ರಧಾನ ಹೇರಿಲಾಳ ಸನ್ಧಿವಿಗ್ರಹಿ ದಂಡನಾಯಕನೆಂದೆನಿಸಿಕೊಳ್ಳುತ್ತಾನೆ.

ಈ ರವಿಯಣ್ಣ ಭಟ್ಟನು ಕೇವಲ ಯುದ್ಧೋತ್ಸಾಹಿ ಮಾತ್ರ ಆಗಿರಲಿಲ್ಲ. ಅವನು ಐವೂರಿನಲ್ಲಿ ಸ್ವಯಂಭೂ ಸೋಮೇಶ್ವರ ದೇವಾಲಯವನ್ನು ಸಹ ಕಟ್ಟಿದ ಎಂಬುದು ಬಹುಮುಖ್ಯವಾದ ಸಂಗತಿ. ಇಲ್ಲಿರುವ ಶಾಸನದ ಕುರಿತಂತೆ ವಿದ್ವಾಂಸರೊಬ್ಬರು ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ. “ಸೋಮೇಶ್ವರ ದೇವಾಲಯದ ಸೌಂದರ್ಯವು ಶಿವೋಪಾಸನೆ, ಸೌಂದರ್ಯೋಪಾಸನೆ, ದಾನಶೂರತ್ವ, ಪರಾಕ್ರಮ, ರಾಜನಿಷ್ಠೆ, ದಕ್ಷತೆಗಳ ಲಿಖಿತ ರೂಪದ ಪ್ರತೀಕವೇ ಐವೂರಿನ ಶಾಸನ”. ಈ ಮಾತುಗಳು ತುಂಬಾ ವಾಸ್ತವವಾದವುಗಳೆಂದು ಆ ದೇವಾಲಯ ಮತ್ತು ಶಾಸನವನ್ನು ಪ್ರತ್ಯಕ್ಷವಾಗಿ ಕಂಡಾಗ ಹೌದೆನಿಸುತ್ತದೆ.

ಐವೂರಿನ ಕ್ರಿ.ಶ. ೧೧೦೮ರ ಶಾಸನವು ದಂಡನಾಯಕ ಮುದ್ದರಸನ ಬಗೆಗೆ ವಿವರಿಸುತ್ತದೆ[೧೮೯]. ಶಿವಪಾದಶೇಖರ ಪಂಬಳ ಭಯಂಕರ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮದಚ್ಚುಪನ್ನಾಯದಧಿಷ್ಠಾಯಕ ದಂಡನಾಯಕನೆಂದು ಆತನನ್ನು ಉಲ್ಲೇಖಿಸಲಾಗಿದೆ. ಅವನು ಸಹ ಐವೂರಿನ ಶ್ರೀ ಸ್ವಯಂಭು ಸೋಮೇಶ್ವರ ದೇವರಿಗೆ ದತ್ತಿ ನೀಡಿರುವ ಉಲ್ಲೇಖವಿದೆ. ಬಹುಶಃ ಈತನು ತೆರಿಗೆ ಇಲಾಖೆಗೆ ಸಂಬಂಧಿಸಿದ ದಂಡನಾಯಕನಾಗಿರಬಹುದೆಂದು ಅಭಿಪ್ರಾಯಿಸಲಾಗಿದೆ. ಇದೇ ಊರಿನ ಕ್ರಿ.ಶ.೧೧೨೫ರ ಶಾಸನವು ಶ್ರೀಮನ್ಮಹಾಪ್ರಧಾನಂ ಕಡೆಯ ದಂಡನಾಯಕ ಲಕ್ಷ್ಮಣಯ್ಯ ಎಂಬ ಉಲ್ಲೇಖವನ್ನು ನೀಡುತ್ತದೆ[೧೯೦]. ಐವೂರಿನ ಕ್ರಿ.ಶ. ೧೧೪೫ರ ಶಾಸನದಲ್ಲಿ ಸಗರ ಐದನೂರು ಬಾಡದ ಹೆಚ್ಚು ಕವೆರ್ಗ್ಗಡೆ ದಂಡನಾಯಕ ಕಂಚಲಸನ ಉಲ್ಲೇಖವಿದೆ. ಐವೂರ ಸ್ವಯಂಭು ಸೋಮೇಶ್ವರ ದೇವರ ಅಂಗಭೋಗಕ್ಕಾಗಿ ಐವೂರ ಠಾಣಾಂತರದ ಹೆಜ್ಜುರ್ಂಕದಲ್ಲಿ ಈತ ತಿಂಗಳಿಗೆ ಐದು ಲೊಕ್ಕಿಯ ಹಣ ಬಿಟ್ಟಿದ್ದನ್ನು ತಿಳಿಸುತ್ತದೆ. ಇದರಿಂದ ಹೆಜ್ಜುರ್ಂಕವೆರ್ಗ್ಗಡೆಗಳಿಗೆ ತಾವು ವಸೂಲಿ ಮಾಡಬೇಕಾದ ಸುಂಕದ ಭಾಗಗಳನ್ನು ದೇವರಿಗೆ ಬಿಡುವ ಅಧಿಕಾರವಿತ್ತೆಂದು ತಿಳಿದುಬರುತ್ತದೆ ಎಂಬ ಅಭಿಪ್ರಾಯಗಳಿವೆ[೧೯೧]. ಕ್ರಿ.ಶ. ೧೧೯೬ರ ಕಡಕಲ್ಲು ಶಾಸನದಲ್ಲಿ ದಂಡನಾಯಕ ನಾಗವರ್ಮ್ಮಯ್ಯನು ಚಕ್ರವರ್ತಿಯನ್ನು

ವಿನಂತಿಸಿಕೊಂಡಿದ್ದರಿಂದ ಅಲ್ಲಿರುವ ಸಿದ್ದೇಶ್ವರ ದೇವರಿಗೆ ದತ್ತಿ ಬಿಟ್ಟ ಉಲ್ಲೇಖವಿದೆ[೯೨]. ಕ್ರಿ.ಶ. ೧೨ನೇ ಶತಮಾನದ ಚೆನ್ನೂರಿನ ಶಾಸನವು ದಾಸಿಯರಸ ಹೆಸರಿನ ದಂಡನಾಯಕ ಕುರಿತು ಉಲ್ಲೇಖಿಸುತ್ತದೆ ಎಂದು ಅಭಿಪ್ರಾಯಿಸಲಾಗಿದೆ[೯೩]. ಆದರೆ ಪೂರ್ಣವಾದ ಪಾಠದ ವಿಷಯವು ಲಭ್ಯವಾಗಿಲ್ಲ.

## ದಂಡನಾಯಕ ಭೋಗರಸ

ಕ್ರಿ.ಶ.೧೧೦೬ರ ಬೊಮ್ಮನಹಳ್ಳಿ ಶಾಸನದಲ್ಲಿ ಈತನ ಉಲ್ಲೇಖಬರುತ್ತದೆ[೯೪]. ತ್ರಿಭುವನಮಲ್ಲ ವಿಕ್ರಮಾದಿತ್ಯನ ರಾಣಿ ಧಾರಲದೇವಿಯು ಭೂದತ್ತಿ ಬಿಟ್ಟಾಗ ಈತನ ಉಲ್ಲೇಖ ಬರುತ್ತದೆ. ಗೋನಾಳದ ಪ್ರಭು ಶ್ರೀಮನ್ಮಹಾಪ್ರಧಾನಂ ಶ್ರೀಕರಣಂದಣ್ಣನಾಯಕ ಧುರಿಮಯ್ಯಂಗ ಹಾಗೂ ದಣ್ಣನಾಯಕ ಭೋಗಿಮಯ್ಯಗಳ್ಗೆ ಶ್ರೀಮದ್ಧಾರಲದೇವಿಯರು ಧಾರಾಪೂರ್ವಕಂ ಮಾಡಿದ ದಾನ ಎಂಬ ಉಲ್ಲೇಖ ಈ ಶಾಸನದಲ್ಲಿದೆ. ಈ ಶಾಸನದಲ್ಲಿ ಉಲ್ಲೇಖಗೊಂಡ ವಿವರಗಳ ಹಿನ್ನೆಲೆಯಲ್ಲಿ ಕೆಲವು ಅನಿಸಿಕೆಗಳನ್ನು ಶಾಸನ ತಜ್ಞರಾದ ಹನುಮಾಕ್ಷಿ ಗೋಗಿ ಅವರು ವ್ಯಕ್ತಪಡಿಸಿದ್ದಾರೆ. ಅಪರೂಪವಾದ ಪುರುಷ ವರ್ಣನೆಯುಳ್ಳ ಭೋಗದೇವನ ಸುಭಗ-ಸುಂದರ ರೂಪ ವರ್ಣನೆ ಈ ರೀತಿ ಇದೆ.

ಪದೆದೆರದಂಗೆ ಬಂದು ಮಗಣಸದವಂಗೆ ಮನಂ ಮರಲ್ದು ನೋ

ಡಿದ ಗಣಿಕಾಜನಕ್ಕೆ ಮಲೆದೊಡ್ಡಿದ ವೈರಿಬಳಕ್ಕೆ ದರ್ಣನೆಂ

ಬುದು ಖಚಕೇಂದ್ರನೆಂಬುದು ಮನೋಭವನೆಂಬುದ ಕಾಳಮ್ರಿತ್ತುವೆಂ

ಬುದು ಜಗದವೆಲ್ಲಮೆಂದೆಣಿಯಾದನೊ ಭಾವಿಸಿ ಭೋಗದೇವನ॥

ಕರುಳ ತಗುಳ್ಪು ಕೆಣ್ಮ(ನವೆ)ನಿಪ್ಪು ಕದಪಿನ ತೆಳ್ಪುತ್ರಸು

ರರುಹದ ಕಾಯ್ಪು ಬಾಯ್ತೆಱಿಯೆ ಕಂಪು ಲತಾಂಗದ ಸೋಂಪು ಪುರ್ವ್ವಿನ

ವೈರಿಸುವ ಜಬ್ಬ್ರ್ ಸೋರ್ಮ್ಮುಡಿಯ(ಪ)ರ್ಬ್ಬಿ ಭುಜಂಗಳ ಕೊರ್ಬ್ಬು ನಿಲೆವೆ

ತ್ತಿರೆ ನಡೆ ನೋಡಿದಡೆ ಸುಭಗ ರೂಪಮನೋಜನ ಭೋಗದೇವನ॥

ಅಲ್ಲದೇ ಈತನ ಬಗೆಗೆ ಸುರಪುರ ತಾಲೂಕಿನ ದೇವರಗೋನಾಳ ಕ್ರಿ.ಶ.೧೧೦೬ರ ಶಾಸನವು ಸಹ ಇದೇ ರೀತಿಯ ಉಲ್ಲೇಖಗಳನ್ನು ನೀಡುತ್ತದೆ.

ನುಡಿಪುಸಿಯಲ್ತು ಮಿದುವಿನ್ತಿದಲ್ತು ಗುಣಕಿಜದಲ್ತುವಿಕ್ರಮಂ ಮನಂಚಳಮಲ್ಲುಭೋಗಮಿರ

ನಡುಗಮುದಲ್ತು ಶೌಚಮಜಿದಲ್ತು ಮನಂಚಳಮಲ್ತು ಭೋಗಮಿ

ರಡಗುವದಲ್ತು ಮಾಡಿದುದು ಸಾಸ್ವತ ಸತ್ಯಮಿದಲ್ತು ದಾನಮಿಂ

ನ್ತಡೆಯೊಳೆ ಪುಟ್ಟಿತಲ್ತು ನಿಜಮಿನ್ದು ವ್ಯಾಪಿಸೆ ಭೋಗದೇವನಂ

ಎಂದು ಆಂತರಂಗದ ಸೌಂದರ್ಯವನ್ನು ವರ್ಣಿಸುತ್ತದೆ ಎಂದು ಅಭಿಪ್ರಾಯಿಸಲಾಗಿದೆ. ಅಲ್ಲದೇ ಸ್ವಸ್ತಿ ದಣ್ಣನಾಯಕಂ ಭೋಗರಸರಂ ಎಂಬ ವಿವರವು ಶಾಸನದಲ್ಲಿದೆ. ಬೊಮ್ಮನಹಳ್ಳಿ ಶಾಸನದ ಇನ್ನೊಂದು ಮುಖ್ಯವಾದ ವಿಷಯವೆಂದರೆ ರಾಣಿ ಧಾರಲದೇವಿ ದಾನಚಿಂತಾಮಣಿ ಅತ್ತಿಮಬ್ಬೆಯ ಬಿರುದು ಮಹಾಸತಿತಿಳಕೆ ಗುಣದಂಕಕಾರ್ತಿ ಎಂಬ ಬಿರುದು ಇವಳಿಗೂ ಇರುವುದು[೧೫೫].

ಕ್ರಿ.ಶ.೧೦೭೪ರ ತೇದಿಯು ಬೈಚಬಾಳ ಶಾಸನವು[೧೫೬] ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ದಂಡನಾಯಕನಾದ ಸಿಂಗರಸನ ತನ್ನ ತಂದೆ ರೆಬ್ಬಣಯ್ಯನ ಪರೋಕ್ಷ ವಿನಯ ನಿಮಿತ್ತವಾಗಿ ಕಚ್ಚೆಗನೂರಿನ ದೇವಾಲಯಕ್ಕೆ ದಾನ ನೀಡಿರುವ ಉಲ್ಲೇಖವಿದೆ. ಇದರಲ್ಲಿ ವ್ಯಕ್ತವಾದ ಪರೋಕ್ಷವಿನಯವು ವ್ಯಕ್ತಿಯೊಬ್ಬ ಸತ್ತ ನಂತರ ಅವನ ಸ್ಮರಣೆಗಾಗಿ ಬಿಡುವಂತಹ ದತ್ತಿಯಾಗಿದೆ. ಇದು ಹೆಚ್ಚಾಗಿ ಜೈನ ಮತಾವಲಂಬಿಗಳಿಗೆ ಸಂಬಂಧಿಸಿದಂತೆ ಉಲ್ಲೇಖಿಸಲ್ಪಡುತ್ತದೆ. ದಂಡನಾಯಕ ಸಿಂಗರಸನು ತನ್ನ ತಂದೆ ತೀರಿಕೊಂಡ ನಂತರ ಅವನ ಸ್ಮರಣಾರ್ಥವಾಗಿ ರಬ್ಬೇಶ್ವರ ದೇವಾಲಯ ಕಟ್ಟಿಸಿ ಈ ದಾನವನ್ನು ನೀಡಿರುವಂತೆ ಕಾಣುತ್ತದೆ.

ಬೊಮ್ಮನಹಳ್ಳಿಯ ಕ್ರಿ.ಶ.೧೧೦೮ರ ಶಾಸನವು ವಿಕ್ರಮಾದಿತ್ಯನ ರಾಣಿ ಧಾರಲದೇವಿ ವ್ರತನೋಂಪಿ ನಿಮಿತ್ತವಾಗಿ ದತ್ತಿಯನ್ನು ದಂಡಯನಾಯಕ ಭೋಗಿಮರ ಸಮ್ಮುಖದಲ್ಲಿ ಬಿಟ್ಟ ಉಲ್ಲೇಖವಿದೆ[೧೫೭].

ಶ್ರೀಮನ್ಮಹಾಪ್ರಧಾನಂ(ಬಬ್ಬಿದೇವ) ಶ್ರೀಕರಣ ಶ್ರೀ ಕು(ಕೊ)ವಣಾರಸ್ವಾಮಿ ದಂಡನಾಯಕನ ಉಲ್ಲೇಖವು ಮುದನೂರಿನ ಶಾಸನದಲ್ಲಿದೆ[೧೫೮]. ಅವನು ಪ್ರಾಯಶಃ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಮೆಚ್ಚಿನ ದಂಡನಾಯಕ ಇವನಾಗಿರಬಹುದೆಂದು ವ್ಯಕ್ತವಾಗುತ್ತದೆ. ಅವನು ಮುದನೀರಿನ(ಮುದನೂರು)ಲ್ಲಿ ಪ್ರತಿಷ್ಠಾಪಿಸಿದ ಕುಮಾರೇಶ್ವರ ದೇವರ ಅಂಗಭೋಗ, ರಂಗಭೋಗ, ನೈವೇದ್ಯ ನಂದಾದೀವಿಗೆ ಹಾಗೂ ಜೀರ್ಣೋದ್ಧಾರ ಕಾರ್ಯಗಳು ನಿರಂತರವಾಗಿ ನಡೆಯಲು ಹಗರಟಗಿಯ ಉಗ್ರಭೀಮೇಶ್ವರ ದೇವಾಲಯದ ಸ್ಥಾನಾಚಾರ್ಯ ಬ್ರಹ್ಮರಾಶಿ ಪಂಡಿತ ಕಾಲು ತೊಳೆದು ಈ ದತ್ತಿಗಳನ್ನು ಬಿಡಲಾಯಿತೆಂಬ ವಿವರಗಳಿವೆ. ಇದೇ ಗ್ರಾಮದ ಕ್ರಿ.ಶ. ೧೦೪೮ರ ಶಾಸನವು ಜಗದೇಕಮಲ್ಲ ಇಮ್ಮಡಿ ಜಯಸಿಂಹನ ಕಾಲಕ್ಕೆ ಸೇರಿದ್ದು[೧೫೯]. ಅವನು ಮುದನೂರಿನ ಮಹಾ ಅಗ್ರಹಾರದ ಮಹಾಜನರು, ಊರೊಡೆಯರ ಸಮ್ಮುಖದಲ್ಲಿ ರಾಮೇಶ್ವರ ದೇವಾಲಯಕ್ಕೆ ದಾನ ನೀಡಿರುವ ಉಲ್ಲೇಖವಿದೆ. ಶ್ರೀಮತು ಮಹಾಪ್ರಧಾನಂ ಸುಂಕವೆರ್ಗ್ಗಡೆ ಗಯಾಧರ ದಂಡನಾಯಕ ಎಂದು ನಮೂದಿಸಲಾಗಿದೆ. ಅವನು ಕೇವಲ ಯುದ್ಧಕ್ಕೆ ಸಂಬಂಧಿಸಿದವ ಮಾತ್ರನಾಗಿರದೇ ಸುಂಕದ ವ್ಯವಹಾರವೂ ಸಹ ಅವನ ಸುಪರ್ದಿಯಲ್ಲಿತ್ತೆಂದು ತಿಳಿಯಬಹುದು.

**ಮಹಾಪ್ರಚಂಡ ದಂಡನಾಯಕ ಕುಮಾರ ಬಮ್ಮಿದೇವರಸ**

ಕಲ್ಯಾಣದ ಚಾಲುಕ್ಯರ ಆಡಳಿತಾವಧಿಯಲ್ಲಿ ತುಂಬಾ ಮಹತ್ವದ ಪಾತ್ರವನ್ನು ಈತನು ವಹಿಸಿದಂತೆ ಕಂಡುಬರುತ್ತದೆ. ಕಳಚೂರಿ ಚಕ್ರವರ್ತಿಗಳಿಂದ ನಾಲ್ಕನೆಯ ಸೋಮೇಶ್ವರನಿಗೆ ಮರಳಿ ರಾಜ್ಯ ದೊರಕಿಸಿ ಕೊಡುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದ ಕುರಿತು ಹಮ್ಮಡಿಗೆ

ಶಾಸನವು ಸಹ ಆ ಕುರಿತಂತೆ ವಿವರಿಸುತ್ತದೆ. ಕ್ರಿ.ಶ. ೧೧೭೫ರ ತೇದಿಯ ಮುದನೂರಿನ ಶಾಸನದಲ್ಲಿ ಆತನ ಕುರಿತು ಮಾಹಿತಿ ಇದೆ[೨೦೦]. ಆದರೆ ಈ ಶಾಸನದಲ್ಲಿ ಮಾತ್ರ ಕಳಚೂರಿ ಚಕ್ರವರ್ತಿ ರಾಯಮುರಾರಿ ಸೋವಿದೇವನ ಕಾಲದ ವಿವರವಿದೆ. ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಮಹಾಪ್ರಚಂಡ ದಂಡನಾಯಕ ಕುಮಾರ ಬಮ್ಮಿದೇವರಸಂ ಎಂಬ ಉಲ್ಲೇಖ ಈ ಶಾಸನದಲ್ಲಿದೆ.

ಕ್ರಿ.ಶ.೧೧೮೨ರ ತೇದಿಯ ಹೆಮ್ಮಡಗಿ ಶಾಸನದಲ್ಲಿಯೂ ಅವನ ಕುರಿತು ವಿವರಗಳಿವೆ. ತ್ರಿಭುವನಮಲ್ಲ ವೀರಸೋಮೇಶ್ವರ(ನಾಲ್ಕನೆಯ ಸೋಮೇಶ್ವರ) ಸೆಲೆಯುಹಳ್ಳಿ(ಸೆಲದಹಳ್ಳಿ >ಸೆಲೆಹಳ್ಳಿ>ಶೆಳ್ಳಗಿ) ನೆಲವೀಡಿನಿಂದ ರಾಜ್ಯ ಆಳುತ್ತಿದ್ದ ಉಲ್ಲೇಖವಿದೆ. ಕಲಚೂರಿಗಳ ಹೊಡೆತದಿಂದ ಬಸವಳಿದು ಮತ್ತೆ ರಾಜ್ಯವನ್ನು ಪ್ರತಿಷ್ಠಾಪಿಸಿದ ಸಂದರ್ಭ ಅದು. ಇಂಥ ಘಟನೆಗೆ ಮುಖ್ಯ ಕಾರಣ ದಂಡನಾಯಕ ಕುವಾರ ಬಮ್ಮರಸ. ಹಾಗಾಗಿ ಅವನನ್ನು ಶಾಸನಗಳಲ್ಲಿ ತತ್ಪಾದಪದ್ಮೋಪಜೀವಿಯಪ್ಪ ರಾಯದಂಡಾಧಿನಾಥ ಗಂಡಪೆಂಡಾರ ಚಾಳುಕ್ಯರಾಜ್ಯಸಮು(ದ್ಧರಣಂ) ಕುಮಾರ ಬಂಮ್ಮಿದೇವರಸ ಎಂದು ಉಲ್ಲೇಖಿಸಲಾಗಿದೆ[೨೦೧]. ಅಲ್ಲದೇ ಕಲ್ಯಾಣ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಅಧಿಕಾರವನ್ನು ಪ್ರಶ್ನಿಸಿದ್ದ ಮಹಾಮಂಡಳೇಶ್ವರ ಅಲ್ಲಹುಲಿದೇವರಸನನ್ನು ದೇವಾಪುರದಲ್ಲಿ ಮುಖಾಮುಖಿಯಾಗಿ ಸೋಲಿಸಿ ಚಾಲುಕ್ಯರಿಗೆ ವಿಧೇಯನಾಗುವಂತೆ ಮಾಡಿದ. ಹಾಗಾಗಿ ಶಾಸನದಲ್ಲಿ ಬಂಮ್ಮಿದೇವ ದಂಡಾಧಿನಾಥಂ ಶ್ರೀಮನುಮಹಾಮಂಡಳೇಶ್ವರಂ ಅಲ್ಲಹುಲಿದೇವರಸರ ಮೇಲೆ ಉಖ್ಖಡಿಯಾಗಿ(ದಂಡೆತ್ತಿ) ಬಂದು ಮಹಾಮಂಡಳೇಶ್ವರ ಅಲ್ಲಹುಲಿದೇವರಸನನ್ನು ಸೋಲಿಸಿ ದೇವಾಪುರದಲ್ಲಿದ್ದ ಎಂದು ಉಲ್ಲೇಖಿಸಲಾಗಿದೆ. ಪರಮಮಹೇಶ್ವರನಾದ ಈತನು ಎಮ್ಮಡಿಗೆಯಲ್ಲಿ ಪ್ರತಿಷ್ಠಾಪಿಸಿದ್ದ ಹಂದೇಶ್ವರ ದೇವಾಲಯಕ್ಕೂ ದತ್ತಿ ನೀಡಿದ ಎಂಬ ವಿವರಗಳು ಶಾಸನದಲ್ಲಿ ದಾಖಲಾಗಿವೆ. ಈತನ ವಿವರಣೆಯನ್ನು ಶಾಸನದಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಭೂವಳೆಯಾದಿನಾಯಕರ ನೋರ್ಪ್ಪನೆಗೆಲುದ ಪ್ರತಾಪದಿಂ
ದಾವನು ಮಾಂಪರಿಲ್ಲ ಭುಜಗರ್ವ್ವದ ದೋರ್ವ್ವಳದಿಂದೆ ನಿಂದನಿಂ
ಕಾವರುವಾರುವಿಲ್ಲೆನುತ ಓಡಿದರೊಲ್ಲದ ವೈರಿವರ್ಗ್ಗವೀ
ಕಾವಣದಂಡನಾಥ ಸುತ ಬಮ್ಮರಸಂ ಜಗದೇಕವೀರನೋ॥
ಬಮ್ಮನ ಸಾಹ ಭಾನುವಿನ ತೇಜಯಿರಿರ್ವ್ವಿರನೋಚೆ ಲೋಕದೊಳು
ಸೋಮನ ತಂಪು ಮೇರುವಿನ ಬಣ್ಪು ಸುರೇಶನ ಪೆಂಪು ನಾಡಯುಂ
ರಾಮನ ಸತ್ವ ಭೀಸ್ಮನ ಸುತಿತ್ವ ಮಹೇಸ ಮಹತ್ವಮೆಂದೊಡಿ
ನ್ನೀ ಮಹಿಯೊಳು ನೆಗಳ್ತೆವಡೆದಿಪ್ಪವರಾರ್ದ್ದೊರೆ ಬಂಮಿದೇವ॥

ಶಾಹಾಪುರ ತಾಲೂಕಿನ ಹೋತಗಲ್‌ನ ಕ್ರಿ.ಶ. ೧೧೭೫ರ ತೇದಿಯು ಶಾಸನದಲ್ಲಿಯೂ ಸಹ ಕಳಚೂರ್ಯರಾಜ್ಯ ನಿರ್ಮೂಳನ ಚಾಲುಖ್ಯ ರಾಜ್ಯ ಮುದ್ಧರಣನು ರಾಂಪು. ದಂಡನಾಥಗಳಂಕಾರಂ ಮಹಾಪ್ರತಾಪ ದಂಡನಾಯಕವರ ಕುಮಾರ ಬಮ್ಮಿದೇವರಸರು ಎಂಬ ಉಲ್ಲೇಖವು ಇದೆ[೨೦೨]. ಅಲ್ಲದೇ ಇದೇ ಶಾಸನದಲ್ಲಿ ಮಹಾಮಂಡಳೇಶ್ವರ ಅಲ್ಲಪ್ರ(ಹು)ಲಿದೇವರಸರ ಹೆಸರು ಸಹ ಇರುವುದು. ಕಲ್ಯಾಣ ಚಾಲುಕ್ಯ ರಾಜ್ಯ ಮತ್ತೆ ಪುನರ್ಭರಣಗೊಳ್ಳುವ ಸಂದರ್ಭದಲ್ಲಿ ಮಾತ್ರ ಆತ ಸಿಡಿದಿದ್ದ ಎಂದು ತೋರುತ್ತದೆ. ಆ ನಂತರ ಬಮ್ಮಿದೇವರಸನು ಅವನಿಗೆ ತಕ್ಕ ಶಾಸ್ತಿ ಮಾಡಿದ ಮೇಲೆ ಅವನು ಕಲ್ಯಾಣದ ಚಾಲುಕ್ಯರಿಗೆ ಮತ್ತು ದಂಡನಾಯಕ ಬಮ್ಮಿದೇವರಸನಿಗೂ ವಿಧೇಯನಾಗಿರುವಂತೆ ತೋರುತ್ತದೆ.

**ದಂಡನಾಯಕ ಅಹಮಲ್ಲರಸ**

ಐವೂರಿನಲ್ಲಿ ರವಿಯಣಭಟ್ಟ ಹಾಗೂ ಮುದನೂರಿನಲ್ಲಿ ದಂಡನಾಯಕ ಕೋಮಾರಸ್ವಾಮಿ ಹಾಗೂ ಹೆಮ್ಮಡಿಗೆಯಲ್ಲಿ ಕುಮಾರ ಬಮ್ಮಿದೇವರಸರು ಪ್ರಸಿದ್ಧರಾದಷ್ಟೇ ಹಗರಟಗಿ ಪಟ್ಟಣದಲ್ಲಿ ದಂಡನಾಯಕ ಅಹಮಲ್ಲರಸನು ಖ್ಯಾತಿ ಹೊಂದಿದ್ದನೆಂದು ತಿಳಿದು ಬರುತ್ತದೆ. ಕ್ರಿ.ಶ.೧೦೯೨ ಮತ್ತು ಕ್ರಿ.ಶ.೧೧೨೩ರ ಹಗರಟಗಿಯ ಎರಡೂ ಶಾಸನಗಳು ಈತನ ಕುರಿತು ಉಲ್ಲೇಖಿಸುತ್ತವೆ. ಆರನೆಯ ವಿಕ್ರಮಾದಿತ್ಯನ ಅಧೀನ ಅಧಿಕಾರಿಯಾಗಿದ್ದ ಈತ ತನ್ನನ್ನು ಶ್ರೀಮತ್ರಿಭುವನಮಲ್ಲರಸರ ಪರವಾರಾಧ್ಯರಪ್ಪರ ಎಂದು ಕರೆದುಕೊಂಡಿದ್ದಾನೆ[೨೦೩]. ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ ಪ್ರಪಂಡ ದಂಡನಾಯಕ ಎಂಬ ಉಲ್ಲೇಖವಿದೆ. ಇನ್ನೊಂದು ಶಾಸನದಲ್ಲಿಯೂ (ಕ್ರಿ.ಶ.೧೧೩೨) ಸಹ ಅಂಥದ್ದೇ ವಿವರಗಳು ಮೂಡಿಬಂದಿವೆ. ಸರ್ವನಮಸ್ಯಮಾದಗ್ರಹಾರಂ ಹಗರಟ್ಟಿಗೆಯ ನಖರೇಶ್ವರ ದೇವರಿಗೆ ದತ್ತಿಬಿಟ್ಟಿರುವ ಉಲ್ಲೇಖವನ್ನು ಈ ಶಾಸನಗಳು ನೀಡುತ್ತವೆ.

**ಸರ್ವಾಧಿಕಾರಿ ಪಾರಿಸೆಟ್ಟಿ**

ಇದೇ ಗ್ರಾಮದ ಕ್ರಿ.ಶ.೧೨೨೯ರ[೨೦೪] ಶಾಸನದಲ್ಲಿ ಸರ್ವಾಧಿಕಾರಿ ಪಾರಿಸೆಟ್ಟಿಯ ಉಲ್ಲೇಖ ಬರುತ್ತದೆ. ಸ್ವಸ್ತಿ ಸಮಸ್ತ ಪ್ರಶ್ತಿ ಸಹಿತಂ ಶ್ರೀಮನು ಮಹಾಪ್ರಧಾನಂ ಬಾತ್ತರ ನಿಯೋಗಧಿಪತಿ ರಸಲಪತಿ ನಿಯೋಗಯೋಗಂಧರ ಪ್ರತಿಕಾರ್ಯ್ಯ ದುರಂಭರಂ ಮಂತ್ರಿಮಾಣಿಕ್ಯ ನೀತಿ–ಚಾಣುಕ್ಯನು ಶ್ರೀಮತು ಮಗರ ಮುರಾರಿ ಜಯತಪಳದೇವನ ರಾಜ್ಯಭ್ಯುದೆಯ ಕರಣಕಾರಣನುಮಪ್ಪ ಹರಗಟ್ಟಿಗೆ ೩೦೦ರ ಸರ್ವ್ವಾಧಿಕಾರಿ ಪಾರಿಸಸೆಟ್ಟಿಯರುಂ ಎಂಬ ವಿವರಣೆ ಇದೆ. ಸೆಟ್ಟಿಗುತ್ತಾ ರಾಮಿಸೆಟ್ಟಿ, ಮುಮ್ಮುರಿದಂಡರು, ಸರ್ವಾಯಂಗಳು, ಎಂಟು ಗಾಮುಂಡರು ಇವರೆಲ್ಲರೂ ಮಹಾಸಭೆಯಾಗಿ ನೆರೆದಿದ್ದಾಗ, ಕೇತಗಾಮುಂಡನ ಮಕ್ಕಳಾದ ರಾಮಗಾವುಂಡ ಸಿಂಗಗಾಮಂಡರು ತಾವು ಪ್ರತಿಷ್ಠಾಪಿಸಿದ ರಾಮನಾಥದೇವರು, ಅಯನೂರ್ವ್ವೇಶ್ವರದೇವರು, ಬಾಚೇಶ್ವರದೇವರು, ಕೇತೇಶ್ವರದೇವರು ಹಾಗೂ ಚೌಡೇಶ್ವರಿದೇವಿ ಈ ಐದು ದೇವರಿಗೆ ಮಹಾಜನರು ಬಿಟ್ಟ ಭೂದತ್ತಿ ಗಾಣ, ಮನೆಯ ನಿವೇಶನಗಳ ಕುರಿತು ಈ ಶಾಸನವು ವಿವರಿಸುತ್ತದೆ.

## ಮಹಾಸೇನಾಪತಿ ಧವಳಪಯ್ಯ

ಕ್ರಿ.ಶ.೧೧೨೦ರ ತೇದಿಯ ಹುಣಸಗಿ ಶಾಸನವು ಈತನು ಮತ್ತು ಮಗನಾದ ಮಲ್ಲಪಯ್ಯ ದಣ್ಡನಾಯಕರ ಕುರಿತು ಉಲ್ಲೇಖಿಸುತ್ತದೆ[೨೦೫]. ಶ್ರೀ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಾನ್ತಾಧಿಪತಿ ಮಹಾಪ್ರಚಣ್ಡನಾಯಕಂ ವೈರಿಂಭಯದಾಂಉ ಗೋತ್ರಪವಿತ್ರಂ ಪರನಾರೀಪುತ್ರಂ ಭ್ರಿತ್ಯಚಿನ್ತಾಮಣಿ ಸುಭಟಶಿರೋಮಣಿ ಬುಧಜನಲೀಲಾನನ್ದನ ಪುಣ್ಯ ವ್ರ್ವಾಧಿಕ ಸಮುದ್ಧರಣ ಗುಣಗಣಾಬಿಲಕರಣಂ ವಿಭುಮಣಿ ಮಾಳಿಕಾದ್ಯನೇಕ ರತ್ನಖಚಿತಕನಕದಣ್ಡಹಸ್ತಿ ಶ್ರೀಮತ್ರಿಭುವನ ಮಲ್ಲದೇವರ ಪಾರಾಧಕಂ ಪರಮಬಳಸಾಧಕ ಶ್ರೀ ಮಾಣಿಕ್ಯ ಭಂಡಾರಿಗಂ ಮಹಾವಡಿಯವಿಂಧವಳಪಯ್ಯಂ ನಾಯಕರ ಮಗಂ ಶ್ರೀ ಮಲ್ಲಪಯ್ಯಾದಣ್ಡನಾಯಕರು ಎಂದು ವಿವರಿಸಲಾಗಿದೆ.

## ಪೆರ್ಜ್ಜುಂಕದ ಸುಂಕವೆರ್ಗಡೆಗಳು

ಈ ಹುದ್ದೆಯನ್ನು ಹೊಂದಿದ್ದ ಕೆಲವು ವ್ಯಕ್ತಿಗಳ ಕುರಿತು ಈ ಜಿಲ್ಲೆಯ ಕೆಲವು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೧೨೯ರ ಮುದನೂರಿನ ಶಾಸನವು ಪೆಜ್ಜದುಂಕದ ಸುಂಕವೆರ್ಗ್ಗಡೆ ಮಾದೆಯ ನಾಯಕನ ಕುರಿತು ಮಾಹಿತಿ ನೀಡುತ್ತದೆ. ಉಳಿದಂತೆ ಇತರ ಅಧಿಕಾರಗಳ ಕುರಿತು ಸಹ ವಿವರಗಳು ಇದರಲ್ಲಿ ದಾಖಲಾಗಿವೆ. ಮೇಲ್ಕಾಣಿಸಿದ ಶಾಸನದಲ್ಲಿಯೇ ಹಗರಟ್ಟಿಗೆ ನಾಡಹೆಜುರ್ಂಕರ ಸುಂಕವೆರ್ಗಡೆನಾಗೆಯ ನಾಯಕನ ಹೆಸರನ್ನು ಪ್ರಸ್ತಾಪಿಸಿದೆ[೨೦೬]. ಕ್ರಿ.ಶ. ೧೧೮೨ರ ಹೆಮ್ಮಡಿಗಿ ಶಾಸನದಲ್ಲಿ ಮಹಾಪ್ರಚಂಡ ದಂಡನಾಯಕ ಕುಮಾರ ಬಮ್ಮಿದೇವರಸರ ಪರಾಕ್ರಮವನ್ನು ವರ್ಣಿಸುವ ಕಾವಣದಂಡನಾಥಸುತಂ ಎಂದು ಹೇಳಲಾಗಿದೆ[೨೦೭]. ಅಲ್ಲದೇ ಮುದನೂರಿನ ಕ್ರಿ.ಶ.೧೧೭೫ರ ತೇದಿಯ ಶಾಸನವು ಶ್ರೀಕರಣ ವೈಜಯ್ಯ ಉಪಸ್ಥಿತರಿದ್ದರೆಂದು ಶಾಸನವು ಉಲ್ಲೇಖಿಸುತ್ತದೆ.

## ಮಹಾಸಾಮಂತ ಹಂಡೆಯನಾಯಕ

ಕ್ರಿ.ಶ.೧೧೨೯ರ ತೇದಿಯ ಮುದನೂರಿನ ಶಾಸನದಲ್ಲಿ ಈತನ ಕುರಿತು ಉಲ್ಲೇಖವಿದೆ[೨೦೮]. ಶ್ರೀಮನ್ಮಹಾಸಾಮಂತರಂ ಹಂಡೆಯನಾಯಕನುಂ ಎಂಬ ವಿವರಣೆ ಇದೆ. ಇದೇ ಸಮಯದಲ್ಲಿ ಹೈಹಯ ವಂಶದ ಮಹಾಮಂಡಳೇಶ್ವರ ಮಲ್ಲಿರೇವಸರು ಆಳ್ವಿಕೆ ಮಾಡುತ್ತಿದ್ದರು. ಈ ಮಲ್ಲಿರೇವರಸನು ತ್ರಿಭುವನಮಲ್ಲ ವಿಕ್ರಮಾದಿತ್ಯ ಹಾಗೂ ಮೂರನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಆಳ್ವಿಕೆ ಮಾಡಿದನೆಂದು ಅಭಿಪ್ರಾಯಿಸಲಾಗಿದೆ. ಇದೇ ಹೆಸರಿನ ನಾಯಕ ವಂಶವು ಕುರುಗೋಡನಲ್ಲಿ ವಿಜಯನಗರ ಪತನಾನಂತರ ಆಳ್ವಿಕೆ ಮಾಡಿರುವ ವಿವರಗಳುಂಟು. ಈ ವಿಚಾರವು ಬಹುತೇಕರಿಗೆ ತಿಳಿದಿರುವ ವಿಷಯವೇ ಆಗಿದೆ. ಆದರೆ ಅವರಿಬ್ಬರಿಗೂ ಸಂಬಂಧಗಳ ಕುರಿತು ಹೆಚ್ಚಿನ ವಿವರ ಅಧ್ಯಯನದ ಅವಶ್ಯಕತೆ ಇದೆ. ಬಹುಶಃ ಹಂಡೆ, ಪಂದೆ ಎಂಬ ಶಬ್ದಗಳ ಉಲ್ಲೇಖವು ನಮ್ಮ ನಾಡಿನ ಶಾಸನಗಳಲ್ಲಿ ಬಹುಪ್ರಾಚೀನ ಕಾಲದಿಂದಲೇ ವ್ಯಕ್ತವಾಗಿರುವುದನ್ನು ಗಮನಿಸಬಹುದು.

ಈ ಮೇಲೆ ವಿವರಿಸಿದ ವಿವರಗಳಲ್ಲದೇ ಇನ್ನೂ ಕೆಲವು ಶಾಸನಗಳಲ್ಲಿ ಕೆಲವೊಂದು ಮಹಾಮಂಡಳೇಶ್ವರ, ಮಹಾಸಾಮಂತರ ಹಾಗೂ ದಂಡನಾಯಕರ ಉಲ್ಲೇಖಗಳು ಈ ಜಿಲ್ಲೆಗೆ ಸಂಬಂಧಿಸಿದ ಪ್ರಕಟಿತ ಶಾಸನಗಳಲ್ಲಿ ಕಂಡುಬಂದಿವೆ. ಕ್ರಿ.ಶ.೧೦೩೪ರ ತೇದಿಯ ಶಹಾಪುರ ತಾಲೂಕಿನ ಅಣಬಿ ಶಾಸನವು ಕೇಸಿಯಸಿಂಗನ ಉಲ್ಲೇಖ ನೀಡುತ್ತಾರೆ. ಅವನು ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಲ್ಲಿದ್ದವನು. ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಸ್ತಗುಣಗಣಾಳಂಕ್ರಿತಂ ಸತ್ಯ ಸಂಪೂರ್ಣ್ನರ್ಂ ಕಲಿಕಾಲ ಕಣ್ನಕಂ ವಿದ್ವಿಷ್ಟಮಂಕುಟ ಸಂಘಟ್ಟಿತ ಪದಯುಗಾಂಭೋಜ ಜಯಜುತ್ತರಂಗ ಕೇಸಿಯಸಿಂಗ ನಾಮಾದಿ ಎಂಬ ಉಲ್ಲೇಖ ಶಾಸನದಲ್ಲಿದೆ[೨೦೯]. ಇದೇ ತಾಲೂಕಿನ ಕ್ರಿ.ಶ.೧೨ನೇ ಶತಮಾನದ ಮರಮಕಲ್ ಶಾಸನದಲ್ಲಿ ಕುಮಾರ ಚಂಡುಗಿದೇವರಸನ ಕುರಿತು ಹೀಗೆ ಉಲ್ಲೇಖಿಸಲಾಗಿದೆ. "ಕಳಚೂರಿ ಅರಸ ರಾಯನಾರಾಯಣ ಶ್ರೀಮದಾಹವಮಲ್ಲದೇವರಸ ತತ್ಪಾದಪದ್ಮೋಪಜೀವಿ ಸ್ವಸ್ತಿ ಶ್ರೀಮನ್ಮಹಾಪ್ರಧಾನಂ ಸೇನಾಪತಿ ಆಳಖಂಡೆಯ ಕೊರತ ವಿದ್ವಯ್ಯಕರ್ನಟಸಾಹಣಾಧಿಪತಿ ಮಹಾಪ್ರಚಂಡ ದಂಡನಾಯಕಂ ವಿಬುಧಜನಾಬಲಹಿತಂ ಫಳದಾಯಕಂ ಮದವದಲು ಮಲದೊಲು ಖದನ ತ್ರಿವಿಕ್ರಮಂ ಪ್ರಬಳಪರಾಕ್ರಮ ಕೂರ್ಮಗಿಂ. ಘರಟ್ಟಂ ಹೊಯಿಸಳ ದಿಕಾಪಟ್ಟಂ ಗಾಲವಗೋತ್ರ ಪಾರಾವರ ಸುಧಾಕರಂಬೊ ಪಾಳಭೀಕರಂ ರಣರಂಗಧೀರಂ ಕುಮಾರ ಚಂಡುಗಿ ದೇವರಸರ ಎಂದು ವಿವರಿಸಿದೆ[೨೧೦]. ಇದೇ ಶಾಸನದಲ್ಲಿ ಹೈಹಯ ಮಹಾಮಂಡಳೇಶ್ವರನಾದ ಹುಲಿದೇವರಸರ ಬಗೆಗೆ ಸಹ ಕೆಲವು ಉಲ್ಲೇಖಗಳಿವೆ.

ಯಾದಗಿರಿ ತಾಲೂಕಿನಲ್ಲಿ ಲಭ್ಯವಿರುವ ಕೆಲವು ಶಾಸನಗಳಲ್ಲಿಯೂ ಸಹ ಮಹಾಮಂಡಳೇಶ್ವರರ ಮಹಾಸಾಮಂತರ ಹಾಗೂ ದಂಡನಾಯಕರ ವಿವರಗಳು ವ್ಯಕ್ತಗೊಂಡಿವೆ. ಕ್ರಿ.ಶ.೧೧೧೨ರ ಅನಪೂರ ಗ್ರಾಮದಲ್ಲಿ ಕಂಡುಬಂದಿರುವ ಶಾಸನದಲ್ಲಿ ತ್ರಿಭುವನಮಲ್ಲ ವಿಕ್ರಮಾದಿತ್ಯ ಹಾಗೂ ಪಿರಿಯರಿಸಿ ಚಂದಲದೇವಿಯರ ಮಗ ಜಗದೇಕಮಲ್ಲ ಕುಮಾರ ಸತ್ಯಾಶ್ರಯ ಅಥವಾ ಇರಿವೆಂಡಗ ಸತ್ಯಾಶ್ರಯನೇ ಕಲ್ಲ-ಕೆಳಗು ನಾಡಿನ ಮಹಾಮಂಡಳೇಶ್ವರನಾಗಿ ರಾಜ್ಯಭಾರ ಮಾಡುತ್ತಿದ್ದ ವಿವರಗಳುಂಟು[೨೧೧]. ಈತನ ಉಲ್ಲೇಖ ಇಡ್ಲೂರಿನ ಕ್ರಿ.ಶ.೧೧೧೫ರ ತೇದಿಯ ಶಾಸನದಲ್ಲಿಯೂ ಸಹ ಕಂಡುಬರುತ್ತದೆ. ವಿಕ್ರಮಾದಿತ್ಯನ ರಾಣಿ ಪಿರಿಯರಿಸಿ ಶ್ರೀಮತ್ಪಿರಿಯರಸಿ ಚಂದಲದೇವಿಯರಣುಗಂ ಸಾಮಾದಿಸಮಸ್ತ ರಾಜಾವಳೀವಿರಾಜಮಾನಂ ಶ್ರೀಮನ್ಮಹಾಮಂಡಳೇಶ್ವರಂ ಜಗದೇಕಮಲ್ಲ ಕುಮಾರಂ ಸತ್ಯಾಶ್ರಯದೇವರ ತತ್ಪಾದತದ್ಮೋಜೀವಿ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ ಎಂದು ಉಲ್ಲೇಖಿಸಲಾಗಿದೆ[೨೧೨]. ಅಲ್ಲದೇ ಇದೇ ಶಾಸನದಲ್ಲಿ ಸತ್ಯಾಶ್ರಯದೇವರ ಶ್ರೀ ಮನ್ಮಂತಳಿಕಂ ಭೂತರಸರು ಎಂಬ ಉಲ್ಲೇಖವು ಸಹ ಉಂಟು. ಇವರೆಲ್ಲರೂ ಇಡ್ಲೂರಿನ ಜಡೆಯಶಂಕರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ದಾನ ನೀಡಿದರು ಎಂಬ ವಿವರವಿದೆ.

ಇಡ್ಲೂರಿನ ಶಂಕರಲಿಂಗ ದೇವಾಲಯದ ಆವರಣದಲ್ಲಿರುವ ಶಾಸನವು ತುಂಬಾ ಸುಂದರವಾಗಿ ಮೂಡಿಬಂದಿದೆ. ಅದರ ಎಲ್ಲ ಮಗ್ಗಲುಗಳಲ್ಲಿ ವಿವರಗಳನ್ನು ಕೆತ್ತಲಾಗಿದೆ. ಅಲ್ಲದೇ ಒಂದೇ ಕಲ್ಲಿನಲ್ಲಿ ಎರಡು ಶಾಸನಗಳಿರುವುದನ್ನು ಗಮನಿಸಬಹುದು. ಒಂದು ಮಗ್ಗಲಿನಲ್ಲಿರುವ ಶಾಸನವು ಮೇಲಿನ ಉಲ್ಲೇಖಗಳನ್ನು ನೀಡಿದರೆ ಇನ್ನೊಂದು ಬದಿಯಲ್ಲಿರುವ ಶಾಸನ ಉಲ್ಲೇಖವು ಈ ಕೆಳಗಿನ ವಿವರಗಳನ್ನು ಹೊಂದಿರುವುದು.

ಕ್ರಿ.ಶ.೧೦೭೬ರ ತೇದಿಯ ಈ ಶಾಸನವು ಆರನೆಯ ವಿಕ್ರಮಾದಿತ್ಯನು ಪಟ್ಟ ಕಟ್ಟಿಕೊಂಡಿರುವ ಕುರಿತು ಮಹತ್ವ ಮಾಹಿತಿಯನ್ನು ಹೊಂದಿದೆ. ಆ ವಿವರಗಳನ್ನು ಈಗಾಗಲೇ ವಿವರಿಸಲಾಗಿದೆ. ಇದೇ ಶಾಸನದಲ್ಲಿ ಕೆಲವು ಅಧಿಕಾರಿಗಳ ಹೆಸರನ್ನು ಸಹ ಉಲ್ಲೇಖಿಸಲಾಗಿದೆ.

ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ
ಶ್ರೀ ಮನ್ಮಹಾಪ್ರಧಾನಂ ಬಾಣನವೆರ್ಗ್ಗಡೆ ಕಲ್ಲಕೆಳಗು ನಾಡಧಿಷ್ಟಾಯಕಂ
ಅನನ್ತದೇವರಸರು(ಅನಂತದೇವ)ಸ್ವಸ್ತಿ ಶ್ರೀ ಮತ್ತ್ರಿಕ್ರ
ಮಚಕ್ರವರ್ತಿ ತ್ರಿಭುವನ ಚಾಳುಕ್ಯ
ಮಲ್ಲದೇವರು ಬೆಣ್ಣೆಕಲ್ಲ ನೆಲವೀಡಿನೊಳು ಪಟ್ಟಮಂ
ಕಟ್ಟಿಸಿಕೊಂಡು ಸುಕ(ಖ)ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಾಮಿರೆ
೨ನೆ ಪ್ರಮೋದೊಥ ಸಂವತ್ಸರದ ಪುಷ್ಯ ಬಹುಳ ಸೋಮವಾರ
ವ್ರತಿಪಾತ ಉತ್ತರಾಯಣ ಸಂಕ್ರ
ಮಣದಂದು ಇಡುಗಲೂರ ಜಡೆಯ ಶಂ
ಕರದೇರ್ಗ್ಗೆ ಉಜ್ಜಿಗವೊಳಲಚ್ಚಿನ ಮೊಳೆಯ
ಕಮ್ಮಟದ ಲಿಗಳಕ್ಕೆ ಹಾಗವಾಸಿಯಂ
ದೇವರಂಗೆಭೋಗ ನಿವೇದ್ಯಂ ನಡೆವಂತಾಗಿ ಸೌಧ
ರೆ ಬೋಮನಾಯಕನುಂ ತಿಪ್ಪೆಯ
ನಾಯಕನುಂ ಹೆರ್ಗ್ಗಡೆ ಆಯಿತರಸನುಂ
(ತಿ)ಮ್ಮರಸನು ಚಂದ್ರಾರ್ಕ್ಕಸ್ಥಾಯಿವರಂ
ನಡೆದಂತಾಗಿ xxxxx ವರಸಿರು ಬಿಟ್ಟರು ಎಂಬ ಉಲ್ಲೇಖವಿದೆ.

ಯಾದಗಿರಿ ತಾಲೂಕಿನ ಅನಪೂರ ಗ್ರಾಮದ ಕ್ರಿ.ಶ.೧೧೧೦೭ರ ಶಾಸನದಲ್ಲಿಯೂ ಸಹ ಕೆಲವು ಅಧಿಕಾರಿಗಳ ಹೆಸರುಗಳು ಉಲ್ಲೇಖವಾಗಿವೆ. ಸೂರ್ಯಗ್ರಹಣ ನಿಮಿತ್ತದಿಂ ಶ್ರೀ ಮನ್ಮಹಾಪ್ರಧಾನಂ ದಣ್ಡನಾಯಕಂ ಪೋತರಸರು ಕಲ್ಲಕೆಳಗು ನಾಡ ಮೊದಲ ಬಾಡಂ ರಾಜಧಾನಿ ಉಜ್ಜಿಗವೊಳಾ(ನೆಮೇ)ಶ್ವರರ(ಆನಮೇಶ್ವರ) ಮಡದಲು ಶ್ರೀ ಸಾರಾದಾದೇವಿಯ(ಶಾರದಾದೇವಿ) ಪ್ರತಿಷ್ಠೆಯಂ ಮಾಡಿಸಿಯೆ ತಳವ್ರತರಿಯಾಗೆ ವಾಚಸ್ಪತಿಪಣ್ಡಿತದೇವರ್ಗ್ಗೆ ಕಾಲಂ ಕರ್ಚ್ಚಿ ಧಾರಾಪೂರ್ವ್ವ ಬಿಟ್ಟ ಮತ್ತರ್ ನೂರು ಎಂಬ ಉಲ್ಲೇಖವಿದೆ[೨೧].

ಇದೇ ಗ್ರಾಮದಲ್ಲಿ ಕಂಡುಬಂದಿರುವ ಇನ್ನೊಂದು ಶಾಸನದಲ್ಲಿಯೂ ಸಹ ಕೆಲವು ಅಧಿಕಾರಿಗಳ ಉಲ್ಲೇಖಗಳು ನಮೂದಾಗಿವೆ. ಮಹಾಪ್ರಧಾನ ದಂಡನಾಯಕ ಭೋಗಭಟ್ಟಯ್ಯಗಳು ಮತ್ತು ಅಚ್ಚುಪನ್ನಾಯದಧಿಷ್ಠಾಯಕ ದಂಡನಾಯಕ ಇಂದ್ರಭಟ್ಟಯ್ಯಗಳು ಮತ್ತು ಮಹಾಪ್ರಧಾನ ಗೋಪರಸರ ಬೆಸದಿಂದ ಕಲ್ಲ ಕೆಳಗಯ್ಯೂರರ ಮೊದಲಬಾಡ ಶ್ರೀಮದ್ರಾಜಧಾನಿ ಉಜ್ಜಿಗವೊಳಲ ಶ್ರೀ ಮೂಲಸ್ಥಾನದ ಸ್ವಯಂಭು ಮಹಾಕಾಳದೇವರ ಅಂಗಭೋಗ, ತ್ರಿಕಾಲ ಪೂಜೆ ಇತ್ಯಾದಿಗಳಿಗಾಗಿ ಬಿಟ್ಟ ವಿವಿಧ ರೀತಿಯ ಸುಂಕದತ್ತಿಗಳನ್ನು ಹೆಸರಿಸುತ್ತದೆ ಎಂದು ಉಲ್ಲೇಖಿಸಲಾಗಿದೆ[೨೧೪].

ಯಾದಗಿರಿ ತಾಲೂಕಿನ ಬೆಳಗುಂದಿಯಲ್ಲಿ ಕಂಡುಬಂದಿರುವ ಕೆಲವು ಶಾಸನಗಳಲ್ಲಿ ಇಂಥ ಅಧಿಕಾರಿಗಳ ಉಲ್ಲೇಖಗಳುಂಟು. ಕಲ್ಯಾಣ ಚಾಲುಕ್ಯ ಜಗದೇಕಮಲ್ಲ ಎರಡನೆಯ ಜಯಸಿಂಹನು ಪೊಟ್ಟಲಕೆರೆ ನೆಲೆವೀಡಿನಿಂದ ಆಳುತ್ತಿದ್ದ ಸಮಯದಲ್ಲಿ ಮಹಾಸಾಮಂತ ಚಟ್ಟರಸ ಮತ್ತು ಮಹಾಸಾಮಂತ ಬರ್ಮರಸರು ಭೀಮರಥಿಯಲ್ಲಿ ಸ್ನಾನಮಾಡಿ ಬೆಳಗುಂದಿಯ ಬ್ರಹ್ಮೇಶ್ವರ ದೇವರಿಗೆ ಅಲ್ಲಿದ್ದ ತಪೋಧನರಿಗೆ ವಿದ್ಯಾರ್ಥಿಗಳಿ ಸ್ಥಳೀಯ ಸ್ಥಾನಾಚಾರ್ಯರಾದ ಗೌತಮ ಪಂಡಿತರ ಕಾಲ್ತೊಳೆದು ದಾನಬಿಟ್ಟ ಉಲ್ಲೇಖವು ಕ್ರಿ.ಶ.೧೦೪೦ರ ಶಾಸನದಲ್ಲಿ ದಾಖಲಾಗಿದೆ[೨೧೫]. ಅದೇ ಗ್ರಾಮದ ಕ್ರಿ.ಶ.೧೦೬೦ರ ತೇದಿಯ ಇನ್ನೊಂದು ಶಾಸನದಲ್ಲಿ ಸಹ ಇಂಥದ್ದೇ ಉಲ್ಲೇಖವಿದೆ. ಶ್ರೀಮತ್ತ್ರೈಳೋಕ್ಯ ಮಲ್ಲದೇವರ ರಾಜ್ಯವಾಳುತ್ತಿರುವ ಸಮಯದಲ್ಲಿ ಶ್ರೀಮನ್ಮಹಾಸಾಮಾನ್ತಂ ರಾಯರಸನು ಬೆಳಗುಂದಿಯ ಬ್ರಹ್ಮೇಶ್ವರ ದೇವರಿಗೆ ದಾನ ನೀಡಿರುವ ಮಾಹಿತಿಯನ್ನು ನೀಡುತ್ತದೆ[೨೧೬].

ಯರಗೋಳ ಗ್ರಾಮದಲ್ಲಿ ಕಂಡುಬಂದಿರುವ ಕ್ರಿ.ಶ.೧೦೫೯ರ ತೇದಿಯ ಶಾಸನದಲ್ಲಿ ಶ್ರೀಮತ್ತಯಿಳೋಕ್ಯ ಮಲ್ಲದೇವರ ವಿಜಯರಾಜ್ಯಾಮಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ತತ್ಪಾರಪದ್ಮೋಪಜೀವಿ ಶ್ರೀಮತ್ ತೊಟ್ಟಕತೆಯ ಮಾತಯನಾಯಕಂ ಎರಂಗೊಳದ ಉಭಯಸಾಮ್ಯಮನಾಳುತ್ತಮಿರೆ ಎಂಬ ಉಲ್ಲೇಖವಿದೆ[೨೧೭]. ಇಲ್ಲಿ ಉಲ್ಲೇಖವಾದ ಉಭಸ್ವಾಮ್ಯ ಎಂದರೆ ಎರಡು ವಿವಿಧ ಒಡೆತನ ಹೊಂದಿದವನು ಎಂಬ ಅರ್ಥ ಬರುವುದು. ಇದೇ ತಾಲೂಕಿನ ಹೆಡಗಿಮುದ್ರಾ ಗ್ರಾಮದ ಕ್ರಿ.ಶ. ೧೦೩೩ರ ಶಾಸನವು ಹೈಹಯವಂಶದ ಮಹಾಮಂಡಳೇಶ್ವರನಾಗಿದ್ದ ರೇವರಸನ ಕುರಿತು ಮಾಹಿತಿ ನೀಡುತ್ತದೆ[೨೧೮]. ಸಮಧಿಗತ ಪಂಚಮಹಾಸ(ಶ)ಬ್ದ ಮಹಾಮಣ್ಡಳೇಶ್ವರಂ ಮಾಹಿಷ್ಮತಿಪುರವರೇಶ್ವರಂ ರಿಪುಮಣ್ಡಳಿಕ ಭೇರುಣ್ಡಂಕಟಕರ ಕ್ಷಾಪಾಶಕಂ ಮೂವಡಿಗಗಣ್ಡಂ ಆಯ್ಯಾಣವಂಶೋದ್ಭವ ಕುಳತಿಳಕಂ ಶ್ರೀಮತ್ ರೇವರಸರ್ ಎಂಬ ಉಲ್ಲೇಖವಿದೆ. ಈ ರೇವರಸನ ಕುರಿತು ಈಗಾಗಲೇ ಸುದೀರ್ಘವಾಗಿ ಚರ್ಚಿಸಲಾಗಿದೆ.

ಸುರಪುರ ತಾಲೂಕಿನ ಬಿಜಾಸಪುರ ಗ್ರಾಮದ ಕ್ರಿ.ಶ.೧೨೫೯ರ ತೇದಿಯ ಶಾಸನವು ಸಗರದ ಪ್ರಭು ಮಾದೆಯನಾಯಕನ ಮಗ ಬಚಯನಾಯಕನ ಉಲ್ಲೇಖ ನೀಡುತ್ತದೆ[೨೯]. ವರೆಲ್ಲರು ಸೇರಿ ದೇವಿಯ ಪೂಜೆಗೆ ದತ್ತಿ ಬಿಟ್ಟಿರುವ ಉಲ್ಲೇಖವನ್ನು ನೀಡುತ್ತದೆ.

ಶಹಾಪುರ ತಾಲೂಕಿನ ಗ್ರಾಮದಲ್ಲಿರುವ ಕೆಲವು ಶಾಸನಗಳಲ್ಲಿಯೂ ಕೆಲವು ಮಹಾಮಂಡಳೇಶ್ವರರ ಮಹಾಸಾಮಂತರ, ದಂಡನಾಯಕರು ಹಾಗೂ ಪ್ರಭು ವರ್ಗಗಳ ಉಲ್ಲೇಖ ಕಂಡುಬಂದಿದೆ.

ಕ್ರಿ.ಶ.೧೧೯೮ರ ತೇದಿಯ ಗೋಗಿ ಗ್ರಾಮದ ಶಾಸನವು ಪಂಚಮಹಾಶಬ್ದ ಮಹಾಮಣ್ಡಳೇಶ್ವರ ರೇವರಸನ ಉಲ್ಲೇಖದೊಂದಿಗೆ ದಂಡನಾಯಕ ದುಗ್ಗರಸನ ಉಲ್ಲೇಖವನ್ನು ನೀಡುತ್ತದೆ[೩೦]. ಶಾಸನದ ಹೆಚ್ಚಿನ ಭಾಗವು ತೃಟಿತವಾಗಿದ್ದರಿಂದ ವಿವರಗಳು ಸ್ಪಷ್ಟವಾಗುವುದಿಲ್ಲ. ಕ್ರಿ.ಶ.೧೧೦೫ರ ತೇದಿಯ ಧರಿಯಾಪುರ ಶಾಸನವು ಶ್ರೀಮನ್ಮಹಾಮಣ್ಡಳೇಶ್ವರ ನಾಗೆಲರಸರ ಉಲ್ಲೇಖ ನೀಡುತ್ತದೆ[೩೧]. ಮದ್ರಕಿ ಅಗ್ರಹಾರವನ್ನು ಮಹಾಮಂಡಳೇಶ್ವರನಾಗಿದ್ದ ಹೈಹಯರು ಆಳುತ್ತಿದ್ದಿರುವ ಸ್ಪಷ್ಟ ಮಾಹಿತಿಗಳಿವೆ. ಅಲ್ಲದೇ ಕ್ರಿ.ಶ.೧೦೬೭ರ ಕಾಲದ ಆ ಊರಿನ ಶಾಸನದಲ್ಲಿ ಪ್ರಭುದಂಡ ಲಕ್ಕಿಸಿದ್ದಯ್ಯನ ಹೆಸರು ಪ್ರಸ್ತಾಪವಾಗಿದೆ.

ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದಿರುವ ಸಿರಿವಾಳ ಗ್ರಾಮದ ಕ್ರಿ.ಶ.೧೧೩೭ರ ತೇದಿಯ ಶಾಸನವು ಶ್ರೀಮನ್ಮಹಾಪ್ರಧಾನಂ ದಣ್ಡನಾಯಕ ತಿಕ್ಕರಸನ ಬಗೆಗೆ ವಿವರಿಸುತ್ತಲ್ಲದೇ ಇನ್ನೊಬ್ಬ ಮಹಾಮಂಡಳೇಶ್ವರ ಕಾಶಿಮರಸನ ಬಗೆಗೆ ವಿವರವಾಗಿ ದಾಖಲಿಸಿದೆ. ಕಲ್ಯಾಣ ಚಾಲುಕ್ಯ ಅರಸ ಮೂರನೆಯ ಸೋಮೇಶ್ವರನ ಪಾದಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಾಧಿಪತಿ ಮಹಾಪ್ರಧಾನಂ ಸೇನಾಧಿಪತಿ ಕಚಿತವೆರ್ಗ್ಗಡೆ ಕಂನಡಸಧ್ಧಿವಿಗ್ರಹಿ ಹಿರಿಯದಣ್ಡನಾಯಕ ಕಾಶಿಮರಸರು ಪದವಿಯಲ್ಲಿ ವಿರಾಜಮಾನವಾದ ಸಂಗತಿಯನ್ನು ಉಲ್ಲೇಖಿಸುತ್ತದೆ[೩೨]. ಇದೇ ಶಾಸನದ ಉಲ್ಲೇಖವಾದ ಶ್ರೀಮನ್ಮಹಾಮಂಣ್ಡಳೇಶ್ವರಂ ಸೋವಿದೇವರಸರವ್ವೆ ಲೋಕಾದೇವಿಯುಮವರ ಮಹಾಪ್ರಧಾನಂ ಸಗರವಯ್ಯ್ನಜುಂಬಾಡದ ಹೆರ್ಗ್ಗಡೆ ದಣ್ಡನಾಯಕಂ ಅಲ್ಲಹುಲಿಯಂಸರುಂ ಸಿರಿವೊಳಲು ಪ್ರಭು ಎಂಬ ವಿವರಗಳು ಈ ನಾಡಿನಲ್ಲಿ ಆಳುತ್ತಿದ್ದ ಅಧಿಕಾರ ವರ್ಗಗಳ ಕುರಿತು ಮಾಹಿತಿ ನೀಡುತ್ತದೆ.

ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವರ ಮಹಾಪ್ರಧಾನ ಸೇನಾಪತಿ ಕಡಿತವೆರ್ಗ್ಗಡೆ ಸಂಧಿವಿಗ್ರಹಿ ಹಿರಿಯದಂಡನಾಯಕಂ ಬಂಮಣಯ್ಯಗಳ ಎಂಬ ಅಧಿಕಾರಿಯ ಕುರಿತು ಕ್ರಿ.ಶ.೧೧೪೩ರ ಸಂಗವು ಶಾಸನದಲ್ಲಿ ಉಲ್ಲೇಖವಾಗಿದೆ[೩೩]. ಇದೇ ಶಾಸನದಲ್ಲಿ ಮಹಾಮಂಡಳೇಶ್ವರ ಹೆಮ್ಮಡಿಯರಸ, ಹಯ್ಯಾಳದ ಪ್ರಭು ನಾಗರಸ ದಂಡನಾಯಕ. ಹಗರಟಗಿ ಮುನ್ನೂರರ ಪ್ರಭು ತಿಪ್ಪಣಭಟ್ಟರು, ಮುಡಬಾಳದ ಪ್ರಭು ಕೇಶವದೇವ.

ಹಾರುಣಗೇರಿಯ(ಹಾರಣಗೇರಿ) ಪ್ರಭು ಬಮ್ಮರಸ, ಸಗರಪ್ರಭು ಮದ್ದೆಯನಾಯಕ ಹಾಗೂ ದಂಡನಾಯಕ ಚಿದಾರಸನ ಕುರಿತು ಮಾಹಿತಿಗಳು ದಾಖಲಾಗಿವೆ. ಅವರೆಲ್ಲರೂ ಕೃಷ್ಣವೇಣ್ಣಾ ಭೀಮರಥ್ಯಾದೇವಿ ಸಂಗಮದಲು ಸ್ನಾನದಾನಗಳಂ ಮಾಡಿದರೆಂಬ ವಿವರಗಳು ಪ್ರಕಟವಾಗಿವೆ. ಕ್ರಿ.ಶ.೧೧೮೯ರ ತೇದಿಯ ಹುಲಿಕಲ್ ಶಾಸನದ ಹೆಚ್ಚಿನ ಭಾಗವು ತೃಟಿತಗೊಂಡಿದ್ದರೂ ಅದರಲ್ಲಿರುವ ಮನ್ಮಹಾಪ್ರಭು ಮಗರಸಯಂಗಳ ಎಂಬ ಉಲ್ಲೇಖವು ಮತ್ತು ಇನ್ನೊಬ್ಬ ನಾಯಕನ ಕುರಿತು ವಿವರಿಸುತ್ತದೆ. ಹೋತಗಲ್‌ನ ಕ್ರಿ.ಶ.೧೨೦೮ರ ತೇದಿಯ ಶಾಸನವು ಮಹಾಮಂಡಳೇಶ್ವರ ಚಂದಿಗದೇವರಸನ ಕುರಿತು ವಿವರಿಸುತ್ತದೆ. ಇವರೆಲ್ಲರ ಅಣತಿಯ ಮೇರೆಗೆ ಸ್ಥಳೀಯ ರೇವಣೇಶ್ವರ, ಗಂಗೇಶ್ವರ ಮತ್ತು ನಾಗೇಶ್ವರ ದೇವರಸ ನಿತ್ಯಪೂಜೆ ಹಾಗೂ ನಂದಾದೀವಿಗೆಗೆ ದಾನ ನೀಡಿದ ಉಲ್ಲೇಖವು ಈ ಶಾಸನದಲ್ಲಿ ಕಂಡುಬರುತ್ತದೆ.

**ಮಹಾಮಂಡಳೇಶ್ವರ ಶಿಲಾಹಾರರು**

ಯಾದಗಿರಿ ಜಿಲ್ಲಾ ಪ್ರದೇಶದ ಶಾಸನಗಳಲ್ಲಿ ವ್ಯಕ್ತವಾಗಿರುವ ಇನ್ನೊಂದು ಮಹಾಮಂಡಳೇಶ್ವರ ಮನೆತನವೆಂದರೆ ಎಳಮೇಲಿನ(ಅಲಮೇಲ) ಶಿಲಾಹಾರರು. ದೇವಗಿರಿ ಯಾದವರ ಕಾಲಕ್ಕೆ ಬಹುಶಃ ಅವರ ಸಗರನಾಡನ್ನು ತಮ್ಮ ಅಂಕಿತಕ್ಕೆ ಒಳಪಡಿಸಿಕೊಂಡಿರಬೇಕು. ಆ ಶಾಖೆಗೆ ಸಂಬಂಧಿಸಿದ ಮಹಾನಾಯಕರ ಹೆಸರುಳ್ಳ ಒಂದೆರೆಡು ಶಾಸನಗಳು ಈ ಜಿಲ್ಲಾ ಪ್ರದೇಶದಲ್ಲಿ ಲಭ್ಯವಾಗಿವೆ.

ಈ ಮನೆತನದಲ್ಲಿ ಉತ್ತರ ಕೊಂಕಣ, ದಕ್ಷಿಣ ಕೊಂಕಣ ಕೊಲ್ಲಾಪುರಗಳ ಶಿಲಾಹಾರ ರಾಜವಂಶಗಳು ಪ್ರಸಿದ್ಧವಾದವು. ಶಿಲಾಹಾರರು ತಾವು ವಿದ್ಯಾಧರ ರಾಜಕುಮಾರನಾದ ಜೀಮೂತವಾಹನನ ಸಂತತಿಯವರೆಂದು ಹೇಳಿಕೊಂಡಿದ್ದಾರೆ. ಸುವರ್ಣ ಗರುಡಧ್ವಜ ಅವರ ಪತಾಕೆಯಾಗಿತ್ತೆಂಬ ಅಭಿಪ್ರಾಯಗಳಿವೆ[೨೪]. ಇವರು ತಗರ-ಕೊಪಣ-ವಿಜಯಪುರಾವಾಧೀಶ್ವರರೆಂದೂ ಕರೆದುಕೊಂಡಿದ್ದಾರೆ. ಚಾಮುಂಡಿಕಾದೇವಿ ಕಾತ್ಯಾಯನೀದೇವಿ ವರಲಬ್ಧಪ್ರಸಾದರೆನಿಸಿದ್ದಾರೆ.

ಈ ವಂಶದ ಮೂಲಪುರುಷ ಜೀಮೂತವಾಹನನು ಗರುಡನಿಗೆ ಶಿಲೆಯ ಮೇಲೆ ಆಹಾರವಾದುದರಿಂದ ಈ ಹೆಸರು(ಶಿಲಾಹಾರರು) ಬಂದಿರಬಹುದೆಂದು ಹೇಳಲಾಗುತ್ತದೆ. ಆದರೆ ಶಿಲಾಹಾರ ವಂಶದ ನಿರ್ವಚನ ನೀಡಿದ ಎಂ.ವ್ಹಿ.ಸೀತಾರಾಮಯ್ಯನವರು ಈ ಶಬ್ದವು ಸೆಲಾರ ಎಂಬ ಕನ್ನಡ ಶಬ್ದದ ಸಂಸ್ಕೃತ ರೂಪವಾಗಿದ್ದು ಅದನ್ನು ಹೀಗೆ ನಿಷ್ಪನ್ನ ಮಾಡಿದ್ದಾರೆ.

ಸೇಲ(-ಸೆಲೆ)+ಅರ(ತದ್ಧಿತ ಪ್ರತ್ಯಯ)>ಸೇಲಾರ

ಸೇಲೆ+ಗಾರ(<ಕಾರ)>ಸೊಲೆಗಾರ>ಸೇಲಾರ>ಸೇಲಾರ

ಸೆಲಾರ>ಸಿಲಾರ>ಶಿಲಾರ>ಶೀಲಾರ>ಶಿಲಾಹಾರ

ಸೆಲಾರ ಅಥವಾ ಸೇಲಾರ ಶಬ್ದಕ್ಕೆ ಸೆಯ್ಗೆಯನ್ನೆ ವೃತ್ತಿಯಾಗುಳ್ಳವನು ಎಂದರ್ಥವಾಗುವುದರಿಂದ ಶಿಲಾಹಾರ ವಂಶದ ಮೂಲಪುರುಷರು ಸೇಕಾರ ಪಂಗಡದವರಾಗಿರಬಹುದೆಂದು ಊಹಿಸಬಹುದು

ಎಂದಿದ್ದಾರೆ. ಆದರೆ ಈ ಅಭಿಪ್ರಾಯವನ್ನು ಶಾಸನ ತಜ್ಞರಾದ ಡಾ.ವಿ.ವಿ.ಮಿರಾಶಿ ಅವರು ಒಪ್ಪಿಕೊಂಡಿಲ್ಲ ಎಂಬ ಅಭಿಪ್ರಾಯಗಳು ದಾಖಲಾಗಿವೆ[೨೨೫].

ಇವರು ತಗರನಗರವರೆಂದು ತಮ್ಮ ಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. ಈ ಹೆಸರು ಟಾಲೆಮಿ ಮತ್ತು ಪೆರಿಪ್ಲಸ್‌ನಿಂದಲೂ ಸಹ ಉಲ್ಲೇಖಗೊಂಡಿದೆ. ಇಂದಿನ ಕುರ್ದುವಾಡಿ-ಲಾತೂರ ರೈಲುಮಾರ್ಗದ ಮೇಲಿರುವ ಉಸ್ಮಾನಾಬಾದ ಜಿಲ್ಲೆಯ ತೇರ ಗ್ರಾಮವೆಂದು ಗುರುತಿಸಲಾಗಿದೆ[೨೨೬]. ಕನ್ನಡ ಮಾತನಾಡುವ ಶಿಲಾಹಾರರ ಈ ಮೂಲಸ್ಥಳ ಆ ಕಾಲಕ್ಕೆ ಕರ್ನಾಟಕದ ಒಂದು ಭಾಗವಾಗಿತ್ತು. ಇದರಿಂದ ಶಿಲಾಹಾರ ಮನೆತನ ಕರ್ನಾಟಕದ ಅಚ್ಚಗನ್ನಡ ಮನೆತನವೆನ್ನುವಲ್ಲಿ ಸಹಜತೆಯಿದೆ ಎಂದು ಅಭಿಪ್ರಾಯಿಸಲಾಗಿದೆ[೨೨೭].

ಈ ಶಿಲಾಹಾರರು ಹಲವು ಶಾಖೆಗಳಲ್ಲಿ ಕನ್ನಡ ನಾಡಿನಲ್ಲಿದ್ದವರು. ಪ್ರಮುಖವಾಗಿ ಸಾಲೋಟಗಿ, ವಿಜಾಪುರ ಹಾಗೂ ಎಳಮೇಲಿ ಅಥವಾ ಆಲಮೇಲ ಶಾಖೆಗಳು ಉತ್ತರ ಕರ್ನಾಟಕ ಭಾಗದಲ್ಲಿದ್ದವು ಎಂಬ ವಿವರಗಳು ದೊರೆಯುತ್ತವೆ. ಅಂಥ ಶಾಖೆಗೆ ಸಂಬಂಧಿಸಿದ ಮಹಾಮಂಡಳೇಶ್ವರನ ಕುರಿತು ಸಗರನಾಡಿನ ಶಿಲಾಶಾಸನಗಳಲ್ಲಿ ಕೆಲವು ಸಂಗತಿಗಳು ದಾಖಲಾಗಿವೆ. ಪ್ರಾಚೀನ ಹಗರಟಗಿ ನಾಡಿಗೆ ಹೊಂದಿಕೊಂಡಿದ್ದ ತರ್ದವಾಡಿ ನಾಡಿನ ಎಳಮೇಲಿ(ಆಲಮೇಲು)ಪ್ರಾಚೀನ ಪಟ್ಟಣದ ಶಾಖೆಯ ಸಿಂಗಿದೇವರಸನು ಸಿರಿವಾಳದ ಸಿದ್ಧಶಾಂತೇಶ್ವರ ದೇವರಿಗೆ ದಾನ ನೀಡಿರುವ ವಿವರಗಳು ಈ ಶಾಸನದಲ್ಲಿ ದಾಖಲಾಗಿವೆ. ಉಲ್ಲೇಖಿತ ಈ ಸಿಂಗಿ ದೇವರಸನು ಬಹುಶಃ ನಾಲ್ಕನೆಯ ಸಿಂಗಿದೇವರಸನಾಗಿರಬಹುದೆಂದು ಅಭಿಪ್ರಾಯಿಸಬಹುದು.

ನಾಯಿಮರಸ(ಕ್ರಿ.ಶ.೧೦೪೦) ಸಿಂಗರಸ(ಕ್ರಿ.ಶ.೧೦೭೦), ಉದಯಾದಿತ್ಯರಸ(ಕ್ರಿ.ಶ.೧೦೭೭) ಸಿಂಗರಸ(ಕ್ರಿ.ಶ.೧೧೦೪-೧೧೨೫), ಸೋಯಿದೇವರಸ(ಕ್ರಿ.ಶ.೧೧೨೯-೧೧೪೬) ಸಿಂಗಿದೇವ(ಕ್ರಿ.ಶ.೧೧೬೮-೧೧೭೬), ಆನೆಮರಸ(ಕ್ರಿ.ಶ.೧೧೮೬) ಮತ್ತು ಬೊಮ್ಮದೇವರಸ (ಕ್ರಿ.ಶ.೧೨೦೮) ಎಳಮೇಲು ಶಾಖೆಗೆ ಸಂಬಂಧಿಸಿದ ವಂಶಾವಳಿಯನ್ನು ತರ್ದವಾಡಿನಾಡು ಒಂದು ಅಧ್ಯಯನ ಎಂಬ ಗ್ರಂಥದಲ್ಲಿ ಗ್ರಂಥಕರ್ತರು ನೀಡಿದ್ದಾರೆ. ಈ ವಿವರವನ್ನು ಪ್ರಸ್ತಾಪಿಸುವ ಬಹುಮುಖ್ಯ ವಿಚಾರವೆಂದರೆ ಯಾದವ ಸಿಂಘಣನ ಕಾಲದ ಹೋತಗಲ್ಲ ಶಾಸನ ಶಿಲಾಹಾರರ ಸಾಂಪ್ರದಾಯಿಕ ಬಿರುದುಗಳನ್ನು ಹೇಳುತ್ತಾ ಒಡೆಯನಕಾರ ಮಹಾಮಂಡಳೇಶ್ವರ ಬೊಮ್ಮದೇವರಸನನ್ನು ಉಲ್ಲೇಖಿಸಿದೆ. ಈತ ಎಳಮೇಲೆ ಶಾಖೆಗೆ ಸಂಬಂಧಪಟ್ಟವನೆಂದು ಹೇಳಬಹುದಾದರೂ ಆನೆಮರಸ ಮತ್ತು ಅವನ ಮಧ್ಯದ ಸಂಬಂಧ ಸ್ಪಷ್ಟಗೊಳ್ಳುವುದಿಲ್ಲವೆಂದು ಅಭಿಪ್ರಾಯಿಸಿದ್ದಾರೆ[೨೨೮]. ಆದರೆ ಇದಕ್ಕೊಂದು ಪರಿಹಾರಾತ್ಮಕ ಉದಾಹರಣೆ ಸಗರನಾಡಿನ ಶಿರವಾಳ ಶಾಸನದಲ್ಲಿ ಸಿಗುತ್ತದೆ. ಕಾರಣ ಉಲ್ಲೇಖಿತ ಆನೆಮರಸನ ನಂತರ ನಾಲ್ಕನೆಯ ಸಿಂಗಿದೇವರಸ ಅಧಿಕಾರಕ್ಕೆ ಬಂದಿರಬಹುದು. ಆತನು ಸಹ ಯಾದವರ

ಪಾದಪದ್ಮೋಪಜೀವಿಯಾಗಿದ್ದನೆಂದು ಹೇಳಿಕೊಂಡಿದ್ದಾನೆ. ಅಲ್ಲದೇ ಬಹುಶಃ ಈತನು ಆನೆಮರಸನ ಮಗನಾಗಿರಬಹುದೇ ಎಂಬ ಸಂಶಯಗಳು ಹುಟ್ಟಿಕೊಳ್ಳುತ್ತವೆ. ಸಿರವಾಳ ಶಾಸನದಲ್ಲಿ ಆತ ತನ್ನ ತಾಯಿ ಹೆಸರು ನಮೂದಿಸಿಕೊಂಡಿದ್ದಾನೆಂದು ತಿಳಿಯುಬಹುದು. ಒಟ್ಟಾರೆ ಅಭಿಪ್ರಾಯಿಸುವುದಾದರೆ ಸಿರಿವಾಳ ಶಾಸನದಲ್ಲಿ ಉಲ್ಲೇಖಿತ ಸಿಂಗಿದೇವರಸನು ಆನೆಮರಸನ ಮಗನಾಗಿದ್ದು ಪ್ರಾಯಶಃ ಈತನನ್ನು ನಾಲ್ಕನೆಯ ಸಿಂಗಿದೇವರಸನೆಂದು ಗುರುತಿಸಬಹುದು.

ಕ್ರಿ.ಶ.೧೧೮೯ ತೇದಿಯ ಶಹಾಪುರ ತಾಲೂಕಿನ ಸಿರಿವಾಳ ಶಾಸನದಲ್ಲಿ ಮಹಾಮಂಡಳೇಶ್ವರ ಸಿಂಗಿದೇವರಸನ ಉಲ್ಲೇಖವಿದೆ[೨೯]. ಈ ಗ್ರಂಥದಲ್ಲಿ ಉಲ್ಲೇಖಿತ ಶಾಸನದ ಕಾಲ ಕ್ರಿ.ಶ.೧೧೭೮ ಎಂದು ನಮೂದಾಗಿದೆ. ಆದರೆ ಬಹುಶಃ ಇದರ ಕಾಲ ಕ್ರಿ.ಶ.೧೧೮೯ ಎಂದು ಆಗಬೇಕಿತ್ತು.

ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ತಗರನಗರಾಧೀಶ್ನರಂ (ಜೀಮೂತವಾಹ)ನಾನ್ವಯ ಪ್ರಸೂತಸೂರ್ಯ್ಯಂ ಚ(ರ?) ಜಾತಂ ಶ್ರೀ ಶಿಳಾಜಂಶೋದ್ಭವ ನರೇಂದ್ರ ವಿಭವಾಮರೇಂದ್ರ

ತಾರಾಕಾಸುರ ಕಾರ್ತ್ತಿಕೇಯನತಿ ವಿಷಮಹಯೂ
ರೂಢಪ್ರೌಢರೇಖಾರೇವಂತ ವಿಜೇಯಲಕ್ಷ್ಮಿಕಾಂತ ಸುವರ್ಣಗರುಡಧ್ವಜ
ವಿಮಳ ಕೀರ್ತ್ತಿಧ್ವಜ ಕಾತ್ರ್ಯನೀದೇವೀಲ
ಬ್ದವರಪ್ರಸಾದ
ಶ್ರೀಮದುತ್ತಾರೇಶ್ವರ ದೇವರ ಪಾದಾರಾಧಕ ಪಂಬಳಸಾಧಕ ನಾಮರಿ
ಸಮಸ್ತ ಪುಶಸ್ತಿ ಸಹಿತರ ಶ್ರೀಮನುಮಹಾಮಂಡಳೇಶ್ವರ
ಎಳಮೇಲ ಸಿಂಗಿದೇವರಸರುಂ ಅವ್ವೆ ನಾಗಲದೇವಿಯರುಂ ಎಂದು
ಉಲ್ಲೇಖಿಸಲಾಗಿದೆ[೩೦].

ಈ ಶಾಸನದಲ್ಲಿ ಉಲ್ಲೇಖವಾದ ಕೆಲವು ದಾನದತ್ತಿಯ ವಿಚಾರಗಳು ನಮ್ಮ ನಾಡಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ತುಂಬಾ ಮಹತ್ವದ ಚರ್ಚೆಗಳಾಗಿವೆ. ಸಿರವಾಳ ಗ್ರಾಮದ ಸಿದ್ಧಶಾಂತೇಶ್ವರರ ದೇವರ ಸ್ಥಾನಾಚಾರ್ಯರಾದ ರೇವಣಯ್ಯನು ಪ್ರಚಲಿತವಾಗಿರುವ ರೇವಣಸಿದ್ಧನೋ ಅಥವಾ ಅವನೇ ಬೇರೆ ಆದವನು ಅಥವಾ ಬೇರೆಯಾದ ವ್ಯಕ್ತಿಯೋ ಎಂಬ ಚರ್ಚೆಗಳು ತುಂಬಾ ಮಹತ್ವ ಪಡೆದುಕೊಂಡಿವೆ. ಆ ವಿಚಾರವನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ.

**ಪ್ರಭುಗಳು**

ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಪ್ರಭು ಅಥವಾ ಮಹಾ ಪ್ರಭುಗಳು ಎಂಬ ಹೆಸರುಗಳು ಕೆಲವು ಶಾಸನಗಳಲ್ಲಿ ವ್ಯಕ್ತವಾಗಿವೆ. ಆ ಹಿನ್ನೆಯಲ್ಲಿ ಈ ವಿವರಗಳನ್ನು

ಇಲ್ಲಿ ಪ್ರಸ್ತಾಪಿಸಲಾಗಿದೆ. ಪ್ರಭು ಅಥವಾ ಮಹಾಪ್ರಭು ಇದು ಅಧಿಕಾರ ಸೂಚಕ ಪದವಾಗಿವೆ ಎಂದು ಅಭಿಪ್ರಾಯಿಸಲಾಗಿದೆ. ಬಹುಶಃ ಗ್ರಾಮಮಟ್ಟದ ಅಥವಾ ಒಂದು ಚಿಕ್ಕ ಆಡಳಿತ ಠಾಣೆಯ ಜವಾಬ್ದಾರಿಯ ಸ್ಥಾನಮಾನ ಇವರಿಗೆ ಇದ್ದಿರಬಹುದು.

ಕ್ರಿ.ಶ.೧೧೭೯ರ ತೇದಿಯ ಏವೂರಿನ ಶಾಸನವು ಮಹಾಪ್ರಭು ತ್ರಿಪುರಾಂತಕ ರೇವರಸನ ಉಲ್ಲೇಖ ನೀಡುತ್ತದೆ[೨೩೧]. ಈತನು ಏಳಮೇಲ(ಆಲಮೇಲ) ಸಿಂಹಪರ್ಷೆಯ ಮಲೆಯಾಳದೇವರ ಶಿಷ್ಯ ಪರಂಪರೆಯ ಜ್ಞಾನರಾಸಿಪಂಡಿತರಿಗೆ ನೀಡಿದ ಭೂದತ್ತಿ ವಿವರ ನೀಡುತ್ತದೆ. ಉಲ್ಲೇಖಿತ ಸಿಂಹಪರಿಷನ್ಮಂಡಲಿಯ ಮುಖ್ಯ ಕೇಂದ್ರ ಮುದನೂರು ಅಗ್ರಹಾರವಾಗಿತ್ತು ಎಂಬುದು ಇದೇ ಶಾಸನದಲ್ಲಿ ವ್ಯಕ್ತವಾಗಿರುವುದನ್ನು ಗ್ರಹಿಸಬಹುದು. ಕೊಪ್ಪಣಭಟ್ಟ ದಂಡನಾಯಕರ ನಾಚೆಯಭಟ್ಟ ದಂಡನಾಯಕ ಕುರಿತು ಉಲ್ಲೇಖವಿದೆ. ಕ್ರಿ.ಶ.೧೩೪೦ರ ತೇದಿಯ ಕೆಂಭಾವಿ ಶಾಸನದಲ್ಲಿ ಹುನಗುಂದ ಮಹಾಪ್ರಭು ಬಿಸಣಿ ಹನುಮಂತ, ಚೌಭರೆಯ ನಾಚಯ್ಯಗಳ ಹೆಸರನ್ನು ಪ್ರಸ್ತಾಪಿಸಲಾಗಿದೆ[೨೩೨]. ರಾಜಕೋಳೂರಿನ ಕ್ರಿ.ಶ.೧೨೧೪ರ ಶಾಸನವು ಭತ್ತಗ್ರಾವೋ ರಾಜನಕೋಳೂರ ಮಹಾಪ್ರಭು ಬಂಮ್ಮೊರಸ, ದೇವ್ರೊರಸ, ಮಾದರಸ, ನಾಗರಸ, ಮತ್ತು ತಿಕ್ಕರಸನ ಸೇರಿ ಶಂಕರ ನಾರಾಯಣ ದೇವರಿಗೆ ದಾನ ನೀಡಿರುವ ಉಲ್ಲೇಖವನ್ನು ನೀಡುತ್ತದೆ[೨೩೩]. ಕಡಕಲ್ಲು ಗ್ರಾಮದ ಶಾಸನದಲ್ಲಿ ಸಗರದ ಪ್ರಭು ಸತರಸ, ಮಾಲಗತಿಯ ಪ್ರಭು ಮಾಚರಸರ ಉಲ್ಲೇಖವಿದೆ. ಸಗರದ ಪ್ರಭು ಮಾದೆಯನಾಯಕ ಬಿಜಾಸಪುರದ ಶಾಸನದಲ್ಲಿ ಪ್ರಭು ಸಂಕರಸನು ಹಗರಟಗಿ ಶಾಸನದಲ್ಲಿ ಕಾಣಿಸಿಕೊಂಡಿದ್ದಾರೆ[೨೩೪]. ಕ್ರಿ.ಶ.೧೧೮೨ರ ಹೆಮ್ಮಡಗಿ ಶಾಸನವು ಪ್ರಭು ಸೌದೊರೆ ಭಾವರಸನ ಕುರಿತು ವಿಶೇಷ ಮಾಹಿತಿ ನೀಡುತ್ತದೆ. ಆತನ ವಂಶಾವಳಿಯು ಸಹ ಈ ಶಾಸನದಲ್ಲಿ ದಾಖಲಾಗಿದೆ.

ವಶಿಷ್ಟ

↓

ಚಂದಿರಾಜ+ಚಾಮಿಕವ್ವೆ

↓

ನಾಗವರ್ಮ್ಮ+ದೇಕವ್ವೆ

↓

ದೇವರಸ    ಬಮ್ಮರಸ    ಏನುಭಾವರಸ+ಚಂದಲದೇವಿ

↓    ↓    ↓

ಮಲ್ಲಿದೇವ-೨    ವಿಭು ಪಂದಿರಾಜ+ಕಾಮಲದೇವಿ(ಕಾಮಿಯವ್ವೆ)

ಎಮ್ಮವಾಡಿಗೆ ಪ್ರಭುಸೌ ದೊರೆ ಭಾವರಸ-೨+ಚಾಲಮದೇವಿ

ಪ್ರಭು ಭಾವರಸರ ತಂದೆ ಪಂದಿರಾಜ ಪಂದೇಶ್ವರ ದೇವಾಲಯ ಕಟ್ಟಿಸಿದ್ದು ತನ್ನ ತಂದೆ ಕಟ್ಟಿಸಿದ ಈ ದೇವಾಲಯಕ್ಕೆ ಮಗ ಭಾವರಸನು ಕಳಸಾರೋಹಣ ಮಾಡಿ ತಂದೆಯ ಹೆಸರು ಜಗತ್ಪ್ರಸಿದ್ಧವಾಗುವಂತೆ ಮಾಡಿದನಂತೆ. ಅವನನ್ನು ಕುರಿತು ಶಾಸನವು ಹೊಗಳಲಾಗಿದೆ.

ಧರ್ಮ್ಮದ ಬಿತ್ತು ಧರ್ಮ್ಮದ ತವರ್ಮ್ಮನೆ ಪೆರ್ಮ್ಮೆಯ ಮಂದರರಾದ್ರಿ ತಾಂ
ನಿರ್ಮ್ಮಳ ಚಿತ್ತದಿಂ ಶಿವನ ಪೂಜಿಸುವಂ ಕಂಪೊಲ್ದು ರಾಗದಿಂ
ಕರ್ಮ್ಮೆಯೊಳಿವ ಬಂಧುಜನ ಕರ್ಬ್ಬಿಯೊಳಂ ಬಿಡುವೊಂರನ್ನುನೆಂದೊಡಿಂ
ನೂರ್ಮ್ಮಡಿ ಮೇಲು ಭಾವರಸ ನಿನ್ನ ಗುಣಂ ವಸುಧಾತಳಾಗ್ರದೊಳ॥
ಎರಪರ್ಗ್ಗಿಷ್ಟ ಸಂತತಿಗೆ ಸಿಷ್ಟ ಚಯಕ್ಕೆ ಸಗೋತ್ರಿಗಳ್ಗೆ ಸಾ
ಕ್ಷರಿಜನಕ್ಕೆ ನಿರ್ದ್ದನಂ ನರಳಿಗೆ ತಾನೊಸೆದೀವ ಪೆಮ್ಮೆಯಂ
ಸುರತರು ಕಾಮದೇನು ಮಣಿರತ್ನ ಸುರೋಜನ ಸ್ಥಳಮೊಕ್ಕಳಂ
ಸುರಿವ ಸುವರ್ನ್ನ ವ್ರಿತ್ತಿಯೆನಿಕುಂ ಪ್ರಭು ಸೌದೊರೆ ಭಾವರಾಜನಂ॥

ಕೊಂಡಾಡಿದೆ[೨೩೫]. ಇದೇ ಶಾಸನವು ಇನ್ನೂ ಮುಖ್ಯವಾದ ವಿಷಯಗಳನ್ನು ಸಹ ವಿವರಿಸಿರುವ ಮಾಹಿತಿಗಳುಂಟು. ಕಲ್ಯಾಣದ ಚಾಲುಕ್ಯ ಚಕ್ರವರ್ತಿ ನಾಲ್ಕನೆಯ ಸೋಮೇಶ್ವರನನ್ನು ಮರಳಿ ಪಟ್ಟಕ್ಕೆ ಬಂದ ವಿಚಾರ ಹಾಗೂ ಆತನು ಸೆಲೆದಳ್ಳಿ ನಾಡಿನೊಳ ರಾಜ್ಯವಾಳಿರುವ ವಿವರವು ದಾಖಲಾಗಿದೆ. ಆ ವಿಚಾರವನ್ನು ಈಗಾಗಲೇ ಚರ್ಚಿಸಲಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಹತ್ತುಹಲವು ಜವಾಬ್ದಾರಿಯುತ ಅಧಿಕಾರಿಗಳ ಬಗೆಗೆ ಮಾಹಿತಿಗಳು ದಾಖಲಾಗಿವೆ. ಊರೊಡೆಯ ಕೇತರಸನ ಕುರಿತು ಕಚಕನೂರ ಶಾಸನ, ಊರೊಡೆಯ ತೈಲಪಯ್ಯ ನಾಯಕನ ಕುರಿತು ಮಲ್ಲಾ ಬಿ. ಗ್ರಾಮದ ಶಾಸನ, ಹಗರಟಗಿ, ಗ್ರಾಮದ ಶಾಸನಗಳಲ್ಲಿ ಊರೊಡೆಯ ಬಾಚರಸನ ಉಲ್ಲೇಖವಿದೆ[೨೩೬]. ಹಗರಟಗಿಯ ಒಂದೆರಡು ಶಾಸನಗಳಲ್ಲಿ ಸೇನಭೋವ ತಿಪ್ಪರಸ, ಸಿರಿಯಣರ ಉಲ್ಲೇಖ ಕಂಡುಬಂದಿರುವುದನ್ನು ಗಮನಿಸಬಹುದು. ಬಿಜಾಸಪುರ ಶಾಸನದಲ್ಲಿ ಸಗರವನ್ನು ಮಹಾನಗರವೆಂದು ಉಲ್ಲೇಖಿಸಿ ಅಲ್ಲಿದ್ದವನು ಸೇನಭೋವನು ಎಂಬ ಮಾಹಿತಿ ನೀಡುತ್ತದೆ.

**ಗಾವುಂಡರು**

ಗ್ರಾಮದ ಆಡಳಿತವನ್ನು ನೋಡಿಕೊಳ್ಳುವವನು ಗಾವುಂಡ. ಇಂದಿನ ಗೌಡರೇ ಹಿಂದೆ ಗಾವುಂಡರೆನಿಸಿದ್ದರು. ಕೆಲವು ಗ್ರಾಮಗಳಲ್ಲಿ ಒಬ್ಬ ಮತ್ತೆ ಕೆಲವು ಗ್ರಾಮಗಳಲ್ಲಿ ಹಲವು ಜನ ಗಾವುಂಡರು ಇರುತ್ತಿದ್ದರೆಂದು ಶ್ರೀಯುತ ಡಾ.ಎಂ.ಎಂ.ಚಿದಾನಂದಮೂರ್ತಿ ಅವರು ಅಭಿಪ್ರಾಯಿಸಿದ್ದಾರೆ. ಹಲವು ಜನ ಗಾವುಂಡರು ಬಹುಶಃ ಮೂಲತಃ ಒಂದೇ ವಂಶಕ್ಕೆ ಸಂಬಂಧಿಸಿದ್ದು ಸಹೋದರ ಸಂಬಂಧಿಗಳಾಗಿರಬೇಕು. ಒಂದು ಊರಲ್ಲಿ ಅನೇಕ ಗಾವುಂಡರಿದ್ದರೂ ಅವರೆಲ್ಲರ ಮೇಲೆ ಒಬ್ಬನೇ ಗಾವುಂಡನಿರುತ್ತಿದ್ದನು. ಎಲ್ಲ ಅಧಿಕಾರವು ಅವನ ಕೈಯಲ್ಲಿ ಇರುತ್ತಿತ್ತು[೨೩೭]. ಅಂಥ ಗಾವುಂಡರಗಳ ಉಲ್ಲೇಖವುಳ್ಳ ಕೆಲವು ಶಾಸನ ಮಾಹಿತಿಗಳು ಯಾದಗಿರಿ ಜಿಲ್ಲಾ ಪರಿಸರದಲ್ಲಿಯು ಕಂಡುಬಂದಿವೆ.

ಕ್ರಿ.ಶ.೧೨೦೬ರ ತೇದಿಯ ಸುರಪುರ ತಾಲೂಕಿನ ಎಡೆಯಾಪುರ ಶಾಸನದಲ್ಲಿ ಅಂಚಗೌಂಡ, ಚಿಂನಗೌಡನಮಗ ವಾಜಗೌಡನು ಎಂಬ ಉಲ್ಲೇಖವುಂಟು[೨೩೮]. ಇವರೆಲ್ಲರು ಕಂಭಾವಿಯಲ್ಲಿದ್ದ ಹೈಯಹಯರ ಮಹಾಮಂಡಳೇಶ್ವರ ರೇವರಸನ ಅಣತಿಯ ಮೇರೆಗೆ ದಾನದತ್ತಿಗಳನ್ನು ನೀಡಿರುವ ವಿವರಗಳು ದಾಖಲಾಗಿವೆ. ರಾಜನಕೋಳೂರಿನ ಕ್ರಿ.ಶ. ೧೨೧೪ರ ಶಾಸನವು ರಾಮಗಾಮಡ(ರಾಮಗಾವುಂಡ) ಮತ್ತು ಸಂಕೆಯನಾಯಕನ ಉಲ್ಲೇಖ ನೀಡುತ್ತದೆ[೨೩೯]. ಹಗರಟಗಿಯ ಕ್ರಿ.ಶ. ೧೧೨೬ರ ಶಾಸನವು ಚಂದಿಗೌಡನ ಲೆಂಕೆಗೌಡನ ಹಾಗೂ ಬಂಮಗೌಡನ ಕುರಿತು ವಿವರಿಸುತ್ತದೆ[೨೪೦]. ಇದೇ ಗ್ರಾಮದ ಕ್ರಿ.ಶ.೧೨೨೯ರ ಶಾಸನದಲ್ಲಿಯು ಕೇತಗಾವುಂಡನ ಮಕ್ಕಳಾದ ರಾಯಗಾವುಂಡ ಹಾಗೂ ಸಿಂಗಗಾವುಂಡರು ತಾವು ಪ್ರತಿಷ್ಠಾಪಿಸಿದ ರಾಮನಾಥದೇವರು, ಅಯಸೂರ್ವೇಶ್ವರ ದೇವರು, ಬಾಚೇಶ್ವರ ದೇವರು, ಕೇತೇಶ್ವರ ದೇವರು ಹಾಗೂ ಚೌಡೇಶ್ವರಿ ದೇವಿ ದೇವಾಲಯಗಳಿಗೆ ಸ್ಥಳೀಯ ಮಹಾಜನರು, ನಖರರು ಹಾಗೂ ಅಧಿಕಾರವರ್ಗವು ದಾನ ನೀಡಿರುವ ಮಹತ್ವದ ಉಲ್ಲೇಖವುಂಟು. ಅಂದರೆ ಸ್ಥಳೀಯ ಗಾವುಂಡರು ದೇವಾಲಯ ನಿರ್ಮಾಣದಂತಹ ಮಹತ್ವದ ಹಾಗೂ ಹೆಚ್ಚು ಖರ್ಚನ್ನು ಅಪೇಕ್ಷಿಸುವ ಕಾರ್ಯಗಳನ್ನು ಮಾಡುತ್ತಿದ್ದಿರುವ ಉಲ್ಲೇಖವನ್ನು ಈ ಶಾಸನದಿಂದ ತಿಳಿಯಬಹುದು.

ಶಹಾಪುರ ತಾಲೂಕಿನ ತಳಬೀಡಿನ ಕ್ರಿ.ಶ.೧೨೦೮ರ ತೇದಿಯ ಶಾಸನವು ಶ್ರೀಮತು ತಳಬೀಡಿನ ಮಹಾಪ್ರಭು ಬೀರಗಾವುಂಡ ಮತ್ತು ನನ್ನಗಾವುಂಡರುಗಳ ಕೈರಾಣರಾದ ಕೊಂಡು ಬ್ರಹ್ಮೇಶ್ವರ ದೇವರ್ಗ್ಗೆ ರಾನ ನೀಡಿದ ಮಾಹಿತಿಯನ್ನು ನೀಡುತ್ತದೆ[೨೪೧].

ಕ್ರಿ.ಶ.೧೦೨೮ರ ಮದ್ರಕಿಯ ಶಾಸನವು ಇನ್ನೊಂದು ಮಹತ್ವ ವಿಚಾರವನ್ನು ತಿಳಿಸುತ್ತದೆ. ಸ್ಥಳೀಯ ಆಡಳಿತಾಧಿಕಾರಿಯಾಗಿದ್ದ ನಾಮಗಾಮುಂಡನು ಬಾವಿಯ ಧರ್ಮ್ಮೇತಕ್ಕೆ ಎಂಬ ವಿವರಣೆ ಬರುತ್ತದೆ[೨೪೨]. ಧರ್ಮ ಬಾವಿಂಯೊಂದನ್ನು ಕಟ್ಟಿಸಿದನಲ್ಲದೆ ಅದಕ್ಕೆ ಚಕ್ರವರ್ತಿಯನ್ನೊಳಗೊಂಡಂತೆ ಅವನ ಮಹಾಮಂಡಳೇಶ್ವರ, ಅಗ್ರಹಾರದ ಮಹಾಜನರು ಹಾಗೂ ಊರೊಡೆಯ ಸೇರಿ ದಾನನೀಡಿದ ಮಹತ್ವ ಉಲ್ಲೇಖ ಈ ಶಾಸನದಲ್ಲಿ ದಾಖಲಾಗಿದೆ. ಈ ಬಾವಿಯನ್ನು ಈವರೆಗೂ ನೋಡುತ್ತೇವೆ. ಅದನ್ನು ಸ್ಥಳೀಯವಾಗಿ ಧರ್ಮೇತಿ ತೋಂಟದ ಬಾವಿ ಅಥವಾ ಪಟೇಲರ ಹೊಲದಲ್ಲಿರುವ ಬಾವಿಯೆಂದು ಸ್ಥಳೀಯರು ಕರೆಯುತ್ತಾರೆ. ಈ ಬಾವಿಯ ಮುಂಭಾಗದಲ್ಲಿ ಕಲ್ಲೇಶ್ವರ ದೇವಾಲಯವು ಸಹ ಇರುವುದನ್ನು ಗಮನಿಸಬಹುದು.

ಗ್ರಾಮದ ಮುಖಂಡರಾಗಿದ್ದ ಗಾವುಂಡ ಅಥವಾ ಗಾಮುಂಡ ಅಥವಾ ಗೌಡರು ವಿವಿಧ ಬಗೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣಬಹುದು. ಅವರು ದೇವಾಲಯ ಕಟ್ಟಿಸುವುದು ಕೆರೆ ನಿರ್ಮಿಸುವುದು, ಬಾವಿ ತೋಡಿಸುವ ಸ್ಥಳೀಯ ತಪೋವನರಿಗೆ ಹಾಗೂ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಗಾಗಿ ಹಲವು ದಾನದತ್ತಿಗಳನ್ನು ಹೇರಳವಾಗಿ ನೀಡಿರುವ ಉಲ್ಲೇಖಗಳುಂಟು. ಅಂಥದ್ದರಿಂದ ಯಾದಗಿರಿ ಜಿಲ್ಲೆಯೂ ಸಹ ಹೊರತಾಗಿರಲಿಲ್ಲವೆಂದು ಅಭಿಪ್ರಾಯಿಸಬಹುದು.

## ಕೊನೆ ಟಿಪ್ಪಣಿ

೧. ಅರುಣಿ ಎಸ್.ಕೆ, ಸುರಪುರ ಸಂಸ್ಥಾನ, ಪುಟ–೬
೨. ಅದೇ ಪುಟ.೧೭
೩. ಗೋಗಿ ಹನುಮಾಕ್ಷಿ, ಸುರುಪುರ ತಾಲೂಕಿನ ಶಾಸನಗಳು, ಶಾ.ಸಂ.೦೮, ಏವೂರು,
೪. ಅದೇ ಶಾ.ಸಂ.೩೭, ತಿಂಥಣಿ
೫. ಗೋಗಿ ಹನುಮಾಕ್ಷಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೩೬, ಸಂಗಮ, ಶಹಾಪುರ ತಾಲೂಕು.
೬. ಪಾಟೀಲ ಎಂ.ಜಿ(ಸಂ)., ಗುಲಬರ್ಗಾ ಜಿಲ್ಲಾ ಗ್ಯಾಜಿಟಿಯರ್, ಪುಟ.೧೭
೭. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೭೩–೨೮೩
೮. ಕ.ಜಿ.ಶಾ.ಶಾ.ಸಂ.೧೮, ಮದ್ರಕಿ, ಶಹಾಪುರ ತಾಲೂಕು.
ಸು.ತಾ.ಶಾ.ಶಾ.ಸಂ.೮–೨೦, ಏವೂರು
ಅದೇ ಶಾ.ಸಂ.೫೧ ರಿಂದ ೬೨, ಮುದನೂರು
ಅದೇ ಶಾ.ಸಂ.೮೧ ರಿಂದ ೯೧ ಹಗರಟಗಿ
ಈ ಶಾಸನಗಳಲ್ಲಿ ಬಾವಿಗಳ ಕುರಿತು ಉಲ್ಲೇಖಗಳಿವೆ.
೯. ಅದೇ ಪುಟ.೧೮
೧೦. ಅರುಣಿ ಎಸ್.ಕೆ, ಸುರಪುರ ಸಂಸ್ಥಾನ, ಪುಟ–೧೮
೧೧. ಪತ್ತಾರ ದೇವು, ಸಂಪಾದಕರು, ಮಹಾದೇವ ಬಾಬಾ ಮೆಡೋಸ್ ಟೇಲರ್, ಪುಟ.೩೧
೧೨. ಅದೇ ಪುಟ.೩೪
೧೩. ಅದೇ ಪುಟ.೩೨
೧೪. ಅದೇ ಪುಟ.೩೫
೧೫. ಕಾಮತ್ ಸೂರ್ಯನಾಥ, ಹಿಸ್ಟೋರಿಯಾ ಗ್ರಾಫಿ ಆಫ್ ಕರ್ನಾಟಕ, ಪುಟ.೩೮.
೧೬. ಪದ್ದಯ್ಯ ಕೆ, ಇನ್‌ವೆಸ್ಟಿಗೇಶನ್ಸ್ ಇನ್ ಟು ದಿ ನಿಯೋಲಿಥಿಕ್ ಕಲ್ಚರ್ ದಿ ಶೋರಾಪುರ ದೋ ಆಬ್ ಸೌಥ್ ಇಂಡಿಯಾ, ಇ.ಜೆ ಬ್ರೈಲ್ಸ್, ಲೈಡನ್, ೧೯೭೩.
ಪದ್ದಯ್ಯ ಕೆ (ಸಂ) ರಿಸೆಂಟ್ ಸ್ಟಡೀಸ್ ಇನ್ ಇಂಡಿಯನ್ ಆರ್ಕಿಯಾಲಜಿ ಐಸಿಹೆಚ್‌ಆರ್ ಮೊನೋಗ್ರಾಫ್ ಸೀರಿಸ್.೬, ಮುನ್‌ಶಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನವದಹೆಲಿ. ೨೦೦೨.
ಸುಂದರ ಅ (ಸಂ), ಕರ್ನಾಟಕ ಚರಿತ್ರೆ ಸಂಪುಟ–೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.
೧೭. ಪಾಟೀಲ ಎಂ.ಜಿ(ಸಂ) ಗುಲಬರ್ಗಾ ಗ್ಯಾಜಟಿಯರ್.೩೮.

೧೮. ಅದೇ ಪುಟ.೪೦.

೧೯. ಕೋರಿಶೆಟ್ಟರ್ ರವಿ, ಚರಿತ್ರೆ ಸಂಪುಟ.೧, ಕವಿವಿ, ಹಂಪಿ, ಪುಟ.೬೦-೬೪

೨೦. ಅರುಣಿ ಎಸ್.ಕೆ, ಸುರಪುರ ಸಂಸ್ಥಾನ, ಪುಟ-೦೬

೨೧. ಅದೇ ಪುಟ.೬೯

೨೨. ಅದೇ ಪುಟ.೭೦

೨೩. ಸುಂದರ ಅ.(ಸಂ), ಚರಿತ್ರೆ ಸಂಪುಟ.೧, ಪುಟ.೧೮೭.

೨೪. ಅದೇ ಪುಟ.೧೯೨

೨೫. ಅದೇ ಪುಟ.೧೯೧

೨೬. ಅದೇ ಪುಟ.೧೯೭

೨೭. ಅದೇ ಪುಟ.೨೩೧

೨೮. ಅದೇ ಪುಟ. ೨೮೫

೨೯. ಅದೇ ಪುಟ. ೨೮

೩೦. ಅಕ್ಕಿ ಡಿ.ಎನ್, ಹಕ್ಕಲು ತೆನೆ, ಪುಟ.೧೧-೧೩

೩೧. ಪಾಟೀಲ ಎಂ.ಬಿ, ಸಂಪಾದಕರು, ಗುಲಬರ್ಗಾ ಜಿಲ್ಲಾ ಗ್ಯಾಜಿಟಿಯರ್ ಪುಟ.೭೦೯

೩೨. ಅದೇ ಪುಟ.೪೫

೩೩. ಅದೇ ಪುಟ.೪೩

೩೪. ಅಕ್ಕಿ ಡಿ.ಎನ್, ಸಗರನಾಡ ಸಿರಿ, ಕವಿಕುಂಚ ಪ್ರಕಾಶನ ಹಾಗೂ ಗೋಗಿ, ೨೦೦೧, ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಧಾರವಾಡ, ೧೯೯೫, ಗೋಗಿ ಹನುಮಾಕ್ಷಿ ಮತ್ತು ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ೧೯೯೬.

೩೫. ಗೋಗಿ ಹನುಮಾಕ್ಷಿ ಸುರಪುರ ತಾಲೂಕಿನ ಶಾಸನಗಳು, ಪುಟ.೨೨೫

೩೬. ಅಕ್ಕಿ ಡಿ.ಎನ್, ಸಗರನಾಡ ಸಿರಿ, ಪುಟ.೧೬

೩೭. ಪಾಟೀಲ ಎಂ.ಬಿ., ಗುಲುಬರ್ಗಾ ಗ್ಯಾಜಿಟಿಯರ್, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೭.

೩೮. ಅದೇ ಪುಟ.೪೬

೩೯. ಪಾಟೀಲ ಸಿ.ಎಸ್ ಮತ್ತು ಬಾಲಸುಬ್ರಮಣ್ಯ, ಸಿರಿವಾಳ ಇಟ್ಸ್ ಮಾನ್ಯೂಮೆಂಟ್, ಸ್ಕಲ್ಪಚರ್ಸ್ ಅಂಡ್ ಇನ್ಸ್ಕ್ರಪ್ಷನ್ಸ್, ಪುಟ.೧೩೪-೧೩೫

೪೦. ಗೋಗಿ ಹನುಮಾಕ್ಷಿ, ಸು.ತಾ.ಶಾ.ಪುಟ.೨೨೫.

೪೧. ಕೊಪ್ಪ ಎಸ್.ಕೆ. ತರ್ದವಾಡಿನಾಡು. ಪುಟ.೫೫-೫೬

೪೨. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೫೦, ಮಲ್ಲಾ.ಬಿ..

೪೩. ಅದೇ ಶಾ.ಸಂ.೩೭. ತಿಂಥಣಿ.

೪೪. ಅದೇ ಶಾ.ಸಂ.೯೮, ಹೆಮ್ಮಡಗಿ.

೪೫. ಅದೇ ಶಾ.ಸಂ.೫.೬ ಮತ್ತು ೭, ಐವೂರು.

೪೬. ಅದೇ ಶಾ.ಸಂ.೨೩. ಕಚಕನೂರು.

೪೭. ಗೋಗಿ ಹನುಮಾಕ್ಷಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೧೦, ದೋರನಹಳ್ಳಿ(ಶಹಾಪುರ ತಾಲೂಕು).

೪೮. ಪಾಟೀಲ ಎಂ.ಜಿ(ಸಂ), ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೫೮.

೪೯. ಕಜಿಶಾಶಾಸಂ–೧. ಅಜಲಿ(ಶಹಾಪುರ ತಾಲೂಕು

೫೦. ಅದೇ ಶಾ.ಸಂ.೧೮. ಮದ್ರಕಿ. ಶಹಾಪುರ ತಾಲೂಕು

೫೧. ಅದೇ ಶಾ.ಸಂ.೧೭. ಭೀಮರಾಯನಗುಡಿ, ಶಹಾಪುರ ತಾಲೂಕು.

೫೨. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೭೬–೮೩.

೫೩. ಕಲಬುರ್ಗಿ ಎಂ.ಎಂ. ಮಾರ್ಗ ಸಂಪುಟ.೨, ಪುಟ.೧೬೫-೧೬೭

೫೪. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪುಟ.೯೧

೫೫. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ.೧, ಪುಟ.೧೫೫-೧೫೬.

೫೬. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ.೭ ರಾಯಚೂರು ಜಿಲ್ಲೆ, ದೇವದುರ್ಗ ತಾಲೂಕು, ಪುಟ.೮೧.

೫೭. ಅದೇ ಸಂಪುಟ.೧೦, ವಿಜಾಪುರ ಜಿಲ್ಲೆ, ವಿಜಾಪುರ ತಾಲೂಕು, ಪುಟ.೪೫.

೫೮. ಸು.ತಾ.ಶಾ.ಶಾ.ಸಂ.೮೮, ಹಗರಟಗಿ.

೫೯. ಪಾಟೀಲ ವಿನೋದಾ ಶಿಲ್ಪಗಳಲ್ಲಿ ಶಿವಭಕ್ತರು, ಪುಟ.೧೫೮-೫೯.

೬೦. ರಾಮಕೃಷ್ಣ ಆರ್., (ಲೇ) ಚರಿತ್ರೆ ಸಂಪುಟ–೨, ಪುಟ.೬೦.

೬೧. ಅದೇ ಪುಟ.೬೨

೬೨. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೩೧, ಕೆಂಬಾವಿ

೬೩. ಅದೇ ಶಾ.ಸಂ.೩೨, ಕೆಂಬಾವಿ

೬೪. ಅದೇ ಶಾ.ಸಂ.೨೮, ಕನ್ನೆಳ್ಳಿ

೬೫. ಕ.ಜಿ.ಶಾ.ಶಾ.ಸಂ.೧೭. ಭೀಮರಾಯನ ಗುಡಿ(ಶಹಾಪುರ ತಾಲೂಕು).

೬೬. ಅದೇ ಶಾ.ಸಂ.೧೯, ಮದ್ರಕಿ(ಶ.ತಾ).

೬೭. ಅದೇ ಶಾ.ಸಂ.೩೫, ಸಂಗಮ(ಶಾ.ತಾ).

೬೮. ಅದೇ ಶಾ.ಸಂ.೧೧, ದೋರನಹಳ್ಳಿ(ಶ.ತಾ, ಪುಟ.೪೦೮).

೬೯. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೮೪

೭೦. ಅದೇ, ಪುಟ.೨೮೦-೮೩

೭೧. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೨೮, ಸಗರ(ಶ.ತಾ).

೭೨. ಸು.ತಾ.ಶಾ. ಶಾ.ಸಂ.೪೬, ಬೈಚಬಾಳ

೭೩. ಅದೇ ಶಾ.ಸಂ.೮, ಐವೂರು

೭೪. ಅದೇ-ಶಾ.ಸಂ.೯೨, ಹಾವಿನಾಳ

೭೫. ಕೃಷ್ಣ.ಎ.. ಸಗರನಾಡ ದರ್ಶನ, ಪುಟ.೧೧೫

೭೬. ಅದೇ ಶಾ.ಸಂ.೭೪, ರಾಜನಕೋಳೂರು

೭೭. ಅದೇ-ಶಾ.ಸಂ.೮೧, ಹಗರಟಗಿ

೭೮. ಅದೇ-ಶಾ.ಸಂ.೫೨, ಮುದನೂರು

೭೯. ಅದೇ-ಶಾ.ಸಂ.೨೬, ಕಡಕಲ್ಲ

೮೦. ಅದೇ-ಶಾ.ಸಂ.೭೫, ರಾಜನಕೋಳೂರು

೮೧. ಅದೇ-ಶಾ.ಸಂ.೫೨, ಮುದನೂರು

೮೨. ಅದೇ-ಶಾ.ಸಂ.೯ ಮತ್ತು ೧೦, ಐವೂರು

೮೩. ಅದೇ ಶಾ.ಸಂ.೬೩, ಮುದನೂರು

೮೪. ಅದೇ ಶಾ.ಸಂ.೧೦, ಐವೂರು

೮೫. ಅದೇ ಶಾ.ಸಂ.೧೧, ಐವೂರು

೮೬. ಅದೇ-ಶಾ.ಸಂ.೬೩, ಮುದನೂರು

೮೭. ಶಾ.ಸಂ.೬೪, ಮುದನೂರು

೮೮. ಅದೇ-ಶಾ.ಸಂ.೪೯, ಬೊಮ್ಮನಹಳ್ಳಿ

೮೯. ಅದೇ ಶಾ.ಸಂ.೧೩, ಐವೂರು)

೯೦. ಅದೇ-ಶಾ.ಸಂ.೩೯, ದೇವಪುರ) ಶಾಸನ (ಶಾ.ಸಂ.೧೫, ಐವೂರು)

೯೧. ಅದೇ ಪುಟ.೧೫

೯೨. ಅದೇ-ಶಾ.ಸಂ.೯೪, ಹುಣಸಗಿ

೯೩. ಅದೇ ಶಾ.ಸಂ.೩೪, ಚೆನ್ನೂರು

೯೪. ಅದೇ ಶಾ.ಸಂ.೧೬, ಐವೂರು

೯೫. ಅದೇ-ಶಾ.ಸಂ.೩೪, ಚೆನ್ನೂರು

೯೬. ಅದೇ-ಶಾ.ಸಂ.೫೮, ಮುದನೂರು

೯೭. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೧೩, ಧರಿಯಾಪುರ, (.ಶಾ.ತಾ)

೯೮. ಶಿವಾನಂದ.ಪಿ.., ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ಪುಟ.೧೭-೧೮

೯೯. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೬೫-೨೭೦

೧೦೦. ಅದೇ ಪುಟ.೨೬೯-೨೭೦

೧೦೧. ಅದೇ ಪುಟ.೨೭೦-೭೬

೧೦೨. ಅದೇ ಪುಟ.೨೭೧

೧೦೩. ಅದೇ ಪುಟ.೨೭೩-೨೭೯

೧೦೪. ಗೋಗಿ ಹನುಮಾಕ್ಷಿ, ಅನುಶಾಸನ ಸಂಪುಟ.೧, ಪುಟ.೨೭೬

೧೦೫. ಗೋಪಾಲ ಆರ್.(ಸಂ), ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ.೧೫-೧೬

೧೦೬. ಅದೇ ಪುಟ.೧೩-೧೫

೧೦೭. ಸು.ತಾ.ಶಾ.ಶಾ.ಸಂ.೨೨, ಕಕ್ಕೇರಿ

೧೦೮. ಅದೇ ಶಾ.ಸಂ.೯೫, ಹುಣಸಗಿ

೧೦೯. ಅದೇ-ಶಾ.ಸಂ.೧೭, ಏವೂರು

೧೧೦. ಕ.ಜಿ.ಶಾ.ಶಾ.ಸಂ.೩೨, ಸಿರಿವಾಳ(ಶಹಾಪುರ ತಾಲೂಕು)

೧೧೧. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೮೫, ಹಗರಟಗಿ.

೧೧೨. ಅದೇ ಶಾ.ಸಂ.೮೫, ಹಗರಟಗಿ

೧೧೩. ಅದೇ ಶಾ.ಸಂ.೫೩, ಮುದನೂರು

೧೧೪. ಅದೇ ಪುಟ.ಶಾ.ಸಂ.೬೯, ಮುದನೂರು

೧೧೫. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೩೬, ಸಂಗಮ(ಶಹಾಪುರ ತಾಲೂಕು).

೧೧೬. ರಾಮಕೃಷ್ಣ ಆರ್., ಕರ್ನಾಟಕ ಚರಿತ್ರೆ ಸಂಪುಟ-೨, ಪುಟ.೬೫

೧೧೭. ಸು.ತಾ.ಶಾ.ಶಾ.ಸಂ.೭೦, ಮುದನೂರು

೧೧೮. ಅದೇ ಶಾ.ಸಂ.೭೦, ಮುದನೂರು

೧೧೯. ಕ.ಜಿ.ಶಾ.ಶಾ.ಸಂ.೩೩, ಸಿರವಾಳ(ಶಹಾಪುರ ತಾಲೂಕು

೧೨೦. ಶಿವಾನಂದ ವಿ., ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ಪುಟ.೨೨೭-೨೩೦

೧೨೧. ಅದೇ ಪುಟ.೨೨೮

೧೨೨. ಮಾರ್ಗ, ಸಂಪುಟ-೪, ಪುಟ.೩೭೭-೩೮೬. ಪ್ರಕಟಿಸಿದ ಶಾಸನಗಳ ತೇದಿಗಳು ತಪ್ಪಾಗಿ ಮುದ್ರಿತವಾಗಿವೆ. ಹಾಗಾಗಿ ಕೆಲವನ್ನು ಸರಿಪಡಿಸಿ ನೀಡಲಾಗಿದೆ.

೧೨೩. ಅದೇ ಶಾ.ಸಂ.೪೧, ಹೋತಗಲ್(ಶಹಾಪುರ ತಾಲೂಕು)

೧೨೪. ಪಾಟೀಲ ಎಂ.ಜಿ., ಗುಲಬರ್ಗಾ ಗ್ಯಾಜೆಟಿಯರ್, ಪುಟ.೭೭೭

೧೨೫. ಅದೇ ಶಾ.ಸಂ.೪೨, ಹೋತಗಲ್ ಶಹಾಪುರ ತಾಲೂಕು

೧೨೬. ಕೃಷ್ಣ ಎ(ಸಂ) ಸಗರನಾಡು ದರ್ಶನ, ಪುಟ.೧೦೪-೧೨೧

೧೨೭. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೫೪, ಮುದನೂರು

೧೨೮. ಅದೇ ಶಾ.ಸಂ.೭೧, ಮುದನೂರು

೧೨೯. ಅದೇ-ಶಾ.ಸಂ.೧೮, ಐವೂರು

೧೩೦. ಅದೇ-ಶಾ.ಸಂ.೫೫, ಮುದನೂರು

೧೩೧. ಶಾ.ಸಂ.೫೬, ಮುದನೂರು

೧೩೨. ಅದೇ-ಶಾ.ಸಂ.೮೬, ಹಗರಟಗಿ

೧೩೩. ಅದೇ-ಶಾ.ಸಂ.೧೯, ಐವೂರು

೧೩೪. ಅದೇ ಶಾ.ಸಂ.೭೯, ಶ್ರೀನಿವಾಸಪುರ

೧೩೫. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೩೩, ಸಿರಿವಾಳ, ಶಹಾಪುರ ತಾಲೂಕು

೧೩೬. ಅದೇ ಶಾ.ಸಂ.೪೦, ಹುಲಿಕಲ್(ಶಹಾಪುರ ತಾಲೂಕು)

೧೩೭. ಅದೇ ಶಾ.ಸಂ.೪೧, ಹೋತಗಲ್ಲ, ಶಹಾಪುರ ತಾಲೂಕು

೧೩೮. ಪಾಟೀಲ ಎಂ.ಬಿ., ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೦೯

೧೩೯. ಅದೇ ಪುಟ.೭೦೯

೧೪೦. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೫೭, ಮುದನೂರು

೧೪೧. ಅದೇ ಪುಟxxi

೧೪೨. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೨, ಎಡೆಯಾಪುರ

೧೪೩. ಅದೇ-ಶಾ.ಸಂ.೩, ಎಡೆಯಾಪುರ

೧೪೪. ಅದೇ-ಶಾ.ಸಂ.೭೬, ರಾಜನಕೋಳೂರು

೧೪೫. ಅದೇ ಶಾ.ಸಂ.೬೦ ಮತ್ತು ೬೧, ಮುದನೂರು

೧೪೬. ಸು.ತಾ.ಶಾ. ಶಾ.ಸಂ.೮೭, ಹಗರಟಗಿ

೧೪೭. ಸು.ತಾ.ಶಾ. ಶಾ.ಸಂ.೮೮, ಹಗರಟಗಿ

೧೪೮. ಸು.ತಾ.ಶಾ. ಶಾ.ಸಂ.೯೦, ಹಗರಟಗಿ

೧೪೯. ಸು.ತಾ.ಶಾ. ಶಾ.ಸಂ.೮೯, ಹಗರಟಗಿ

೧೫೦. ಸು.ತಾ.ಶಾ. ಶಾ.ಸಂ.೪೫, ಬಿಜಾಸಪುರ

೧೫೧. ಸು.ತಾ.ಶಾ. ಶಾ.ಸಂ.೭೩, ಯಾಳಗಿ

೧೫೨. ಕ.ಜಿ.ಶಾ.ಶಾ.ಸಂ.೭, ತಳಜೀಡಿ(ತಡಜಿಡಿ) ಶಹಾಪುರ ತಾಲೂಕು

೧೫೩. ಅದೇ ಶಾ.ಸಂ.೪೨, ಹೋತಗಲ್, ಶಹಾಪುರ ತಾಲೂಕು

೧೫೪. ಪಾಟೀಲ ಎಂ.ಜಿ., ಗುಲಬರ್ಗಾ ಗ್ಯಾಜಿಟಿಯರ್, ಪುಟ.೬೧

೧೫೫. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯ ಶಾಸನಗಳು: ಒಂದು ಅಧ್ಯಯನ, ಪುಟ.೧೫೧

೧೫೬. ನರಸಿಂಹಮೂರ್ತಿ ಎ.ವಿ., ಕರ್ಣಾಟಕದ ಸೇವುಣರ ಇತಿಹಾಸ, ಪುಟ.೧೫೭

೧೫೭. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೫೦, ಮಲ್ಲಾ ಬಿ.

೧೫೮. ಅದೇ ಪುಟ.xxx

೧೫೯. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೨೫, ಮುಡಬಾಳ(ಶಹಾಪುರ ತಾಲೂಕು).

೧೬೦. ಸು.ತಾ.ಶಾ.ಶಾ.ಸಂ.೩೧, ಕೆಂಬಾವಿ

೧೬೧. ಅದೇ ಪುಟ.xxx

೧೬೨. ಅದೇ ಪುಟ.xxxi

೧೬೩. ಕ.ಜಿ.ಶಾ.ಶಾ.ಸಂ.೧೮, ಮದ್ರಕಿ, ಶಹಾಪುರ ತಾಲೂಕು

೧೬೪. ಅದೇ ಶಾ.ಸಂ.೧೭, ಭೀಮರಾಯನ ಗುಡಿ, ಶಹಾಪುರ ತಾಲೂಕು

೧೬೫. ಅದೇ ಶಾ.ಸಂ.೫, ಗೋಗಿ, ಶಹಾಪುರ ತಾಲೂಕು

೧೬೬. ಸುರಪುರ ತಾಲೂಕಿನ ಶಾಸನಗಳು, ಪುಟ.xxxii

೧೬೭. ಅದೇ ಶಾ.ಸಂ.೫೮, ಮುದನೂರು

೧೬೮. ಅದೇ ಶಾ.ಸಂ.೬೨, ಮುದನೂರು

೧೬೯. ಅದೇ ಶಾ.ಸಂ.೬೪, ಮುದನೂರು

೧೭೦. ಅದೇ ಶಾ.ಸಂ.೬೫, ಮುದನೂರು

೧೭೧. ಅದೇ ಶಾ.ಸಂ.೯೮, ಹೆಮ್ಮಡಗಿ

೧೭೨. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೪೧, ಹೋತಗಲ್ಲ, ಶಹಾಪುರ ತಾಲೂಕು

೧೭೩. ಸು.ಶಾ.ತಾ.ಶಾ.ಸಂ.೯೫, ಹುಣಸಗಿ

೧೭೪. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೮೩, ಹಗರಟಗಿ

೧೭೫. ಕಲಬುರ್ಗಿ ಶಾಸನಗಳು, ಶಾ.ಸಂ.೪೨, ಹೋತಗಲ್ಲ, ಶಹಾಪುರ ತಾಲೂಕು

೧೭೬. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೨೨, ಕಕ್ಕೇರಿ ಮತ್ತು ಶಾ.ಸಂ.೬೭, ಮುದನೂರು

೧೭೭. ಅದೇ ಪುಟ.xxxi

೧೭೮. ಕ.ಜಿ.ಶಾ.ಶಾ.ಸಂ.೨೩, ಮರಮಕಲ್ಲ, ಶಹಾಪುರ ತಾಲೂಕು

೧೭೯. ಕಲಬುರ್ಗಿ ತಾಲೂಕಿನ ಶಾಸನಗಳು, ಶಾ.ಸಂ.೧, ಆಣಬಿ, ಶಹಾಪುರ ತಾಲೂಕು

೧೮೦. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೬೬

೧೮೧. ಅದೇ ಪುಟ.೨೭೧

೧೮೨. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ಪುಟ.೨೩೦

೧೮೩. ಅದೇ ಪುಟ.೨೩೧-೨೩೨

೧೮೪. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೨, ಎಡೆಯಾಪುರ

೧೮೫. ಅದೇ ಶಾ.ಸಂ.೭, ಏವೂರು

೧೮೬. ಅದೇ ಶಾ.ಸಂ.೮, ಏವೂರು

೧೮೭. ಅದೇ ಪುಟ.xxx

೧೮೮. ಅದೇ ಶಾ.ಸಂ.೮, ಏವೂರು

೧೮೯. ಅದೇ ಶಾ.ಸಂ.೧೩, ಏವೂರು

೧೯೦. ಅದೇ ಶಾ.ಸಂ.೬, ಕಡಕಲ್ಲು

೧೯೧. ಅದೇ ಪುಟ.xxx

೧೯೨. ಅದೇ ಶಾ.ಸಂ.೨೬, ಕಡಕಲ್ಲು

೧೯೩. ಅದೇ ಪುಟ.೭೯

೧೯೪. ಅದೇ ಶಾ.ಸಂ.೪೯, ಬೊಮ್ಮನಹಳ್ಳಿ

೧೯೫. ಅದೇ ಪುಟ.೧೦೪

೧೯೬. ಅದೇ ಶಾ.ಸಂ.೪೬, ಬೈಚಬಾಳ

೧೯೭. ಅದೇ ಪುಟ-೧೦೫

೧೯೮. ಅದೇ ಶಾ.ಸಂ.೬೯, ಮುದನೂರು

೧೯೯. ಅದೇ ಶಾ.ಸಂ.೫೩, ಮುದನೂರು

೨೦೦. ಅದೇ ಶಾ.ಸಂ.೫೫, ಮುದನೂರು

೨೦೧. ಅದೇ ಶಾ.ಸಂ.೯೮, ಹೆಮ್ಮಡಗಿ

೨೦೨. ಕ.ಜಿ.ಶಾ.ಶಾ.ಸಂ.೪೨, ಹೋತಗಲ್(ಶಹಾಪುರ ತಾಲೂಕು)

೨೦೩. ಸು.ತಾ.ಶಾ. ಅದೇ ಪುಟ.೧೬೮

೨೦೪. ಅದೇ ಶಾ.ಸಂ.೯೦, ಹಗರಟಗಿ

೨೦೫. ಅದೇ ಶಾ.ಸಂ.೯೪, ಹುಣಸಗಿ

೨೦೬. ಅದೇ ಶಾ.ಸಂ.೯೦, ಹಗರಟಗಿ

೨೦೭. ಅದೇ ಶಾ.ಸಂ.೯೮, ಹೆಮ್ಮಡಗಿ

೨೦೮. ಅದೇ ಶಾ.ಸಂ.೬೭, ಮುದನೂರು

೨೦೯. ಕಲಬುರ್ಗಿ ಜಿಲ್ಲೆಯ ಶಾಸನಗಳು, ಪುಟ.೩೯೧

೨೧೦. ಅದೇ ಪುಟ.೪೨೪

೨೧೧. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೬೬

೨೧೨. ಅದೇ ಪುಟ.೨೭೨

೨೧೩. ಅದೇ ಪುಟ.೨೬೮

೨೧೪. ಅದೇ ಪುಟ.೨೬೯

೨೧೫. ಅದೇ ಪುಟ.೨೭೭

೨೧೬. ಅದೇ ಪುಟ.೨೮೨

೨೧೭. ಅದೇ ಪುಟ.೨೮೪

೨೧೮. ಅದೇ ಪುಟ.೨೮೫

೨೧೯. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೪೫, ಬಿಜಾಸಪುರ

೨೨೦. ಕಲಬುರ್ಗಿ ಜಿಲ್ಲೆಯ ಶಾಸನಗಳು, ಪುಟ.೩೯೬

೨೨೧. ಅದೇ ಪುಟ.೪೧೦

೨೨೨. ಅದೇ ಪುಟ.೪೩೯

೨೨೩. ಅದೇ ಪುಟ.೪೫೧

೨೨೪. ಗೋಗಿ ಹನುಮಾಕ್ಷಿ(ಸಂ), ಡಾ.ಆರ್.ಎನ್.ಗುರುವ ಶಾಸನ ಸಂಶೋಧನ ಪ್ರಬಂಧಗಳು, ಪುಟ.೨೭೦

೨೨೫. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೮೦–೮೧

೨೨೬. ಅದೇ ಪುಟ.೮೧

೨೨೭. ಅದೇ ಪುಟ.೮೧

೨೨೮. ಅದೇ ಪುಟ.೯೨

೨೨೯. ಕಲಬುರ್ಗಿ ಜಿಲ್ಲೆಯ ಶಾಸನಗಳು, ಪುಟ.೪೪೨–೪೪೪

೨೩೦. ಅದೇ ಪುಟ.೪೪೨

೨೩೧. ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೧೯, ಏವೂರು

೨೩೨. ಅದೇ ಶಾ.ಸಂ.೩೩, ಕೆಂಬಾವಿ

೨೩೩. ಅದೇ ಶಾ.ಸಂ.೭೬, ರಾಜನಕೋಳೂರು

೨೩೪. ಅದೇ ಪುಟ.xxxvii

೨೩೫. ಅದೇ ಶಾ.ಸಂ.೯೮, ಹೆಮ್ಮಡಗಿ

೨೩೬. ಅದೇ ಪುಟ.xxxix.

೨೩೭. ನಾಗಯ್ಯ ಜೆ.ಎಂ, ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ಪುಟ.೨೫೩.

೨೩೮. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಶಾ.ಸಂ.೨, ಎಡೆಯಾಪುರ

೨೩೯. ಅದೇ ಪುಟ.೧೬೧.

೨೪೦. ಅದೇ ಪುಟ.೧೭೧.

೨೪೧. ಕಗೋಗಿ ಹನುಮಾಕ್ಷಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ಪುಟ.೪೯.

೨೪೨. ಅದೇ ಪುಟ.೪೧೬.

# ಅಧ್ಯಾಯ ೩

## ಆಡಳಿತ ವಿಭಾಗ

ವಿಶಾಲವಾದ ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ವಿಭಾಗಿಸುವ ಕ್ರಮ ಇಂದಿಗೂ ಅನೂಚಾನವಾಗಿ ಮುಂದುವರೆದಿದೆ. ಅಂಥದ್ದೇ ಉದ್ದೇಶವುಳ್ಳ ಸಂಗತಿಗಳನ್ನು ಪ್ರಾಚೀನ ಕನ್ನಡ ನಾಡಿನ ರಾಜವ್ಯವಸ್ಥೆಯಲ್ಲಿಯೂ ಸಹ ಕಾಣುತ್ತೇವೆ. ಒಬ್ಬ ವ್ಯಕ್ತಿಯಿಂದ ಮಾತ್ರ ವಿಸ್ತಾರವಾದ ಸಾಮ್ರಾಜ್ಯವನ್ನು ರಕ್ಷಿಸಿ ಮುನ್ನೆಡುಸುವುದು ಕಷ್ಟದಾಯಕವೂ ಮತ್ತು ಅಸಾಧ್ಯವಾದ ಮಾತಾಗಿತ್ತು. ರಾಜಸತ್ತೆಯು ಆಡಳಿತ ಸೌಕರ್ಯಕ್ಕಾಗಿ ವಿಭಾಗ, ಉಪ ವಿಭಾಗ, ಪ್ರಾಂತ, ನಾಡು, ಕಂಪಣ, ದೇಶ, ರಾಷ್ಟ್ರ, ವಿಷಯ ಮತ್ತು ರಾಜ್ಯ ಎಂಬ ವಿವಿಧ ಹೆಸರುಗಳಿಂದ ವಿಭಾಗಿಸಿ ಸಾಮ್ರಾಜ್ಯದ ಆಡಳಿತವನ್ನು ಭದ್ರಗೊಳಿಸಿಕೊಳ್ಳುತ್ತಿತ್ತು. ಆಡಳಿತ ವಿಕೇಂದ್ರೀಕರಣದ ಮೂಲಕ ರಾಜ್ಯಭಾರವು ಸುಸ್ಥಿರವಾಗಿ ಮುನ್ನೆಡೆಯಲು ಇಂಥ ಹಂಚಿಕೆಗಳು ತುಂಬಾ ಅವಶ್ಯಕವಾದ ಸಂಗತಿಗಳೇ ಆಗಿದ್ದವು. ಆದರೂ ಅಂತಿಮ ನಿರ್ಧಾರದ ಮುಖ್ಯ ನಿಯಂತ್ರಣ ಮಾತ್ರ ಅರಸನೇ ಆಗಿದ್ದನು. ಬೇಕಾದಾಗ ನೇಮಿಸುವ ಮತ್ತು ಬದಲಾಯಿಸುವ ಸಂಪೂರ್ಣ ಅಧಿಕಾರ ಅವನ ಹಿಡಿತದಲ್ಲಿತ್ತು. ಒಟ್ಟಿನಲ್ಲಿ ಅಭಿಪ್ರಾಯಿಸುವುದಾದರೆ ಆಡಳಿತದ ಅನುಕೂಲಕ್ಕಾಗಿಯೇ ಇಂಥ ಘಟಕಗಳನ್ನು ನಿರ್ಮಿಸುವ ಉದ್ದೇಶ ಅವರದಾಗಿತ್ತು. ಆದರೂ ಆಡಳಿತ ಘಟಕಗಳ ಭೌಗೋಳಿಕ ವಿಸ್ತರಣೆ ಮತ್ತು ಸಂರಚನೆಗಳು ಹೇಗೆ ನಡೆಯುತ್ತಿದ್ದವು ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಒಟ್ಟಾರೆ ರಾಜ್ಯವು ಸುಗಮ ಆಡಳಿತ ಕಾಣಲು ಈ ವಿಭಾಗ ಕ್ರಮವು ಅವಶ್ಯಕವಾಗಿತ್ತೆಂದು ಹೇಳಬಹುದು. ಇಂಥ ಕೆಲವೊಂದು ಉದಾಹರಣೆಗಳನ್ನು ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಸಂದರ್ಭದಲ್ಲೂ ಕಾಣುತ್ತೇವೆ.

ಪ್ರಾಯಶಃ ಇಂಥ ವಿಭಾಗಗಳನ್ನು ಮಾಡುವ ಸಂದರ್ಭದಲ್ಲಿ ಅವುಗಳಿಗೆ ಮುಖ್ಯವಾದ ನಿರ್ದಿಷ್ಟ ಉದ್ದೇಶಗಳೇನು ಇರಲಿಲ್ಲ ಎಂದೇ ಅಭಿಪ್ರಾಯಿಸಲಾಗಿದೆ. ಅವು ಕೇವಲ ಆಡಳಿತದ ಅನುಕೂಲಕ್ಕಾಗಿ ಮಾತ್ರ ಎಂಬುದು ಸ್ಪಷ್ಟ, ಹಾಗಾಗಿ ಈ ವಿಷಯಗಳ ಕುರಿತು ಗಂಭೀರವಾದ ಚರ್ಚೆಗಳೇನು ವಿದ್ವತ್ ವಲಯದಲ್ಲಿ ನಡೆದಿರುವುದಿಲ್ಲ. ಆಡಳಿತ ವಿಭಾಗಗಳ ಹುಟ್ಟಿನ ಇತಿಹಾಸದ ಕುರಿತು ಸಹ ಸ್ಪಷ್ಟವಾದ ಮಾಹಿತಿಗಳು ಇರುವುದಿಲ್ಲ. ಬಹುಶಃ ಇಂಥ ವಿಭಾಗ ಕ್ರಮವು ಮೌರ್ಯ ಮತ್ತು ಶಾತವಾಹನ ಕಾಲದಿಂದಲೇ ಮುಂದುವರೆದಿದೆ ಎಂಬುದನ್ನು

ಸ್ಥೂಲವಾಗಿ ಒಪ್ಪಬಹುದಾಗಿದೆ. ಪ್ರಾಚೀನ ಆಡಳಿತ ವಿಭಾಗಗಳು ಪ್ರಸ್ತುತ ಯಾದಗಿರಿ ಜಿಲ್ಲೆಯ ವ್ಯಾಪ್ತಿಯಲ್ಲಿಯೂ ಇದ್ದವು ಎಂಬುದು ಶಾಸನಾಧಾರಗಳಿಂದ ತಿಳಿದುಬರುತ್ತದೆ. ಅಲ್ಲದೇ ಆ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ಆ ವಿಭಾಗಗಳ ಪ್ರಾಚೀನ ಹೆಸರುಗಳು ಮಾತ್ರ ಈ ದಿನಗಳಲ್ಲಿಯೂ ಭಾಗಶಃ ಜನರ ಬಾಯಿಯಲ್ಲಿವೆ ಎಂಬುದು ಮುಖ್ಯ. ಆದರೆ ಅವುಗಳ ವ್ಯಾಪ್ತಿ ಮತ್ತು ಸ್ವರೂಪದಲ್ಲಿಮಾತ್ರ ಹಲವು ಬದಲಾವಣೆಗಳಾಗಿರುವುದನ್ನು ಗಮನಿಸಬಹುದು. ಆದರೆ ಅಂಥ ಹೆಸರುಗಳು ಇಂದಿಗೂ ಉಳಿದುಬಂದಿರುವುದು ತುಂಬಾ ವಿರಳ. ಆದರೆ ಅಪವಾದವೆಂಬಂತೆ ಯಾದಗಿರಿ ಜಿಲ್ಲೆಯಲ್ಲಿದ್ದ ಪ್ರಾಚೀನ ಆಡಳಿತ ಘಟಕವಾದ ಸಗರನಾಡು ಎಂಬ ಹೆಸರು ಮತ್ತು ಅದರ ಮಹತ್ವ ಇಂದಿಗೂ ನಿರಂತರವಾಗಿ ಉಳಿದುಕೊಂಡು ಬಂದಿರುವುದು ಅದರ ಮಹತ್ವವನ್ನು ಪ್ರತಿಪಾದಿಸುತ್ತದೆ ಎಂದು ಅಭಿಪ್ರಾಯಿಸಬಹುದು. ಯಾದಗಿರಿ ಜಿಲ್ಲೆಯ ಶಹಾಪುರ ಮತ್ತು ಸುರಪುರ ತಾಲೂಕಿನ ಕೆಲವು ಹಳ್ಳಿಗಳ ವ್ಯಾಪ್ತಿ ಪ್ರದೇಶವು ಜನರ ಬಾಯಿಯಲ್ಲಿ ಈ ದಿನಗಳಲ್ಲಿಯೂ ಸಹ ಸಗರನಾಡ ಅಥವಾ ಸಗರ ಗಡ್ಡೆಯೆಂದೇ ಹೆಚ್ಚು ಜನಜನಿತವಾಗಿದೆ. ಇದಕ್ಕೆ ಪೌರಾಣಿಕ ಐತಿಹ್ಯವು ಜೊತೆಯಾಗಿ ಈ ನಾಡಿನ ರಚನಾ ಕಾಲ ಸತ್ಯಯುಗದವರೆಗೂ ಹಿಂದೋಡುತ್ತದೆ.

ಪ್ರಾಚೀನ ಆಡಳಿತ ಘಟಕವಾದ ಸಗರನಾಡು ಮಾತ್ರ ಅಲ್ಲದೇ ಹಗರಟಗಿ ನಾಡು ಹಾಗೂ ಕಲ್ಲಕೆಳಗು ನಾಡುಗಳಲ್ಲಿ ಪ್ರಸ್ತುತ ಯಾದಗಿರಿ ಜಿಲ್ಲೆಯ ಹಳ್ಳಿ ಅಥವಾ ಗ್ರಾಮಗಳು ಹಂಚಿ ಹೋಗಿರುವುದನ್ನು ಗಮನಿಸಬಹುದು. ಅಲ್ಲದೇ ಮುಖ್ಯವಾಗಿ ಅವುಗಳಿಗೆ ಸಂಖ್ಯಾ ಸೂಚಕಗಳನ್ನು ನೀಡಿ ಸಂಬೋಧಿಸಲಾಗಿದೆ. ಇಂಥ ಪ್ರಾಚೀನ ಆಡಳಿತದ ವಿಭಾಗಗಳನ್ನು ಶಾಸನಗಳಲ್ಲಿ ಸಗರನಾಡು ಅಥವಾ ಸಗರ-೩೦೦ ಮತ್ತು ಸಗರ-೫೦೦ ಎಂದೂ ಹಗರಟಗಿ ನಾಡು ಅಥವಾ ಹಗರಟಗಿ-೩೦೦ ಎಂತಲೂ ಹಾಗೂ ಕಲ್ಲಕೆಳಗುನಾಡು ಅಥವಾ ಕೆಲ್ಲಕೆಳಗು-೫೦೦ ಎಂಬ ಹೆಸರುಗಳಿಂದ ಉಲ್ಲೇಖಿಸಲಾಗಿದೆ. ಉಲ್ಲೇಖಿತ ಎರಡು ಪ್ರಾಚೀನ ವಿಭಾಗಗಳು ಎಡದೊರೆ ಇಪ್ಪತ್ತುಸಿರ ಆಡಳಿತ ವಿಭಾಗಕ್ಕೆ ಹೊಂದಿಕೊಂಡಂತೆ ಹಾಗೂ ಕಲ್ಲಕೆಳಗು ನಾಡು ಬೋಧನ-೫೦೦ರ ಪ್ರಸಿದ್ಧ ಆಡಳಿತ ಘಟಕಕ್ಕೆ ಹೊಂದಿಕೊಂಡಿದ್ದನ್ನು ಗಮನಿಸಬಹುದು. ಆದರೆ ಪ್ರಸ್ತುತ ದಿನಮಾನಗಳಲ್ಲಿ ಪ್ರಾಚೀನ ಮೂರು ನಾಡುಗಳ ಭೌಗೋಳಿಕ ಸೀಮೆಗಳು ನಿರ್ದಿಷ್ಟವಾಗಿ ಬಂದಿಲ್ಲ.

ಇವುಗಳಿಗೆ ಅಂಟುಕೊಂಡಿರುವ ಸಂಖ್ಯೆಗಳ ಬಗೆಗೆ ವಿದ್ವಾಂಸರಲ್ಲಿ ಹಲವು ಬಗೆಯ ಭಿನ್ನ ಅಭಿಪ್ರಾಯಗಳು ವ್ಯಕ್ತವಾಗಿವೆ. ಆಡಳಿತದ ಘಟಕಗಳೊಂದಿಗೆ ಇರುವ ಇಂಥ ಸಂಖ್ಯೆಯ ವಿವರಗಳ ಕುರಿತು ಮೊಟ್ಟಮೊದಲಿಗೆ ಜಾನ್ ಫೇತ್‌ಫುಲ್ ಫ್ಲೀಟ್ ಅವರು ಸ್ಪಷ್ಟವಾಗಿ ನಿರ್ವಚಿಸುವ ಪ್ರಯತ್ನ ಮಾಡಿದರೆಂಬ ಮಾಹಿತಿಗಳಿವೆ. ಬಹುಶಃ ಅವುಗಳ ಸಂಖ್ಯಾ ಘಟಕಗಳು ಆ ಘಟಕದಲ್ಲಿದ್ದ ಪಟ್ಟಣ ಅಥವಾ ಹಳ್ಳಿಗಳ ಸಮೂಹವನ್ನು ಸೂಚಿಸುತ್ತವೆ ಎಂದು

ಅಭಿಪ್ರಾಯಿಸಿದ್ದಾರೆ ಎಂದು ಹೇಳಲಾಗಿದೆ[೧]. ಆದರೆ ಅಂಥ ವಿವರಣೆಯನ್ನು ಒಪ್ಪಿಕೊಳ್ಳದ ಬೆಂಜಮಿನ್ ಲೂಯಿ ರೈಸ್ ಅವರು ವಾಸ್ತವದಲ್ಲಿ ಅಷ್ಟೊಂದು ಸಂಖ್ಯೆಯ ಹಳ್ಳಿಗಳು ಒಂದು ಘಟಕವಾಗಿ ಇರುವುದು ಅಸಾಧ್ಯವೆಂದು ಹೇಳುತ್ತ ರಟ್ಟಪಾಡಿ ಎಪ್ಪತ್ತು ಲಕ್ಷ, ಗಂಗವಾಡಿ–ತೊಂಬತ್ತಾರುಸಾವಿರ ಹಾಗೂ ನೊಳಂಬವಾಡಿ ಮೂವತ್ತೆರಡು ಸಾವಿರ ಎಂಬ ವಿವರಗಳನ್ನು ತಮ್ಮ ಅಭಿಪ್ರಾಯಕ್ಕೆ ಆಧಾರವಾಗಿ ತೆಗೆದುಕೊಳ್ಳುತ್ತಾರೆ. ಅಲ್ಲದೇ ಅವರು ಘಟಕದ ಮುಂದೆ ನಮೂದಾಗಿರುವ ಲಕ್ಷ ಸಂಖ್ಯೆಯು ತೆರಿಗೆಯನ್ನು ಹಾಗೂ ಸಾವಿರ ಸಂಖ್ಯೆಯು ನಾಡುಗಳನ್ನು(೯೬,೦೦೦ ಅಂದರೆ ೯೬ನಾಡು), ಚಿಕ್ಕ ಚಿಕ್ಕ ಸಂಖ್ಯೆಯ ಗ್ರಾಮಗಳನ್ನು ಸೂಚಿಸುತ್ತವೆಂಬ ವಿವರಣೆ ನೀಡಿದ್ದಾರೆ ಎಂದು ಅಭಿಪ್ರಾಯಿಸಲಾಗಿದೆ[೨]. ಎಸ್.ಕೃಷ್ಣಸ್ವಾಮಿ ಅಯ್ಯಾಂಗಾರ ಅವರು ಇದು ಎರಡನ್ನು(ತೆರಿಗೆ ಮತ್ತು ಗ್ರಾಮಗಳ ಸಂಖ್ಯೆ) ಸೂಚಿಸುತ್ತದೆ ಎಂಬ ಅಭಿಪ್ರಾಯ ಹೊಂದಿದವರೆಂದು ಅಭಿಪ್ರಾಯಿಸಲಾಗಿದೆ[೩]. ಆದರೆ ನೆಲಮಂಗಲ ಲಕ್ಷ್ಮೀನಾರಾಯಣ ಅವರು ಫ್ಲೀಟ್ ಅವರ ಅಭಿಪ್ರಾಯವನ್ನು ಮಾನ್ಯ ಮಾಡುತ್ತಾ ಅದರಲ್ಲಿರುವ ಸಂಖ್ಯೆಯ ಸೂಚಕವು ಹಳ್ಳಿಗಳ ಸಂಖ್ಯೆಯನ್ನೇ ಸೂಚಿಸುತ್ತದೆ ವಿನಹಃ ಮತ್ತೇನನ್ನು ಅಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ವಿವರಗಳ ಹಿನ್ನೆಲೆಯಲ್ಲಿಯೇ ಅಭಿಪ್ರಾಯಪಟ್ಟಿರುವ ಫ್ಲೀಟ್ ಮತ್ತು ಲಕ್ಷ್ಮೀನಾರಾಯಣ ಅವರ ಅಭಿಪ್ರಾಯಗಳೇ ಹೆಚ್ಚಿನಂಶ ಸರಿಯಾದವುಗಳೆಂದು ಇನ್ನೂ ಕೆಲವು ವಿದ್ವಾಂಸರು ಹೇಳಿದ್ದಾರೆ[೪]. ಈ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಪ್ರಸ್ತುತ ಯಾದಗಿರಿ ಜಿಲ್ಲೆಯಲ್ಲಿರುವ ನಾಡುಗಗಳಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಉಲ್ಲೇಖಿಸಿರುವ ಅವುಗಳ ಕುರಿತಿರುವ ಸಂಖ್ಯೆಯು ಕೂಡಾ ಉತ್ಪ್ರೇಕ್ಷೆ ಆಗಲಾರದೆಂದು ಹೇಳಬಹುದು. ಹಾಗಾಗಿ ಈ ಪ್ರಾಚೀನ ಘಟಕಗಳು ಆ ಸಂಖ್ಯೆಯ ಆ ನಾಡಿನಲ್ಲಿದ್ದ ಗ್ರಾಮಗಳ ಸಂಖ್ಯೆಯನ್ನು ಸೂಚಿಸುವ ಸೂಚಕಗಳೇ ಆಗಿದ್ದವು ಹೊರತು ಬೇರೆ ವಿವರಗಳಾಗಿರಲಾರವು ಎಂದು ಖಚಿತವಾಗಿ ಹೇಳಬಹುದು.

ಪ್ರಾಚೀನ ಆಡಳಿತ ಘಟಕಗಳಾದ ಈ ಮೂರು ನಾಡಿನಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಗ್ರಾಮ ಅಥವಾ ಗ್ರಾಮೆ, ತೀರ್ಥ, ನಾಡು ಕಂಪಣ, ಪಟ್ಟಣ, ಮನೆ ಹಾಗೂ ನೆಲವೀಡು ಎಂಬ ಹೆಸರುಗಳೇ ಹೆಚ್ಚಾಗಿ ಪ್ರಕಟಗೊಂಡಿವೆ. ನಾಡು ಎಂದರೆ ದೊಡ್ಡ ವಿಭಾಗ ಕಂಪಣವೆಂದರೆ ಸಣ್ಣ ವಿಭಾಗ ಎಂದು ವಿದ್ವಾಂಸರು ಈ ವರೆಗೆ ಅರ್ಥೈಸಿದ್ದಾರೆ. ಆದರೆ ಶಾಸನಗಳಲ್ಲಿ ನಾಡು ಎಂಬ ಪದವನ್ನು ದೊಡ್ಡ ಹಾಗೂ ಸಣ್ಣ ವಿಭಾಗಗಳಿಗೂ ಸಹ ಬಳಸಲಾಗಿದೆ. ಹಾಗಾಗಿ ನಾಡು ಎಂಬ ಪದವು ದೊಡ್ಡ, ಸಣ್ಣ, ಅತಿಸಣ್ಣ ವಿಭಾಗಗಳಿಗೂ ಬಳಸಿರುವುದರಿಂದ ಅದು ಸ್ಥೂಲವಾಗಿ ಪ್ರದೇಶ ಎಂಬ ಅರ್ಥವನ್ನು ನಿರ್ದೇಶಿಸಲು ಮಾತ್ರ ಬಳಕೆಯಾಗಿದೆ. ನಾಡು ಎಂದರೆ ತಕ್ಷಣ ದೊಡ್ಡ ವಿಭಾಗವೆಂದು ತಿಳಿಯಬಾರದು ಎನಿಸುತ್ತದೆ ಎಂಬ ಅಭಿಪ್ರಾಯವೂ ಸಹ ವ್ಯಕ್ತವಾಗಿದೆ[೫].

ಇಲ್ಲಿರುವ ಶಾಸನಗಳಲ್ಲಿ ಉಲ್ಲೇಖವಾದ ಇನ್ನೊಂದು ಆಡಳಿತ ಘಟಕ ಕಂಪಣ. ಇದು ನಾಡು ವಿಭಾಗಕ್ಕಿಂತ ಚಿಕ್ಕದು. ಆದರೆ ಅದು ಸ್ವತಂತ್ರ ವಿಭಾಗವಲ್ಲ. ಒಂದು ಭಾಗದ ಉಪ ವಿಭಾಗ ಎಂಬ ಅರ್ಥವನ್ನು ನಿರ್ದೇಶಿಸುತ್ತದೆ. ನೂರಕ್ಕಿಂತ ಕಡಿಮೆ ಗ್ರಾಮಗಳನ್ನೊಳಗೊಂಡ ಸಣ್ಣ ವಿಭಾಗಗಳನ್ನು ನಿರ್ದೇಶಿಸುವಲ್ಲಿ ಮಾತ್ರ ಕಂಪಣ ಪದ ಬಳಸಲಾಗಿದೆ ಎಂಬ ಅಭಿಪ್ರಾಯವಿದೆ[೬]. ಮತ್ತೊಂದು ಪ್ರಮುಖ ಸಂಗತಿಯು ಸಹ ಈ ಪ್ರದೇಶದ ಶಾಸನಗಳಲ್ಲಿ ವ್ಯಕ್ತವಾಗಿದೆ. ಅದು ಪಟ್ಟಣ ಅಥವಾ ಮುಖ್ಯ ಪಟ್ಟಣ ಎಂಬ ಹೆಸರಿನ ಕುರಿತು. ಹಗರಟಗಿ ಪಟ್ಟಣ, ಏವೂರು ಪಟ್ಟಣ, ಸಿರಿವಾಳ ಪಟ್ಟಣ ಸಗರ ಮಹಾಪಟ್ಟಣ ಉಜ್ಜಿಗವೊಳಲು ಪಟ್ಟಣ ಮತ್ತು ಕೆಂಭಾವಿ ಪಟ್ಟಣಗಳ ಉಲ್ಲೇಖಗಳು ಶಾಸನಗಳಲ್ಲಿ ದಾಖಲಾಗಿವೆ. ಬಹುಶಃ ಅದೇ ಸ್ಥಳಗಳೇ ಆಯಾ ಆಡಳಿತ ಘಟಕಗಳ ಕೇಂದ್ರಗಳಾಗಿದ್ದವು ಎಂಬುದು. ಕೆಲವೊಮ್ಮೆ ಆ ನಾಡು ವಿಭಾಗ ಅಥವಾ ಘಟಕಗಳನ್ನು ಅದರ ಮುಖ್ಯ ಪಟ್ಟಣದೊಂದಿಗೆ ಸಂಬೋಧಿಸುತ್ತಿದ್ದ ಉದಾಹರಣೆಗಳುಂಟು. ಉದಾ. ಹಗರಟಗಿ ನಾಡಿನ ಮುಖ್ಯ ಪಟ್ಟಣ ಹಗರಟಗಿ ಆಗಿತ್ತು. ಅದು ಆ ಘಟಕದ ಮುಖ್ಯ ಕೇಂದ್ರ ಹಾಗೂ ಪಟ್ಟಣವು ಸಹ ಆಗಿತ್ತು. ಆದರೆ ಅದನ್ನೇ ಸಗರನಾಡು ಘಟಕಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಗುರುತಿಸಲಿಕ್ಕಾಗದು. ಸಗರನಾಡಿನ ಮುಖ್ಯ ಕೇಂದ್ರ ಅಥವಾ ಪಟ್ಟಣ ನಿರ್ದಿಷ್ಟವಾಗಿ ಯಾವುದಾಗಿತ್ತೆಂಬುದು ಈವರೆಗೂ ವಿದ್ವಾಂಸರಲ್ಲಿ ಚರ್ಚೆಯ ವಿಷಯವಾಗಿ ಉಳಿದಿದೆ. ಒಂದೆರಡು ಶಾಸನಗಳಲ್ಲಿ ಸಗರವನ್ನು ಮಹಾಪಟ್ಟಣವೆಂದೂ ಉಲ್ಲೇಖಿಸಿರುವ ವಿವರಗಳುಂಟು. ಈ ಜಿಲ್ಲೆಯ ಇನ್ನೊಂದು ವಿಭಾಗವಾದ ಕಲ್ಲಕೆಳಗು-೫೦೦ರ ನಾಡಿನ ರಾಜಧಾನಿ ಉಜ್ಜಿಗವೊಳಲು ಎಂಬುದನ್ನು ಶಾಸನಗಳಲ್ಲಿಯೇ ಉಲ್ಲೇಖಿಸಲಾಗಿದೆ. ಆ ಉಜ್ಜಿಗವೊಳಲು ಸದ್ಯ ತೆಲಂಗಾಣ ರಾಜ್ಯದ ಮೆಹಬೂಬನಗರ ಜಿಲ್ಲೆಯ ಮಕ್ತಲ್ ತಾಲೂಕಿನಲ್ಲಿರುವ ಒಂದು ಸಣ್ಣ ಗ್ರಾಮವಾಗಿರುವ ಉಜ್ಜಲಿ ಎಂದು ಗುರುತಿಸಲಾಗಿದೆ.

ಬಹು ಮುಖ್ಯವಾದ ಇನ್ನೊಂದು ವಿಷಯವು ಪ್ರಸ್ತುತ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಅದೆಂದರೆ ನೆಲವೀಡು ಎಂಬ ವಿವರದ ಕುರಿತು ನೆಲವೀಡುಗಳು ಸಾಮ್ರಾಜ್ಯದಲ್ಲಿಯೇ ಇದ್ದಿರಬಹುದಾಗಿದೆ. ಉಪ ರಾಜಧಾನಿ ಪಟ್ಟಣಗಳಾಗಿದ್ದವು ಎಂಬ ಅಭಿಪ್ರಾಯಗಳು ದಾಖಲಾಗಿವೆ. ಕೆಲವೊಮ್ಮೆ ಅವು ರಾಜಧಾನಿಯ ಪಾತ್ರವನ್ನು ವಹಿಸಿರುವ ವಿವರಗಳುಂಟು. ಎತಗಿರಿ(ಯಾದಗಿರಿ) ಪಟ್ಟಣವು ಕಲ್ಯಾಣದ ಅರಸ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಲ್ಲಿ ಸ್ವಲ್ಪ ದಿನಗಳ ಕಾಲ ಅವನ ರಾಜಧಾನಿಯಾಗಿತ್ತು ಎಂಬ ಅಭಿಪ್ರಾಯಗಳಿವೆ. ಕಲ್ಯಾಣದ ಚಾಲಕ್ಯರ ಪ್ರಸಿದ್ಧ ಅರಸ ಆರನೆಯ ವಿಕ್ರಮಾದಿತ್ಯನು ತಾನು ಕಂಡುಕೊಂಡ ಜಯದ ದ್ಯೋತಕವಾಗಿ ಯಾಗಗಳನ್ನು ಮಾಡಿ ಎತಗಿರಿ ನೆಲೆವೀಡಿನಿಂದ ದಾನದತ್ತಿಗಳನ್ನು ನೀಡಿದನೆಂಬ ವಿವರಗಳು ಶಾಸನಗಳಲ್ಲುಂಟು[೭]. ಕಲ್ಯಾಣದ ಚಾಲುಕ್ಯರ

ಆಡಳಿತದ ಪ್ರಾರಂಭ ಕಾಲದಿಂದಲೇ ಏತಗಿರಿ ನೆಲವೀಡು ಹೆಚ್ಚಿನ ಪ್ರಾಮುಖ್ಯತೆ ಪಡೆದಿತ್ತೆಂಬ ಉಲ್ಲೇಖಗಳು ಬೇರೆ ಬೇರೆ ಗ್ರಾಮದಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ದಾಖಲಾಗಿರುವುದನ್ನು ಗಮನಿಸಬಹುದು. ಕ್ರಿ.ಶ.೧೦೨೮ರ ತೇದಿಯ ಮದ್ರಕಿ ಶಾಸನದಲ್ಲಿ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಏತಗಿರಿ ನೆಲೆವೀಡಿನೊಳೆ ವಿಜಯರಾಜ್ಯಂಗೆಯ್ಯತ್ತಮಿರೆ ಎಂಬ ವಿವರವಿದೆ[೮]. ಅಲ್ಲದೇ ಇನ್ನೊಂದು ಶಾಸನವು ಸಹ ಇಂಥದ್ದೇ ಉಲ್ಲೇಖ ನೀಡುತ್ತದೆ. ರೂಗಿಯ ಶಾಸನವು ಜಗದೇಕಮಲ್ಲನು  ರಾಜ್ಯವಾಳುತ್ತಿದ್ದಾಗ ಶ್ರೀಮಜ್ಜಯಸಿಂಘದೇವರ್ ಸುಖಸಂಕಥಾ ವಿನೋದಾದಿಂದ ರಾಜ್ಯಂಗೆಯ್ಯುತ್ತುಮಿರೆ। ಏತಗಿರಿ ನೆಲೆವೀಡಿನೋಳ್ ಎಂಬ ಉಲ್ಲೇಖವನ್ನು ನೀಡುತ್ತದೆ[೯]. ಜಗದೇಕಮಲ್ಲನು ಏತಗಿರಿ ನೆಲೆವೀಡಿನಿಂದ ಆಳುತ್ತಿದ್ದ ಸಮಯದಲ್ಲಿ ಆತನ ಮಗನಾದ ಮಹಾಸಾಮಂತನಾದ ದಾಸರಸನು ತರ್ದ್ದವಾಡಿ ಸಾಸಿರನಾಡಿನಲ್ಲಿದ್ದ ರೂವಿಗೆ ಮುಂತಾದ ಹದಿನೆಂಟು ಅಗ್ರಹಾರಗಳನ್ನು ಆಳುತ್ತಿದ್ದನೆಂದು ಶಾಸನಗಳಲ್ಲಿ  ವಿವರಿಸಲಾಗಿದೆ.

ಅದೇ ರೀತಿಯ ಉಲ್ಲೇಖಗಳನ್ನು ನೀಡುವ ಕ್ರಿ.ಶ.೧೦೭೮ ಮತ್ತು ಕ್ರಿ.ಶ.೧೦೭೯ರ ಬಳ್ಳಿಗಾವಿ(ಶಿಕಾರಿಪುರ ತಾಲೂಕು ಶಿವಮೊಗ್ಗ ಜಿಲ್ಲೆ) ಹಾಗೂ ಸಂಗಮೇಶ್ವರ(ನಂದಿಕೊಟಕೂರು, ಕರ್ನೂಲು ಜಿಲ್ಲೆ ಆಂಧ್ರಪ್ರದೇಶ) ಶಾಸನಗಳಲ್ಲಿ ಏತಗಿರಿ ನೆಲೆವೀಡಿನ ಉಲ್ಲೇಖಗಳುಂಟು[೧೦]. ಆದರೆ ಅವು ರಾಜಧಾನಿಗಳಾಗಿದ್ದವು ಅಥವಾ ಕೇವಲ ತಾತ್ಕಾಲಿಕ ಕೇಂದ್ರಗಳಾಗಿದ್ದವೊ ಎಂಬ ಅಭಿಪ್ರಾಯಗಳನ್ನು ಕೆಲವು ವಿದ್ವಾಂಸರು ಹೊಂದಿದ್ದಾರೆ. ಅರಸನು ಪ್ರಯಾಣ ಪ್ರಸಂಗದಲ್ಲಿ ನೆಲೆನಿಂತು ಅಲ್ಲಿಂದಲೇ ದಾನ ಮೊದಲಾದ ರಾಜಾಜ್ಞೆ ಹೊರಡಿಸಿದ ಸ್ಥಳಗಳೆಂದು ಅಭಿಪ್ರಾಯಿಸಲಾಗಿದೆ[೧೧]. ಆದರೆ ಈ ಅಭಿಪ್ರಾಯವು  ಸಹ ಸಂಪೂರ್ಣವಾಗಿ ಒಪ್ಪುವಂತಹವುದ್ದಲ್ಲವೆಂದೇ ಹೇಳಬಹುದು. ಈ ಕುರಿತು ಸಂಬಂಧಿಸಿದ ವಿಷಯವನ್ನು ಮುಂದಿನ ವಿವರಗಳಲ್ಲಿ  ಚರ್ಚಿಸಲಾಗಿದೆ.

ನಾಡುಗಳಲ್ಲಿದ್ದ ಕಂಪಣ ಅಥವಾ ಆಡಳಿತ ಘಟಕಗಳಲ್ಲಿರುವ ಗ್ರಾಮ ಅಥವಾ ಹಳ್ಳಿಗಳ ಸಂಖ್ಯೆಯು ನಿರ್ದಿಷ್ಟವಾಗಿಯೇನೂ ಇರಲಿಲ್ಲ. ಕೆಲವು ಸಲ ಪ್ರಮುಖ ಪಟ್ಟಣ ಅಥವಾ ನಗರಗಳಲ್ಲಿ ಒಂದು ಇಲ್ಲವೆ ಒಂದಕ್ಕಿಂತಲೂ ಹೆಚ್ಚು ಹಳ್ಳಿಗಳನ್ನೊಳಗೊಂಡ ಆಡಳಿತ ವ್ಯವಸ್ಥೆಯು ಜಾರಿಯಲ್ಲಿರುವುದನ್ನು ಶಾಸನಗಳಿಂದ ಗುರುತಿಸಬಹುದು. ಇದರಲ್ಲಿ ಆಯಾ ಪ್ರದೇಶದ ಅಗ್ರಹಾರ, ಘಟಿಕಾಸ್ಥಾನ, ಬಣಂಜು ಅಥವಾ ಬಳಂಜು ಪಟ್ಟಣ, ಭತ್ತಗ್ರಾಮ, ಶಿವಪುರಿ, ಉಭಯಪುರಿ ರಾಜಧಾನಿಗಳು ನೆಲವೀಡು ಮೊದಲಾದವು ಸೇರುತ್ತವೆಂಬ ಅಭಿಪ್ರಾಯಗಳಿವೆ[೧೨]. ಈ ಪ್ರದೇಶದಲ್ಲಿಯೂ ಸಹ ರಾಷ್ಟ್ರಕೂಟ ಕಾಲದಿಂದ ಹಿಡಿದು ಸೇವುಣ ಅರಸರ ಅಂತ್ಯದವರೆಗೂ ಇಂಥ ಆಡಳಿತ ಘಟಕಗಳ ಕುರಿತು ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ಗುರುತಿಸಬಹುದು. ಅಲ್ಲದೇ ಸಗರನಾಡು ಎಂಬ ಹೆಸರು ಮಾತ್ರ ಎಲ್ಲ ಕಾಲಕ್ಕೂ ಅಂದರೆ ಈವರೆಗೂ ಮುಂದುವರೆದುಕೊಂಡು ಬಂದಿರುವುದನ್ನು ಸಹ ಗಮನಿಸಬಹುದು.

ಪ್ರಸ್ತುತ ಯಾದಗಿರಿ ಜಿಲ್ಲೆಯಲ್ಲಿದ್ದ ಪ್ರಾಚೀನ ಆಡಳಿತ ಘಟಕಗಳಲ್ಲಿ ಮುಖ್ಯವಾಗಿ ಕಂಪಣ ಮತ್ತು ನಾಡುಗಳು ಹೆಚ್ಚು ಪ್ರಚಲಿತದಲ್ಲಿದ್ದವು ಎಂಬುದನ್ನು ತಿಳಿಯಬಹುದು. ಅಲ್ಲದೇ ಅಗ್ರಹಾರಗಳು, ಬ್ರಹ್ಮಪುರಿ, ಮಹಾಪಟ್ಟಣ, ಪಟ್ಟಣಗಳು, ಮಹಾಮನೆಗಳು, ಭತ್ತಗ್ರಾಮ, ಘಟಿಕಾಸ್ಥಾನ, ನಗರ, ತೀರ್ಥ ಹಾಗೂ ಪಾಂಡವದತ್ತಿ ಮತ್ತು ರಾಮದತ್ತಿ ಉಲ್ಲೇಖವುಳ್ಳ ಗ್ರಾಮಗಳು ಈ ಪ್ರದೇಶದಲ್ಲಿದ್ದವು ಎಂಬುದನ್ನು ಗುರುತಿಸಬಹುದು. ಆ ಕುರಿತು ಮುಂದಿನ ವಿವರಗಳಲ್ಲಿ ಚರ್ಚಿಸಲಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ಪ್ರಮುಖ ಮೂರು ಆಡಳಿತ ವಿಭಾಗಗಳಿದ್ದವು ಎಂಬುದನ್ನು ಶಾಸನ ಉಲ್ಲೇಖಗಳಿಂದ ತಿಳಿಯಬಹುದು. ಪ್ರಥಮವಾಗಿ ಸಗರನಾಡು ಹೆಚ್ಚಿನ ವಿಸ್ತಾರ ಮತ್ತು ಪ್ರಾಮುಖ್ಯತೆ ಪಡೆದಿತ್ತೆಂಬುದು ಸ್ಪಷ್ಟ. ಇದು ಪ್ರಸ್ತುತ ಸುರಪುರ, ಶಹಾಪುರ ತಾಲೂಕು ಪ್ರದೇಶ ಹಾಗೂ ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ಮತ್ತು ಸಿಂದಗಿ ತಾಲೂಕು ಹಾಗೂ ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಪ್ರದೇಶಗಳನ್ನು ಒಳಗೊಂಡ ವಿಶಾಲವಾದ ಪ್ರದೇಶವಾಗಿತ್ತು. ಹಗರಟಗಿನಾಡು ಸುರಪುರ ತಾಲೂಕು ಪ್ರದೇಶ ಹಾಗೂ ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕು ಪ್ರದೇಶದ ಕೆಲವು ಗ್ರಾಮಗಳನ್ನು ಒಳಗೊಂಡಿತು. ಕಲ್ಲ–ಕೆಳಗು ನಾಡು ಯಾದಗಿರಿ ತಾಲೂಕಿನ ಪೂರ್ವಭಾಗದ ಹಳ್ಳಿಗಳನ್ನು ಒಳಗೊಂಡ ವಿಶಾಲವಾದ ಪ್ರದೇಶವಾಗಿತ್ತು. ಇದರ ಮುಖ್ಯ ಪಟ್ಟಣ ಉಜ್ಜಿಗವೊಳಲು ಅಥವಾ ಇಂದಿನ ಉಜ್ಜಲಿ ಗ್ರಾಮವು ಆಗಿದೆಯೆಂದು ಗುರುತಿಸಲಾಗಿದೆ. ಈ ಮೂರು ನಾಡು ಅಥವಾ ಆಡಳಿತ ಘಟಕಗಳ ಕುರಿತು ವಿವರವಾಗಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

### ಆಡಳಿತ ವಿಭಾಗಗಳು

ಪ್ರಸ್ತುತ ಯಾದಗಿರಿ ಜಿಲ್ಲೆಯ ಮೂರು ತಾಲೂಕುಗಳಲ್ಲಿ ಶಹಾಪುರ ತಾಲೂಕು ಪ್ರದೇಶ ಸಂಪೂರ್ಣವಾಗಿ ಸಗರನಾಡು ಘಟಕದಲ್ಲಿ ಇದ್ದರೆ ಸುರಪುರ ತಾಲೂಕಿನ ಈಶಾನ್ಯ ಭಾಗವು ಅದೇ ನಾಡಿನಲ್ಲಿತ್ತು. ಸಗರನಾಡಿಗೆ ಹೊಂದಿಕೊಂಡೆ ಇದ್ದ ಹಗರಟಗಿನಾಡು ಸುರಪುರ ತಾಲೂಕಿನ ನೈಋತ್ಯ ಮತ್ತು ಆಗ್ನೇಯ ಭಾಗದ ಗ್ರಾಮಗಳನ್ನು ಒಳಗೊಂಡಿತ್ತು. ತೆಲಂಗಾಣ ರಾಜ್ಯಕ್ಕೆ ಹೊಂದಿಕೊಂಡಂತೆ ಲಂಬವಾಗಿ ವಿಸ್ತರಿಸಿಕೊಂಡಿರುವ ಯಾದಗಿರಿ ತಾಲೂಕಿನ ಬಹುತೇಕ ಗ್ರಾಮಗಳು ಕಲ್ಲಕೆಳಗು ನಾಡಿನಲ್ಲಿ ಕೇಂದ್ರೀಕೃತಗೊಂಡಿದ್ದವು. ಈ ತಾಲೂಕಿನ ಮಧ್ವಾರ ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ಪ್ರಸ್ತುತ ಗ್ರಾಮವು ಪ್ರಾಚೀನ ನಾಡಿನ ಪಶ್ಚಿಮದ ಮಹಾದ್ವಾರದ ಪ್ರದೇಶವಾಗಿತ್ತೆಂಬ ಅಭಿಪ್ರಾಯಗಳು ದಾಖಲಾಗಿವೆ[೨]. ಗಡಿಭಾಗದ ಹಳ್ಳಿಗಳಾಗಿರುವ ಇಡ್ಲೂರು, ಅನಪೂರ, ಪುಟ್ಪಾಕ, ಕೇಶ್ವಾರ, ಚಂಡರಕಿ ಹಾಗೂ ಗುರುಮಿಟ್ಕಲ್ ಗ್ರಾಮಗಳು ಬಹುಶಃ ಇದೇ ಪ್ರಾಚೀನ ನಾಡಿನಲ್ಲಿ ಇದ್ದ ಹಳ್ಳಿಗಳಾಗಿದ್ದಿರಬಹುದು. ಆದರೆ ಉಳಿದೆಲ್ಲ ನಾಡುಗಳಲ್ಲಿ ಸಗರನಾಡು ಹೆಚ್ಚಿನ ವಿಸ್ತಾರ ಮತ್ತು ಪ್ರಾಚೀನತೆಯಿಂದ ಕೂಡಿದ ಐತಿಹಾಸಿಕತೆಯನ್ನು ಹೊಂದಿತ್ತು ಎಂಬುದರಲ್ಲಿ ಅನುಮಾನಗಳಿಲ್ಲ.

**ಸಗರನಾಡು**

ಸಗರನಾಡು, ಸಗರಗಡ್ಡೆ, ಸಗರ ಮತ್ತು ಸಗರ ದೋಅಬ್ ಎಂಬ ಮುಂತಾದ ಹೆಸರಿನಿಂದ ಕರೆಯಲ್ಪಡುತ್ತಿದ್ದ ಈ ಪ್ರಾಚೀನ ನಾಡು ವಿಶಾಲವಾದ ವ್ಯಾಪ್ತಿಯನ್ನು ಹೊಂದಿತ್ತು. ಇದರ ಕುರಿತು ಒಂದೆರಡು ಐತಿಹ್ಯಗಳು ದಾಖಲಾಗಿವೆ. ಅವುಗಳ ಕುರಿತಿರುವ ವಿವರಗಳನ್ನು ಸ್ಥೂಲವಾಗಿ ಚರ್ಚಿಸುವ ಮೂಲಕ ಶಾಸನಗಳಲ್ಲಿ ಉಲ್ಲೇಖವಾಗಿರುವ ವಿಷಯಕ್ಕೆ ಪ್ರವೇಶಿಸುವ ಪ್ರಯತ್ನ ಮಾಡುವುದು ಸೂಕ್ತ ಎಂಬ ಅನಿಸಿಕೆಗಳ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯಗಳ ಕುರಿತು ಚರ್ಚೆಗಳನ್ನು ಮೊದಲೇ ಪ್ರಾರಂಭಿಸಲಾಗಿದೆ.

ಪ್ರಸ್ತುತ ಶಹಾಪುರ ಹಾಗೂ ಸುರಪುರ ತಾಲೂಕಿನ ಕೆಲವು ಗ್ರಾಮಗಳು ಹಾಗೂ ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂದಗಿ ಮತ್ತು ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಭಾಗಗಳನ್ನು ಸಗರನಾಡು ಆಡಳಿತ ಘಟಕವು ಹೊಂದಿತ್ತೆಂದು ಶಾಸನಗಳಲ್ಲಿರುವ ವಿವರಗಳ ಮೂಲಕ ಗುರುತಿಸಬಹುದು. ಇದರ ಭೌಗೋಳಿಕ ವ್ಯಾಪ್ತಿಯು ಸಾಮಾನ್ಯವಾಗಿ ಕೃಷ್ಣೆ-ಭೀಮೆಯ ನಡುವಿನ ಪ್ರದೇಶವಾಗಿತ್ತು. ಇದನ್ನು ಸಗರ ದೋ-ಅಬ್ ಮತ್ತು ಸಗರಗಡ್ಡೆಯೆಂತಲೂ ಸಹ ಕರೆಯಲಾಗುತ್ತದೆ. ಸಗರ ಪಟ್ಟಣವು ಈ ನಾಡಿನ ಕೇಂದ್ರವಾಗಿತ್ತು.

ಸಗರನಾಡು ಹಾಗೂ ಅದರ ರಾಜಧಾನಿ ಕುರಿತು ಒಂದೆರಡು ಪುರಾಣ ಐತಿಹ್ಯಗಳು ದಾಖಲಾಗಿವೆ. ಮಹಾಬಲಶಾಲಿಯೂ ಪರಮ ಧಾರ್ಮಿಕನೂ ಆದ ಸಗರಚಕ್ರವರ್ತಿ ಸಗರನಾಡನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂಬ ಪ್ರತೀತಿ ಇದೆ. ಪೌರಾಣಿಕ ಕಥೆಯ ಪ್ರಕಾರ ಇಕ್ಷ್ವಾಕು ವಂಶದ ಅಂಬರೀಷನೆಂಬ ರಾಜನು ಪರಮಜ್ಞಾನಿಯೂ ರಾಜರ್ಷಿಯು ಆಗಿದ್ದನು. ಆತನು ಮನುಪುತ್ರ ನಗಭಗನ ಪುತ್ರನಾದ ನಾಭಗನ ಮಗನು. ಅಂಬರೀಷನು ಬ್ರಹ್ಮಶಾಪಕ್ಕೆ ಗುರಿಯಾದನು. ಇದೇ ವಂಶದ ಸತ್ಯವ್ರತ(ತ್ರಿಶಂಕು)ನಿಗೆ ಹರಿಶ್ಚಂದ್ರನೆಂಬ ಪ್ರಖ್ಯಾತ ಮಗ ಹುಟ್ಟಿದ. ಹರಿಶ್ಚಂದ್ರನಿಗೆ ರೋಹಿತನೆಂಬ ಮಗನು ಜನಿಸಿದ. ರೋಹಿತನ ಮಗನೇ ಹರಿತ ಮತ್ತು ಈತನ ಮೊಮ್ಮಗನಾದ ಬಾಹುಕನು ಯುದ್ಧಗಳಲ್ಲಿ ಪರಾಭವಗೊಂಡು ನಿರಾಶನಾಗಿ ತನ್ನ ಮಡದಿಯರೊಡನೆ ಅರಣ್ಯವನ್ನು ಸೇರಿದನು. ಆ ಸಮಯದಲ್ಲಿಯೇ ವೃದ್ಧಾಪ್ಯದಿಂದ ಬಾಹುಕನು ಮರಣಹೊಂದಿದನು. ಆ ನಂತರ ಅವನ ಪತ್ನಿಯು ಓರ್ವ ಮಹರ್ಷಿಯ ಸಂಬಂಧದಿಂದ ಗರ್ಭವತಿಯಾದಳು. ಆಕೆಯ ಸವತಿಯರು ಅಸೂಯೆಯಿಂದ ಆಕೆಗೆ ತಿಳಿಯದ ಹಾಗೆ ವಿಷ ಉಣಿಸಿ ಭ್ರೂಣವನ್ನು ನಾಶ ಮಾಡಲು ಪ್ರಯತ್ನಿಸಿದಾಗ್ಯೂ ಗರ್ಭದ ಮೇಲೆ ಈ ವಿಷವು ಯಾವ ಪ್ರಭಾವ ಬೀರದೇ ಗರ(ವಿಷ)ವನ್ನು ಮೈ ತಳೆದು ಜನಿಸಿದ ಮಗುವೇ 'ಸಗರ'ನೆಂಬ ಹೆಸರನ್ನು ಗಳಿಸಿದನು. ಈತನೇ ಮುಂದೆ ಯಶಸ್ವೀ ಸಾಮ್ರಾಟನಾಗಿ ಸಗರ ಚಕ್ರವರ್ತಿ ಎನಿಸಿಕೊಂಡು ಸಗರನಾಡನ್ನು ಯಶಸ್ವಿಯಾಗಿ ಆಳ್ವಿಕೆ ಮಾಡಿದನೆಂಬ ಎಂಬ ವಿವರವು ಪ್ರಕಟವಾಗಿದೆ[1].

ಸಗರನ ಕುರಿತು ಇನ್ನೊಂದು ವಿವರ ಹೀಗಿದೆ. ಸೂರ್ಯವಂಶದ ಅಸಿತ ಅಥವಾ ಬಾಹುಕನ ಮಗ ಸಗರ. ಬಾಹುಕನು ವಿಷಯ ಲಂಪಟನೂ ದ್ಯೂತಾಸಕ್ತನೂ ಆಗಿದ್ದರಿಂದ ಹೈಹಯ ವಂಶೀಯರು

ಈತನಿಂದ ರಾಜ್ಯವನ್ನು ಕಿತ್ತುಕೊಳ್ಳಲು ಈತನು ತನ್ನ ಪತ್ನಿ ಯಾದವಿ ಮತ್ತು ಇನ್ನೊಬ್ಬ ಪತ್ನಿಯೊಡನೆ ಕಾಡಿಗೆ ಓಡಿಹೋದನು. ಅಲ್ಲಿಯೇ ಹಲವಾರು ವರ್ಷ ಬದುಕು ಸಾಗಿಸಿ ವಯೋ ಸಹಜ ವೃದ್ಧಾಪ್ಯದಿಂದ ಸಾವಿಗೀಡಾದನು. ಆ ವೇಳೆಗೆ ಯಾದವಿಯು ಗಂಡನ ಜೊತೆಗೆ ಆತ್ಮಾರ್ಪಣೆ ಮಾಡಿಕೊಳ್ಳುವಾಗ ಭಾರ್ಗವ ಮುನಿಯು ಆಕೆಯನ್ನು ಸಹಗಮನದಿಂದ ತಪ್ಪಿಸಿ ತನ್ನ ಆಶ್ರಮಕ್ಕೆ ಕರೆದೊಯ್ದು ರಕ್ಷಿಸುತ್ತಿರುವಾಗ ಅಲ್ಲೇ ಆಕೆ(ಸ+ಗರ=ವಿಷಸಹಿತ) ಒಬ್ಬ ಬಾಲಕನನ್ನು ಪಡೆಯಲು ಆತನಿಗೆ ಆ ಮುನಿಯು ಸಗರನೆಂಬ ಹೆಸರಿಟ್ಟನು. ಆ ಮುನಿಯು ಈತನಿಗೆ ಶಸ್ತ್ರಶಾಸ್ತ್ರಗಳೆರಡನ್ನೂ ಕಲಿಸಲು ಈತನು ಪ್ರಾಯ ಸಮರ್ಥನಾದ ಮೇಲೆ ಶತ್ರುಗಳಿಂದ ತನ್ನ ರಾಜ್ಯವನ್ನು ಕಿತ್ತುಕೊಂಡನು. ವಿಶೇಷವಾಗಿ ಹೈಹಯರನ್ನು ಸೋಲಿಸಿದ ಎಂಬ ವಿವರಗಳಿವೆ[೧೫].

ಮೇಲಿನ ಎರಡು ವಿವರಗಳನ್ನು ಗಮನಿಸಿದಾಗ ಈ ಪೌರಾಣಿಕ ಐತಿಹ್ಯ ಅಥವಾ ನಂಬಿಕೆಯಲ್ಲಿ ಚಾರಿತ್ರಿಕವಾದ ತಥ್ಯ ಎಷ್ಟಿರಬಹುದೆಂಬ ಸೂಚನೆಗಳು ಹುಟ್ಟಿಕೊಳ್ಳುತ್ತವೆ. ಈ ಕಥೆಯ ಕಾಲಮಾನ ಮೂಲತಃ ರಾಮಾಯಣ ಮಾಹಾಕಾವ್ಯಕ್ಕಿಂತ ಮುಂಚಿನದ್ದು. ಅಲ್ಲದೇ ಉತ್ತರ ಭಾರತದಲ್ಲಿದ್ದ ಪ್ರದೇಶಗಳಿಗೆ ಅನ್ವಯಿಸುವಂಥದ್ದು. ಆದರೆ ಅದರ ಕಥಾರೂಪವು ಈ ಪ್ರದೇಶದ ಸಂಗತಿಗೆ ಮೇಳೈಸಿಕೊಂಡಿರುವುದು ಚರ್ಚಾರ್ಹ ಸಂಗತಿಯಾಗಿ ಹೊಮ್ಮುತ್ತದೆ. ಬಹುಶಃ ಅಂಥದ್ದೇ ಘಟನೆಯು ಈ ಪ್ರದೇಶದಲ್ಲಿ ಘಟಿಸಿರಬಹುದೇ? ಅಥವಾ ಆಕಸ್ಮಿಕವಾಗಿ ಪೌರಾಣಿಕ ಐತಿಹ್ಯವೊಂದು ಹುಟ್ಟಿಕೊಂಡು ಈ ಪರಿಯಾಗಿ ಬೆಳೆದಿರವುದೇ ಎಂಬುದು ಕುತೂಹಲ ಸಂಗತಿಯಾಗಿ ಉಳಿದುಕೊಳ್ಳುತ್ತದೆ. ಹಾಗಾಗಿ ಈ ವಿಷಯ ಕುರಿತು ವಿವರಗಳನ್ನು ಸ್ವಲ್ಪ ದೀರ್ಘವಾಗಿ ಪ್ರಸ್ತಾಪಿಸುತ್ತಾ ಚರ್ಚೆಯನ್ನು ಪೂರ್ಣಗೊಳಿಸುವ ಪ್ರಯತ್ನ ಮಾಡಲಾಗಿದೆ.

ಸಗರನ ವಿರುದ್ಧ ಸೋತ ಹೈಹಯರ ಉಲ್ಲೇಖಗಳು ಉತ್ತರ ಭಾರತದ ಪ್ರದೇಶಗಳಲ್ಲಿ ಮಾತ್ರವಲ್ಲ ಅದೇ ಹೆಸರಿನ ಆಡಳಿತಗಾರರು ಈ ಜಿಲ್ಲೆಯ ಪರಿಸರದಲ್ಲಿಯೂ ಉಲ್ಲೇಖಗೊಂಡಿರುವುದನ್ನು ಗಮನಿಸಬಹುದು. ಇವರು ಕಲ್ಯಾಣದ ಚಾಲುಕ್ಯ ಚಕ್ರವರ್ತಿಗಳಿಗೆ ಅಧೀನರಾಗಿ, ಮಹಾಮಂಡಳೇಶ್ವರರಾಗಿ ಬೀಳಾನುವೃತ್ತಿಯಿಂದ ಆಳುತ್ತಿದ್ದುದು ಹಲವು ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಮಾಹಿಷ್ಮತೀ ಪಟ್ಟಣಪತಿಗಳಾದ ಇವರ ವಂಶಾವಳಿ ನಾಗಾಯಿ ಮತ್ತು ಹಂದರಕಿ(ಸೇಡಂ ತಾಲೂಕು) ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಮಾಹಿತಿಗಳಿವೆ[೧೬]. ಅಲ್ಲದೇ ಸುರಪುರ ತಾಲೂಕಿನ ಹನ್ನೊಂದು ಶಾಸನಗಳಲ್ಲಿ ಇವರ ಉಲ್ಲೇಖವಿರುವುದನ್ನು ಪ್ರಕಟಿಸಲಾಗಿದೆ[೧೭]. ಕಲಬುರ್ಗಿ ಜಿಲ್ಲೆಯ ಅಡಕಿ (ಸೇಡಂ ತಾಲೂಕು) ದಿಗ್ಗಾವಿ (ಕಲಬುರ್ಗಿ ತಾಲೂಕು) ಹಾಗೂ ವರ್ತೂರು (ಚಿತ್ತಾಪುರ ತಾಲೂಕು) ತಾಲೂಕಿನಲ್ಲಿ ಲಭ್ಯವಿರುವ ಶಾಸನಗಳಲ್ಲಿ ಹೈಹಯ ಮಹಾಮಂಡಳೇಶ್ವರ ಕುರಿತು ಮಾಹಿತಿಗಳು ದಾಖಲಾಗಿರುವುದುಂಟು. ಅಲ್ಲದೇ ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ವಡಗೇರಿ ಗ್ರಾಮದ ಕ್ರಿ.ಶ.೧೦೭೬ರ ಶಾಸನವು ಮಹತ್ವದ ಮಾಹಿತಿಗಳನ್ನು ನೀಡುತ್ತದೆ. ಇದು ಕಲ್ಯಾಣದ ಚಾಲುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಪಟ್ಟಬಂಧ ಮಹೋತ್ಸವದ ಕುರಿತು ವಿವರಿಸುವ ಕೆಲವೇ ಕೆಲವು ಶಾಸನಗಳಲ್ಲಿ

ಇದು ಒಂದು. ಇದೇ ಶಾಸನದಲ್ಲಿ ಯಳಿಮೇಲಿ (ಎಳಮೇಲಿ, ಆಲಮೇಲಿನ) ಸಿಂಹಪರ್ಷೆಯ ಮಂಡಳಿಯ ಮಲೆಯಾಳ ಪಂಡಿತನ ಶಿಷ್ಯ ಸೂರ್ಯರಾಶಿ ಪಂಡಿತ ಪ್ರಶಿಷ್ಯರಾದ ಶ್ರೀಮನ್ಮಹೇಶರಾಶಿ ಪಂಡಿತರ ಕಾಲ್ತೊಳೆದು ದಾನ ನೀಡಿದ ಉಲ್ಲೇಖದೆ[೧೮]. ಅಲ್ಲದೇ ಈ ಕಾರ್ಯವನ್ನು ಮಹಾಮಂಡಳೇಶ್ವರ ಅಲ್ಲಪುಲಿಯರಸನು ನೆರವೇರಿಸಿದನು. ಈತನು ಸಹ ಹೈಹಯರ ವಂಶಕ್ಕೆ ಸೇರಿದವನೆಂದು ಡಾ.ಪಿ.ಬಿ.ದೇಸಾಯಿ ಅವರು ಅಭಿಪ್ರಾಯಪಟ್ಟಿದ್ದಾರೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೧೯]. ಈ ಅಭಿಪ್ರಾಯಗಳು ಸರಿಯಾಗಿದೆಯೆಂದು ಹೇಳಬಹುದು. ಕಾರಣ ಇದೇ ಹೆಸರಿನ ಮಹಾಮಂಡಳೇಶ್ವರನಾದ ಅಲ್ಲಪುಲಿದೇವರಸನು ಸಿರಿವೊಳಲಿನ ಸಿದ್ಧ ಶಾನ್ತಿಮಯ್ಯಂಗರ ಭೂನತಪ್ಪ ಸಿರಿವೊಳಲು ಶಾನ್ತೀಶ್ವರ ದೇವರ ದೇವರ ಕಾರ್ಯಕ್ಕಾಗಿ ದಾನ ನೀಡಿರುವ ಉಲ್ಲೇಖವು ಹೋತಗಲ್ಲ ಗ್ರಾಮದ ಶಾಸನದಲ್ಲಿ ಕಂಡುಬರುತ್ತದೆ[೨೦]. ಈ ಅಲ್ಲಪುಲಿರೇವರಸು ಹೈಹಯ ಮಹಾಮಂಡಳೇಶ್ವರನಾಗಿದ್ದನೆಂಬುದು ಒಪ್ಪಬಹುದಾದ ವಿಚಾರವಾಗಿದೆ.

ಮೇಲೆ ವಿವರಿಸಿದ ಶಾಸನಗಳಲ್ಲಿ ಹೈಹಯರ ಕುರಿತು ಉಲ್ಲೇಖಗಳಿದ್ದರೂ ಹೆಚ್ಚಿನ ಪ್ರಮಾಣದಲ್ಲಿ ಅವರ ಕುರಿತು ಮಾಹಿತಿ ನೀಡುವ ಶಾಸನಧಾರಗಳು ಯಾದಗಿರಿ ಜಿಲ್ಲೆಯ ಸುರಪುರ ಮತ್ತು ಶಹಾಪುರ ತಾಲೂಕಿನಲ್ಲಿ ಕಂಡುಬರುತ್ತವೆ ಎಂಬುದು ಗಮನಾರ್ಹ ವಿಷಯ. ಅಲ್ಲದೇ ಲಭ್ಯವಿರುವ ಶಾಸನಗಳ ಆಧಾರದ ಹಿನ್ನೆಲೆಯಲ್ಲಿ ಗಮನಿಸಬಹುದಾದ ಮತ್ತೊಂದು ಸಂಗತಿ ಎಂದರೆ ಹೈಹಯ ಎಂಬ ಹಲವಾರು ಶಾಖೆಗಳು ಈ ನಾಡಿನಲ್ಲಿದ್ದವು ಎಂಬುದು. ಕಾರಣ ಕಲಬುರ್ಗಿ ಜಿಲ್ಲೆಯ ಹಂದರ್ಕಿ, ನಾಗಾವಿ ಮತ್ತು ಇತರೆ ಗ್ರಾಮಗಳಲ್ಲಿ ದೊರಕುವ ಶಾಸನಗಳಲ್ಲಿ ವ್ಯಕ್ತವಾದ ಹೈಹಯ ವಂಶದ ಹೆಸರುಗಳು ಹಾಗೂ ಯಾದಗಿರಿ ಜಿಲ್ಲೆಯ ಶಾಸನಗಳಲ್ಲಿ ನಮೂದಿತವಾದ ಹೆಸರುಗಳು ಸ್ವಲ್ಪಮಟ್ಟಿಗೆ ಬೇರೆ ಬೇರೆಯಾಗಿವೆ ಎಂದು ಅಭಿಪ್ರಾಯಿಸಬಹುದು. ಬಹುಶಃ ಅದೇ ಹೆಸರಿನ ಬೇರೆ ಬೇರೆ ಶಾಖೆಗಳು ಈ ಪ್ರದೇಶದಲ್ಲಿ ಇದ್ದವು ಎಂದು ತಿಳಿಯಬಹುದು. ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ಈ ಜಿಲ್ಲೆಯ ಮಲ್ಲಾ ಬಿ. ಗ್ರಾಮದಲ್ಲಿ ಸಿಗುವ ಶಾಸನದ(ಕ್ರಿ.ಶ.೧೦೧೪)ರಲ್ಲಿ "ಸ್ವಸ್ತಿ ಸಮಧಿಗತ ಪಂಚಮಹಾಸಬ್ದ ಮಹಾಸಾಮನ್ತಾಂ ಮನ್ನೆಯವೀರ ನನ್ನಿವೆಡಂಗಾದಿ ಸಕಳ ನಾಮಾಂಕಮಾಳಿಕಾ ಪ್ರಸಸ್ತಿ ಸಹಿತಂ ಶ್ರೀಮತು ಜನ್ದರಸಂ" ಎಂಬ ಉಲ್ಲೇಖವಿದೆ. ಇದು ಹೈಹಯರ ಬಗೆಗೆ ಹಾಗೂ ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ಈ ಜಿಲ್ಲೆಯಲ್ಲಿ ಸಿಗುವ ಮೊಟ್ಟಮೊದಲ ಶಾಸನ ಇದಾಗಿದೆ. ಕ್ರಿ.ಶ.೧೦೪೦ರ ಏವೂರು ಶಾಸನವು ಸಮಧಿಗತ ಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಮಾಹಿಶ್ಮತೀಪುರವರೇಶ್ವರ ಅಹಿಹಯ ವಂಶೋದ್ಭವ" ಎಂಬ ವಿವರಗಳನ್ನು ದಾಖಲಿಸುತ್ತದೆ[೨೧]. ಇವುಗಳ್ಲದೇ ಕೆಂಬಾವಿ, ಬೊಮ್ಮನಹಳ್ಳಿ, ಎಡೆಯಾಪುರ, ಹೆಮ್ಮಡಗಿ, ಮೂದನೂರು, ಹುಣಸಗಿ ಹಾಗೂ ಹಗರಟಗಿ ಶಾಸನಗಳಲ್ಲಿ ಹೈಹಯ ಮಹಾಮಂಡಳೇಶ್ವರರ ಕುರಿತು ಮಾಹಿತಿ ನೀಡುವ ಉಲ್ಲೇಖಗಳಿವೆ. ಅಲ್ಲದೇ ಚಂದರಸನ ಮಗ ರೇವರಸನು ಕೆಂಬಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಉಲ್ಲೇಖವನ್ನು ಬೊಮ್ಮನಹಳ್ಳಿ ಶಾಸನವು ನೀಡುತ್ತದೆ[೨೨]. ಶಾಸನದಲ್ಲಿ

ಉಲ್ಲೇಖವಾದ ಈ ಎಲ್ಲಾ ವಿವರಗಳನ್ನು ಗಮನಿಸಿದಾಗ ತಿಳಿಯಬಹುದಾದ ಸಂಗತಿ ಏನೆಂದರೆ ಸಗರನಾಡಿನಲ್ಲಿಯೇ ಆಳ್ವಿಕೆ ಮಾಡಿದ ಹೈಹಯರ ಶಾಖೆ ಇದಾಗಿತ್ತು ಎಂದು ಪರಿಭಾವಿಸಬಹುದು. ಬಹುಶಃ ಈ ಶಾಖೆಗೂ ಮತ್ತು ನೆರೆಯ ಕಲಬುರ್ಗಿ ಜಿಲ್ಲೆಯ ಪ್ರದೇಶಗಳಲ್ಲಿ ದಾಖಲಗೊಂಡಿರುವ ಹೈಹಯ ಶಾಖೆಗೂ ಯಾವ ರೀತಿಯ ಸಂಬಂಧಗಳಿದ್ದವು ಎಂಬುದು ಸ್ಪಷ್ಟವಾಗುವುದಿಲ್ಲ. ಆದರೆ ಪ್ರಾಯಶಃ ಮೂಲದಲ್ಲಿ ಅವರೆಲ್ಲರೂ ಒಂದೇ ಶಾಖೆಗೆ ಸಂಬಂಧಿಸಿದವರಾಗಿದ್ದು ಆ ನಂತರ ದಿನಗಳಲ್ಲಿ ಅವರು ಬೇರೆ ಬೇರೆ ಕವಲುಗಳಾಗಿ ಬೇರ್ಪಟ್ಟ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿರಬಹುದೆಂದು ಊಹಿಸಬಹುದು.

ಹೈಹಯರು ಶಾಸನಗಳಲ್ಲಿ ತಮ್ಮನ್ನು "ಮಾಹಿಶ್ಮತೀ ಪಟ್ಟಣಪತಿ" ಎಂದು ಕರೆದುಕೊಂಡಿದ್ದಾರೆ. ಹಾಗಾದರೆ ಈ ಮಾಹಿಶ್ಮತೀಯ ಅರ್ಥಗಳೇನು ಎಂಬುದು ಕುತೂಹಲ ವಿಷಯವಾಗಿ ಒಡಮೂಡುತ್ತವೆ. ಮಾಹಿಷ್ಯ ಎಂಬ ನಿಷ್ಪತ್ತಿಯನ್ನು ಕ್ಷತ್ರಿಯನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು ಎಂಬ ಅರ್ಥದಲ್ಲಿ ನೀಡಲಾಗಿದೆ. ಅಂದರೆ ಅವರು ಸಂಕರಗೊಂಡವರು ಅಥವಾ ಕೂಡಿಕೆಯಿಂದ ಹುಟ್ಟಿಕೊಂಡವರು ಎಂಬರ್ಥ ಬರುತ್ತದೆ. ಕ್ಷಾತ್ರ ಮತ್ತು ವ್ಯಾಪಾರ ಎರಡು ಇವರ ಮೂಲ ವೃತ್ತಿಗಳಾಗಿರಬಹುದು. ಹಾಗಾಗಿ ಅವರು ಮುಂದಿನ ದಿನಗಳಲ್ಲಿ ಸಾಮ್ರಾಜ್ಯದಲ್ಲಿ ಹೆಚ್ಚಿನ ಸ್ಥಾನಮಾನ ಪಡೆದಿರುವುದು ಸಹಜವೇ ಆಗಿದೆ.

ಹೈಹಯರ ಕುರಿತು ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ವಿವರಗಳು ವ್ಯಕ್ತವಾಗಿದ್ದರೂ ಅವರು ಬಾದಾಮಿ ಚಾಲುಕ್ಯ ಕಾಲದಿಂದ ಮೊದಲೇ ಉತ್ತರದಿಂದ ಈ ಪ್ರದೇಶಗಳಿಗೆ ಬಂದರೆಂಬ ಅನುಮಾನಗಳುಂಟಾಗುತ್ತವೆ. ಆದರೆ ಕಲ್ಯಾಣದ ಚಾಲುಕ್ಯ ಅರಸ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಿಂದ ಸೇವುಣ ಅರಸರ ಆಡಳಿತ ಕೊನೆಗೊಳ್ಳುವರಿಗೂ ಈ ಪ್ರದೇಶದಲ್ಲಿ ಹೈಹಯ ಮಹಾಮಂಡಳೇಶ್ವರ ಆಳ್ವಿಕೆ ಮಾಡಿರುವ ಬಗೆಗೆ ಉಲ್ಲೇಖಗಳಿವೆ. ಇವರು ಅರಲು-೩೦೦ ಹಾಗೂ ಮಿರಿಂತೆ-೩೦೦ರ ಕಂಪಣದಲ್ಲಿ ಇದ್ದವರೆಂದು ಅಭಿಪ್ರಾಯಿಸಲಾಗುತ್ತದೆ. ಮಿರಂತೆ ಎಂಬುದಿ ಇಂದಿನ ವರ್ತೂರು (ಕಲಬುರ್ಗಿ ಜಿಲ್ಲೆಯ, ಚಿತ್ತಾಪುರ ತಾಲೂಕು) ಆಗಿರಬೇಕೆಂದು ಡಾ.ಪಿ.ಬಿ.ದೇಸಾಯಿ ಅವರು ಊಹಿಸಿದ್ದಾರೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೨೩]. ಅಲ್ಲದೇ ಭಾರತದಲ್ಲಿಯೇ ಮೊಟ್ಟಮೊದಲಿಗೆ ಮಿತಾಕ್ಷರ ಸಂಹಿತೆ ಎಂಬ ನ್ಯಾಯಾಂಗಕ್ಕೆ ಸಂಬಂಧಿಸಿದ ಗ್ರಂಥವನ್ನು ಬರೆದ ವಿಜ್ಞಾನೇಶ್ವರನು ಇದೇ ಗ್ರಾಮದವನಾಗಿದ್ದನು ಎಂಬುದು ಬಹುತೇಕರಿಗೆ ತಿಳಿದಿರುವ ವಿಷಯವಾಗಿದೆ. ಮಿರಂತೆ ಮತ್ತು ಅರಲು ಆಡಳಿತ ಘಟಕಗಳು. ಸಗರನಾಡಿನ ಪ್ರದೇಶಕ್ಕೆ ಹೊಂದಿಕೊಂಡಂತಿರುವ ಪ್ರಾಚೀನ ಆಡಳಿತ ಪ್ರದೇಶಗಳು. ಆದರೆ ಅವರು ಸಗರ ನಾಡಿಗೆ ಯಾವ ಸಂದರ್ಭದಲ್ಲಿ ಪ್ರವೇಶಿಸಿದರು ಎಂಬುದು ಅಸ್ಪಷ್ಟವಾಗಿದೆ. ಅವರಿಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಸಿಗುವ ಶಾಸನಗಳಲ್ಲಿ ಮೊಟ್ಟಮೊದಲಿಗೆ ಉಲ್ಲೇಖಿಸಿದ್ದ ಸುರಪುರ ತಾಲೂಕಿನ ಮಲ್ಲಾ ಬಿ. ಗ್ರಾಮದ ಕ್ರಿ.ಶ.೧೦೧೪ರ ತೇದಿಯ ಶಾಸನವೆಂದು ತಿಳಿಯಬಹುದು. ಈ ಕಾಲಕ್ಕಿಂತ ಮೊದಲೇ ಅವರು ಈ ಪ್ರದೇಶದಲ್ಲಿ

ಇದ್ದಿರಬಹುದು. ಆದರೆ ಆ ಕುರಿತು ವಿವರಗಳು ಲಭ್ಯವಿಲ್ಲ. ಹಾಗಾಗಿ ಮಲ್ಲಾ ಬಿ. ಗ್ರಾಮದ ಶಾಸನವೇ ಅವರ ಬಗೆಗೆ ಉಲ್ಲೇಖಿಸುವ ಮೊದಲ ಶಾಸನವೆಂದು ತಾತ್ಕಾಲಿಕವಾಗಿಯಾದರೂ ಒಪ್ಪಬಹುದು. ಹಾಗಾದರೆ ಹೈಹಯರು ಬರುವುದಕ್ಕಿಂತ ಮೊದಲು ಸಗರನಾಡಿನಲ್ಲಿ ಬಹುಶಃ ಬೇರೆ ಯಾವುದಾದರೂ ವಂಶವೊಂದು ಆಳ್ವಿಕೆ ಮಾಡುತ್ತಿರಬಹುದು. ಪ್ರಾಯಶಃ ಅವರು ಸಗರರೇ ಆಗಿರಬಹುದೆಂದು ಪ್ರಬಲವಾಗಿ ಊಹಿಸಬಹುದು. ಅವರು ಹೈಹಯರಕ್ಕಿಂತ ಮುಂಚಿತವಾಗಿಯೇ ದಕ್ಷಿಣ ಭಾರತದ ಪ್ರದೇಶಗಳ ಕಡೆಗೆ ವಲಸೆ ಬಂದಿರಬಹುದು.

ಉತ್ತರ ಭಾರತದ ಗಂಗಾ ನದಿಯ ಬಯಲಿನಲ್ಲಿರುವಾಗ ಅವರಿಬ್ಬರೂ ಪರಸ್ಪರ ಬದ್ಧ ದ್ವೇಷಿಗಳೇ ಆಗಿದ್ದವರು. ಕಾರಣಾಂತರಗಳಿಂದ ಹೈಹಯರು ಸಹ ದಕ್ಷಿಣ ಭಾರತದ ಭೀಮರಥಿ ಪ್ರದೇಶದ ಕಡೆಗೆ ವಲಸೆ ಬಂದಿದ್ದಾರೆ. ಆ ಜನ್ಮದ ವೈರಿಗಳಾಗಿದ್ದ ಹೈಹಯರು ಮತ್ತು ಸಗರರು ಈ ನೆಲದ ಮೇಲೆ ಅಧಿಕಾರ ಸ್ಥಾಪನೆಗೆ ಬಡದಾಡಿರಬಹುದು. ಅಲ್ಲದೇ ಅಂತಿಮ ಜಯವು ಸಹ ಹೈಹಯರ ಪಾಲಾಗಿದೆ. ಆದರೆ ಅವರಿಗಿಂತ ಸಗರರು ಈ ಪ್ರದೇಶದಲ್ಲಿ ಅಚ್ಚಳಿಯದ ಛಾಪನ್ನು ಮೂಡಿಸಿದ್ದಾರೆ. ಅಲ್ಲದೇ ತಮ್ಮ ಪೂರ್ವಜರು ಹೈಹಯರು ವಿರುದ್ಧ ಉತ್ತರದಲ್ಲಿ ಜಯಪಡೆದ ವಿವರಗಳನ್ನು ಐತಿಹ್ಯದ ಮೂಲಕ ಉಳಿಸಿಕೊಂಡು ಬಂದಿದ್ದಾರೆ. ಅದೇ ಐತಿಹ್ಯ ಅಥವಾ ಪುರಾಣವನ್ನು ಈ ಪ್ರದೇಶದಲ್ಲಿ ಬೆಳೆಸಿ ಪ್ರಸರಣ ಮಾಡಿರುವ ಸಾಧ್ಯತೆಗಳುಂಟು. ಪ್ರಾರಂಭದಲ್ಲಿ ಹೈಹಯರ ಮೇಲೆ ವಿಜಯ ಪತಾಕಿಯನ್ನು ಹಾರಿಸಿದರಾದರೂ ಅಂತಿಮವಾಗಿ ಸಗರರು ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರದೇಶದಿಂದ ಹೊರದೂಡಲ್ಪಟ್ಟಿದ್ದಾರೆ. ಇಂಥ ಬದಲಾವಣೆಗಳು ನಿರ್ದಿಷ್ಟವಾಗಿ ಯಾವ ಸಂದರ್ಭದಲ್ಲಿ ನಡೆದಿರಬಹುದು ಎಂದು ಸ್ಪಷ್ಟವಾಗಿ ಹೇಳಲಿಕ್ಕಾಗದಿದ್ದರೂ ಪ್ರಾಯಶಃ ಮೌರ್ಯ ಮತ್ತು ಶಾತವಾಹನ ಕಾಲದಲ್ಲಿಯೇ ಅಥವಾ ಅದಕ್ಕಿಂತ ಮುಂಚಿತವಾಗಿಯೇ ಈ ಘಟನೆಗಳು ನಡೆದಿರುವ ಸಾಧ್ಯತೆಗಳಿವೆ. ಹಾಗಾಗಿ ಅದನ್ನು ಶಾಸನ ಅಥವಾ ನಿರ್ದಿಷ್ಟವಾದ ಆಕರ ಮಾಧ್ಯಮದ ಮೂಲಕ ನಮೂದಿಸಲು ಆಗಿರಲಿಕ್ಕಿಲ್ಲ. ಈ ವಿವರಗಳ ಹಿನ್ನೆಲೆಯಲ್ಲಿ ಸಗರನ ಕುರಿತು ಇಂಥ ಐತಿಹ್ಯಗಳು ಹುಟ್ಟಿಕೊಂಡಿರುವ ನೆಲೆಯಲ್ಲಿ ಮಂಥಿಸುವುದು ಸೂಕ್ತವೆಂದು ಅಭಿಪ್ರಾಯಿಸಬಹುದು. ಆಗಲೇ ಅಂಥ ಘಟನೆಯು ಬಾದಾಮಿ ಚಾಲುಕ್ಯ ಆಡಳಿತಾವಧಿಯ ಪೂರ್ವ ಕಾಲಾವಧಿಯಲ್ಲಿಯೇ ಅಂದರೆ ಶಾತವಾಹನ ಸಂದರ್ಭದಲ್ಲಿ ಆಗಿರಬಹುದೇ ಅಥವಾ ಅದಕ್ಕಿಂತಲೂ ಮೊದಲೇ ನಡೆದಿರುವಂತಹದ್ದು ಎಂದು ತಿಳಿಯಬಹುದು.

ಬಹಳ ದಿನಗಳ ಮುಂಚಿತವಾಗಿ ಈ ಪ್ರದೇಶಕ್ಕೆ ಬಂದು ಸ್ಥಳೀಯರೆಂದೇ ಪರಿವರ್ತಿತರಾಗಿದ್ದ ಸಗರರು ಬಹುಶಃ ಈ ಪ್ರದೇಶದಲ್ಲಿ ಅಚ್ಚಳಿಯದ ಛಾಪನ್ನು ಮೂಡಿಸಿದ್ದಾರೆ. ಹಾಗಾಗಿ ಅವರು ಆಳಿದ ಪ್ರದೇಶವು ಸಗರನಾಡಾಗಿರಬಹುದು. ಆದರೆ ಆ ನಂತರ ಬಂದ ಹೈಹಯರು ಅವರನ್ನು ಸೋಲಿಸಿ ಆ ಮೊದಲು ತಮಗಾದ ಅಪಜಯದ ಪ್ರತೀಕಾರ ತೀರಿಸಿಕೊಂಡಿರಬಹುದು. ಹಾಗಾಗಿ ರಾಜಕೀಯವಾಗಿದ್ದ ಇಂಥ ಘಟನೆಯೊಂದು ಪೌರಾಣಿಕ ಕಥನ ಮೂಲಕ ಮರುರೂಪಗೊಂಡಿರಬಹುದೆಂದು ಅಭಿಪ್ರಾಯಿಸಬಹುದು. ಹಾಗಾದರೆ ಇಲ್ಲೊಂದು ಪ್ರಶ್ನೆ

ಹುಟ್ಟಿಕೊಳ್ಳಬಹುದು. ಹೈಹಯರನ್ನು ಸೋಲಿಸಿದ ಸಗರರು ಹಾಗೂ ಆ ಸಗರ ಅರಸ ನಿರ್ದಿಷ್ಟವಾಗಿ ಯಾರು ಎಂಬುದು ಸ್ಪಷ್ಟವಾಗುವುದಿಲ್ಲ.

ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರಲ್ಲಿ ಸಗರ ವಂಶದ ಅರಸರು ಇದ್ದರೆಂಬ ಉಲ್ಲೇಖಗಳಿವೆ. ಆದರೆ ಅವರು ಪುಲಿಗೆರೆ-೩೦೦ನ್ನು ಆಳುತ್ತಿದ್ದರು. ಅವರು ತಮ್ಮನ್ನು ಸಗರನ್ವಯ ಮತ್ತು ಮಣಲರಾನ್ವಯರೆಂದು ಕರೆದುಕೊಂಡಿದ್ದಾರೆ. ಬಹುಶಃ ಇವರೇನಾದರೂ ಆ ಮೊದಲು ಅಂದರೆ ಶಾತವಾಹನ ಕಾಲದಲ್ಲಿಯೇ ಈ ಪ್ರದೇಶದಲ್ಲಿದ್ದು ಆ ನಂತರ ಕಾಲಕ್ರಮೇಣ ಬಾದಾಮಿ ಚಾಲುಕ್ಯ ಹಾಗೂ ಕಲ್ಯಾಣ ಚಾಲುಕ್ಯರ ಆಡಳಿತಾವಧಿಯಲ್ಲಿ ಪುಲಿಗೆರೆ(ಲಕ್ಷ್ಮೇಶ್ವರ) ಪ್ರದೇಶದಲ್ಲಿ ವಲಸೆ ಹೋಗುವುದರ ಮೂಲಕ ಆ ಪ್ರದೇಶದಲ್ಲಿ ವಸತೀಕರಣಗೊಂಡಿರಬಹುದೇ ಎಂದು ಊಹಿಸಬಹುದಾದ ಅವಕಾಶವುಂಟು. ಶಾಸನದಲ್ಲಿ ಉಲ್ಲೇಖಿತವಾದ 'ಮಣಲರಾನ್ವಯ' ಎಂಬ ಪದವನ್ನು ನಾಮಪದ ಸೂಚಕವಾಗಿ ತೆಗೆದುಕೊಂಡರೆ ಮಣಲ ಎಂಬುದು ವ್ಯಕ್ತಿಯ ಹೆಸರಾಗುತ್ತದೆ. ಅದನ್ನು ವಸ್ತುವಾಚಕ ಪ್ರಯೋಗದಲ್ಲಿ ನಿರ್ವಚಿಸಿದರೆ ಮಣ್ಣು ಅಥವಾ ಮರಳು ಎಂಬ ಅರ್ಥವು ಪ್ರಾಪ್ತಿಯಾಗುತ್ತದೆ. ಅಂದರೆ ಬಹುಶಃ ಅವರು ನದಿ ದಂಡೆಯ ಪ್ರದೇಶದಿಂದ(ನದಿಯನ್ನು ಸಾಗರವೆಂದು ತಿಳಿದು ಪ್ರಕಟಿಸುತ್ತಿರುವ ವಿವರಗಳಿವೆ) ಬಂದವರೆಂದು ಪರಿಭಾವಿಸಬಹುದಾಗಿದೆ. ಪ್ರಾಯಶಃ ಉತ್ತರಿಂದ ಬಂದ ಸಗರರು ಕೃಷ್ಣಾ ನಂತರ ಭೀಮಾ ನದಿಯ ದಡಗಳಲ್ಲಿ ರಾಜ್ಯ ಕಟ್ಟಿರಬಹುದು. ಭೀಮಾನದಿ ಪರಿಸರದಲ್ಲಿಯೇ ಈ ಜಿಲ್ಲೆಯ ಹೆಚ್ಚಿನ ಮಹತ್ವ ಪಡೆದಿರುವುದು ತಿಳಿದಿರುವ ಸಂಗತಿಯೇ ಆಗಿದೆ. ಈ ಪ್ರದೇಶದಲ್ಲಿ ಇದ್ದಂತಹ ಅಂದರೆ ಭೀಮಾ ನದಿಯ ಪರಿಸರದಲ್ಲಿದ್ದ ಈ ಮನೆತನವು ತಮ್ಮ ನಂತರಾವಧಿಯಲ್ಲಿ ಉತ್ತರದಿಂದಲೇ ಬಂದ ಹೈಹಯರ ಮೂಲಕ ಸೋತರೂ ಆ ವೇಳೆಗಾಗಲೇ ತಮ್ಮದೇ ಆದ ಛಾಪು ಮೂಡಿಸಿ ಈ ಪ್ರದೇಶದಲ್ಲಿ ಹೆಸರುವಾಸಿಯಾಗಿದ್ದಿರಬಹುದು. ಆದರೆ ದುರ್ದೈವಶಾತ್ ಆ ನಂತರ ಕಾಲದಲ್ಲಿ ಈ ಪ್ರದೇಶದಲ್ಲಿ ಸಗರರು ಹೆಚ್ಚಿನ ಬಲದಿಂದ ಮುಂದೆವರೆದಂತೆ ಕಾಣುವುದಿಲ್ಲ. ಅಲ್ಲದೇ ಈ ಪ್ರದೇಶದಿಂದಲೇ ನಿರ್ಗಮಿಸಿ ಪುಲಿಗೆರೆ ನಾಡಿಗೆ ವಸತೀಕರಣ ಗೊಂಡಿರಬಹುದೆಂದು ಊಹಿಸಬಹುದಾಗಿದೆ.

ಶಾತವಾಹನ ನಂತರದ ಕಾಲಾವಧಿಯಲ್ಲಿ ಘಟಿಸಿರುವ ಇಂಥ ಒಂದು ರಾಜಕೀಯ ಘಟನೆ ಮುಂದಿನ ದಿನಗಳಲ್ಲಿ ಪೌರಾಣಿಕ ಹಿನ್ನೆಲೆಯಲ್ಲಿ ರೂಪುಗೊಂಡು ಹಾಗೂ ಅದರ ವಿಸ್ತಾರವು ಹೆಚ್ಚಾಗುತ್ತಾ ಆ ಘಟನೆಯಲ್ಲಿದ್ದ ಚಾರಿತ್ರಿಕ ತಥ್ಯ ಕಡಿಮೆಯಾಗಿ ಪುರಾಣದ ಮಿಥ್ಯವು ಹೆಚ್ಚಿನ ಜನಪ್ರಿಯತೆ ಪಡೆದಿರಬಹುದು.

ಈ ಪ್ರದೇಶಕ್ಕೆ ಸಂಬಂಧಿಸಿದ ಇಂಥ ವಿವರಗಳನ್ನು ತಿಳಿದುಕೊಳ್ಳಲು ಮಂದಾಕಿನಿ ಮಹಾತ್ಮೆ ಎಂಬ ಪುರಾಣವು ಹೆಚ್ಚಿನ ವಿವರಗಳನ್ನು ನೀಡಲು ಸಹಾಯಕವಾಗುತ್ತದೆ. ಈ ಘಟನೆಗಳೆಲ್ಲವು ಸತ್ಯಯುಗದಲ್ಲಿ ನಡಿದರತಕ್ಕಂತವುಗಳು. ಮಂದಾಕಿನಿ ಮಹಾತ್ಮೆ ಅಲ್ಲದೇ ನಂದಿಕೇಶ್ವರನಾಡಿ, ಬುಧನಾಡಿ ಹಾಗೂ ಕರ್ಮವಿಪಾಕನಾಡಿ ಮುಂತಾದ ನಾಡಿ ಗ್ರಂಥಗಳಲ್ಲಿ ಸಗರನಾಡಿನ ಕುರಿತು ಕೆಲವು ಮಾಹಿತಿಗಳು ದೊರೆಯುತ್ತವೆಂದು ಅಭಿಪ್ರಾಯಿಸಲಾಗಿದೆ[೨೫].

ನವಶಿಲಾಯುಗ ಸಂಸ್ಕೃತಿಯ ಕಾಲದ ನಂತರ ಈ ಭಾಗದಲ್ಲಿ ಬೆಳೆದುಬಂದ ಬೃಹತ್ ಶಿಲಾಸಮಾಧಿ ಅಥವಾ ಕಬ್ಬಿಣಯುಗವು ಹೆಚ್ಚಿನ ವೇಗದಿಂದ ಕೂಡಿದ ತೀವ್ರತರ ಬೆಳವಣಿಗೆಗೆ ಕಾರಣವಾಯಿತು. ಏಕೆಂದರೆ ಬೃಹತ್‌ಶಿಲಾಯುಗ ಸಂಸ್ಕೃತಿಯ ಕೊನೆ ಕೊನೆಯಲ್ಲಿ ಅಂದರೆ ಕ್ರಿಸ್ತಪೂರ್ವ ೫-೪ನೇ ಶತಮಾನದ ನಂತರ ಉತ್ತರ ಭಾರತದಿಂದ ಹಲವು ಕಾರಣಗಳಿಗಾಗಿ ಅಗಣಿತ ಸಂಖ್ಯೆಯಲ್ಲಿ ಜನರು ಸಾಗರೋಪಾದಿಯಲ್ಲಿ ದಕ್ಷಿಣ ಭಾರತದ ಕಡೆಗೆ ವಲಸೆ ಬರಲಾರಂಭಿಸಿದರು. ಅಂಥ ಹತ್ತು ಹಲವು ಕುರುಹುಗಳು ನಮ್ಮ ನಾಡಿನಲ್ಲಿ ಕಂಡುಬರುತ್ತವೆ. ಕೊಪ್ಪಳ ಹಾಗೂ ಕಳ್ವಪ್ಪ(ಶ್ರವಣಬೆಳಗೊಳ) ಬೆಟ್ಟಗಳಿಗೆ ಜೈನ ಧರ್ಮದ ಅನುಯಾಯಿಗಳು ನಿರಂತರವಾಗಿ ಬಂದರೆಂಬ ವಿವರಗಳಿಗೆ. ಅಲ್ಲದೇ ಮೌರ್ಯ ಚಂದ್ರಗುಪ್ತ ಬರುವ ಮೊದಲೇ ಈ ಪ್ರದೇಶಗಳಿಗೆ ಹಲವು ಜೈನ ಸನ್ಯಾಸಿಗಳು ಬಂದಿರುವ ಬಗೆಗೆ ಬಲವಾದ ಸಂಶಯಗಳನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಬಹುಶಃ ಶಿಲಾಯುಗದಿಂದಲೂ ಅಂಥ ಪರಿಚಯಗಳು ಇದ್ದಿದ್ದರಿಂದಲೇ ಅವರು ಉತ್ತರದಿಂದ ದಕ್ಷಿಣಕ್ಕೆ ಬಂದಿರಬಹುದೆಂಬ ಅಭಿಪ್ರಾಯಗಳನ್ನು ಈ ಹಿನ್ನೆಲೆಯಲ್ಲಿ ವ್ಯಕ್ತಪಡಿಸಲಾಗಿದೆ. ಒಟ್ಟಾರೆ ಉತ್ತರದ ವಲಸೆ ರಾಜಕಾರಣ ದಕ್ಷಿಣಕ್ಕೆ ಪ್ರವೇಶಿಸಿದ ಸ್ಪಷ್ಟ ಕುರುಹುಗಳಂತೂ ಮೌರ್ಯ ಅಶೋಕನ ಕಾಲಕ್ಕೆ ನಮ್ಮ ನಾಡಿನಲ್ಲಿ ವಿಸ್ತರಿಸಿಕೊಂಡಿರುವುದನ್ನು ಎಲ್ಲರೂ ಮನಗಂಡಿದ್ದಾರೆ. ಅಂಥ ವಲಸೆ ಕಾಲಕ್ರಮೇಣ ಶಾತವಾಹನ ಕಾಲದ ನಿರಂತರತೆ ಪಡೆದು ಇದೇ ಪ್ರದೇಶದಲ್ಲಿಯೇ ಶಾಶ್ವತವಾಗಿ ಆ ಜನರು ಸಹ ನೆಲೆಗೊಂಡು ಸ್ಥಿರಗೊಳ್ಳಲು ಆರಂಭಿಸಿದರೆಂದು ಗುರುತಿಸಬಹುದು. ಈಗಾಗಲೇ ಸ್ಥಳೀಯವಾಗಿ ನೆಲೆನಿಂತಿದ್ದ ಕಬ್ಬಿಣಯುಗದ ಜನರೊಂದಿಗೆ, ಸಂಘರ್ಷ, ಅನುಸಂಧಾನ ಹಾಗೂ ವಿಸ್ತರಣೆ ಆಗುವುದರ ಮೂಲಕ ಈ ಪ್ರದೇಶದಲ್ಲಿ ಉತ್ತರದಿಂದ ಬಂದ ಜನರು ಸಹ ನೆಲೆಗೊಂಡಿದ್ದಾರೆ. ಬಹುಶಃ ಇದರ ಹೆಚ್ಚಿನ ಪ್ರಮಾಣವು ಶಾತವಾಹನ ಕಾಲದಲ್ಲಿ ಆಗಿರಬಹುದು.

ಉತ್ತರದಿಂದ ಬಂದ ಜನಸಂಸ್ಕೃತಿ ಈ ಪ್ರದೇಶದಲ್ಲಿದ್ದ ಜನರೊಂದಿಗೆ ಸಮ್ಮಿಲನಗೊಂಡಿದೆ. ಅಂಥ ಹಲವು ಸಾಕ್ಷಿಗಳು ಯಾದಗಿರಿ ಪ್ರದೇಶದಲ್ಲಿ ಕಂಡುಬಂದಿರುವುದನ್ನು ಎರಡನೆಯ ಅಧ್ಯಾಯದಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಸನ್ನತಿ, ಕಣಗಿನಹಾಳದಲ್ಲಿ ಆ ಕಾಲದ ಕುರುಹುಗಳು ಯಥೇಚ್ಛವಾಗಿ ಕಂಡುಬಂದಿದ್ದರೆ ಶಹಾಪುರ ತಾಲೂಕಿನ ಅಣಬಿ, ಸಿರವಾಳ, ಹುರುಸಗುಂಡಗಿ, ಹಾರಣಗೇರಿ ಹಾಗೂ ಗುರುಸುಣಗಿಯಲ್ಲಿ ಕಡಿಮೆ ಪ್ರಮಾಣದಲ್ಲಾದರೂ ಸಿಕ್ಕೆ ಸಿಗುತ್ತವೆ.

ಶಾತವಾಹನ ಕಾಲದಲ್ಲಿ ಉತ್ತರದಿಂದ ಬಂದ ಜನಸಂಸ್ಕೃತಿ ಆಗಲೇ ಉನ್ನತ ಮಟ್ಟದ ಉಪಕರಣಗಳ ಹಾಗೂ ಸುಧಾರಿತ ಬೇಸಾಯದ ಕ್ರಮಗಳನ್ನು ಹಾಗೂ ರಾಜ್ಯಾಡಳಿತದ ದಿಕ್ಕುದಿಸೆಗಳನ್ನು ಸಹ ಬಲ್ಲವರಾಗಿದ್ದರು. ಅಂಥದ್ದೇ ಪರಿಣಾಮಗಳನ್ನು ಬಹುಶಃ ಈ ನೆಲದಲ್ಲಿಯೂ ಮಾಡುವ ಪ್ರಯತ್ನವನ್ನು ಉತ್ತರಭಾಗದಿಂದ ಬಂದ ಜನರು ಮಾಡಿ ಯಶಸ್ವಿಯಾಗಿದ್ದಾರೆ. ಅಲ್ಲದೇ ಇಲ್ಲಿದ್ದ ಕಬ್ಬಿಣ ಯುಗದ ಸಂಸ್ಕೃತಿಯ ಜನರು ಸಹ ಹೊಸ

ಪ್ರಯೋಗಕ್ಕೆ ಒಗ್ಗಿಕೊಂಡು ಬದಲಾವಣೆಗೊಂಡಿರಬಹುದು. ಬಹುಶಃ ಇಂಥ ಕಾಲಾವಧಿಯಲ್ಲಿಯೇ ಅಂದರೆ ಶಾತವಾಹನ ಆಡಳಿತ ವಿಸ್ತರಣೆಯ ಸಂದರ್ಭದಲ್ಲಿಯೇ ಉತ್ತರ ಭಾಗದಿಂದ ಸಗರರು ಮತ್ತು ಹೈಹಯರು ಕ್ರಮವಾಗಿ ಈ ಪ್ರದೇಶದಲ್ಲಿ ವಲಸೆ ಬಂದು ಶಾಶ್ವತವಾಗಿ ನೆಲೆಯೂರಿ ವಿಸ್ತರಿಸಿಕೊಂಡಿದ್ದಾರೆ. ಅಲ್ಲದೇ ಅವರು ಹಿಡಿದಿಟ್ಟುಕೊಂಡಷ್ಟು ಭೌಗೋಳಿಕ ವ್ಯಾಪ್ತಿಯನ್ನು ತಮ್ಮ ಹೆಸರಿನಲ್ಲಿ ಕರೆದುಕೊಂಡಿರುವ ಸಾಧ್ಯತೆಗಳು ದಟ್ಟವಾಗಿವೆ. ಉತ್ತರದಿಂದ ಬಂದ ಸಗರರೇ ರಾಜಕೀಯವಾಗಿ ಈ ಭೌಗೋಳಿಕ ಕ್ಷೇತ್ರದಲ್ಲಿ ಭದ್ರ ಅಡಿಪಾಯವನ್ನು ಹಾಕಿದ್ದರೂ ಅದನ್ನು ನಿರಂತರವಾಗಿ ಮುಂದುವರೆಸಿಕೊಂಡು ಹೋಗಲು ಸಾಧ್ಯವಾಗಿಲ್ಲ. ಅವರ ಸಮಕಾಲೀನ ಅಥವಾ ತುಸು ನಂತರಾವಧಿಯಲ್ಲಿ ಬಂದ ಹೈಹಯರು ಶಾಶ್ವತವಾಗಿ ಇದೇ ಭೌಗೋಳಿಕ ವ್ಯಾಪ್ತಿಯಲ್ಲಿ ನೆಲೆಗೊಳ್ಳುವಲ್ಲಿ ಯಶಸ್ವಿಯಾಗಿ ಸಗರಗಿಂತಲೂ ಹೆಚ್ಚಿನ ಪ್ರಸಿದ್ಧಿ ಹಾಗೂ ಮಹತ್ವ ಪಡೆಯುವಲ್ಲಿ ಯಶಸ್ವಿಯಾದರೆಂದು ಅಭಿಪ್ರಾಯಿಸಬಹುದು. ಈ ತರಹದ ಅಭಿಪ್ರಾಯಗಳಿಗೆ ಪೂರಕವಾಗಿ ಈ ವಿವರವನ್ನು ಕಟ್ಟಿಕೊಡಲಾಗಿದೆ[26].

ಆದರೆ ಸಗರ ಅಥವಾ ಸಗರಾದ್ರಿ ಕುರಿತಂತೆ ವಿವರಿಸುವ ಲೇಖನವೊಂದರಲ್ಲಿ[27]. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ಕಲಚೂರಿಗಳ ಕಾಲಾವಧಿಯಲ್ಲಿ ತುಂಬಾ ನಿಷ್ಠಾವಂತ ಪ್ರಭಾವಶಾಲಿ ಮಾಂಡಲಿಕರಾಗಿ ಹೆಸರುಗಳಿಸಿರುವ ಸಗರ ವಂಶಜರ, ಶಾಖೆಯವರಾದ ಹೈಹಯರು. ಈ ಪ್ರದೇಶದಲ್ಲಿ ಸಮರ್ಥ ಆಡಳಿತಗಾರರಾಗಿ ಪ್ರಭುನಿಷ್ಠೆ ಮೆರೆದವರು. ಮಣಲೇರ ಕುಲಕ್ಕೆ ಸಗರ ಕುಲವೆಂದೂ ಕರೆಯುತ್ತಾರೆ. ಈ ಮಣಲೇರರು ದಕ್ಷಿಣದಿಂದ (ಗಂಗರ ಪ್ರದೇಶದಿಂದ) ಉತ್ತರದ ಪುಲಿಗೆರೆಯ ಕಡೆಗೆ ಬಂದು ಆಡಳಿತ ನಡೆಸಿದವರು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ[28]. ಆದರೆ ಈ ವಿವರಗಳು ಒಪ್ಪುವಂತವುಗಳಲ್ಲ. ಕಾರಣ ಶಾಸನಗಳಲ್ಲಾಗಲಿ ಹಾಗೂ ಆ ಕಾಲಕಾಲಕ್ಕಾಗಲೇ ರೂಪಗೊಂಡಿದ್ದ ಪುರಾಣ ಐತಿಹ್ಯಗಳಲ್ಲಾಗಲಿ ಹೈಹಯರು ಸಗರವಂಶಜರಾಗಿದ್ದರು ಎಂಬ ತೃಣ ಸಮಾನ ಸೂಚನೆಯೂ ಸಹ ಶಾಸನ ಹಾಗೂ ಇತರೆ ಮಾಹಿತಿಗಳಲ್ಲಿ ದಾಖಲಾದಂತಿಲ್ಲ. ಹೈಹಯರು ತಮ್ಮನ್ನು ಮಾಹಿಷ್ಮಾತೀ ಪಟ್ಟಣ ವಾಸಿಗಳೆಂದೇ ಕರೆದುಕೊಂಡಿದ್ದಾರೆ. ಅಲ್ಲದೇ ಸಗರರು ಸಹ ತಮ್ಮನ್ನು 'ಸಗರಾನ್ವಯ ಅಥವಾ ಮಣಲರಾನ್ವಯ'ರೆಂದೆ ಸಂಭೋಧಿಸಿಕೊಂಡಿದ್ದಾರೆ. ಹಾಗಾಗಿ ಅವರಿಬ್ಬರನ್ನೂ ತಳಕುಹಾಕುವುದು ಅತಾರ್ಕಿಕ ವಾದದೆನಿಸುತ್ತದೆ.

ಸಗರನಾಡಿನ ಕುರಿತು ಹತ್ತು ಹಲವು ಶಾಸನಗಳು ಉಲ್ಲೇಖ ನೀಡುತ್ತವೆ. ಆದರೆ ಅವುಗಳನ್ನು ಮೇಲೆ ಉಲ್ಲೇಖಿತ ಅಭಿಪ್ರಾಯವನ್ನು ಬೆಂಬಲಿಸುವ ಒಂದೇ ಒಂದು ಅಂಶವು ಸಹ ದಾಖಲುಗೊಂಡಿಲ್ಲ. ಪ್ರಸ್ತುತ ಲಭ್ಯವಿರುವ ಶಾಸನಗಳಲ್ಲಿಯೇ ಈ ಜಿಲ್ಲೆಯಲ್ಲಿಯೇ ಸಿಗುವ ಅತೀ ಪ್ರಾಚೀನ ಶಾಸನ ಎಂದರೆ ಸಿರವಾಳದಲ್ಲಿರುವ ಮಲ್ಲಿಕಾರ್ಜುನ ದೇವಾಲಯದ ಮುಂದಿಟ್ಟಿರುವ ಶಾಸನ. ಅಕಾಲವರ್ಷನೆಂಬ ಬಿರುದುಳ್ಳ ರಾಷ್ಟ್ರಕೂಟ ಮೂರನೆಯ

ಕೃಷ್ಣನ(ಕ್ರಿ.ಶ.೯೮೯–೯೬೭) ಕಾಲದ ಕ್ರಿ.ಶ.೯೪೦ರ ತೇದಿಯುಳ್ಳ ಈ ಆಕರವು ಸಗರನಾಡ ಗಾವುಂಡ ಚಂದಯ್ಯನಿಗೆ ಊರಿನ ಕೆಲವರು ಹಣವನ್ನು ಕೊಟ್ಟು ಭೂಮಿಯನ್ನು ಖರೀದಿಸಿ ಅದನ್ನು ದಾನವಾಗಿ ಬಿಟ್ಟ ಉಲ್ಲೇಖ ನೀಡುತ್ತದೆ. ಅಲ್ಲದೇ ಬುದ್ಧನೆಂಬ ಹೆಸರಿನ ಒಬ್ಬ ವ್ಯಕ್ತಿಯು ಎಡದೊರೆಯನ್ನು ಅರಸ ಕೃಷ್ಣನ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದ ಎಂಬ ವಿವರಣೆ ದಾಖಲಾಗಿದೆ[೨೯]. ಈ ಶಾಸನದ ವಿವರಗಳಿಂದ ತಿಳಿಯಬಹುದಾದ ಮುಖ್ಯ ಸಂಗತಿಗಳೆಂದರೆ ಸಗರನಾಡಿನ ಉಲ್ಲೇಖ ರಾಷ್ಟ್ರಕೂಟ ಕಾಲದಲ್ಲಿ ಇದ್ದಿರುವುದು. ಅಲ್ಲದೇ ಅದರ ಆಳ್ವಿಕೆಯು ನಳಗಾವುಂಡನ ಕೈಯಲ್ಲಿರುವುದು. ಬಹುಶಃ ಅದು ಆ ವೇಳೆಗಾಗಲೇ ಇನ್ನೂ ಮಹಾಮಂಡಳೇಶ್ವರ ಸ್ಥಾನಮಾನ ಹೊಂದಿದ್ದ ಆಡಳಿತಗಾರನು ನಿರ್ವಹಿಸಬಹುದಾದ ವಿಸ್ತಾರವನ್ನು ಸಗರ ನಾಡಿನ ವ್ಯಾಪ್ತಿಯು ಪಡೆದಿತ್ತೊ ಇಲ್ಲ ಎಂಬುದು. ಅಲ್ಲದೇ ಮೂರನೆಯ ಕೃಷ್ಣನು ಸಹ ಆಗತಾನೆ ಅಂದರೆ ಕ್ರಿ.ಶ.೯೩೯ರಲ್ಲಿ ಸೌರ್ವಭೌಮ ಪಟ್ಟಕ್ಕೇರಿದ್ದನು. ಸಗರನಾಡಿನ ಸರಹದ್ದಿಗೆ ಹೊಂದಿಕೊಂಡಂತಿರುವ ಅರಲು-೩೦೦ರ ಪ್ರಾಂತದಲ್ಲಿದ್ದ ಮಾನ್ಯಖೇಟ ಪಟ್ಟಣವು ಈ ರಾಷ್ಟ್ರಕೂಟ ದೊರೆಯ ಹಿಡಿತಕ್ಕೆ ಆಗತಾನೆ ಒಳಪಟ್ಟಿತ್ತು. ಈತನ ಆಡಳಿತಕ್ಕೆ ಬಹುಶಃ ಈ ಸಗರನಾಡು ಸಹ ಸೇರಿದ್ದಿರಬಹುದು. ಆದರೆ ಅದು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಹೊಂದಿದಷ್ಟು ವಿಸ್ತಾರವನ್ನು ಆ ಮೊದಲು ಆಳ್ವಿಕೆ ಮಾಡಿದ ರಾಷ್ಟ್ರಕೂಟರ ಕಾಲದಲ್ಲಿ ಹೊಂದಿರಲಾರದು. ಹಾಗಾಗಿ ಆ ಪ್ರದೇಶದ ಆಡಳಿತ ನಿರ್ವಹಣೆಯು ಒಬ್ಬ ನಳಗಾವುಂಡನ ಅಧಿಕಾರವು ಮೊದಮೊದಲು ಕಿರು ವ್ಯಾಪ್ತಿ ಮಾತ್ರ ಸೀಮಿತವಾಗಿತ್ತು. ಇದೇ ಶಾಸನದಲ್ಲಿ ಎಡದೊರೆ ನಾಡಿನ ಸಾಮಂತರಸ ಬುದ್ಧನ ಹೆಸರನ್ನು ಉಲ್ಲೇಖಿಸಲಾಗಿದೆ. ಆದ್ದರಿಂದ ಸಗರನಾಡಿನ ನಳಗಾವುಂಡ ಎಡದೊರೆ ನಾಡಿನ ಸಾಮಂತನ ಅಧೀನವಾಗಿ ಸಗರ ನಳ ಗಾವುಂಡನು ಆಳುತ್ತಿದ್ದಿರಬೇಕು.

ಎಡದೊರೆ ಅಥವಾ ಎಡತೊರೆ ಇಚ್ಛಾಸಿರ ಪ್ರದೇಶವು ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶವಾಗಿತ್ತು. ಮುಂದೆ ಇದೇ ಪ್ರದೇಶವು ರಾಯಚೂರು ದೋಅಬ್ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯಿತು. ಅಲ್ಲದೇ ಯಾದಗಿರಿ ಜಿಲ್ಲೆಯ ಭೀಮಾ ಮತ್ತು ಕೃಷ್ಣಾನದಿಗಳ ನಡುವಿನ ಪ್ರದೇಶವು ಸಗರ ದೋಅಬ್ ಎಂಬ ಹೆಸರಿನಿಂದ ಇನ್ನೂ ಹೆಚ್ಚಿನ ಪ್ರಸಿದ್ಧಿಗೆ ಬಂದಿತೆಂದು ಹೇಳಬಹುದು. ಯಾದಗಿರಿ ಜಿಲ್ಲೆಯು ಸುರಪುರ ತಾಲೂಕಿನ ಏವೂರು ಗ್ರಾಮವು ಸಹ ಇದೆ ಎಡದೊರೆ ನಾಡಿನಲ್ಲಿ ಇದ್ದಿರುವ ಉಲ್ಲೇಖಗಳಿವೆ[೩೦]. ಈ ಶಾಸನದಿಂದ ಮುಖ್ಯವಾಗಿ ತಿಳಿಯಬೇಕಾದ ಸಂಗತಿ ಏನೆಂದರೆ ಆ ಕಾಲದಲ್ಲಿ ಸಗರನಾಡು ಹೊಂದಿರಬಹುದಾದ ವ್ಯಾಪ್ತಿ ಹಾಗೂ ಮಹತ್ವವನ್ನು ಮನಗಾಣಬಹುದು. ಸಿರವಾಳದ ಈಶ್ವರ ದೇವಾಲಯದ ಮುಂಭಾಗದಲ್ಲಿರುವ ಈ ಶಾಸನದಲ್ಲಿ ಉಲ್ಲೇಖವಾದ ದಾನಗಳು ಯಾವ ದೇವಾಲಯಕ್ಕೆ ನೀಡಲಾಯಿತು ಎಂಬ ವಿವರಣೆ ನೀಡುವುದಿಲ್ಲ. ಅಲ್ಲದೇ ಸಿರಿವಾಳವನ್ನು

ಸಿರಿವೊಳಲು ಎಂಬ ಹೆಸರಿನಿಂದ ಉಲ್ಲೇಖಿಸಿದೆ. ಈಗಾಗಲೇ ಇದೇ ಅಧ್ಯಾಯದ ಕೆಲವು ಹಿಂದಿನ ಪುಟಗಳಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಸಗರನಾಡಿನ ಪ್ರಾರಂಭ ಹಾಗೂ ವಿಸ್ತಾರ ಕುರಿತಂತೆ ಮಾಡಿದ ಚರ್ಚೆಗಳಿಗೆ ಈ ಶಾಸನವು ಸಹ ಹೆಚ್ಚಿನ ಇಂಬನ್ನು ನೀಡಿದಂತಾಗುತ್ತದೆ.

ಸಗರನಾಡು ಕುರಿತಂತೆ ಈ ಜಿಲ್ಲೆಯ ವ್ಯಾಪ್ತಿಯ ಆಚೇಗಿನ ಪ್ರಾಚೀನ ಆಡಳಿತ ವಿಭಾಗಗಳಲ್ಲಿರುವ ಶಾಸನಗಳಲ್ಲಿಯೂ ಸಹ ಹಲವು ಉಲ್ಲೇಖಗಳು ಬಂದಿದ್ದುಂಟು[೩೧]. ಅಲ್ಲದೇ ಸುರಪುರ ತಾಲೂಕಿನ ವಿವಿಧ ಗ್ರಾಮಗಳಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಈ ವಿವರಗಳು ದಾಖಲಾಗಿವೆ. ಆ ಗ್ರಾಮಗಳ ವಿವರ ಈ ಕೆಳಗಿನಂತಿದೆ. ಎಡೆಯಾಪುರ[೩೨] ಏವೂರು(ಅದೇ-೧೩), ಕಡಚೂರು(ಅದೇ-೨೫) ಬಿಜಾಸಪುರ(ಅದೇ-೪೫) ರಾಜನಕೋಳೂರು(ಅದೇ-೭೬) ಹಾಗೂ ಹೆಮ್ಮಡಗಿ(ಅದೇ-೯೮) ಶಾಸನಗಳಲ್ಲಿ ಸಗರನಾಡು ಎಂಬ ಉಲ್ಲೇಖವಿದೆ. ಸಗರ-೩೦೦ರ ಉಲ್ಲೇಖವು ಏವೂರು(ಅದೇ-೮ ಮತ್ತು ೧೧) ಕೆಂಬಾವಿ(ಅದೇ-೩೧), ತಿಂಥಣಿ(ಅದೇ-೩೭) ಮತ್ತು ಹಾವಿನಾಳ(ಅದೇ-೯೨) ಗ್ರಾಮಗಳಲ್ಲಿರುವ ಶಾಸನಗಳಲ್ಲಿ ವ್ಯಕ್ತವಾಗಿವೆ. ಅದರಂತೆ ಸಗರ-೫೦೦ ಉಲ್ಲೇಖವು ಎಡೆಯಾಪುರ(ಅದೇ-೩) ಏವೂರು(ಅದೇ-೧೭) ಮೂದನೂರು(ಅದೇ-೫೯,೬೦,೬೧ ಮತ್ತು ೬೭) ಹಾಗೂ ಯಾಳಗಿ(ಅದೇ-೭೩) ಗ್ರಾಮಗಳಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು.

ಸಗರ-೫೦೦ ಅಥವಾ ವೈನೂರಾಂಬಾಡದ ಉಲ್ಲೇಖವು ಹೆಚ್ಚಾಗಿ ಕಲ್ಯಾಣದ ಚಾಲುಕ್ಯ ಅರಸ ಮೂರನೆಯ ಸೋಮೇಶ್ವರನ ಕಾಲಾವಧಿಯಿಂದಲೇ ವ್ಯಕ್ತಗೊಂಡಿರುವುದನ್ನು ವಿಶೇಷವಾಗಿ ಗಮನಿಸಬಹುದು[೩೩]ಮುಂದಿನ ದಿನಗಳಲ್ಲಿ ಅದೇ ಸಂಖ್ಯೆಯ ಹೆಚ್ಚು ಚಾಲ್ತಿಯಲ್ಲಿದ್ದಂತೆ ಕಾಣುತ್ತದೆ. ಅಲ್ಲದೇ ಇದು ಐದನೂರಾಗಿ ವಿಸ್ತಾರಗೊಂಡಿದ್ದು ಖಚಿತವಾಗಿ ಯಾಕೆ, ಯಾವಾಗ ಮತ್ತು ಹೇಗಾಯಿತು ಎಂಬುದು ತಿಳಿದುಬಂದಿರುವುದಿಲ್ಲ ಎಂದು ಅಭಿಪ್ರಾಯಿಸಲಾಗಿದೆ.

ಇಂಥ ಅಭಿಪ್ರಾಯ ಅಥವಾ ಅನಿಸಿಕೆಗಳಿಗೆ ಕೊಡಬಹುದಾದ ಸಂಭಾವ್ಯ ವಿವರಗಳೆಂದರೆ ಬಹುಶಃ ಚತುರತೆಯಿಂದ ಆಡಳಿತ ನಿರ್ವಹಿಸಿದ ಮಹಾಮಂಡಳೇಶ್ವರರು ಈ ವಿಸ್ತರಣೆಗಳಿಗೆ ಕಾರಣವಾಗಿರಬಹುದೆಂದು ಹೇಳಬಹುದು. ಈ ಭಾಗದಲ್ಲಿ ನೂರಾರು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಆಳಿದ ಮಹಾಮಂಡಳೇಶ್ವರರಾದ ಹೈಹಯರು ಇಂಥದೊಂದು ವಿಸ್ತರಣೆಗೆ ಬಹುಮುಖ್ಯ ಕಾರಣಕರ್ತರಾಗಿರಬಹುದು. ಅವರು ಪ್ರಾರಂಭ ಕಾಲದಿಂದಲೂ ಅಂದರೆ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಿಂದ ಯಾದವ(ಸೇವುಣ)ರ ಕೊನೆಯ ಅರಸರ ಆಳ್ವಿಕೆಯುದ್ಧಕ್ಕೂ ಅಭಾದಿತವಾಗಿ ಈ ಪ್ರದೇಶದಲ್ಲಿ ಆಡಳಿತ ನಿರ್ವಹಿಸಿರುವ ಬಗೆಗೆ ಸಾಕಷ್ಟು ಪ್ರಮಾಣದಲ್ಲಿ ಮಾಹಿತಿಗಳು ಲಭ್ಯವಾಗುತ್ತವೆ. ಯಾವುದೇ ಸಾಮ್ರಾಜ್ಯ ಶಾಹಿಗಳು ಅಧಿಕಾರ ಪಡೆಯಲಿ ಅಥವಾ ಯಾವುದೇ ರಾಜ ಪಟ್ಟವೇರಲಿ ಅವರಿಗೆ ತಮ್ಮ ಅಚಲವಾದ

ನಿಷ್ಠೆಯನ್ನು ತೋರಿಸುತ್ತಾ ಸದಾಕಾಲ ತಮ್ಮ ಆಳ್ವಿಕೆಯನ್ನು ಭದ್ರಗೊಳಿಸಿಕೊಳ್ಳುತ್ತಾ ಬಂದಿರುವ ವಿವರಗಳನ್ನು ಗಮನಿಸಬಹುದು. ಸುಸ್ಥಿರದಿಂದ ರಾಜ್ಯಭಾರ ಮಾಡಿ ದೇಣಿಗೆ ಮತ್ತು ಸಹಾಯವನ್ನು ಹೆಚ್ಚಿನ ಪ್ರಮಾಣದಲ್ಲಿ ಸಾಮ್ರಾಜ್ಯದ ಪ್ರಮುಖ ರಾಜರುಗಳ ಅಣತಿಯಂತೆ ನೀಡಿದ್ದರಿಂದ ಅವರ ಕಾರ್ಯಾಡಳಿತ ಮೆಚ್ಚಿದ ರಾಜರು ಅವರಿಗೆ ಭೌಗೋಳಿಕವಾಗಿಯೂ ವಿಸ್ತರಣೆಗೊಳ್ಳುವಂತೆ ಸಹಕಾರ ನೀಡಿರಬಹುದು. ಉದಾಹರಣೆಗೆ ಏವೂರು, ಕೆಂಬಾವಿ ಹಾಗೂ ಮೂದನೂರು ಚಿಕ್ಕ ಆಡಳಿತ ಘಟಕಗಳು ಮೊದಲು ಮೊದಲು ಬೇರೆ ಬೇರೆ ವಿಭಾಗಗಳಲ್ಲಿದ್ದರೂ ಕ್ರಮೇಣ ಅವು ಸಹ ಸಗರನಾಡಿನ ವ್ಯಾಪ್ತಿಯೊಳಗೆ ಸೇರಿಕೊಂಡಿದ್ದಿರುವ ಬಗೆಗೆ ಶಾಸನಗಳು ಸೂಚನೆ ನೀಡುತ್ತವೆ. ಆದರೆ ಸಗರನಾಡು ಹೆಚ್ಚಿನ ವಿಸ್ತರಣೆ ಪಡೆದಿದ್ದು ಮಾತ್ರ ಹನ್ನೆರಡನೆಯ ಶತಮಾನದ ಮಧ್ಯಾವಧಿಯ ನಂತರವೇ ಎಂಬುದು ಸ್ಪಷ್ಟ..

ಜೇವರ್ಗಿ ತಾಲೂಕಿನ ಯಡ್ರಾಮಿಯು ಸಗರ-೫೦೦ರಲ್ಲಿದ್ದಿರುವ ಬಗೆಗೆ ಶಾಸನಗಳು ಮಾಹಿತಿ ನೀಡುತ್ತವೆ[೫೪]. ಇದು ಕಾಳಾಮುಖ ಸಿಂಹಪರ್ಷೆಯ ಬಹುಮುಖ್ಯ ಕೇಂದ್ರವಾಗಿತ್ತಲ್ಲದೆ ಇದು ಹೈಹಯರ ಅಧೀನಕ್ಕೊಳಪಟ್ಟ ಕಂಪಣವಾಗಿತ್ತು.

ಶಹಾಪೂರ ತಾಲೂಕಿನ ಗ್ರಾಮಗಳಲ್ಲಿರುವ ಕೆಲವು ಶಾಸನಗಳಲ್ಲೂ ಸಹ ಈ ನಾಡಿನ ಕುರಿತು ಉಲ್ಲೇಖಗಳುಂಟು. ಕ್ರಿ.ಶ.೧೦೫೧ರ ಭೀಮರಾಯನಗುಡಿ[೫೫] ಶಾಸನವು ಸಗರ ಮುನ್ನೂರರ ಉಲ್ಲೇಖ ನೀಡುತ್ತದೆ. ಕ್ರಿ.ಶ.೯೩೯ರ ಸಿರವಾಳ[೫೬] ಶಾಸನದಲ್ಲಿ ಸಗರನಾಡು ಎಂಬ ಉಲ್ಲೇಖವಿದೆ. ಅದೇ ಗ್ರಾಮದ ಕ್ರಿ.ಶ.೧೫೩೭ರ ಶಾಸನವು ಸಹ ಸಗರನಾಡಿನ ಕುರಿತು ಉಲ್ಲೇಖ ನೀಡುತ್ತದೆ. ಕ್ರಿ.ಶ.೧೦೬೭ರ ತೇದಿಯ ಸಂಗಮ[೫೭] ಹಾಗೂ ಅದೇ ಗ್ರಾಮದ ಕ್ರಿ.ಶ.೧೧೪೩ರ ತೇದಿಯ ಶಾಸನಗಳು ಸಗರಮ್ಮೈಜ ಮನುಭಯ ಸಾಮ್ಯಂಬೆರಸು ಸುಖಸಂಕಥಾ ವಿನೋದದಿಂದನಾಳ್ದು ರಾಜ್ಯಂಗೆಯ್ಯುತ್ತಮಿರೆ ಧರ್ಮ್ಮಚಿತ್ತರಾಗಿ ಎಂಬ ಉಲ್ಲೇಖವನ್ನು ನೀಡುತ್ತದೆ.[೫೮] ಕ್ರಿ.ಶ.೧೧೮೫ರ ತೇದಿಯ ಹೋತಗಲ್ ಶಾಸನದಲ್ಲಿಯೂ ಸಹ ಸಗರವೈನೂರು ಎಂಬ ಉಲ್ಲೇಖ ದಾಖಲಾಗಿದೆ[೫೯] ಲ್ಲದೇ ದೋರನಹಳ್ಳಿ ಮದ್ರಕಿ ಹಾಗೂ ಸಗರ ಗ್ರಾಮಗಳಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ಸಹ ಸಗರನಾಡಿನ ಬಗೆಗೆ ಉಲ್ಲೇಖಗಳಿರುವುದನ್ನು ಗುರುತಿಸಬಹುದು.

ಸಗರನಾಡಿನಲ್ಲಿ ಪ್ರಮುಖವಾಗಿ ಕೆಂಬಾವಿ, ಮುದನೂರು, ಯಡ್ರಾಮಿ(ಜೇವರ್ಗಿ ತಾಲೂಕು) ಬಳಂಬಟ್ಟೆ(ಬಳಬಟ್ಟಿ-ಜೇವರ್ಗಿ ತಾಲೂಕು) ಏವೂರು, ಶಿವಪುರ, ಸಗರ, ಹೆಮ್ಮಡಗಿ, ತಿಂಥಣಿ ಸಿರವರ, ಕಂನಡನೂರು, ಹಾಲಂಗೇರಿ, ಅರಕೇರಿ, ಎಡೆಯಾಪುರ, ಮದ್ರಕಿ, ಹಾರಣಗೇರಿ, ಮುಡಬಾಳ, ಸಗರ, ಹಾಲಂಗೇರಿ ಗ್ರಾಮ ಆಡಳಿತ ಘಟಕಗಳ ವ್ಯಾಪ್ತಿಗಳಲ್ಲಿರುವ ಹಳ್ಳಿಗಳು ಸಹ ಸಗರನಾಡಿನ ಆಡಳಿತ ವಿಭಾಗದಲ್ಲಿ ಸೇರಿದ್ದವು. ಅದರಲ್ಲಿ ಕೆಂಬಾವಿ ಮತ್ತು ಮುದನೂರು ಗ್ರಾಮಾಡಳಿತವು ಆ ನಂತರದ ಕಾಲದಲ್ಲಿ ಸಗರ ನಾಡಿನಲ್ಲಿ ಸೇರಿದಂತೆ ತೋರುತ್ತವೆ.

ಸಗರನಾಡಿಗೆ ಸಗರ ಪಟ್ಟಣವೇ ರಾಜಧಾನಿಯಾಗಿತ್ತು. ಅದರ ಕುರಿತು ಹಲವು ಜಿಜ್ಞಾಸೆಗಳನ್ನು ಕೆಲವರು ವ್ಯಕ್ತಪಡಿಸಿದ್ದಾರೆ. ಆ ಸಗರ ಯಾವುದು ಎಂಬ ಕುತೂಹಲಗಳು ಕೆಲವು ಗ್ರಂಥಗಳಲ್ಲಿ ದಾಖಲಾಗಿವೆ. ಈಗ ನಾವು ಕಾಣುತ್ತಿರುವ ಊರುಗಳು ಮೂರು. ಒಂದು ಹಳೆಯ ಸಗರ, ಶಹಾಪುರ ಪಟ್ಟಣಕ್ಕೆ ಹೊಂದಿಕೊಂಡಂತೆ ಇರುವ ಪ್ರದೇಶ. ಇನ್ನೊಂದು ಶಹಪುರ ಪಟ್ಟಣವೇ ಹಾಗೂ ಮೂರನೆಯದು ಹೊಸಸಗರ. ಇದು ಶಹಾಪುರ ಪಟ್ಟಣದಿಂದ ಸುಮಾರು ಹತ್ತು ಮೈಲಿ ಅಂತರದಲ್ಲಿರುವ ಗ್ರಾಮ. ಇವುಗಳಲ್ಲಿ ಪುರಾತನ ಸಗರ ಯಾವುದು? ಎಂಬ ಪ್ರಶ್ನೆ ತಲೆದೋರುತ್ತದೆ. ಸಗರಾದ್ರಿಯ ತಪ್ಪಲಲ್ಲಿ ವಿಸ್ತೃತವಾಗಿ ಬೆಳೆದಿದ್ದ 'ಸಗರ' ನಗರವೇ ಪುರಾತನ ಸಗರವೆಂದು ಕಂಡುಬರುತ್ತದೆ. 'ಪುಣ್ಯಾಸ್ರವ' ಬರೆದ ಮಾಸಿವಾಳದ ನಾಗರಾಜ ಎಂಬ ಕವಿಯು ತನ್ನ ಗ್ರಂಥದಲ್ಲಿ ಸಗರ ನಗರದ ಶ್ರೇಷ್ಠಿಗಳು ತನಗೆ ಕಾವ್ಯವೊಂದನ್ನು ಬರೆಯಲು ಕೇಳಿಕೊಂಡರೆಂದೂ ಹೇಳಿದ್ದಾನೆ. ಹಾಗಾಗಿ ಈಗಿನ ಶಹಪುರ ಮತ್ತು ಹಳೆಯ ಸಗರ ಇದೇ ಪುರಾತನ ಸಗರವಾಗಿರಲು ಯಾವ ಅನುಮಾನ ಪಡೆಯಬೇಕಾಗಿಲ್ಲ. ಮೊಗಲ್ ಚಕ್ರವರ್ತಿಯಿಂದ ದಾಳಿಯಲ್ಲಿ ಪಾಳುಬಿದ್ದ ಸಗರ, ಆದಿಲ್‌ಶಾಹೀ ಅರಸರ ಕಾಲಕ್ಕೆ ಷಾಹಪುರ(ಶಹಪುರ)ವಾಯಿತೆಂಬ ಅಭಿಪ್ರಾಯಗಳು ದಾಖಲಾಗಿವೆ[೮].

ಶ್ರೀಯುತ ಕಪಟರಾಳ ಕೃಷ್ಣರಾಯರು ಅಭಿಪ್ರಾಯಪಡುತ್ತಾ ಈಗಿನ ಶಹಾಪುರ ತಾಲೂಕಾ ಸ್ಥಳದಲ್ಲಿ ಊರಿಗೆ ಹೊಂದಿಕೊಂಡು ಉನ್ನತವಾದ ಬೆಟ್ಟದ ಮೇಲೆ ಒಂದು ದುರ್ಗವಿದೆ. ಈ ದುರ್ಗದ ಸಮೀಪದಲ್ಲಿಯೇ ಹಳೇ ಸಗರ ಎಂಬ ಊರು. ಈ ಊರಿನ ಹೆಸರಿನಿಂದಲೇ ಈ ದುರ್ಗಕ್ಕೆ ಸಗರ ದುರ್ಗವೆಂದು ಹೆಸರು ಬಂದಂತೆ ಕಾಣುವುದು. ಶಹಾಪುರದಿಂದ ಏಳೆಂಟು ಮೈಲಿನ ಅಂತರದಲ್ಲಿ ಇನ್ನೊಂದು ಸಗರ ಎಂಬ ಗ್ರಾಮವಿದೆ. ಇದು ಇನ್ನೊಂದು ಸಗರ ಅಲ್ಲದೇ ಈಗ ಶಹಾಪುರ ಪಟ್ಟಣದ ದುರ್ಗಕ್ಕೆ ಹೊಂದಿಕೊಂಡಂತೆ ಇರುವ ಕೋಟೆಯು ಶಹಾಪುರ ಕಿಲ್ಲೆಯೆಂದು ಹೆಸರು. ವಿಜಾಪುರ ಆದಿಲ್‌ಷಾಹಿ ಸನದುಗಳಲ್ಲಿ ಇದಕ್ಕೆ 'ಮಾಮನಸರಡಾಬಾದ' ಎಂದು ಹೆಸರಿದ್ದಿತು. ಅದಕ್ಕಿಂತ ಪೂರ್ವಕಾಲಕ್ಕೆ ಬಹಮನಿಯರಸರ ಕಾಲದಲ್ಲಿ ಇದಕ್ಕೆ ಸಗರಗಢ ಎಂದು ಹೆಸರಿತ್ತು. ಈ ಪ್ರಾಂತ್ಯವು ಕಿಲ್ಲೆ ಸಹಿತವಾಗಿ ದೇವಗಿರಿ ಯಾದವರ ರಾಜ್ಯದಲ್ಲಿತ್ತೆಂದು ಆನಂತರ ಅಲ್ಲಾವುದ್ದೀನ ಖಿಲ್ಜಿಯ ಕಾಲಕ್ಕೆ ಮುಸಲ್ಮಾನರ ವಶವಾಯಿತೆಂದು ಕ್ರಿ.ಶ.೧೩೦೦ ರಿಂದ ಕ್ರಿ.ಶ.೧೩೧೦ರ ವರೆಗಿನ ಫಾರಶಿ ಶಾಸನಗಳಿಂದ ತಿಳಿದುಬರುತ್ತದೆ. ಮೊಹಮದ್ ತುಘಲಕನ ಅಳಿಯ ಬಹುದ್ದೀನನಿಗೆ ಈ ಭಾಗ ಜಾಗೀರಿ ರೂಪದಲ್ಲಿ ಬಂತು. ಆದರೆ ಆತನು ರಾಜನ ವಿರುದ್ಧ ತಿರುಗಿ ಬಿದ್ದನು. ಅವನು ತುಘಲಕನ ವಿರುದ್ಧ ಯುದ್ಧಮಾಡಿದನು. ಅವನಿಗೆ ಕುಮ್ಮಟದ ಅರಸ ಕಂಪಿಲ ಹಾಗೂ ಅವನ ಮಗ ಕುಮಾರರಾಮ ಜೊತೆಗೂಡಿ ಸಹಾಯ ಮಾಡಿದರು. ತುಘಲಕ ಬಾದಶಾಹನ ವಿರುದ್ಧ ಗೆಲ್ಲಲಾಗಲಿಲ್ಲ. ಅವರು ಸಹ ಆ ಯುದ್ಧದಲ್ಲಿ ಸೋತು ಇತಿಹಾಸದಿಂದ ನಿರ್ಗಮಿಸಿದರು ಎಂಬ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ. ಅಲ್ಲದೇ ಮುಂದಿನ ದಿನಗಳಲ್ಲಿ ಕುಮ್ಮಟದ ದೊರೆಗಳು ಹಾಗೂ ಆ ನಂತರ ವಿಜಯನಗರ ಅರಸರು ಈ ಪ್ರದೇಶದ ಮೇಲೆ ಹೇಗೆ ತಮ್ಮ ಹತೋಟಿ ಸ್ಥಾಪಿಸಿದರು ಎಂದು

ವಿವರಿಸುತ್ತಾ ಹೋಗುತ್ತಾರೆ[೧೧]. ಒಟ್ಟಾರೆ ಈ ಎರಡು ಅಭಿಪ್ರಾಯಗಳು ಈಗಿನ ಶಹಾಪುರ ಪಟ್ಟಣದ ಸುತ್ತಮುತ್ತಲಿನ ಪ್ರದೇಶವೇ ಪ್ರಾಚೀನ ಸಗರ ಪಟ್ಟಣವಾಗಿತ್ತೆಂಬ ಧ್ವನಿಹೊರಡಿಸುತ್ತವೆ. ಆದರೆ ಇಂಥ ಅನಿಸಿಕೆಗಳಿಗೆ ವ್ಯತಿರಿಕ್ತವಾದ ಅಭಿಪ್ರಾಯಗಳು ಸಹ ದಾಖಲಾಗಿವೆ.

ಶಹಾಪುರ ತಾಲೂಕಿನ ಸಗರ ಗ್ರಾಮವೇ ಇದರ ಮುಖ್ಯ ಪಟ್ಟಣವಾಗಿತ್ತು. ಸುರಪುರ ತಾಲೂಕಿನ ಬಿಜಾಸಪುರದ ಕ್ರಿ.ಶ.೧೨೩೯ರ ಶಾಸನದಲ್ಲಿ "ಮೂಡಣ ನಿರ್ಮ್ಮಳ ಧರ್ಮಾಬುಧಿ ಮಹಾಪಟ್ಟಣಂ ಸಗರ' ಎಂದು ಇದೇ ಸಗರನ್ನು ಉದ್ದೇಶಿಸಿ ಹೇಳಿದೆ ಎಂಬ ವಿವರ ದಾಖಲಾಗಿದೆ[೧೨]. ಪ್ರಾಯಶಃ ಇದೇ ಅಭಿಪ್ರಾಯವು ಸರಿಯೆಂದು ಕಂಡುಬರುತ್ತದೆ. ಆದರೆ ಅವರು ಸಹ ಹೆಚ್ಚಿನ ಆಧಾರಗಳನ್ನು ಈ ಕುರಿತು ನೀಡಿರುವ ವಿವರಗಳಲ್ಲಿ ನೀಡಿದಂತೆ ಕಾಣುವುದಿಲ್ಲ.

ಪ್ರಸ್ತುತ ಶಹಾಪುರ ಪಟ್ಟಣದಿಂದ ಎರಡು ಮೈಲಿ ಅಂತರದಲ್ಲಿರುವ ಸಗರ ಗ್ರಾಮವೇ ಸಗರನಾಡಿನ ರಾಜಧಾನಿ ಪಟ್ಟಣವಾಗಿತ್ತೆಂದು ಖಚಿತವಾಗಿಯೇ ಅಭಿಪ್ರಾಯಿಸಬಹುದು. ಆ ಪಟ್ಟಣವು ಪ್ರಾಚೀನ ರಾಜಧಾನಿ ಮಹತ್ವ ಹೊಂದಿದ್ದರಿಂದಲೇ ಆ ನಗರದ ಬಳಿಯೇ ಸೂಫಿ ಸರ್ಮಸ್ತರನು ಅದೇ ಗ್ರಾಮದ ಪರಿಧಿಯಲ್ಲಿ ತನ್ನ ನೆಲೆಯನ್ನು ಕಂಡುಕೊಂಡಿರಬಹುದು. ಇದಕ್ಕೆ ಇನ್ನು ಪುಷ್ಟಿದಾಯಕ ವಿವರ ನೀಡಬಹುದಾದ ಸಂಗತಿಗಳೆಂದರೆ ಈ ಗ್ರಾಮದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಕಂಡು ಬಂದಿರುವ ಪ್ರಾಚ್ಯ ಕುರುಹುಗಳು ಹಾಗೂ ಗ್ರಾಮದಲ್ಲಿರುವ ದರ್ಗಾದ ಮುಂಭಾಗದಲ್ಲಿ ಅನಾಥವಾಗಿ ಬಿದ್ದಿರುವ ಆಧಾರಗಳ ಹಿನ್ನೆಲೆಯಲ್ಲಿ ಇಲ್ಲೊಂದು ಬಹುದೊಡ್ಡ ಪ್ರಾಚೀನ ಪಟ್ಟಣ ಇತ್ತೆಂದು ಭಾಸವಾಗುತ್ತದೆ. ಈ ಪ್ರಾಚ್ಯ ಕುರುಹುಗಳಲ್ಲಿಯೇ ಆ ಪಟ್ಟಣ ಇದೆ ಆಗಿತ್ತೆಂಬ ವಿವರಗಳನ್ನು ಕಾಣುತ್ತೇವೆ. ಅವು ಗ್ರಾಮದ ತುಂಬೆಲ್ಲಾ ಅಲ್ಲಲ್ಲಿ ಬಿದ್ದಿವೆ. ಕಲ್ಯಾಣದ ಚಾಲುಕ್ಯರ ಕಾಲದ ಶಿಲ್ಪಾವಶೇಷಗಳು ಈಗಲೂ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಅಲ್ಲದೇ ಬಹಮನಿ ಹಾಗೂ ಆದಿಲ್‌ಷಾಹಿಗಳ ಕಾಲದಲ್ಲಿಯೂ ಸಹ ಇದು ಹೆಚ್ಚಿನ ಪ್ರಸಿದ್ಧಿ ಪಡೆದಿತ್ತು ಎಂಬುದು ತಿಳಿದಿರುವ ವಿಷಯವಾಗಿದೆ.

ಬಹುಶಃ ಇದು ಸಗರನಾಡಿನ ಮುಖ್ಯ ಸ್ಥಳ, ರಾಜಧಾನಿ ಅಥವಾ ಪಟ್ಟಣವಾಗಿದ್ದರಿಂದಲೇ ಮುಂದಿನ ದಿನಗಳಲ್ಲಿ ಬಹಮನಿ ಮತ್ತು ಆದಿಲ್‌ಶಾಹಿಗಳು ಇದೇ ಸ್ಥಳವನ್ನು ತಮ್ಮ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲದೇ ಈ ಗ್ರಾಮದಲ್ಲಿ ಹಲವಾರು ಸ್ಮಾರಕಗಳನ್ನು ನಿರ್ಮಾಣ ಮಾಡಿದ್ದಾರೆ. ಕಟ್ಟಡಗಳು ಇಂದಿಗೂ ಉಳಿದುಕೊಂಡು ಬಂದಿರುವುದನ್ನು ಗಮನಿಸಬಹುದು. ಅಲ್ಲದೇ ಇಲ್ಲೊಂದು ಬೆಟ್ಟದ ತಪ್ಪಲು ಇರುವುದನ್ನು ಸಹ ಸ್ಥಳೀಯರು ಅಭಿಪ್ರಾಯಿಸುತ್ತಾರೆ. ಅದನ್ನೇ ಸಗರಾದ್ರಿ ತಪ್ಪಲು ಅಥವಾ ಬೆಟ್ಟ ಎಂದು ಕರೆಯಲಾಗುತ್ತದೆ. ಬಹುಶಃ ಅದು ಈ ಗ್ರಾಮದಿಂದ ಸುಮಾರು ಒಂದು ಮೈಲಿ ಅಂತರದಲ್ಲಿ ಹರಡಿಕೊಂಡಿರುವ ಬೆಟ್ಟವೇ ಆಗಿರಬಹುದು. ಈ ಬೆಟ್ಟದಲ್ಲಿ ಸದ್ಯ ಸಗರ ಎಲ್ಲಮ್ಮಳ ದೇವಾಲಯವಿದ್ದು ಅದು ಹೆಚ್ಚಿನ ಪ್ರಸಿದ್ಧಿಯನ್ನು ಪಡೆದಿದೆ. ಈ ಎಲ್ಲ ವಿವರಗಳ ಹಿನ್ನೆಲೆಯಲ್ಲಿ ಪ್ರಸ್ತುತ ಸಗರ ಗ್ರಾಮವೇ ಸಗರನಾಡಿನ ರಾಜಧಾನಿ ಪಟ್ಟಣವಾಗಿತ್ತೆಂಬ ಅಭಿಪ್ರಾಯಕ್ಕೆ ಖಂಡಿತವಾಗಿಯೂ ಬರಬಹುದಾಗಿದೆ.

## ಹಗರಟಗಿ ನಾಡು

ಈ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಪ್ರಾಚೀನ ಆಡಳಿತದ ಇನ್ನೊಂದು ವಿಭಾಗವೆಂದರೆ ಹಗರಟಗಿ ನಾಡು. ಇದು ಪ್ರಸ್ತುತ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನಲ್ಲಿರುವ ಒಂದು ಗ್ರಾಮ. ಹಗರಟಗಿ ಗ್ರಾಮ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಹತ್ತು ಹಲವು ಐತಿಹಾಸಿಕ ಕುರುಹುಗಳು ಯಥೇಚ್ಛವಾಗಿ ಕಂಡುಬಂದಿರುವುದನ್ನು ಈಗಾಗಲೇ ಚರ್ಚಿಸಲಾಗಿದೆ. ಇದು ಪ್ರಸ್ತುತ ತಾಲೂಕಿನ ನೈಋತ್ಯ ಭಾಗದಲ್ಲಿ ಕೇಂದ್ರೀಕೃತಗೊಂಡಿರುವುದು. ಪ್ರಾಚೀನ ಆಡಳಿತ ಘಟಕದ ಮುಖ್ಯ ಕೇಂದ್ರ ಪಟ್ಟಣವು ಸಹ ಹಗರಟಗಿಯೇ ಆಗಿತ್ತು. ಇದು ಮುನ್ನೂರು ಗ್ರಾಮಗಳ ವ್ಯಾಪ್ತಿಯನ್ನು ಹೊಂದಿತೆಂಬ ಅಭಿಪ್ರಾಯಗಳಿವೆ. ಹಾಗಾಗಿ ಶಾಸನಗಳಲ್ಲಿಯೂ ಸಹ ಈ ಪ್ರಾಚೀನ ಘಟಕವನ್ನು ಹಗರಟಗಿ-೩೦೦ ಎಂದು ಉಲ್ಲೇಖಿಸಿದ್ದುಂಟು. ಪ್ರಸ್ತುತ ಸುರಪುರ ತಾಲೂಕಿನ ನೈಋತ್ಯ ಭಾಗದಲ್ಲಿ ಕೇಂದ್ರೀಕೃತಗೊಂಡಿರುವ ಇಂದಿನ ಬಹುತೇಕ ಗ್ರಾಮಗಳು ಆ ಪ್ರಾಚೀನ ಆಡಳಿತ ಘಟಕದಲ್ಲಿದ್ದವು ಎಂದು ಗುರುತಿಸಬಹುದು. ಆದರೂ ಅದರ ಹೆಚ್ಚಿನ ವ್ಯಾಪ್ತಿಯು ಪ್ರಸ್ತುತ ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂದಗಿ ತಾಲೂಕಿನ ಬಹುತೇಕ ಗ್ರಾಮಗಳೆಲ್ಲವು ಅಂದಿನ ಪ್ರಾಚೀನ ಹಗರಟಗಿ ಆಡಳಿತ ಘಟಕದಲ್ಲಿದ್ದವು ಎಂದು ಗುರುತಿಸಬಹುದು.

ಮುದ್ದೇಬಿಹಾಳ ತಾಲೂಕಿನ ತುಂಬಗಿ, ಬಾವೂರ, ಬೇಲೂರು, ಗೋಟಖಿಂಡಕಿ, ತಾಳಿಕೋಟೆ ಮಿಣಜಗಿ ಮತ್ತು ಪೀರಾಪುರ ಅಲ್ಲದೇ ಸಿಂದಗಿ ತಾಲೂಕಿನ ಕಡ್ಲೇವಾಡ, ಕಲ್ಕೇರಿ ಸುತ್ತಮುತ್ತಲಿನ ಗ್ರಾಮಗಳು ಹಾಗೂ ಸುರಪುರ ತಾಲೂಕಿನ ಕಕ್ಕೇರಿ ಮತ್ತು ಏವೂರು ಪರಿಸರದ ಪ್ರಾಚೀನ ಗ್ರಾಮಗಳು ಈ ನಾಡಿನಲ್ಲಿದ್ದವು ಎಂದು ದಾಖಲಿಸಲಾಗಿದೆ[೪೩]. ಅಲ್ಲದೆ ಬಸವನ ಬಾಗೇವಾಡಿ ತಾಲೂಕಿನ ಸಾಲ್ವಡಗಿ ಗ್ರಾಮದಲ್ಲಿಯು ಈ ಕುರಿತು ಉಲ್ಲೇಖಿಸುವ ಶಾಸನವೊಂದು ಕಂಡುಬಂದಿದೆ.

ಪ್ರಾಚೀನ ಹಗರಟಗಿ ನಾಡಿನಲ್ಲಿ ಪ್ರಮುಖವಾಗಿ ಇಂದಿನ ಸುರಪುರ ತಾಲೂಕಿನ ಕಕ್ಕೇರಿ, ಮೂದನೂರು, ಕೆಂಬಾವಿ, ಬೈಚಬಾಳ, ಕೂಡಲಗಿ ಹಾಗೂ ಕಡಕಲ್ಲ ಹಾಗೂ ರಾಜನಕೋಳೂರು ಗ್ರಾಮಗಳು ಸಮಾವೇಶಗೊಂಡಿದ್ದವು. ಪ್ರಸ್ತುತ ಹುಣಸಗಿ ಮತ್ತು ಬೈಚಬಾಳ ಕಣಿವೆ ಪರಿಸರ (Hunsagi and Baichibal Valley) ಎಂದು ಕರೆಯುತ್ತಿರುವ ಪ್ರದೇಶದಲ್ಲಿ ಬರುವ ಬಹುತೇಕ ಎಲ್ಲ ಹಳ್ಳಿಗಳೂ ಹಗರಟಗಿ ನಾಡಿನಲ್ಲಿ ಇದ್ದಿರಬಹುದೆಂದು ಅಭಿಪ್ರಾಯಿಬಹುದು. ಈ ಪ್ರದೇಶವು ಪ್ರಾಗಿತಿಹಾಸ ಕಾಲದ ಎಲ್ಲ ಹಂತಗಳಲ್ಲಿಯೂ ಮಹತ್ವದ ಪಾತ್ರವಹಿಸುತ್ತಾ ಬಂದಿದೆ. ಅಲ್ಲದೇ ಮಾನವನ ಬದುಕಿನ ಬೆಳವಣಿಗೆ ತುಂಬಾ ಸಹಕಾರಿಯಾಗಿ ಸಹಕರಿಸುತ್ತಾ ಬಂದಿರುವ ಬಹು ಪ್ರಸಿದ್ಧಿ ಪಡೆದಿರುವ ಪರಿಸರ.

ಸುರಪುರ ತಾಲೂಕಿನ ಲಭ್ಯವಿರುವ ಶಾಸನಗಳಲ್ಲಿ ಪ್ರಾಚೀನ ಹಗರಟಗಿ ನಾಡಿನ ಕುರಿತು ಸಾಕಷ್ಟು ಉಲ್ಲೇಖಗಳು ಕಂಡುಬಂದಿವೆ. ಕಕ್ಕೇರಿ, ಮುದನೂರು, ರಾಜನಕೋಳೂರು ಹಗರಟಗಿ ಹಾಗೂ ಕಡಕಲ್ಲು ಶಾಸನಗಳು ಹಗರಟಗಿ ನಾಡಿನ ಕುರಿತು ಹೆಚ್ಚಿನ ಉಲ್ಲೇಖಗಳನ್ನು ನೀಡುತ್ತವೆ. ಅಲ್ಲದೆ ಪಕ್ಕದ ಜಿಲ್ಲೆಯ ತಾಲೂಕು ಪ್ರದೇಶಗಳಲ್ಲಿ ಹಾಗೂ ಈ ನಾಡಿನಿಂದ ಬಹುದೂರದಲ್ಲಿರುವ ಗೋಕಾಕ ಮತ್ತು ಧಾರವಾಡ ಪರಿಸರದಲ್ಲಿರುವ ಒಂದೆರಡು ಶಾಸನಗಳಲ್ಲಿ ಪ್ರಾಚೀನ ಹಗರಟಗಿ ನಾಡಿನ ಕುರಿತು ಉಲ್ಲೇಖಗಳು ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಆ ಕುರಿತು ದಾಖಲಾಗಿರುವ ವಿವರಗಳನ್ನು ಚರ್ಚಿಸಲಾಗಿದೆ.

ಕಕ್ಕೇರಿಯ ಕ್ರಿ.ಶ.೧೧೨೭ರ ಶಾಸನದಲ್ಲಿ ಹಗರಟಗಿ ಕುರಿತು ಉಲ್ಲೇಖವಿದೆ[೪೪]. ಹಗರಟಗಿಯ ಉಗ್ರಭೀಮೇಶ್ವರ ದೇವರ, ಮುದಿನೀರ ಕುಮಾರೇಶ್ವರ ದೇವರ ಕಕ್ಕೇಶ್ವರ ದೇವರ ಮತ್ತು ಕಕ್ಕೇರಿಯ ಮಹಾಸ್ಥಾನಗಳ ಆಚಾರ್ಯರಾದ ಸಿದ್ಧರೇವಣದೇವನ ಶಿಷ್ಯರಾದ ಬ್ರಹ್ಮರಾಸಿ ಪಂಡಿತರ ಕುರಿತು ವಿವರಿಸುತ್ತವೆ.  ಇವರು ಹಗರಟಗಿ ನಾಡಿನಲ್ಲಿದ್ದ ಪ್ರಾಚೀನ ಗ್ರಾಮಗಳಿದ್ದ ದೇವಾಲಯಗಳ ಸ್ಥಾನಾಚಾರ್ಯರಾಗಿದ್ದರೆಂಬುದು ನಮಗೆ ಮುಖ್ಯ ಸಂಗತಿಯಾಗುತ್ತದೆ. ಸುರಪುರ ತಾಲೂಕಿನ ರಾಜನಕೋಳೂರಿನ ಕ್ರಿ.ಶ.೧೦೯೧ರ ತೇದಿಯ ಶಾಸನದಲ್ಲಿ ಭತ್ತಗ್ರಾಮೆ ರಾಜನಕೋಳೂರಲು ಸರ್ವ್ವನಮಸ್ಯವಾಗಿ ಬ್ರಹ್ಮಪುರಿಯ ಬ್ರಾಹ್ಮಣರು ೩೨ ಬ್ಬೆರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಹಿರಣ್ಯ ಸಹಿತ ಕಾಲಕರ್ಚ್ಚಿ ೪೨ ಗೇಣ ಘಳೇಯಲಳೆದು ಪಗರಿಟ್ಟ(ಹರಟ)ಗೆಯ ಸೀಮೆಯಂ ಮೂಡ ಜಲಪಾಷಾಣಂ ಪೊರೆಗಾಗಿ ಬಿಟ್ಟ ಕರಿಯ ನೆಲಂ ಮತ್ತರು ಎಂಬ ವಿವರವನ್ನು ನೀಡುತ್ತದೆ[೪೫].

ಮೇಲೆ ಉಲ್ಲೇಖಿಸಿದ ಶಾಸನದಲ್ಲಿರುವ ವಿವರಗಳಿಂದ ತಿಳಿಯಬಹುದಾದ ಬಹುಮುಖ್ಯ ಸಂಗತಿ ಎಂದರೆ ರಾಜನಕೋಳೂರ ಗ್ರಾಮದ ಸರಹದ್ದಿನವರೆಗೂ ಹಗರಟಗಿನಾಡು ವಿಸ್ತರಿಸಿಕೊಂಡಿತೆಂದು ಗುರುತಿಸಬಹುದು. ಆದರೆ ಕಕ್ಕೇರಿ ಮತ್ತು ರಾಜನಕೋಳೂರು ಗ್ರಾಮಗಳು ಮಾತ್ರ ಸಗರ ಐದನೂರರ ಆಡಳಿತ ವಿಭಾಗದಲ್ಲಿ ಇದ್ದಿರಬಹುದಾದ ಪ್ರದೇಶಗಳಾಗಿದ್ದವು ಎಂದು ಗ್ರಹಿಸಲು ಅವಕಾಶಗಳುಂಟು.

ಕ್ರಿ.ಶ.೧೦೯೯ರ ತೇದಿಯ ಮುದನೂರಿನ ಶಾಸನವು ಕುಮಾರಸ್ವಾಮಿ ದಂಡನಾಯಕ ಮುದನೂರಿನಲ್ಲಿ ಸ್ಥಾಪಿಸಿದ್ದ ಕುಮಾರೇಶ್ವರ ದೇವಾಲಯದ ಕಾರ್ಯಗಳಿಗೆ ಹಗರಟ್ಟಿಗೆಯ ಉಗ್ರಭೀಮೇಶ್ವರ ದೇವಾಲಯದ ಸ್ಥಾನಾಚಾರ್ಯರಾದ ಬ್ರಹ್ಮರಾಶಿಪಂಡಿತರ ಕಾಲ್ತೊಳೆದು ದಾನ ನೀಡಿದ ಉಲ್ಲೇಖವನ್ನು ಹೊಂದಿದೆ[೪೬].

ಇಂಥ ವಿವರಗಳಿಂದ ತಿಳಿಯಬಹುದಾದ ಬಹುಮುಖ್ಯ ಸಂಗತಿ ಎಂದರೆ ಹಗರಟಗಿಯ ಉಗ್ರಭೀಮೇಶ್ವರ ದೇವಾಲಯವು ಹಾಗೂ ಅದರ ಸ್ಥಾನಾಚಾರ್ಯರು ಈ ಪರಿಸರದಲ್ಲಿ

ಬಹು ಪ್ರಸಿದ್ಧಿಯನ್ನು ಪಡೆದಿದ್ದರೆಂಬ ವಿವರಗಳು ಈ ಶಾಸನದಿಂದ ಗೊತ್ತಾಗುತ್ತವೆ. ಕಾರಣ ಈ ಭಾಗದಲ್ಲಿ ಆ ಕಾಲದಲ್ಲಿ ಕಟ್ಟಿರುವ ದೇವಾಲಯಗಳ ಪ್ರತಿಷ್ಠಾಪನೆಯ ಹಾಗೂ ಇನ್ನಿತರ ಸಂದರ್ಭಗಳಲ್ಲಿ ಹಗರಟಗಿಯ ಉಗ್ರಭೀಮೇಶ್ವರ ದೇವಾಲಯದ ಸ್ಥಾನಾಚಾರ್ಯರ ಕಾಲ್ತೊಳೆದು ದಾನ ನೀಡಿರುವ ವಿವರಗಳು ಕೆಲವಾರು ಉಂಟು.

ಕ್ರಿ.ಶ.೧೦೯೭ರ ತೇದಿಯ ಕಡಕಲ್ಲ(ಸುರಪುರ ತಾಲೂಕು) ಶಾಸನದಲ್ಲಿ ಚಾವುಣ್ಡೇಶ್ವರಿಯನ್ನು ಉಲ್ಲೇಖಿಸುತ್ತಾ ಹಗರಟಗಿ ಮುನ್ನೂರರ ಬಳಿಯ ಕಂಜಿನ ಕರಡಿಕಲ್ಲ ಸಿದ್ದೇಶ್ವರ ದೇವರಿಗೆ ಸಿಂಬಡದ ಹೆರ್ಗ್ಗಡೆ ಕೇಸಿ ಬಿಟ್ಟ ದಾನ ಕುರಿತು ವಿವರಿಸುತ್ತದೆ[೪೭].

ಸುರಪುರ ತಾಲೂಕನ್ನು ಹೊರತುಪಡಿಸಿ ಬೇರೆ ಜಿಲ್ಲೆಯ ಬೇರೆ ಬೇರೆ ತಾಲೂಕುಗಳಲ್ಲಿಯೂ ಪ್ರಾಚೀನ ಹಗರಟಗಿ ನಾಡಿನ ಕುರಿತು ಇನ್ನೂ ಹೆಚ್ಚಿನ ಮಾಹಿತಿಗಳು ಕಂಡುಬರುತ್ತವೆ. ಹಾಗೇ ನೋಡಿದರೆ ಪ್ರಾಚೀನ ಹಗರಟಗಿ-೩೦೦ರ ವ್ಯಾಪ್ತಿಯು ಪ್ರಸ್ತುತ ಜಿಲ್ಲೆಯ ಸುರಪುರ ತಾಲೂಕಿನಿಗಿಂತ ನೆರೆಯ ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ, ಸಿಂದಗಿ ಹಾಗೂ ಬಸವನಬಾಗೇವಾಡಿಯ ಕೆಲವು ಗ್ರಾಮಗಳವರೆಗೂ ಹಬ್ಬಿತ್ತು. ಆ ತಾಲೂಕಿನಲ್ಲಿರುವ ಇಂದಿನ ಗ್ರಾಮಗಳಲ್ಲೆವು ಹೆಚ್ಚಿನ ಸಂಖ್ಯೆಯಲ್ಲಿ ಹಗರಟಗಿ ಪ್ರಾಚೀನ ಈ ವಿಭಾಗದಲ್ಲಿದ್ದವು ಎಂಬುದನ್ನು ಗುರುತಿಸಬಹುದು. ಮುದ್ದೇಬಿಹಾಳ ತಾಲೂಕಿನ ಭಾಗಶಃ ಪ್ರದೇಶವು ಈ ವ್ಯಾಪ್ತಿಯಲ್ಲಿತ್ತು. ಕೃಷ್ಣಾ ಮತ್ತು ಡೋಣಿ ನದಿಯ ಮಧ್ಯದ ಪ್ರದೇಶವು ಹೆಚ್ಚಿನಂಶ ಪ್ರಾಚೀನ ಹಗರಟಗಿ ನಾಡಿನಲ್ಲಿತ್ತು ಎಂಬುದನ್ನು ತಿಳಿಯಬಹುದು.

ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ತುಂಬಗಿ, ಗೋಟಕಂಡಕಿ, ಬೊಮ್ಮನಹಳ್ಳಿ, ಕಾರಿಗನೂರು, ತಾಳಿಕೋಟೆ, ಮಿಣಜಗಿ, ಬಾವೂರು, ಪೀರಾಪುರ, ಬಂಡೆಪ್ಪನ ಸಾಲ್ವಡಗಿ, ಮೈಳೇಶ್ವರ, ಶಿವಪುರ, ಹಗರಗುಂಡಗಿ ಹಾಗೂ ಬೇಲೂರು ಗ್ರಾಮಗಳು ಈ ನಾಡಿನಲ್ಲಿದ್ದವು. ಅದೇ ರೀತಿ ಸಿಂದಗಿ ತಾಲೂಕಿನ ಕಲಕೇರಿ, ಕಡ್ಲೇವಾಡ, ನಾಗಾಯಿ, ಕೆರೂರು, ಗಬ್ಬಸಾವಳಗಿ, ಕಕ್ಕಮೇಳ, ಬೆಕ್ಕಿನಾಳ ಹಾಗೂ ಕುಳೇಕುಮಟಗಿ ಗ್ರಾಮ ಪರಿಸರವು ಅಲ್ಲದೇ ಬಸವನಬಾಗೇವಾಡಿಯ ಕುದರಿ ಸಾಲ್ವಡಗಿ ಗ್ರಾಮಗಳಲ್ಲಿ ಪ್ರಾಚೀನ ಹಗರಟಗಿ ನಾಡನ್ನು ಉಲ್ಲೇಖಿಸುವ ಶಾಸನಗಳು ಕಂಡುಬಂದಿರುವುದನ್ನು ಗಮನಿಸಬಹುದು[೪೮]. ಅಲ್ಲದೇ ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿಗೆ ಹೊಂದಿಕೊಂಡಿರುವ ಕಲಬುರ್ಗಿಯ ಜಿಲ್ಲೆಯ ಜೇವರ್ಗಿ ತಾಲೂಕಿನ ಕೆಲವು ಗ್ರಾಮಗಳು ಸಹ ಪ್ರಾಚೀನ ಹಗರಟಗಿಯಲ್ಲಿದ್ದವು ಎಂಬುದನ್ನು ಗುರುತಿಸಬಹುದು. ಪ್ರಸ್ತುತ ಜೇವರ್ಗಿ ತಾಲೂಕಿನ ಬಹುತೇಕ ಭಾಗವು ಸಗರನಾಡು ಅಥವಾ ಸಗರ ಐದನೂರು ಆಡಳಿತ ವಿಭಾಗದ ಬಹುಮುಖ್ಯ ಪ್ರದೇಶವೂ ಸಹ ಆಗಿತ್ತು.

ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ತುಂಬಗಿ ಗ್ರಾಮದ ಕ್ರಿ.ಶ.೧೦೧೨ರ ಶಾಸನವು ಚಾಳುಕ್ಯ ದೊರೆ ಇರವ ಬೆಡಂಗ ಸತ್ಯಾಶ್ರಯ ದೇವನ ಪಾದಪದ್ಮೋಪ ಜೀವಿಆದ

ಬ್ರಹ್ಮಯ್ಯನು ಪಗಲಟ್ಟಿ-೩೦೦ರ ಬಳಿಯ ಅಗ್ರಹಾರ ತುಂಬಿಗೆಯ ಪ್ರೋಸಳದೇವರ ಪೂಜೆ ಪುನಸ್ಕಾರಗಳಿಗೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ[೪೯].

ತುಂಬಗಿ ಗ್ರಾಮದ ಕ್ರಿ.ಶ.೧೧೧೪ರ ತೇದಿಯ ಮತ್ತೊಂದು ಶಾಸನವು ಪಗಲಟ್ಟಿ-೩೦೦ ಬಳಿಯ ತುಂಬಿಗೆ ಅಗ್ರಹಾರದ ಒಡೆಯ ನಾಗದೇವಯ್ಯನು ತಮ್ಮ ಮಾನ್ಯರಲ್ಲಿ ಪಶ್ಚಿಮ ಕಟ್ಟೆಯಲ್ಲಿ ೩೦ ಮತ್ತರು ಭೂಮಿಯನ್ನು ಬಾಣರಾಸಿಯ ಮಠಕ್ಕೆ ದಾನ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ[೫೦].

ಮುದ್ದೇಬಿಹಾಳ ತಾಲೂಕಿನ ಬಾವುರ ಗ್ರಾಮದ ಕ್ರಿ.ಶ. ೧೦೩೨ರ ತೇದಿಯ ಶಾಸನವು ಇಮ್ಮಡಿ ಜಗದೇಕಮಲ್ಲನ ಕಾಲದ್ದು. ಅವನ ಸಾಮಂತ ಮೈಲರಸನು ಪಗಲಟ್ಟಿ ನಾಡಿನ ಕಾನ್ತಿಪಟ್ಟಣವನ್ನು ಆಳುತ್ತಿರುವಾಗ ಆ ವೂರಿನ ಪಂಡಿತದೇವ ಭಟ್ಟಾರಕರ ಮೂಲಸ್ಥಾನದ ಮಠಕ್ಕೆ ೧೨ ಮತ್ತರು ಭೂಮಿಯನ್ನು ದಾನವಾಗಿ ಕೊಟ್ಟದನ್ನು ವಿವರಿಸುತ್ತದೆ[೫೧].

ಇದೇ ತಾಲೂಕಿನ ಬೇವೂರಿನ ಕ್ರಿ.ಶ. ೧೧೪೫ರ ತೇದಿಯ ಶಾಸನವೊಂದು ತುಂಬಾ ಮಹತ್ವದ ಮಾಹಿತಿಯನ್ನು ನೀಡುತ್ತದೆ. ಕಲ್ಯಾಣದ ಚಾಲುಕ್ಯರ ಅರಸು ಜಗದೇಕಮಲ್ಲನು ಕಲ್ಯಾಣದಿಂದ ಆಳುತ್ತಿರುವುದನ್ನು ಹೇಳುತ್ತಾ ಇಮ್ಮಡಿ ಜಗದೇಕಮಲ್ಲನ ಮಹಾಮಂಡಳೇಶ್ವರನಾದ ಸೇವುಣ ವಂಶದ ಹೆಮ್ಮಾಡಿದೇವನ ಮಹಾಪಸಾಯಿತ, ಹಿರಿಯ ಹೆಗ್ಗಡೆ, ಹಂಡೆಯ ನಾಯಕನು ಹಗರಟಗಿ-೩೦೦ನ್ನು ತ್ರಿಭೋಗಾಭ್ಯನ್ತರದಿಂದ ಆಳುತ್ತಿದ್ದು ಆಗ ಹಗರಿಟ್ಟಗೆನಾಡ ಬಳಿಯ ಗ್ರಾಮ ಬೇವೂರು ಮೂಲಸ್ಥಾನದೇವರ ಅಂಗಭೋಗ ನಿವೇದ್ಯಕ್ಕಾಗಿ ಎಂಟು ಹಿಟ್ಟು, ಹಿರಿಯ ರೇವರಸ ಮೊದಲಾದವರು ಸೇರಿ ತೋಟ ಹಾಗೂ ಭೂಮಿಯನ್ನು ಸುದ್ರಕ ಜೀಯರ್ಗ್ಗೆ ದಾನವಾಗಿ ಕೊಟ್ಟ ಉಲ್ಲೇಖವಿದೆ[೫೨].

ಈ ಶಾಸನದಲ್ಲಿ ಉಲ್ಲೇಖವಾದ ಎರಡು ಸಂಗತಿಗಳು ಮುಖ್ಯವೆನಿಸುತ್ತವೆ. ಹೆಮ್ಮಾಡಿ ರೇವರಸನು ಸೇವುಣವಂಶದವನೆಂದು ಮತ್ತೆರಡು ವಿಚಾರಗಳೆಂದರೆ ಇದರಲ್ಲಿ ಉಲ್ಲೇಖಿತ ಹಂಡೆಯ ನಾಯಕನು ಈ ನಾಡಿನ ಮುಖ್ಯ ಆಡಳಿತಗಾರನಾಗಿದ್ದನೆಂಬುದು. ಅವನು ರಾಜನ, ಬ್ರಾಹ್ಮಣರ ಹಾಗೂ ದೇವರ ಸಮ್ಮತಿ ಅಥವಾ ಒಪ್ಪಿಗೆಯೊಂದಿಗೆ ಈ ಪ್ರದೇಶವನ್ನು ಆಳುತ್ತಿದ್ದನೆಂದು ಉಲ್ಲೇಖಿಸಿದೆ. ಶಾಸನದಲ್ಲಿ ಉಲ್ಲೇಖಿತ ತ್ರಿಭೋಗಾಭ್ಯನ್ತರ ಎನ್ನುವುದು ಇದೇ ಅರ್ಥ ನೀಡುತ್ತದೆ. ಅಲ್ಲದೇ ಶಾಸನದಲ್ಲಿ ಹಿರಿಯ ರೇವರಸ ಎಂಬ ಉಲ್ಲೇಖವುಂಟು. ಬಹುಶಃ ಈತನೇನಾದರೂ ಹೈಹಯ ವಂಶಕ್ಕೆ ಸಂಬಂಧಿಸಿದ ರೇವರಸನಾಗಿದ್ದನೇ? ಎಂಬುದು ಕಾರಣ ಹೈಹಯರು ಹಗರಟಗಿ ನಾಡಿನಲ್ಲಿದ್ದ ಕೆಂಭಾವಿಯನ್ನು ಆಳುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ. ಆ ನಂತರ ಕಾಲದಲ್ಲಿ ಅಂದರೆ ೧೩ನೇ ಶತಮಾನದ ಮಧ್ಯಾಮವಧಿಯಿಂದ ಕೆಂಬಾವಿಯು ಸಗರ ನಾಡಿನಲ್ಲಿ ಸೇರಿಕೊಂಡಿರುವ ಕುರಿತು ಶಾಸನಗಳು ಸೂಚನೆ ನೀಡುತ್ತವೆ.

ಪ್ರಾಚೀನ ಹಗರಟಗಿ ಆಡಳಿತ ವಿಭಾಗದಲ್ಲಿ ಮಹತ್ವ ಪಡೆದಿದ್ದ ಇನ್ನೊಂದು ಗ್ರಾಮಾಡಳಿತ ಎಂದರೆ ತಾಳಿಕೋಟೆ ಪರಿಸರ. ಕ್ರಿ.ಶ.೧೧೮೧ರ ತೇದಿಯುಳ್ಳ ಈ ಗ್ರಾಮದ ಶಾಸನವು ಹಗರಟ್ಟಗಿ-೩೦೦ರ ಕುರಿತು ಮಾಹಿತಿ ನೀಡುತ್ತದೆ. ಸ್ಥಳೀಯ ಶ್ರೀ ಸ್ವಯಂಭು ಸೋಮನಾಥದೇವರ ಅಂಗ ಮತ್ತು ರಂಗಭೋಗ ಹಾಗೂ ಮಾತ್ರ ಮುಂತಾದ ಕಾರ್ಯಗಳಿಗೆ ಮಹಾಪ್ರಧಾನ ಲಕ್ಷ್ಮೀದೇವನು ದಾನವನ್ನು ನೀಡುತ್ತಾನೆ. ಈ ದಾನವನ್ನು ಅವನು ತನ್ನ ಮೈದುನ ಪದ್ಮರಸ-ದಂಡನಾಯಕನ ಭಿನ್ನಹದ ಮೇರೆಗೆ ನೀಡುತ್ತಾನೆ. ಸೋಮನಾಥ ದೇವರಿಗೆ ಹಗರಟಗಿಯ ವಿಭಾಗದ ಪ್ರತಿಗ್ರಾಮದಿಂದ ಒಂದು ಹೊನ್ನನ್ನು ದಾನವಾಗಿ ಕೊಡಲಾಯಿತು ಎಂಬ ವಿವರವನ್ನು ಹೊಂದಿದೆ[೫೩].

ಶಾಸನದಲ್ಲಿ ಉಲ್ಲೇಖಿತ ಲಕ್ಷ್ಮೀದೇವನನ್ನು ಲಾಳಖಂಡೆಯಕಾರಧಿಷ್ಠಾಯಕ ಎಂದು ಕರೆಯಲಾಗಿದೆ. ಈ ಲಾಳಖಂಡೆಯಕಾರ ಎಂಬ ಬಿರುದು ಬಹುಶಃ ಅವನು ಹೊಂದಿದ್ದ ಖಾತೆ ಅಥವಾ ಹುದ್ದೆಯನ್ನು ಈ ರೀತಿಯ ಬಿರುದುಳ್ಳ ದಂಡನಾಯಕರ ಹೆಸರನ್ನು ಶಾಸನಗಳು ಈ ನಾಡಿನ ವ್ಯಾಪ್ತಿಯಲ್ಲಿ ಮೂರು-ನಾಲ್ಕು ಉದಾಹರಣೆಗಳನ್ನು ನೋಡಬಹುದು. ಅಲ್ಲದೇ ಇದನ್ನು ಸ್ವಲ್ಪ ಬೇರೆ ರೀತಿಯಲ್ಲಿಯೂ ಚರ್ಚಿಸಬಹುದಾಗಿದೆ. ಸೋಮನಾಥ ದೇವರ ಮತ್ತು ಲಾಳಖಂಡೇಯಕಾರ ನಡುವಿನ ಸಂಬಂಧಗಳ ಕುರಿತು ಇನ್ನು ಸೂಕ್ಷ್ಮವಾದ ಅಧ್ಯಯನಗಳ ಅವಶ್ಯಕತೆಯಿದೆ.

ಇದೇ ಗ್ರಾಮದ ಕ್ರಿ.ಶ.೧೧೮೪ರ ತೇದಿಯ ಇನ್ನೊಂದು ಶಾಸನವು ಸಹ ಹಗರಟಗಿ-೩೦೦ರ ನಾಡಿನ ಕುರಿತು ಮಾಹಿತಿ ನೀಡುತ್ತದೆ. ಮಹಾಮಂಡಳೇಶ್ವರ ವಿರಪರಸದೇವರು ವೀರದಾಸ ಎಂಬುವವನಿಗೆ ಗಣಮಠವಾಗಿ ಮಾಡಿಕೊಟ್ಟು ಅದಕ್ಕೆ ಬೇರೆ ಬೇರೆ ಊರಿನ ಸೀಮೆಯಲ್ಲಿರುವ ತೋಟ ಮತ್ತು ಭೂಮಿ ದಾನ ನೀಡಿದ್ದಲ್ಲದೇ ಹಗರಟಗಿ ಮುನ್ನೂರರ ಒಳಗೆ ಊರೂರಲು ಗದ್ಯಾಣ ಒಂದು(ಅಂದರೆ ಈ ನಾಡಿನ ಪ್ರತಿ ಗ್ರಾಮದಿಂದ ಒಂದು ಗದ್ಯಾಣ ಕಾಣಿಕೆಯಾಗಿ) ನೀಡಲಾಯಿತೆಂದು ವಿವರಿಸುತ್ತದೆ[೫೪]. ಅಲ್ಲದೇ ಇದೇ ಶಾಸನದಲ್ಲಿ ಇನ್ನೊಂದು ಬಹು ಮಹತ್ವದ ಮಾಹಿತಿಯೊಂದು ದಾಖಲಾಗಿದೆ. ಶಿವನ ಹೆಚ್ಚುಗಾರಿಕೆ ಸ್ಥಾಪಿಸಲು ವೀರಗಣವು ಎಂಬ ಹೆಸರಿನಿಂದ ಕೂಡಿರುವವರು ಬೇರೆ ಬೇರೆ ಊರುಗಳಲ್ಲಿರುವ ಬೇರೆ ಬೇರೆ ಮತಪಂಥಗಳಿಗೆ ಸೇರಿದ ಗುಡಿಗುಂಡಾರಗಳನ್ನು ಕೆಡವಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದರೆಂದು ವಿವರಿಸುತ್ತದೆ. ಇದು ಕಾಳಾಮುಖ, ಪಾಶುಪತ ಹಾಗೂ ಇನ್ನಿತರ ಶೈವ ಪಂಥೀಯ ಉಗ್ರಪಂಥದ ಪ್ರತಿಪಾದಕರಾಗಿದ್ದವರು ಇಂಥ ಕೆಲಸವನ್ನು ಹೆಚ್ಚಿನ ಪ್ರಮಾಣದಲ್ಲಿ ಮಾಡಿರುವ ಉಲ್ಲೇಖಗಳು ಬೇರೆ ಬೇರೆ ಗ್ರಾಮಗಳಲ್ಲಿ ಶಾಸನಗಳಲ್ಲಿಯೂ ಕಂಡುಬಂದಿವೆ.

ಕ್ರಿ.ಶ.೧೨೨೫ರ ತೇದಿಯ ತಾಳಿಕೋಟೆಯ ಶಾಸನವು ಯಾದವ ಚಕ್ರವರ್ತಿ ಸಿಂಘಣದೇವನ ಉಪ್ಪರವಟ್ಟದ ಠಾಣಾಧಿಪತಿ ಮಗರಮುರಾರಿ ಜಯಿತಪಾಳದೇವ ಹಾಗೂ ಮಾಣಿಕಾದೇವಿಯು

ತಾಳಿಕೋಟೆಯ ಶ್ರೀ ಸ್ವಯಂಭು ಸೋಮನಾಥ ದೇವರಿಗೆ ಅಂಗ ರಂಗಭೋಗ ಹಾಗೂ ದೇವತಾಕಾರ್ಯಗಳಿಗಾಗಿ ಭೂಮಿಯನ್ನು ದಾನ ನೀಡಿರುವ ಉಲ್ಲೇಖವನ್ನು ನೀಡುತ್ತದೆ. ಜಯಿತಪಾಳದೇವನು ಹಗರಟ್ಟಗೆ ನಾಡ ಮೇಲೆ ದಾಳಿ ನಡೆಸಲು ಬಂದಾಗ ಈ ದಾನವನ್ನು ಕೊಡಲಾಗಿದೆ ಎಂದು ಉಲ್ಲೇಖಿಸಲಾಗಿದೆ. ಹಗರಟ್ಟಗೆನಾಡ ಹುಡಿಸಿಬಂದಲಿ ತಾಳಿಕೋಟೆಯ ಶ್ರೀ ಸ್ವಯಂಭು ಸೋಮನಾಥ ದೇವರ ಅಂಗಭೋಗ ರಂಗಭೋಗ ಎಂಬ ವಿವರವು ದಾಖಲಾಗಿದೆ. ಅಲ್ಲದೇ ಈ ದಂಡನಾಯಕನ ಶೌರ್ಯ ಹಾಗೂ ಬಿರುದುಗಳ ಕುರಿತು ಶಾಸನದಲ್ಲಿ ವಿವರವಾಗಿ ದಾಖಲಿಸಲಾಗಿದೆ.

ಮುದ್ದೇಬಿಹಾಳ ತಾಲೂಕಿನ ಪ್ರಸಿದ್ಧ ಗ್ರಾಮವಾಗಿರುವ ಮಿಣಜಗಿಯ ಕ್ರಿ.ಶ.೧೧೮೪ರ ತೇದಿಯ ಶಾಸನವು ಕಲ್ಯಾಣದ ಚಾಲುಕ್ಯ ದೊರೆ ವೀರ ಸೋಮೇಶ್ವರನ ಆಳ್ವಿಕೆಯ ಕಾಲದ್ದಾಗಿದ್ದು ಅವನ ಮಹಾಪ್ರಧಾನ, ಸೇನಾಪತಿ, ಕುಮಾರ ನರನಾರಸಿಂಹನ ಅಧಿಕಾರಿಯಾದ ಹಗರಟ್ಟಗೆ-೩೦೦ರ ಮಹಾಗ್ರಾಮ್ ಮಿಣಂಜಿಗೆಯ ಮಾಚಿರಾಜನು ತ್ರಿಕೂಟಾಚಲವನ್ನು ನಿರ್ಮಿಸಿ ಮಾಲತೇಶ್ವರ, ಮಲ್ಲಿಕಾರ್ಜುನ ಮತ್ತು ಮಾಧವ ದೇವರನ್ನು ಪ್ರತಿಷ್ಠಾಪಿಸಿರುವ ಉಲ್ಲೇಖವಿದೆ[೫೫].

ಕ್ರಿ.ಶ.೧೧೮೯ರ ಪೀರಾಪುರ ಶಾಸನವು ಮಹಾಪ್ರಧಾನ ಲಕ್ಷ್ಮೀದೇವನಾಯಕ ಹಾಗೂ ಮಹಾಮಂಡಳೇಶ್ವರ ವಿರುಪರಸನ ಅನುಮತಿಯಂತೆ ಮಹಾಪ್ರಧಾನ ದೇಸಿಯ ದಂಡನಾಯಕ ಹಿರಿಯ ಹೆಗ್ಗಡೆ ನನ್ನರಸನು ತಾನು ಕಟ್ಟಿಸಿದ ನನ್ನೇಶ್ವರ ದೇವರ ಪೂಜೆಪುನಸ್ಕಾರಗಳಿಗೆ ಲೋಕಜೀಯರಿಗೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದಾನೆ. ಅಲ್ಲದೇ ಹಗರಟ್ಟಿ-೩೦೦ರ ಸೆಟ್ಟಿಗುತ್ತ ಮಾಚಿಸೆಟ್ಟಿ, ಹಗರಟಿಯ ಬೋರಿಸೆಟ್ಟಿ ಅವರ ಕುರಿತು ವಿವರ ನೀಡುತ್ತದೆ.

ಈ ಮೊದಲು ವಿವರಿಸಿದ ಪ್ರಮುಖ ಗ್ರಾಮಗಳಲ್ಲಿರುವ ಶಾಸನಗಳಲ್ಲಿ ಪ್ರಾಚೀನ ಹಗರಟಗಿಯ ನಾಡಿನ ಕುರಿತು ಉಲ್ಲೇಖಗಳು ಕಂಡುಬರುತ್ತವೆ. ಇವು ಹೆಚ್ಚಾಗಿ ದಾನಶಾಸನಗಳಾಗಿವೆ. ಈ ಶಾಸನಗಳಲ್ಲಿ ಉಲ್ಲೇಖಿತ ಬೊಮ್ಮನಹಳ್ಳಿ ಮತ್ತು ಕಾರಿಗನೂರು ಗ್ರಾಮಗಳು ಸಹ ಪ್ರಾಚೀನ ಹಗರಟಗಿ ನಾಡಿನಲ್ಲಿಯೇ ಇದ್ದಂತಹ ಗ್ರಾಮಗಳಾಗಿದ್ದವು. ತಾಳಿಕೋಟೆಯು ವೀರಶೈವ ಅಥವಾ ಲಿಂಗಾಯತ ಮತಪಂಥಕ್ಕೆ ಸಂಬಂಧಿಸಿದ ಪ್ರಮುಖ ಹಾಗೂ ಮಹತ್ವ ಪಡೆದ ಸ್ಥಳವಾಗಿತ್ತು. ಆ ಕಾಲದಿಂದಲೂ ಪ್ರಸಿದ್ಧಿ ಪಡೆದಿದ್ದ ಈ ಗ್ರಾಮಪರಿಸರವು ವಿಜಯನಗರ ಹಾಗೂ ಬಹಮನಿ ಮತ್ತು ವಿಜಯಪುರ ಆದಿಲ್‌ಶಾಹಿಗಳ ಕೊನೆ ಕಾಲಘಟ್ಟದವರೆಗೂ ತುಂಬಾ ಮಹತ್ವ ಪಡೆದ ಆಡಳಿತ ಕೇಂದ್ರವಾಗಿತ್ತು. ಅಲ್ಲದೇ ತಾಳಿಕೋಟೆ ಕದನದಿಂದ ಈ ಪರಿಸರವು ಸಹ ತನ್ನ ಐತಿಹಾಸಿಕ ಮಹತ್ವ ಕಳೆದುಕೊಂಡಿತೆಂದು ಅಭಿಪ್ರಾಯಿಸಬಹುದು.

ಪ್ರಸ್ತುತ ವಿಜಯಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕೆಲವು ಗ್ರಾಮಗಳು ಪ್ರಾಚೀನ ಹಗರಟಗಿ ನಾಡಿನಲ್ಲಿ ಇದ್ದವು ಎಂಬುದನ್ನು ಶಾಸನಗಳಲ್ಲಿ ಉಲ್ಲೇಖವಾದ ವಿವರಗಳಿಂದ

ತಿಳಿಯಬಹುದಾಗಿದೆ. ಸಿಂದಗಿ ತಾಲೂಕಿನಲ್ಲಿ ಮುಖ್ಯವಾಗಿ ಕಡ್ಲೆವಾಡ ಮತ್ತು ಕಲಕೇರಿ ಗ್ರಾಮಗಳಲ್ಲಿ ಈ ನಾಡಿನ ಕುರಿತು ಉಲ್ಲೇಖಿಸುವ ಶಾಸನಗಳು ಕಂಡುಬಂದಿವೆ. ಕ್ರಿ.ಶ.೧೧೭೨ರ ತೇದಿಯ ಕಡ್ಲೆವಾಡ ಶಾಸನವು ಕಳಚುರ್ಯ ಚಕ್ರವರ್ತಿ ರಾಯಮುರಾರಿ ಸೋವಿದೇವನು ಸೆಲೆಯಹಳ್ಳಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಬಮ್ಮಿದೇವ ಎಂಬುವನು ಎಳಮೇಲನ್ನು ಆಳುತ್ತಿದ್ದ ಎಂಬ ಉಲ್ಲೇಖವಿದೆ. ಅಲ್ಲದೇ ಎಳಮೇಲಿನ ಮಹಾಮಂಡಳೇಶ್ವರ ಸಿಂಗಿದೇವರಸನಾಗಿದ್ದನೆಂದು ವಿವರಿಸುತ್ತವೆ. ಆ ಸಂದರ್ಭದಲ್ಲಿ ಸಗರ, ಹಗರಟ್ಟಗೆ ಮತ್ತು ಏಳಮೇಲ ನಾಡನ್ನು ದಂಡನಾಯಕ ಕುಮಾರ ಬಮ್ಮಿದೇವರಸನು ಆಳುತ್ತಿದ್ದ. ಈತ ಹಾಗೂ ಮಹಾಮಂಡಳೇಶ್ವರ ಎಳಮೇಲನ ಮಹಾಮಂಡಳೇಶ್ವರ ಸಿಂಗಿದೇವರಸನು ಸೇರಿ ಕಡಲೇವಾಡದ ಘಟಿಕಾಸ್ಥಾನದ ಸ್ವಯಂಭು ಸೋಮನಾಥ ದೇವಾಲಯಕ್ಕೆ ಭೇಟಿ ನೀಡಿ ದೇವರ ದರ್ಶನ ಪಡೆದರುರೆಂಬ ವಿವರಗಳುಂಟು. ಅಲ್ಲದೇ ದೇವಾಲಯದ ಆಚಾರ್ಯ ಸೋವಿರಾಸಿ ಪಂಡಿತರಿಗೆ ಈ ದಾನ ಮಾಡಿ ಪುನಃ ಆತನು ಪುತ್ರ ಹಾಗೂ ಸೂತ್ರದಾರಿ ಸಂಗೋಜಿಗೆ ಭೂಮಿದಾನ ಮಾಡಿದನು ಎಂಬ ಉಲ್ಲೇಖವನ್ನು ನೀಡುತ್ತಾರೆ[೫೬].

ಈ ಶಾಸನದಲ್ಲಿ ಉಲ್ಲೇಖಿತ ಎರಡ–ಮೂರು ಸಂಗತಿಗಳು ತುಂಬಾ ಮುಖ್ಯವೆನಿಸುತ್ತವೆ. ಕಳಚೂರ್ಯರ ಆಡಳಿತ ಸಂದರ್ಭದಲ್ಲಿ ಮಹಾಪ್ರಚಂಡ ದಂಡನಾಯಕ ಕುಮಾರ ಬಮ್ಮಿದೇವರಸು ಸಗರ ಮತ್ತು ಹಗರಟಗಿ ಎರಡು ಆಡಳಿತ ವಿಭಾಗಗಳನ್ನು ಆಳುತ್ತಿದ್ದನು ಎಂಬುದು. ಬಹುಶಃ ಕಲ್ಯಾಣದ ಚಾಲುಕ್ಯ ಮೂರನೆಯ ಸೋಮೇಶ್ವರ ಕಳಚೂರ್ಯರಿಂದ ಅಧಿಕಾರ ಕಳೆದುಕೊಂಡ ನಂತರ ಅವರ ಮಹಾಮಂಡಳೇಶ್ವರರಾದ ಹೈಹಯರು ಸಹ ರಾಜಕೀಯ ಅಧಿಕಾರದಿಂದ ಕುಸಿತಕ್ಕೆ ಒಳಗಾಗಿರಬಹುದು. ಆ ಸಂದರ್ಭದಲ್ಲಿ ಬಹುಶಃ ಎಳಮೇಲ(ಆಲಮೇಲ)ದ ಸಿಳಾರ(ಶಿಲಾಹಾರ)ರು ಹೆಚ್ಚಿನ ಪ್ರವರ್ಧಮಾನಕ್ಕೆ ಬಂದಿದ್ದಾರೆ. ಹಾಗಾಗಿ ಆ ಮಹಾಮಂಡಳೇಶ್ವರರಲ್ಲಿದ್ದ ಮಹಾಪ್ರಚಂಡ ದಂಡನಾಯಕನಾಗಿದ್ದ ಕುಮಾರ ಬಮ್ಮಿದೇವರಸನು ಸಹಜವಾಗಿ ಈ ಆಡಳಿತ ವಿಭಾಗಗಳ ಮೇಲೆ ಹಿಡಿತ ಸಾಧಿಸಿರುವ ಸಾಧ್ಯತೆಗಳುಂಟು. ಆದರೆ ವಿಪರ್ಯಾಸವೆಂಬಂತೆ ಕೆಲವೇ ವರ್ಷಗಳಲ್ಲಿ ಕಲ್ಯಾಣ ಚಾಲುಕ್ಯರು ಮತ್ತೆ ಮರಳಿ ಅಧಿಕಾರಕ್ಕೆ ಬರಲಾಗಿ ಶಿಲಾಹಾರರ ನಿಷ್ಠೆ ಬಹುಶಃ ಚಾಲುಕ್ಯರ ಪರವಾಗಿ ವಾಲಿದಂತೆ ಕಾಣುವುದು. ಹಾಗಾಗಿ ದಂಡನಾಯಕ ಬಮ್ಮಿದೇವರಸನು ಸಹಜವಾಗಿ ನಾಲ್ಕನೆಯ ಸೋಮೇಶ್ವರನ ಪರವಾಗಿ ನಿಂತಿರಬಹುದು. ಮೂರನೆಯ ಸೋಮೇಶ್ವರನಿಗೆ ನಿಷ್ಠನಾಗಿದ್ದ ಆದರೆ ನಾಲ್ಕನೆಯ ಸೋಮೇಶ್ವರನಿಗೆ ವಿಧೇಯತೆ ತೋರದ ಮಹಾಮಂಡಳೇಶ್ವರ ಅಲ್ಲಹುಲಿದೇವರಸನ ಮೇಲೆ ದಂಡನಾಯಕ ಬಮ್ಮಿದೇವನು ದಾಳಿ ಮಾಡಿದ ಎಂಬ ವಿವರವು ಹೆಮ್ಮಡಗಿ(ಸುರಪುರ ತಾಲೂಕು) ಶಾಸನದಲ್ಲಿ ಕಂಡುಬರುತ್ತದೆ. ಬಹುಶಃ ಆ ಬಮ್ಮಿದೇವನು ಇವನೇ ಇರಬಹುದೇ?

ಇದೇ ಶಾಸನದಲ್ಲಿ ಉಲ್ಲೇಖವಾದ ಮತ್ತೊಂದು ಪ್ರಮುಖ ವಿಚಾರವೆಂದರೆ ಸೆಲೆಯಹಳ್ಳಿಯ ನೆಲವೀಡು ಈ ಕುರಿತು ಈಗಾಗಲೇ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಸೆಲೆಯಹಳ್ಳಿ

ನೆಲವೀಡು ಆರನೆಯ ವಿಕ್ರಮಾದಿತ್ಯನ ಕಾಲಾವಧಿಯಿಂದಲೂ ಹೆಚ್ಚಿನ ಪ್ರಸಿದ್ಧಿ ಪಡೆಯುತ್ತಾ ಬಂದಿದೆ. ಅದರ ಪ್ರಾಮುಖ್ಯತೆ ಕಳಚೂರಿಗಳ ಕಾಲದಲ್ಲಿಯೂ ಮುಂದುವರೆದಿರಬಹುದು. ಅಲ್ಲದೇ ಕಳಚೂರಿಗಳನ್ನು ಬದಿಗೊತ್ತಿ ಮತ್ತೆ ರಾಜ್ಯ ಸ್ಥಾಪಿಸಿದ ಕಲ್ಯಾಣದ ಚಾಲುಕ್ಯರ ಕೊನೆಯ ಅರಸ ನಾಲ್ಕನೆಯ ಸೋಮೇಶ್ವರನು ಸಹ ಇದೇ ಸೆಲೆಯ ಅಥವಾ ಸೆಲೆದ ಹಳ್ಳಿಯಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದಿರಬಹುದು. ಈ ಸೆಲೆಯಹಳ್ಳಿಯ ಯಾವುದು ಎಂಬುದರ ಕುರಿತು ಕೆಲವು ವಿವರಗಳುಂಟು. ಇದು ಚಿತ್ತಾಪುರ ತಾಲೂಕಿನಲ್ಲಿರುವ ಗ್ರಾಮವೆಂದು ಕೆಲವರು ಅಭಿಪ್ರಾಯಿಸಿದರೆ ಇನ್ನು ಕೆಲವರು ಸುರಪುರ ತಾಲೂಕತಿನ ಶೆಳ್ಳಗಿ ಅಥವಾ ಶೆಳ್ಳಗೆ ಅಥವಾ ಶೆಳಗಿ ಗ್ರಾಮವೇ ಈ ಪ್ರಾಚೀನ ನೆಲವೀಡಾಗಿರಬಹುದೆಂದು ಅಭಿಪ್ರಾಯಿಸಿದ್ದಾರೆ. ಪ್ರಾಯಶಃ ಇದುವೇ ಸರಿಯಾದುದು ಎಂದೆಣಿಸುತ್ತದೆ.

ಸಿಂದಗಿ ತಾಲೂಕಿನ ಕಲಕೇರಿಯ ಕ್ರಿ.ಶ.೧೧೮೭ರ ತೇದಿಯ ಶಾಸನವು ಹಗರಟಗೆ ನಾಡು ಕಲ್ಕೆರೆಯ ಮುನ್ನೂರು ಮಹಾಜನಗಳಲೊಬ್ಬನಾದ ಕಮ್ಮೇವಂಶದ ಅಕ್ಮತಜಾಕದ ಪ್ರಭು ವಿಕ್ರಮಾಂಕ ದಂಡಾಧಿಪನಿಂದ ಭೂಮಿಯನ್ನು ಖರೀದಿಸಿ ದಾನ ಮಾಡಿದರ ಕುರಿತು ವಿವರಗಳಿವೆ. ಆ ಸಂದರ್ಭದಲ್ಲಿ ಮಹಾಮಂಡಳೇಶ್ವರ ದೇವರಸನು ಹಗರಟ್ಟಿಗೆ ನಾಡನ್ನು ಆಳುತ್ತಿದ್ದ. ಮಹಾಜನರಲ್ಲಿ ಒಬ್ಬನಾಗಿದ್ದ ರೇಚಭಟ್ಟನು ಸತ್ರಕ್ಕಾಗಿ ಈ ಭೂಮಿಯನ್ನು ದಾನ ಮಾಡಿದ ಎಂಬ ಉಲ್ಲೇಖವಿದೆ[೩೭]. ಈ ಶಾಸನದಲ್ಲಿ ಉಲ್ಲೇಖಿತನಾದ ಮಹಾಮಂಡಳೇಶ್ವರ ವಿರುಪದೇವರಸನು ತಾಳಿಕೋಟೆಯ ಶಾಸನಗಳಲ್ಲಿಯೂ ದಾಖಲುಗೊಂಡಿದ್ದಾನೆ.

ಇದೇ ಗ್ರಾಮದ ಕ್ರಿ.ಶ. ೧೨೪೪ರ ತೇದಿಯ ಶಾಸನವು ಅಟ್ಟಳೆನಾಡಿನ ಹಗರಟಗೆ ನಾಡಿನಲ್ಲಿ ಕಲುಕೆರೆ ಇತ್ತು ಎಂಬ ಉಲ್ಲೇಖ ನೀಡುತ್ತದೆ[೩೮]. ಇವರಲ್ಲಿ ಪ್ರಸ್ತಾಪಿತವಾದ ಅಟ್ಟಳೆನಾಡು ಬಹುಶಃ ಬಸವಕಲ್ಯಾಣದ ಹತ್ತಿರ ಬರುವ ಆಡಳಿತ ವಿಭಾಗವಾಗಿರಬಹುದು. ಕ್ರಿ.ಶ.೧೨೩೦ರ ತೇದಿಯ ಈ ಗ್ರಾಮದ ಇನ್ನೊಂದು ಶಾಸನವು ಆನಂತತೀರ್ಥ ದೇವಾಲಯಕ್ಕೆ ರಂಗರಸನ ಮನೆಯ ಪುತ್ರೋತ್ಸವದ ಸಂದರ್ಭದಲ್ಲಿ ಕಲುಕೆರೆಯ ಮಹಾಜನರುಗಳು ತೋಟ ದಾನ ಮಾಡಿದರು. ಮಾಧವದೇವರ ತೋಟದಲ್ಲಿ ಹತ್ತು ಮತ್ತರ ನೀಡಿದಂತೆ ಹೇಳಿದೆ. ಪುಶ್ಯಮಾಸದಲ್ಲಿ ಸರ್ಬಧರನಾಯಕನು ಅದೇ ಅನಂತದೇವರಿಗೆ ಹಗರಿಟಗೆಯ ಮುನ್ನೂರರೊಳಗಿನ ಸುಂಕವನ್ನು ಸರ್ವ ಮಾನ್ಯವಾಗಿ ಕೊಟ್ಟಂತೆ ಹೇಳಿದೆ ಎಂದು ದಾಖಲಿಸಲಾಗಿದೆ[೩೯]

ವಿಜಯಪುರ ಜಿಲ್ಲೆಯ ಬಸವನಬಾಗೇವಾಡಿ ತಾಲೂಕಿನ ಸಾಲ್ವಡಗಿ ಗ್ರಾಮದ ಕ್ರಿ.ಶ.೧೨೩೧ರ ಶಾಸನವು ಸಹ ಹಗರಟಗಿ ನಾಡಿನ ಕುರಿತು ಉಲ್ಲೇಖಿಸುತ್ತದೆ[೪೦]. ಯಾದವ ವಂಶದ ಕನ್ನರದೇವನು ರಾಜ್ಯಭಾರ ಮಾಡುತ್ತಿದ್ದಾಗ ಅವನ ಮಹಾಪ್ರಧಾನಿ ಮತ್ತು ರಾಯ ದಂಡಾಧಿಕಾರಿಯಾಗಿದ್ದ ಚವುಡಿಸೆಟ್ಟಿ ಎಂಬುವನು ಬೇರೆ ಬೇರೆ ನಾಡನ್ನು ಆಳುತ್ತಿದ್ದ ಉಲ್ಲೇಖ ಬರುತ್ತದೆ. ಇವನ ಮಾವ ರಂಗರಸನು ಸಾಳವಡಿಗೆ, ಬಾಗವಾಡಿ ಮುಂತಾದ ಹಲವು

ಗ್ರಾಮಗಳನ್ನು ಆಳುತ್ತಿದ್ದನು. ಶಾಸನದಲ್ಲಿ ಉಲ್ಲೇಖಿತ ರಂಗರಸನು ಸಿಳಾರ(ಶಿಲಾಹಾರ) ಕುಳದ ಗೋಪದೇವರ ಅಳಿಯನಾಗಿದ್ದ. ಇವನಿಗೆ ಹಗರಟ್ಟಿಗೆಯ ಹಿರಿಯಣ್ಣನ ಮಗ ಸಿರಿಯಣ್ಣನು ದತ್ತಿ ನೀಡಿದ ಎಂಬ ಮಾಹಿತಿ ಈ ಶಾಸನದಲ್ಲಿ ಉಲ್ಲೇಖವಾಗಿದೆ. ಈತನು ತನ್ನನ್ನು ವಾಜಿಕುಲಕ್ಕೆ ಸೇರಿದವನೆಂದು ಸಂಬೋಧಿಸಿಕೊಂಡಿದ್ದಾನೆ. ಆರನೆಯ ವಿಕ್ರಮಾದಿತ್ಯನ ಪ್ರಧಾನಿ ಕೊಂಡಗುಳಿ ಕೇಸಿರಾಜನು ಸಹ ವಾಜಿ ವಂಶಕ್ಕೆ ಅಥವಾ ಕುಲಕ್ಕೆ ಸೇರಿದವನಾಗಿದ್ದನೆಂದು ಹೇಳಿಕೊಂಡಿದ್ದಾನೆ. ಈತನು ಸಹ ಸಗರ ಹಗರಟ್ಟಗಿ ಹಾಗೂ ತರ್ದವಾಡಿ ಅಥವಾ ತದ್ದೇವಾಡಿ ನಾಡುಗಳ ಪರಿಸರದಲ್ಲಿದ್ದವನೆಂದು ಗುರುತಿಸಲಾಗಿದೆ. ಬಹುಶಃ ರಂಗಸರನು ಕೇಶಿರಾಜನ ವಂಶದಲ್ಲಿ ಮುಂದುವರೆದ ಪೀಳಿಗೆಯವನಾಗಿದ್ದನೆ?

ಭೌಗೋಳಿಕವಾಗಿ ಪ್ರಾಚೀನ ಸಗರನಾಡಿನಲ್ಲಿದ್ದ ಜೇವರ್ಗಿ ತಾಲೂಕಿನ ಕೊಂಡಗುಳಿ ಗ್ರಾಮದಲ್ಲಿಯೂ ಸಹ ಹಗರಟಗಿ ನಾಡನ್ನು ಉಲ್ಲೇಖಿಸುವ ಕ್ರಿ.ಶ.೧೧೧೯ರ ತೇದಿಯ ಶಾಸನವೊಂದು ಕಂಡುಬಂದಿದೆ. ಮುದ್ದೇಬಿಹಾಳ ತಾಲೂಕಿನ ಗೋಟಖಿಂಡಕಿ ಶಾಸನವು ಕ್ರಿ.ಶ. ೧೧೭೪ರ ತೇದಿಯದ್ದು. ಕಳಚೂರ್ಯ ರಾಯಮುರಾರಿ ಸೋವಿದೇವನ ಕಾಲದ ಈ ಶಾಸನವು ಬಂಮದೇವ ದಂಡನಾಯಕರ ಅಮಾತ್ಯದಿಂದ ಹಗರಟ್ಟಗೆ ಮುಂನೂರರ ಬಳಿಯ ಬಾಡಂ ಶ್ರೀಮತು ಗೊಟ್ಟ ಖಂಡಕಿಯ ಪ್ರಭು ಮಹಾದೇವನಾಯಕರ ಮಗ ಬಂಧುಚಿಂತಾಮಣಿಯುಂ ಎಂದು ಹೇಳುತ್ತಾ ದತ್ತಿಯೊಂದನ್ನು ಉಲ್ಲೇಖಿಸುತ್ತದೆ[೮].

ಸವದತ್ತಿ ರಟ್ಟ ಕಾರ್ತವೀರ್ಯನ ಕಲ್ಹೊಳೆ(ಗೋಕಾಕ ತಾಲೂಕು ಬೆಳಗಾವಿ ಜಿಲ್ಲೆ) ಶಾಸನವು ಶ್ರೀಕವಿ ವಿಬುಧ ಸ್ತ್ರೀ

ತ್ನಾಕಲಿತಂ ಜಳಧಿಯಂದರಿಂ ಯದುಕುಳ ಲ

ಕ್ಷ್ಮೀಕಾಂತಂ ಕ್ರಿತ ಕಮಳಾ

ನೀತಂ ಹಗರಟಗಿ ನಾಡು ಜಗದೊಳೆಸಗುಂ॥ ಎಂದು ಹಗರಟಗೆ ನಾಡನ್ನು ವರ್ಣಿಸುತ್ತದೆ. ಈ ನಾಡನ್ನಾಳಿದ ಹೈಹಯವಂಶದ ಸಾಮಂತರ ವಂಶಾವಳಿಯನ್ನು ನೀಡುವುದರೊಂದಿಗೆ ಆ ವಂಶದ ಅರಸು ಮೊದಲನೆಯ ರಾಜನ ಮಗಳು ಚಂದಲದೇವಿ(ಚಂದ್ರಿಕೆ ಅಥವಾ ಚಂದ್ರಿಕಾ ದೇವಿ)ಯು ಮಾಂಡಲಿಕನಾದ ಸೌಂದತ್ತಿ ರಟ್ಟ ಲಕ್ಷಣ(ಮೊದಲನೆಯ ಲಕ್ಷ್ಮೀದೇವ)ನನ್ನು ಮದುವೆಯಾದುದನ್ನು ರಟ್ಟರ ನಾಲ್ಕನೆಯ ಕಾರ್ತವೀರ್ಯ ಹಾಗೂ ಮಲ್ಲಿಕಾರ್ಜುನರಿಗೆ ತಾಯಿಯಾದುದನ್ನು ತನ್ನ ತಮ್ಮ ಸಿಂಗಿದೇವನ ಮಗ ಎರಡನೆಯ ರಾಜ ಕಟ್ಟಿಸಿದ್ದು ಬಸದಿಯೊಂದಕ್ಕೆ ದಾನವಿತ್ತುದನ್ನು ವಿವರವಾಗಿ ತಿಳಿಸುತ್ತದೆ ಎಂದು ಅಭಿಪ್ರಾಯಿಸಲಾಗಿದೆ[೯].

ಕ್ರಿ.ಶ.೧೨೨೧ರ ತೇದಿಯ ಧಾರವಾಡ ಶಾಸನವು ಮಹಾಮಂಡಳೇಶ್ವರನಾದ ಕದಂಬ ವೀರವಜ್ರದೇವನನ್ನು ಕುರಿತು ವಿವರಿಸುತ್ತದೆ. ಸವಣೂರ ಮೈಲಾರಭಟ್ಟರ ಮಕ್ಕಳಾದ

ವಾಸುದೇವವುಪಾಧ್ಯಾಯರು ಮುರಿಗದ ಪದುಮಯ್ಯ ಹಗರಟ್ಟಿಗೆಯ ದೇವಣಭಟ್ಟರು ಇಂತಿವರು ಮುಖ್ಯವಾಗಿ ಸಮಸ್ತ ವೃತ್ತಿವಂತರು ಎಂಬ ಉಲ್ಲೇಖ ಬರುತ್ತದೆ[೬೩].

ಶ್ರೀಮನು ಮಹಾಮಂಡಳೇಶ್ವರ ಚಂಮಡಿಗ ದೇವರಸನ ಬಗೆಗೆ ಹಗರಟಗಿಯ ಶಾಸಗಳಲ್ಲಿ ವಿವರಗಳು ಲಭ್ಯವಿಲ್ಲ ಆದರೆ ಗೋಕಾಕ ತಾಲೂಕಿನ ಕಲ್ಲೊಳ್ಳಿಯ ಕ್ರಿ.ಶ. ೧೨೦೪ರ ತೇದಿಯ ಶಾಸನವು ಹಗರಟಗಿ-೩೦೦ರ ಮಹಾಮಂಡಳೇಶ್ವರರಾದ ಯಾದವಂಶದ ವಂಶಾವಳಿಯನ್ನು ವಿವರವಾಗಿ ನೀಡುತ್ತದೆ[೬೪].

ರೆಬ್ಬ ಪತ್ನಿ ಹೋಳಲದೇವಿ

↓

ಬ್ರಹ್ಮ-ಪತ್ನಿ ಚಂದಲದೇವಿ

↓

ರಾಜಪತ್ನಿ ಮೈಳಲದೇವಿ

↓ ↓

ಚಂದಲ ದೇವಿ (ಚಂದ್ರಿಕೆ, ಚಂದ್ರಿಕಾ ದೇವಿ) | ಸಿಂಹ(ಸಿಂಗದೇವ ಪತ್ನಿ)

↓

ಭಾಗಲ ದೇವಿ

↓

ಎರಡನೆಯ ರಾಜ ಪತ್ನಿ, ಚಂದಲದೇವಿ ಮತ್ತು ಲಕ್ಷ್ಮಿದೇವಿಯರು

ಈ ಚಂದಲ ದೇವಿಯು ಆರನೆಯ ವಿಕ್ರಮಾದಿತ್ಯನ ಅರಸಿಯಾಗಿದ್ದಳಲ್ಲದೆ ಆಲಂದೇ ಸಾಸಿರ ಹಾಗೂ ಹಲವು ಭತ್ತಗ್ರಾಮಗಳನ್ನು ಆಳುತ್ತಿದ್ದಳೆಂದು ಡಾ.ಪಿ.ಬಿ. ದೇಸಾಯಿ ಅವರು ಅಭಿಪ್ರಾಯ ಪಡುತ್ತಾರೆ ಎಂದು ವಿವರಿಸಲಾಗಿದೆ

ಈ ಮೇಲಿನ ಮಾಹಿತಿಗಳೆಲ್ಲವು ಹಗರಟಗಿ ನಾಡಿನಿಂದ ಬಹುದೂರದಲ್ಲಿರುವ ಪ್ರದೇಶಗಳಲ್ಲಿರುವ ಶಾಸನಗಳಲ್ಲಿ ಲಭ್ಯವಾಗಿರುವಂಥವು. ಹಗರಟಗಿ ನಾಡನ್ನು ಆಳಿದ ಹೈಹಯರು ಹಾಗೂ ಎಳಮೇಲದ ಶಿಲಾಹಾರರು ಹಾಗೂ ಸಂಬಂಧಿಗಳು ಈ ನಾಡಿನ ಮಹಿಮೆಯನ್ನು ಬಹು ದೂರದವರೆಗೆ ವಿಸ್ತರಿಸಿದ್ದನ್ನು ಈ ಆಕರಗಳು ಸ್ಪಷ್ಟಪಡಿಸುತ್ತವೆ.

ಶ್ರೀ ತ್ರಿಭುವನಮಲ್ಲ ಪಾದಾರಾಧಕರು ಪರಬಳಸಾಧಕಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಮಾಹಸಾಮಂತ ಬೈಸರಸರು ಹಂದಿಯರಸರು ಹಗರಟ್ಟಿಗೆ ಮುನೂರುಮಂ ತ್ರಿಭೋಗಾಭ್ಯಂತರ ಸಹಿತ ಸುಖದಿನಾಳುತ್ತವಿರಲು ಎಂದು ಉಲ್ಲೇಖಿಸಿದೆ[೬೫]. ಅಲ್ಲದೇ ಇದೇ ಶಾಸನದಲ್ಲಿ ಶ್ರೀಮತ್ರಿಭುವನ ಮಲ್ಲಿದೇವರ ತತ್ಪಾದಪದ್ಮೋಪಜೀವಿ ಪಗರಿಟ್ಟಿಗೆ ಮುನ್ನೂರರ

ಬಳಿಯ ಬಾಡಂ ಕೊಂಡಗುಳಿಯ ಪ್ರಭುಬಿಲ್ಲರಸನುಂ ಅಲ್ಲಿಂ ಶ್ರೀಮಲ್ಲಿಕಾರ್ಜುನ ದೇವರ ಲಿಂಗ ಪ್ರತಿಷ್ಠೆಯು ಮಾಡಿದ ಎಂಬ ಉಲ್ಲೇಖ ಬರುತ್ತದೆ[೬೬]. ಕೆಲವು ಸೀಮೆಯ ಕುರಿತು ಸಹ ಈ ಶಾಸನದಲ್ಲಿ ವಿವರಗಳು ದಾಖಲಾಗಿವೆ. ದವಳಾರ(ಧವಳಾರ)ದ ಸೀಮೆ ಎಂಬ ಉಲ್ಲೇಖವುಂಟು. ಬಹುಶಃ ಸಿಂದಗಿ ತಾಲೂಕಿನ ಅಂದರೆ ಪ್ರಾಚೀನ ತರ್ದವಾಡಿನಾಡಿನವರೆಗೂ ಈ ಹಗರಟ್ಟಗಿ ನಾಡಿನ ಸೀಮೆ ವಿಸ್ತಾರಗೊಂಡಿತೆಂದು ಗುರುತಿಸಬಹುದು.

ಸುರಪುರ ತಾಲೂಕಿನ ಪ್ರಸ್ತುತ ಹಗರಟಗಿ ಗ್ರಾಮವೇ ಈ ನಾಡಿನ ಪ್ರಮುಖ ಮತ್ತು ರಾಜಧಾನಿ ಪಟ್ಟಣವಾಗಿತ್ತು. ಈ ಗ್ರಾಮದಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ಸಹ ಪ್ರಾಚೀನ ಹಗರಟಗಿ ಹಾಗೂ ಪಟ್ಟಣದ ಕುರಿತು ಉಲ್ಲೇಖಗಳಿರುವುದನ್ನು ಗಮನಿಸಬಹುದು. ಈ ಗ್ರಾಮದಲ್ಲಿ ಲಭ್ಯವಿರುವ ಆಕರಗಳಲ್ಲಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಕಾಲದ ಶಾಸನವೇ ಮೊದಲನೆಯದ್ದು ಎಂದು ಗಮನಿಸಬಹುದು. ಆದರೆ ಈ ಪ್ರಾಚೀನ ನಾಡು ಹಾಗೂ ಪಟ್ಟಣದ ಕುರಿತು ತುಂಬಾ ಪ್ರಾಚೀನವಾದ ಉಲ್ಲೇಖಗಳು ಬೇರೆ ಬೇರೆ ಗ್ರಾಮಗಳಲ್ಲಿ ಹಾಗೂ ಪ್ರದೇಶಗಳಲ್ಲಿ ಲಭ್ಯವಿರುವ ಶಾಸನಗಳಲ್ಲಿ ದಾಖಲೆಗೊಂಡಿರುವುದನ್ನು ಕಾಣುತ್ತೇವೆ. ಕ್ರಿ.ಶ.ಸುಮಾರು ೧೨ನೇ ಶತಮಾನದ ಆರಂಭದಲ್ಲಿಯೇ ಈ ನಾಡಿನ ಹಾಗೂ ಪಟ್ಟಣದ ಕುರಿತು ಉಲ್ಲೇಖಗಳಿರುವುದನ್ನು ಗಮನಿಸಬಹುದು.

ಕ್ರಿ.ಶ.೧೦೯೨ರ ತೇದಿಯ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಕಾಲದ ಶಾಸನವೇ ಹಗರಟಿಗೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಉಪಲಬ್ದವಾದ ಮೊದಲ ಶಾಸನವಾಗಿದೆ ಎಂದು ಕಂಡುಬರುತ್ತದೆ. ಶ್ರೀ ಮತ್ತಿಭುವನಮಲ್ಲರಸರ ಪರಮಾರಾಧ್ಯರಪ್ಪವರ ಚರಣಾರಾಧಕರುಮಪ್ಪ ಶ್ರೀಮನ್ಮಹಾಪ್ರಧಾನ ದಂಡನಾಯಕಂ ಅಹವಮಲ್ಲರಸರ ಸರ್ವನಮಶ್ಯಮಾದಗ್ರಹಾರಂ ಹಗರಿಟ್ಟಿಗೆಯ ನಖರೇಶ್ವರ ದೇವರ್ಗ್ಗೆ ಕೊಟ್ಟ ದತ್ತಿ ಎಂಬ ಉಲ್ಲೇಖವನ್ನು ಹೊಂದಿದೆ[೬೭]. ಪ್ರಾಚೀನ ಹಗರಟಗಿ ಪಟ್ಟಣವು ಸರ್ವನಮಸ್ಯದ ಅಗ್ರಹಾರವು ಸಹ ಆಗಿತ್ತೆಂದು ವಿವರಗಳಿವೆ. ಇದೇ ಅರಸನ ಕಾಲದ ಕ್ರಿ.ಶ.೧೧೨೩ರ ಇದೇ ಗ್ರಾಮದಲ್ಲಿ ಲಭ್ಯವಾಗಿರುವ ಶಾಸನದಲ್ಲಿಯೂ ಸಹ ಪಗರಟಗೆ(ಹಗರಟಗಿ)ಯ ನಖರೇಶ್ವರ ದೇವರಿಗೆ ಭೂದತ್ತಿ ಬಿಟ್ಟ ಉಲ್ಲೇಖ ನೀಡುತ್ತದೆ[೬೮]. ಕ್ರಿ.ಶ.೧೧೨೬ರ ತೇದಿಯ ಶಾಸನವು ಸರ್ವನಮಶ್ಯದ ಅಗ್ರಹಾರ ಹಗರಟಗಿಯ ಮಲ್ಲಿಕಾರ್ಜುನ ದೇವರಿಗೆ ಚಂದಿಮರಸನು ದತ್ತಿ ಬಿಟ್ಟಿರುವ ಉಲ್ಲೇಖವನ್ನು ನೀಡುತ್ತದೆ[೬೯].

ಕಲ್ಯಾಣ ಚಾಲುಕ್ಯ ಇಮ್ಮಡಿ ಜಗದೇಕಮಲ್ಲನ ಕಾಲದ ಕ್ರಿ.ಶ. ೧೧೪೪ರ ತೇದಿಯ ಶಾಸನವು ಹಗರಟಗಿಯ-೫೦೦ ಮಹಾಜನರನ್ನು ಉಲ್ಲೇಖಿಸುತ್ತದೆ[೭೦]. ಶ್ರೀಮತು ಸರ್ವನಮಸ್ಯದಗ್ರಹಾರ ಹಗರಿಟಗೆಯ ಶೇಷ ಮಹಾಜನಂಗಳೈನೂರ್ಬರು ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಸತವೀರ ಸಾಸನಲಬ್ದ ಚಾರುಚರಣ ನಯವಿನಯ ವಿಜ್ಞಾನವಿವಬಣಂಜ ಧರ್ಮ್ಮ ಪ್ರತಿಪಾಳನರುಂ ಎಂಬ ವಿಶೇಷಣಗಳು ಅವರ ಬಗೆಗೆ ಉಲ್ಲೇಖವಾಗಿರುವುದನ್ನು

ಗಮನಿಸಬಹುದು. ಹಗರಟಗಿಯ-೫೦೦ ಜನ ಮಹಾಜನರು ಮತ್ತು ಅಯ್ಯಾವೊಳೆಯ-೫೦೦ ಸ್ವಾಮಿಗಳನ್ನು ಪ್ರಶಸ್ತಿ ಸಹಿತವಾಗಿ ವರ್ಣಿಸುತ್ತದೆ.

ಕಳಚೂರ್ಯ ಸಂಕಮದೇವನ ಆಳ್ವಿಕೆಯ ಕಾಲದ ಕ್ರಿ.ಶ.೧೧೬೬ರ ತೇದಿಯ ಶಾಸನವು ಸರ್ವನಮಸ್ಯದಗ್ರಹಾರ ಹಗರಟ್ಟಿಗೆ ಹಾಗೂ ಅಲ್ಲಿದ್ದ ಆಶೇಷ ಮಹಾಜನರು ಮತ್ತು ವರ್ತಕರ ಕುರಿತು ಮಾಹಿತಿ ದಾಖಲಿಸುತ್ತದೆ[೭೧]. ಕ್ರಿ.ಶ.೧೨೨೦ರ ತೇದಿಯ ಯಾದವ ಚಕ್ರವರ್ತಿ ಇಮ್ಮಡಿ ಸಿಂಘಣದೇವನ ಆಳ್ವಿಕೆ ಕಾಲದ ಶಾಸನವು ಚಾಳುಕ್ಯ ಚಕ್ರವರ್ತಿ ಹಿರಿಯ ಪೆರ್ಮಾಡಿರಾಯನ ಪರಮಾರಾಧ್ಯನಾದ ಅಹುಮಲ ಚಟ್ಟಯ್ಯನು ಹಗರಟಗಿಯಲ್ಲಿ ದತ್ತಿ ಬಿಟ್ಟಿರುವ ಉಲ್ಲೇಖವನ್ನು ನೀಡುತ್ತದೆ[೭೨]. ಈ ಶಾಸನವು ಹಗರಟಗಿ ಪಟ್ಟಣದ ಐದನೂರು ಮಹಾಜನರ ಹಾಗೂ ಹಗರಟಗಿ-೩೦೦ರ ಸೆಟ್ಟಿಗುತ್ತರ, ಮುಮ್ಮರಿದಂಡಗಳ ಕುರಿತು ವಿವರಿಸುತ್ತದೆ. ಈ ಶಾಸನದಲ್ಲಿ ಇಬ್ಬರು ಪ್ರಮುಖ ರಾಜಮನೆತನಗಳ ಉಲ್ಲೇಖಗಳು ಕಂಡುಬಂದಿವೆ. ಉಲ್ಲೇಖಿತ ಹಿರಿಯ ಪೆರ್ಮಾಡಿಯು ತಾನು ಕಲ್ಯಾಣ ಚಾಳುಕ್ಯ ಚಕ್ರವರ್ತಿಯ ಪರಮಾರಧ್ಯನೆಂದು ಹೇಳಿಕೊಂಡಿದ್ದಾನೆ. ಹಗರಟಗಿಯಲ್ಲಿದ್ದ ಮಹಾಜನರು, ಸೆಟ್ಟಿಗುತ್ತರು ಹಾಗೂ ಮುಮ್ಮರಿದಂಡಗಳು ಸೇವುಣ ಚಕ್ರವರ್ತಿಯನ್ನು ಭಿನ್ನಯಿಸಿಕೊಂಡು ದಾನ ನೀಡಿರುವ ವಿವರಗಳಿವೆ.

ಯಾದವ ಚಕ್ರವರ್ತಿ ಇಮ್ಮಡಿ ಸಿಂಘಣದೇವನ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.೧೨೨೬ರ ತೇದಿಯ ಹಗರಟಗಿ ಶಾಸನದಲ್ಲಿ ಹಗರಟಗಿ-೩೦೦ರ ಸೆಟ್ಟಿಗುತ್ತ ಮುಮ್ಮರಿದಂಡರು, ಸರ್ವಾಯಂಗಳು ಮತ್ತು ಎಂಟು ಗಾಮುಂಡರು ಮಹಾಸಭೆಯಾಗಿ ನೆರಿದಿದ್ದಾಗ ಸ್ಥಳೀಯ ಗಾವುಂಡ ಮತ್ತು ಆತನ ಮಕ್ಕಳು ಸೇರಿ ನಿರ್ಮಿಸಿದ ದೇವಾಲಯಕ್ಕೆ ಅಲ್ಲಿದ್ದ ಮಹಾಜನರು ದಾನ-ದತ್ತಿ ಬಿಟ್ಟ ಉಲ್ಲೇಖವನ್ನು ನೀಡುತ್ತದೆ[೭೩].

ಕ್ರಿ.ಶ.ಸುಮಾರು ೧೨ನೇ ಶತಮಾನಕ್ಕೆ ಸಂಬಂಧಿಸಿದ ಕಳಚೂರ್ಯ ಚಕ್ರವರ್ತಿಯೊಬ್ಬನ ಕಾಲದೆಂದು ಹೇಳಬಹುದಾದ ಶಾಸನವೊಂದು ಪ್ರಕಟಗೊಂಡಿದೆ[೭೪]. ಸರ್ವನಮಸ್ಯರ ಅಗ್ರಹಾರವಾಗಿದ್ದ ಹಗರಟಿಗೆಯ ಆಶೇಷ ಮಹಾಜನರು ಮತ್ತು ಅಯ್ಯಾವೊಳೆಯ ಐನೂರ್ವರು ಊರೊಡೆಯರ ಸಮ್ಮುಖದಲ್ಲಿ ತ್ರಿಕೂಟೇಶ್ವರ ದೇವರ ಕಾರ್ಯಗಳಿಗಾಗಿ ಆ ಸ್ಥಾನದ ಆಚಾರ್ಯ ಚಿಕ್ಕ ಜೀಯ ಪಂಡಿತರ ಕಾಲ್ತೊಳೆದು ಭೂದತ್ತಿ ಬಿಟ್ಟಿರುವ ಉಲ್ಲೇಖವನ್ನು ನೀಡುತ್ತದೆ.

ಪ್ರಾರಂಭದಲ್ಲಿ ಹಗರಟಗಿ ನಾಡಿನಲ್ಲಿದ್ದ ಮೂದನೂರು ಹಾಗೂ ಕೆಂಬಾವಿ ಆಡಳಿತ ವಿಭಾಗಗಳು ಆ ನಂತರದ ಅವಧಿಯಲ್ಲಿ ಸಗರನಾಡಿನಲ್ಲಿ ವಿಲೀನಗೊಂಡಿರುವ ಸೂಚನೆಗಳು ಶಾಸನಗಳಲ್ಲಿ ಕಂಡುಬಂದಿವೆ. ಅಲ್ಲದೇ ಶಹಾಪುರ ತಾಲೂಕಿನ ಕ್ರಿ.ಶ. ೧೧೮೯ರ ತೇದಿಯ ಹುಲಿಕಲ್ ಶಾಸನದಲ್ಲಿ[೭೫]. ಶ್ರೀ ಮನ್ಮಹಾಪ್ರಭು ದಂಡನಾಯಕರು ಸಗರ ಹಗರಿಟ್ಟಗೆ ನಾಡಮನ್ನೆಯ ಆಳುತ್ತಿದ್ದರು ಎಂಬ ವಿವರ ದಾಖಲಾಗಿದೆ. ಈ ಎರಡು ನಾಡುಗಳ ಹೆಸರು ಜೊತೆಯಾಗಿಯೆ ಉಲ್ಲೇಖಿಸಿರುವ ಮಾಹಿತಿ ಈ ಶಾಸನದಲ್ಲಿ ಮಾತ್ರ ದೊರಕುತ್ತದೆ.

## ಹಗರಟಗಿ ಪಟ್ಟಣ

ಪ್ರಾಚೀನ ಹಗರಟಗಿ-೩೦೦ರ ಆಡಳಿತ ವಿಭಾಗ ಅಥವಾ ನಾಡಿನ ಮುಖ್ಯ ಕೇಂದ್ರ ಅಥವಾ ಪಟ್ಟಣವು ಪ್ರಸ್ತುತ ಹಗರಟಗಿ ಗ್ರಾಮವೇ ಆಗಿತ್ತು. ಇದು ಸದ್ಯ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ನೈಋತ್ಯ ಭಾಗದಲ್ಲಿ ಕೇಂದ್ರೀಕೃತವಾಗಿರುವ ಜಿಲ್ಲೆಯ ಹಾಗೂ ತಾಲೂಕಿನ ಅಂಚಿನಲ್ಲಿರುವ ಮುಖ್ಯ ಗ್ರಾಮವಾಗಿದೆ. ಈ ಗ್ರಾಮದ ಪರಿಸರವನ್ನು ತುಸು ದಾಟಿದರೆ ಮುದ್ದೇಬಿಹಾಳ ತಾಲೂಕಿನ ಸರಹದ್ದು ಪ್ರಾರಂಭವಾಗುತ್ತದೆ. ಈ ಪರಿಸರದಿಂದ ಸ್ವಲ್ಪ ದೂರದಲ್ಲಿಯೇ ಡೋಣಿ ನದಿಯು ಕೃಷ್ಣಾನದಿಯನ್ನು ಸಂಗಮಿಸುವ ಸ್ಥಳವಿದೆ. ಹಗರಟಗಿ ಗ್ರಾಮದ ಸುತ್ತಮುತ್ತಲಿನ ಪ್ರಮುಖ ಹಳ್ಳಿಗಳೆಂದರೆ ಕೊಡೇಕಲ್ಲು, ಬೂದಿಹಾಳ, ರಾಜಕೋಳೂರು ಹಾಗೂ ಕೆಂಭಾವಿ ಪ್ರದೇಶಗಳಾಗಿವೆ. ಹಗರಟಗಿ ಪರಿಸರವು ಇತಿಹಾಸ ಪೂರ್ವಕಾಲದ ಅವಧಿಯಿಂದಲೂ ತುಂಬಾ ಮಹತ್ವದ ನೆಲೆಯಾಗಿ ದಾಖಲಾಗಿರುವುದನ್ನು ಈಗಾಗಲೇ ಅಧ್ಯಾಯ ಎರಡರಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಶಿಲಾಯುಗ ಸಂಸ್ಕೃತಿಗಳ ವಿವಿಧ ಕಾಲಘಟ್ಟದಲ್ಲಿಯೂ ತುಂಬಾ ಮಹತ್ವದ ಕುರುಹುಗಳನ್ನು ಹೊಂದಿರುವ ಹಗರಟಗಿ ಗ್ರಾಮ ಪರಿಸರವು ಐತಿಹಾಸಿಕ ಕಾಲದ ವಿವಿಧ ಅವಧಿಯಲ್ಲಿಯೂ ಅತೀ ಮುಖ್ಯಪಾತ್ರ ವಹಿಸುತ್ತಾ ಬಂದಿರುವುದನ್ನು ಶಾಸನ ಹಾಗೂ ವಾಸ್ತು ವಿವರಗಳಿಂದ ಸ್ಥೂಲವಾಗಿ ತಿಳಿಯಬಹುದು. ಕ್ರಿ.ಶ.೧೦ನೇ ಶತಮಾನದಿಂದ ೧೪ನೇ ಶತಮಾನಮಾನದ ಮಧ್ಯಾವಧಿಯವರೆಗೂ ಈ ನಾಡಿನ ಹಾಗೂ ಜಿಲ್ಲೆಯ ಇತಿಹಾಸ ಅಧ್ಯಯನದಲ್ಲಿ ಹಗರಟಗಿ ಪ್ರಾಚೀನ ಪಟ್ಟಣವು ಮುಖ್ಯವಾದ ಭೂಮಿಕೆಯನ್ನು ನಿರ್ವಹಿಸಿದೆ. ಆ ಕುರಿತು ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಶಾಸನ ಆಕರಗಳಲ್ಲಿ ಈ ಪ್ರಾಚೀನ ಪಟ್ಟಣವನ್ನು ಹಾಗೂ ನಾಡನ್ನು ಪಗಲಟ್ಟಿ-೩೦೦, ಪಗಲಟ್ಟಿ, ಪಗರಿಟೆನಾಡು, ಪಗಲಟಿ ವಿಶಯ, ಹಗಲಟ್ಟಿಗೆ-೩೦೦, ಹಗರಟಗಿ ನಾಡು, ಹಗರಟ್ಟಿಗೆ ನಾಡು, ಹಗರಟ್ಟಗೆ ಮುನ್ನೂರು, ಹಗರಿಟ್ಟಗೆ-೩೦೦, ಹಗಟ್ಟಿ ಮುನ್ನೂರು, ಹಗರಿಟ್ಟಿಗೆ ಮುನ್ನೂರು, ಹಗರಿಟೆನಾಡು, ಹಗರಟಗೆ, ಹಗರಟ್ಟಗೆ ಎಂಬಿತ್ಯಾದಿಯಾಗಿ ವರ್ಣಿಸಿಕೊಂಡು ಬರಲಾಗಿದೆ ಎಂದು ದಾಖಲಿಸಲಾಗಿದೆ[೨೧].

ಸ್ಥಳೀಯವಾಗಿ ಜನಸಾಮಾನ್ಯರು ಈ ದಿನಗಳಲ್ಲಿಯೂ ಸಹ ಈ ಗ್ರಾಮವನ್ನು ಹಗರಟಗಿ ಅಥವಾ ಅಗಟಗಿ ಎಂದು ಕರೆಯುತ್ತಾರೆ. ಈ ಪಟ್ಟಣವನ್ನು ಶಾಸನಗಳಲ್ಲಿ ಸರ್ವನಮಸ್ಯದಗ್ರಹಾರ ಮತ್ತು ಪಾಂಡವದತ್ತಿ ಅಗ್ರಹಾರವೆಂದೇ ಕರೆಯಲಾಗಿದ್ದು ಕ್ರಿ.ಶ.೧೨೯೯ರ ತೇದಿಯ ಶಾಸನದಲ್ಲಿ ಮಾತ್ರ ಈ ಪಟ್ಟಣವನ್ನು ಅಗ್ರಹಾರ ಪಾಂಡವದತ್ತಿ ಎಂದು ಉಲ್ಲೇಖಿಸಲಾಗಿದೆ[೨೨].

ಹಾಗಾದರೆ ಈ ಪಾಂಡವದತ್ತಿ ಏನನ್ನು ಸೂಚಿಸುತ್ತಿರಬಹುದೆಂದು ಕೆಲವು ಊಹೆಗಳನ್ನು ಮಾಡಬಹುದಾಗಿದೆ. ಮಹಾಭಾರತದಲ್ಲಿ ಬರುವ ಪಾಂಡು ಅಥವಾ ಪಾಂಡವ ರಾಜನ

ಮಕ್ಕಳನ್ನು ಪಾಂಡವರೆಂದು ಕರೆಯಲಾಗುತ್ತದೆ. ಇಂಥ ಸಂಗತಿಗಳೇನಾದರೂ ಈ ಪಟ್ಟಣಕ್ಕೆ ಸಂಬಂಧಿಸಿದಿರಬಹುದೇ? ಅಲ್ಲದೇ ಪಾಂಡವರ ಹೆಸರನ್ನು ಉಲ್ಲೇಖಿಸುವ ಕೆಲವು ಗುಡಿಗಳು ಸಹ ಈ ಗ್ರಾಮದಲ್ಲಿ ಈವರೆಗೂ ಉಳಿದುಕೊಂಡು ಬಂದಿವೆ. ಆದರೆ ಶಾಸನಗಳಲ್ಲಿ ಆ ರೀತಿಯ ಹೆಸರುಗಳೇನೂ ದಾಖಲಾಗಿಲ್ಲ. ಸ್ಥಳೀಯವಾಗಿ ಜನಸಾಮಾನ್ಯರು ಮಾತ್ರ ಈವರೆಗೂ ಅಲ್ಲಿರುವ ಗುಡಿಗಳನ್ನು ಪಾಂಡವನ ಮಕ್ಕಳಿಗಿದ್ದ ಹೆಸರಿನಿಂದಲೇ ಕರೆಯುತ್ತಾರೆ. ಇದಕ್ಕೆ ಸರಿಯಾದ ಆಧಾರಗಳೇನೂ ಕಂಡುಬಂದಿಲ್ಲ. ಬಹುಶಃ ೧೩ನೇ ಶತಮಾನದ ಪ್ರಾರಂಭಾವಧಿಯ ಕಾಲಘಟ್ಟದಲ್ಲಿ ಈ ಪಟ್ಟಣದ ಪರಿಸರದಲ್ಲಿಯೇ ಐದು ಪ್ರಮುಖ ಗುಡಿಗಳು ಏಕ ಕಾಲದಲ್ಲಿಯೇ ನಿರ್ಮಾಣವಾಗಿರಬಹುದೇ? ಬಹುಶಃ ಸಂಬಂಧಿಸಿದ ಆ ದೇವಾಲಯಗಳ ನಿಜನಾಮ ಬೇರೆ ಬೇರೆಯಾಗಿದ್ದರೂ ಇವು ಐದರ ಸಂಖ್ಯೆಯನ್ನು ಪ್ರತಿನಿಧಿಸುತ್ತಿರುವುದರಿಂದ ಸಹಜವಾಗಿ ಈ ಪಟ್ಟಣವನ್ನು ಪಾಂಡವದತ್ತಿ ಎಂದು ವಾಚ್ಯಾರ್ಥದಲ್ಲಿ ಕರೆದಿರಬಹುದೇ ಎಂದು ಅಭಿಪ್ರಾಯಿಸಬಹುದು. ಇದೊಂದು ಪ್ರಸಿದ್ಧ ಅಗ್ರಹಾರವಾಗಿತ್ತಲ್ಲದೇ ಇದನ್ನು ಅಗ್ರಹಾರ ಪಾಂಡವದತ್ತಿ ಎಂದು ಕರೆದಿರುವುದು ತುಂಬಾ ವಿಶೇಷವೆನಿಸುತ್ತದೆ. ಅಲ್ಲದೇ ಈ ರೀತಿಯ ಹೆಸರಿರುವ ವಿವರಗಳು ಈ ಪ್ರದೇಶದಲ್ಲಿ ಲಭ್ಯವಾಗಿಲ್ಲವೆಂದೇ ಪರಿಭಾವಿಸಬಹುದು.

ಹಗರಟಗಿಯಲ್ಲಿರುವ ದೇವಾಲಯಗಳಿಗೆ ಮಾತ್ರ ಪಾಂಡವರ ಹೆಸರುಗಳಿಂದ ಸ್ಥಳೀಯರೂ ಈಗಲೂ ಕರೆಯುತ್ತಾರೆ. ಉದಾಹರಣೆಗೆ ವಿವರಿಸುವುದಾದರೆ ಧರ್ಮರಾಜನ ಗುಡಿ, ಭೀಮನ ಗುಡಿ, ಅರ್ಜುನ ಗುಡಿ, ಕರ್ಣನ ಗುಡಿ ಹಾಗೂ ಕುಂತಿ ಗುಡಿ ಎಂಬ ಹೆಸರುಗಳಿವೆ. ಪ್ರಾಯಶಃ ಇಂಥ ಹೆಸರುಗಳಿಗೂ ಮತ್ತು ಈ ಊರಿನ ಇತಿಹಾಸದೊಂದಿಗೆ ಆ ಹೆಸರುಗಳ ಅವಿನಾಭಾವ ಸಂಬಂಧ ಯಾವ ರೀತಿಯದ್ದು ಎಂದು ಪರಿಶೀಲಿಸಬೇಕಾಗುತ್ತದೆ. ಈ ಗ್ರಾಮದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದ ವಿಷಯಗಳೆಂದರೆ ಈ ಪರಿಸರದಲ್ಲಿ ಲಭ್ಯವಿರುವ ಪುರಾತತ್ವ ಆಕರಗಳೊಂದಿಗೆ ಮಹಾಭಾರತ ಅಥವಾ ಪಾಂಡವರ ಘಟನೆಗಳ ಸಂಬಂಧವನ್ನು ಯಥೇಚ್ಛವಾಗಿ ಹೇಳಲಾಗುತ್ತದೆ. ಬಹುಶಃ ಈ ಗ್ರಾಮದ ನೈಜ ಚರಿತ್ರೆಯು ಪುರಾಣೀಕರಣಗೊಂಡು ನಿರಂತರವಾಗಿ ಬೇರೆ ರೂಪದ ಪ್ರಕ್ರಿಯೆಯೂ ಹರಳುಗಟ್ಟುತ್ತಾ ಮುನ್ನೆಡೆದಿರಬಹುದು. ಅಥವಾ ಇದರ ಹಿಂದಿನ ತಥ್ಯ ಬಹುಶಃ ಬೇರೆ ರೀತಿಯಲ್ಲಿ ಇದ್ದಿರಬಹುದು. ಆ ಸಂಬಂಧವಾಗಿ ವಿವರಿಸಿದ ಮುಂದಿನ ಈ ಊಹೆಯನ್ನು ಪರಿಗಣಿಸಬಹುದಾಗಿದೆ.

ಹಗರಟಗಿ ಗ್ರಾಮ ಪರಿಸರವು ಇತಿಹಾಸ ಯುಗದಲ್ಲಿ ಪ್ರಾಗಿತಿಹಾಸ ಸಂಸ್ಕೃತಿಯ ಹಂತಗಳಲ್ಲಿ ತುಂಬಾ ಪ್ರಮುಖ ಪಾತ್ರ ವಹಿಸುತ್ತಾ ಬಂದಿರುವುದನ್ನು ಈಗಾಗಲೇ ಸಾಕಷ್ಟು ಪ್ರಮಾಣದಲ್ಲಿ ಚರ್ಚಿಸಲಾಗಿದೆ. ಈ ಪರಿಸರದಲ್ಲಿ ಹಳೆಯ ಶಿಲಾ(Palaeolithic)ಸಂಸ್ಕೃತಿಯಿಂದ ಬೃಹತ್‌ಶಿಲಾ ಸಮಾಧಿ ಅಥವಾ ಕಬ್ಬಿಣ ಯುಗದ ವರೆಗಿನ ಕುರುಹುಗಳು ಯಥೇಚ್ಛವಾಗಿ ಹಗರಟಗಿ

ಪರಿಸರದಲ್ಲಿ ಕಂಡುಬರುತ್ತವೆ. ಅವುಗಳ ಕುರಿತು ಅಧ್ಯಾಯ ಒಂದರಲ್ಲಿ ಸುದೀರ್ಘವಾಗಿಯೇ ವಿವರಿಸಲಾಗಿದೆ. ಈ ಪರಿಸರದಲ್ಲಿರುವ ಕಬ್ಬಿಣಯುಗ ಅಥವಾ ಶಿಲಾ ಸಮಾಧಿ-ಸಂಸ್ಕೃತಿಯ ಕಲ್ಗೋರಿಗಳಂತೂ ಜಗದ್ವಿಖ್ಯಾತಿಯನ್ನು ಪಡೆದಿವೆ. ಸ್ಥಳೀಯವಾಗಿ ಅವುಗಳನ್ನು ಪಾಂಡವರ ಮನೆಗಳು ಅಥವಾ ಮೋರೆರ(ಮೌರ್ಯರ) ಮನೆಗಳೆಂದು ಕರೆಯಲಾಗುತ್ತದೆ. ಶಿಲಾಗೋರಿಗಳೆಲ್ಲವು ಪಾಂಡವರು ಚಿಕ್ಕವರಿದ್ದಾಗ ಕಟ್ಟಲ್ಪಟ್ಟ ಮನೆಗಳಾಗಿದ್ದರೆ ಅವರು ದೊಡ್ಡವರಾದ ನಂತರ ಈಗಿರುವ ಗುಡಿಗಳನ್ನು ಕಟ್ಟಲಾಯಿತೆಂಬ ಅಭಿಪ್ರಾಯಗಳನ್ನು ಸ್ಥಳೀಯರು ವ್ಯಕ್ತಪಡಿಸುತ್ತಾರೆ. ಇಂಥ ಹೇಳಿಕೆಗಳು ಐತಿಹ್ಯಗಳ ರೂಪದಲ್ಲಿದ್ದರೂ ಅವು ಈ ಪರಿಸರದಲ್ಲಿ ಬೆಳೆದು ಬಂದ ಚರಿತ್ರೆಯನ್ನು ಬೇರೊಂದು ರೂಪದಲ್ಲಿ ಹಿಡಿದಿಟ್ಟುಕೊಂಡು ಹೇಳುತ್ತವೆ ಎಂದೇ ಪರಿಭಾವಿಸಬಹುದು. ಮೌರ್ಯರ ಕಾಲಾವಧಿ ಹಾಗೂ ಅದಕ್ಕಿಂತಲೂ ಬಹು ಹಿಂದಣ ಪ್ರಾಗಿತಿಹಾಸ ಬೆಳೆಯುತ್ತಾ ಐತಿಹಾಸಿಕ ಯುಗವಾಗಿ ಬೆಳೆದು ಬಂದ ಹಂತಗಳನ್ನು ತಮ್ಮದೇ ಸ್ಮೃತಿಯಲ್ಲಿ ಸ್ಥಳೀಯರು ನೆನಪಿನಲ್ಲಿ ಇಟ್ಟುಕೊಂಡು ಬಂದಿದ್ದಾರೆಂದು ಹೇಳಬಹುದು.

ಈ ಗ್ರಾಮ ಪರಿಸರದ ಕುರುಹುಗಳನ್ನು ಕೂಲಂಕುಷವಾಗಿ ಗಮನಿಸಿದರೆ ಚರಿತ್ರೆಯ ನಿರಂತರತೆಯನ್ನು ಸ್ಪಷ್ಟವಾಗಿ ಕಂಡುಕೊಳ್ಳಬಹುದು. ಅಲ್ಲದೇ ಪ್ರಾಗಿತಿಹಾಸ ಕಾಲದ ಜನ ಸಮುದಾಯ ಐತಿಹಾಸಿಕ ಯುಗಕ್ಕೆ ತೆರೆದುಕೊಳ್ಳುತ್ತಾ ಹೋಗಿರುವ ಹೆಜ್ಜೆ ಗುರುತುಗಳು ಇಂಥ ಐತಿಹ್ಯಗಳಲ್ಲಿವೆ ಎಂದು ಅಭಿಪ್ರಾಯಿಸಬಹುದು. ಕರ್ಣ, ಧರ್ಮರಾಜ, ಭೀಮ, ಅರ್ಜುನ ಹಾಗೂ ಕುಂತಿಗುಡಿಗಳೆಂದು ಸ್ಥಳೀಯವಾಗಿ ಕರೆಯುತ್ತಿರುವ ಈ ಗುಡಿಗಳು ವಾಸ್ತವದಲ್ಲಿ ೧೨-೧೩ನೇ ಶತಮಾನದ ನಂತರವೇ ನಿರ್ಮಾಣವಾದವುಗಳು. ಅಲ್ಲದೇ ಶಾಸನಗಳಲ್ಲಿ ಅವೆಲ್ಲವು ಬೇರೆ ಬೇರೆ ಹೆಸರುಗಳನ್ನು ಹೊಂದಿರುವುದನ್ನು ಗಮನಿಸಬಹುದು. ಐತಿಹಾಸಿಕ ಕಾಲಘಟ್ಟದ ಪೂರ್ವಭಾವಿ ಇತಿಹಾಸದ ಕುರುಹುಗಳನ್ನು ಈ ಪರಿಸರದ ಸಮುದಾಯವು ತನಗೆ ಅನುಕೂಲವಾಗುವ ರೀತಿಯಲ್ಲಿ ನೆನಪಿನಲ್ಲಿ ಇಟ್ಟುಕೊಂಡು ಬಂದಿದೆ ಎಂದು ಅಭಿಪ್ರಾಯಿಸಬಹುದು.

ಈ ಪಟ್ಟಣದ ಹೆಸರಿನ ಕುರಿತು ಕೆಲವು ವಿವರಗಳನ್ನು ಪರಿಶೀಲಿಸಬಹುದಾಗಿದೆ. ಹಲವಾರು ಶಾಸನಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಪಗಲಟಗೆ, ಪಗರಿಟ್ಟಗೆ, ಪಗರಟಗಿ, ಪಗಲಟೆ, ಹಗರಟೆಗೆ, ಹಗರಟಗಿ ಹಾಗೂ ಹಗರಟ್ಟಿಗೆ ಎಂಬ ಮುಂತಾದ ಹೆಸರುಗಳು ಈ ಪ್ರಾಚೀನ ಪಟ್ಟಣಕ್ಕಿದ್ದವು. ಸಾಮಾನ್ಯವಾಗಿ ಪಗರಿಟ್ಟಗೆ>ಹಗರಿಟ್ಟಗೆ>ಹಗರಟಗೆ>ಹಗಟಗಿ>ಅಗಟಗಿ ಆಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಲಾಗಿದೆ[೭೮]. ಹಾಗಾದರೆ 'ಪ ಕಾರವು 'ಹ'ಕಾರವಾಗಿ ಆನಂತರ ಅ' ಕಾರವಾಗಿ ರೂಪಪಡೆದಿವೆಯೆಂದು ಸ್ಥೂಲವಾಗಿ ವಿವರಿಸಬಹುದು. ಈ ಹಿನ್ನೆಲೆಯಲ್ಲಿ ಈ ಶಬ್ದ ನಿಷ್ಪತ್ತಿ ಕುರಿತು ಕೆಲವು ಸಂಗತಿಗಳನ್ನು ಪ್ರಕಟಿಸಲಾಗಿದೆ.

ಪಗರ ಅಥವಾ ಪಗರಣೆ ಅಥವಾ ಹಗರವು ಶೃಂಗಾರ ರಸಪ್ರಧಾನವಾದುದು ಅಥವಾ ಕಲ್ಪಿತವಾದ ಕಥೆಯಿಂದ ಕೂಡಿದ್ದು ಎಂಬ ಅರ್ಥವನ್ನು ಧ್ವನಿಸುತ್ತದೆ[೭೯]. ಪಗಲ್, ಪಗಲು

ಹಗಲ್ ಮತ್ತು ಹಗಲು. ಇದು ಬೆಳಕನ್ನು ಸೂಚಿಸುತ್ತದೆ[೮೦]. ಅಥವಾ ಇನ್ನೊಂದು ವಸ್ತು ಸೂಚಕವಾದ ಅರ್ಥದಲ್ಲಿ ನೀಡುವ ವಿವರವೆಂದರೆ 'ಪಗರಿ' ಎಂಬುದು ಕವಣೆಬಿಲ್ಲು ಅಥವಾ 'ಕಲ್ಲೆಸುವ ಬಿಲ್ಲು' ಎಂಬ ಅರ್ಥದಲ್ಲಿ ವ್ಯಕ್ತವಾಗುತ್ತದೆ. ತಮಿಳು ಅಥವಾ ತುಳುವಿನಲ್ಲಿ ಪಗರಿ ಎಂಬ ಸಬ್ದವು ಬಾಣವೆಂಬ ಅರ್ಥ ಪಡೆಯುತ್ತದೆ.

ಈ ಮೇಲಿನ ಎಲ್ಲ ವಿವರಗಳನ್ನು ಸೂಕ್ಷ್ಮವಾಗಿ ಪರಿಗಣಿಸಿದಾಗ ಹೊರಡುವ ಅಭಿಪ್ರಾಯವೆಂದರೆ ಪಟ್ಟಣಕ್ಕೆ ಹಾಗೂ ನಾಡಿಗೆ ಬಂದಿರುವ ಪಗಲಟೆ ಅಥವಾ ಹಗರಟಗಿ ಎಂಬುದು ಬೆಳಕನ್ನು ಸೂಚಿಸುವ ಹಿನ್ನೆಲೆಯಲ್ಲಿ ಈ ಹೆಸರು ರೂಪಗೊಂಡಿರಬಹುದೆಂದು ಅಭಿಪ್ರಾಯಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಕಾರಣ ಶಾಸನಗಳಲ್ಲಿಯೂ ಸಹ ಈ ಪಟ್ಟಣವನ್ನು ಬೆಳಕು ಅಥವಾ ಪ್ರಕಾಶ ಎಂಬ ಅರ್ಥ ಬರುವ ರೂಪದಲ್ಲಿ ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ.

ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಒಂದಾದ ಹಗರಟಗಿ-೩೦೦ರ ರಾಜಧಾನಿ ಅಥವಾ ಮುಖ್ಯ ಕೇಂದ್ರವಾಗಿ ಹಗರಟಗಿ ಪಟ್ಟಣವು ಪ್ರಮುಖ ಅಗ್ರಹಾರ ಹಾಗೂ ಪ್ರಸಿದ್ಧ ವ್ಯಾಪಾರಿ ಪಟ್ಟಣವು ಆಗಿತ್ತು. ಅಲ್ಲದೇ ಇಲ್ಲಿದ್ದ ವೃತ್ತಿ ಸಂಘಗಳು ಬೇರೆ ನಾಡಿನ ವಿವಿಧ ಖ್ಯಾತವೆತ್ತ ವೃತ್ತಿ ಸಂಘಗಳೊಂದಿಗೆ ಸಂಬಂಧವನ್ನು ಸ್ಥಾಪಿಸಿದ್ದವು ಎಂಬುದನ್ನು ಶಾಸನಗಳು ವಿವರಿಸುತ್ತವೆ. ಈ ಪ್ರಾಚೀನ ಪಟ್ಟಣದಲ್ಲಿ ನಖರರು, ಸೆಟ್ಟಿಗುತ್ತರು ಎಂಟು ಹಿಟ್ಟುಗಳು, ಜೇಡ ಹಟಗಾರರು, ತೆಲ್ಲಿಗರು, ಗವರೆ ಗಾತ್ರಿಗಳು ಹಾಗೂ ಮಹಾಜನಗಳು ಇದ್ದರೆಂಬ ಉಲ್ಲೇಖಗಳು ಈ ಗ್ರಾಮದಲ್ಲಿಯೇ ಲಭ್ಯವಿರುವ ಶಾಸನಗಳಲ್ಲಿಯೇ ವ್ಯಕ್ತವಾಗಿವೆ. ಅಲ್ಲದೇ ಸ್ಥಳೀಯ ನಾಯಕರು; ಗೌಡರು ಅಥವಾ ಗಾವುಂಡರು, ಭೋಗಾರ ನಖರರು ನೂರಾಇಪ್ಪತ್ತು ಒಕ್ಕಲಿನವರು, ವಿಶ್ವಕರ್ಮರು, ಸೂಳೆಯರು, ಸ್ಥಾನಾಚಾರ್ಯರು, ಪಂಡಿತರು ಹಾಗೂ ಜೀಯರು ಈ ಪಟ್ಟಣದಲ್ಲಿದ್ದರೆಂಬ ಮಾಹಿತಿಗಳು ಶಾಸನಗಳ ಮೂಲಕ ತಿಳಿದುಬರುತ್ತವೆ. ಹಗರಟಗಿ ಪಟ್ಟಣದಲ್ಲಿ ಉಪಲಬ್ಧವಿರುವ ಶಾಸನ ಆಕರಗಳಲ್ಲಿ ಮೂವತ್ತಾರು ಬೀಡು, ಮುಮ್ಮುರಿದಂಡುರು ಉಭಯನಾನಾದೇಸಿಗಳು, ಪನ್ನಿಚ್ಚಾರ್ಸಿನ ಬಿಲ್ಲಮೂನ್ನೂರ್ವರು ಹಾಗೂ ಅಯ್ಯಾಹೊಳೆ ಅಯ್ಯಾನೂರ್ವರ ಉಲ್ಲೇಖಗಳು ಸಹ ಕಂಡುಬರುತ್ತವೆ. ಇವರೆಲ್ಲರ ಕುರಿತು ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹಗರಟಗಿಯು ಕೋಟೆಯಿಂದಾವೃತವಾಗಿದ್ದು ನಾಲ್ಕು ದಿಕ್ಕಿನಲ್ಲಿ ಅಗಸೆಗಳನ್ನು ಹೊಂದಿದ್ದು ಇದರಿಂದ ಹಿಂದೆ ಅದಕ್ಕೆ ಇದ್ದ ರಾಜಕೀಯ ಪ್ರಾಮುಖ್ಯತೆಯು ಅರಿವಾಗುತ್ತದೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೮೧].

ಪ್ರಾಯಶಃ ಆ ಕಾರಣಕ್ಕಾಗಿಯೇ ಈ ಪಟ್ಟಣಕೊಬ್ಬ ಸರ್ವಾಧಿಕಾರಿ ಇದ್ದನೆಂಬ ಮಾಹಿತಿಯು ಶಾಸನಗಳಲ್ಲಿ ದಾಖಲಾಗಿದೆ. ಶ್ರೀಮತು ಮಗರ ಮುರಾರಿ ಜಯಿತಪಳದೇವನ ರಾಜ್ಯಭ್ಯುದೆಯ ಕರಣಕಾರಣನುಮಪ್ಪ ಹಗರಟ್ಟಗೆ-೩೦೦ರ ಸರ್ವ್ವಾಧಿಕಾರಿ ಪಾರಿಸಸೆಟ್ಟಿಯರುಂ ಎಂಬ ಉಲ್ಲೇಖವಿದೆ[೮೨].

ಪ್ರಾಚೀನ ಹಗರಟಗಿ ಪಟ್ಟಣವು ವ್ಯಾಪಾರ ಮತ್ತು ಆಡಳಿತವಲ್ಲದೇ ಧಾರ್ಮಿಕ ಚಟುವಟಿಕೆಗಳಿಗಾಗಿಯೂ ಸಹ ತುಂಬಾ ಪ್ರಾಮುಖ್ಯತೆಯನ್ನು ಪಡೆದಿತ್ತು. ಇಲ್ಲಿರುವ ಸ್ವಯಂಭು ಭೀಮೇಶ್ವರ ಅಥವಾ ಉಗ್ರಭೀಮೇಶ್ವರ ಸ್ಥಾನಾಚಾರ್ಯರು ಈ ನಾಡಿನಲ್ಲದೇ ಇತರೆ ಬೇರೆ ಬೇರೆ ನಾಡಿನಲ್ಲಿಯೂ ಅವರು ಪ್ರಸಿದ್ಧಿ ಪಡೆದಿದ್ದರೆಂದು ತಿಳಿದುಬರುತ್ತದೆ. ಅದಕ್ಕೆ ಪೂರಕ ಸಾಕ್ಷಿಗಳೆಂಬಂತೆ ಹಲವಾರು ಶಾಸನಗಳ(ಮೂದನೂರು, ಏವೂರು, ಕೆಂಬಾವಿ, ಹುಣಸಗಿ, ಎಡೆಯಾಪುರ ಹಾಗೂ ಕಕ್ಕೇರಿ ಮುಂತಾದ ಗ್ರಾಮಗಳ)ಲ್ಲಿ ಲಭ್ಯವಾಗಿರುವ ಉಲ್ಲೇಖಗಳನ್ನು ಗಮನಿಸಬಹುದು. ಈ ಸ್ಥಾನಾಚಾರ್ಯರು ಕಾಳಮುಖ ಪರಂಪರೆಯ ಸಿಂಹಪರಿಷನ್ಮಂಡಲಿಗೆ ಸೇರಿದವರೆಂದು ಹಲವು ಉಲ್ಲೇಖಗಳಿಂದ ತಿಳಿದುಬರುತ್ತದೆ. ಈ ದೇವಾಲಯದ ಆಚಾರ್ಯರ ಕಾಲ್ತೊಳೆದು ಹಲವು ದಾನ-ದತ್ತಿಗಳನ್ನು ನೀಡಿರುವ ಉಲ್ಲೇಖಗಳು ಈ ನಾಡಿನ ಹಾಗೂ ಈ ಪಟ್ಟಣದಲ್ಲಿ ಲಭ್ಯವಿರುವ ಶಾಸನಗಳಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದು. ಆ ಕುರಿತು ಅಧ್ಯಾಯ ನಾಲ್ಕರಲ್ಲಿ ಚರ್ಚಿಸಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

**ಕಲ್ಲ-ಕೆಳಗು ನಾಡು**

ಪ್ರಸ್ತುತ ಯಾದಗಿರಿ ಜಿಲ್ಲೆಯ ಯಾದಗಿರಿ ತಾಲೂಕಿನ ಪೂರ್ವಭಾಗದಲ್ಲಿ ಕೇಂದ್ರೀಕೃತಗೊಂಡಿರುವ ಹೆಚ್ಚಿನ ಗ್ರಾಮಗಳು ಈ ನಾಡಿನಲ್ಲಿ ಇದ್ದಿರಬಹುದಾದ ಸೂಚನೆಗಳಿವೆ. ಆ ಹೇಳಿಕೆಯನ್ನು ಸಮರ್ಥಿಸುವ ಕೆಲವೇ ಕೆಲವು ಆಕರಗಳು ಮಾತ್ರ ಈ ಪ್ರದೇಶದಲ್ಲಿ ಲಭ್ಯವಾಗಿವೆ. ಕಲ್ಲು-ಕೆಳಗು ಅಥವಾ ಕಲ್ಲಕೆಳಗೆ ಅಥವಾ ಕೆಳಗಿನ ನಾಡಿನ ವ್ಯಾಪ್ತಿಯು ಸದ್ಯ ತೆಲಂಗಾಣ ರಾಜ್ಯದ ಮೆಹಬೂಬನಗರ ಜಿಲ್ಲೆಯ ಮಕ್ತಲ್ ತಾಲೂಕಿನ ಹಾಗೂ ಯಾದಗಿರಿ ತಾಲೂಕಿನ ಪೂರ್ವ ಭಾಗದ ಪ್ರದೇಶಗಳಾಗಿವೆ. ಮಕ್ತಲ್ ತಾಲೂಕು ಈ ಹಿಂದೆ ಯಾದಗಿರಿ ತಾಲೂಕಿಗೆ ಹೊಂದಿಕೊಂಡಿರುವ ಅಚ್ಚ ಕನ್ನಡ ನಾಡಿನ ಭಾಗವೇ ಆಗಿತ್ತೆಂಬುದರಲ್ಲಿ ಯಾವ ಸಂಶಯಗಳಿಲ್ಲ. ಈ ಪ್ರಾಚೀನ ಆಡಳಿತ ಘಟಕದ ರಾಜಧಾನಿ ಉಜ್ಜಿಗೆವೊಳಲು ಅಥವಾ ಈಗಿನ ಉಜ್ಜಲಿ ಆಗಿದೆಯೆಂದು ಅಭಿಪ್ರಾಯಿಸಲಾಗಿದೆ. ಇದು ಸಹ ನಮ್ಮ ನಾಡಿನ ಗಡಿಗೆ ಹೊಂದಿಕೊಂಡು ಅತೀ ಸಮೀಪದಲ್ಲಿರುವ ತೆಲಂಗಾಣ ರಾಜ್ಯದ ಒಂದು ಗ್ರಾಮವಾಗಿದೆ.

ಕಲ್ಲ-ಕೆಳಗು ನಾಡು ಸಹ ಐದನೂರು ಗ್ರಾಮಗಳನ್ನು ಹೊಂದಿರುವ ಆಡಳಿತ ಘಟಕವಾಗಿತ್ತು. ಈ ಪದದ ನಿಷ್ಪತ್ತಿಯನ್ನು ಬಹುಶಃ ಈ ರೀತಿ ಬಿಡಿಸಬಹುದಾಗಿದೆ. ಕಲ್ಲ+ಕೆಳಗೆ ಈ ರೂಪದಲ್ಲಿ ಬಿಡಿಸಿಕೊಳ್ಳಬಹುದಾದ ಈ ಪದದಲ್ಲಿರುವ ಮೊದಲ ಪದವನ್ನು ವ್ಯಕ್ತಿವಾಚಕ ರೂಪದಲ್ಲಿ ಅರ್ಥೈಸಿದರೆ ಕಲ್ಲ ಎಂಬ ವ್ಯಕ್ತಿಯ ಹೆಸರಾಗಬಹುದು. ಆದರೆ ಇದು ಸರಿಯಾದ ನಿಷ್ಪತ್ತಿ ಆಗಲಾರದು ವಸ್ತು ಹಾಗೂ ನಿಸರ್ಗವಾಚಿಯಲ್ಲಿ ಬಿಡಿಸಿ ನೋಡಿದಾಗ ಕಲ್ಲು ಎಂಬುದು ಶಿಲೆ ಅಥವಾ ಮಣ್ಣಿಗೆ ಸಂಬಂಧಿಸಿದ ಅರ್ಥದಲ್ಲಿ ತೆರುದುಕೊಳ್ಳುತ್ತದೆ. ಅಂದರೆ ಅದರ ಭೌಗೋಳಿಕ ರೂಪವನ್ನು ತಿಳಿಹೇಳುತ್ತದೆಂದು ಅರ್ಥ. ಕೆಳಗೆ ಎನ್ನುವ ಪದದ

ಅರ್ಥವು ಅಡಿ, ತಳ ಪಾತಾಳಿ ಎಂಬ ಅರ್ಥದಲ್ಲಿಯೂ ಕೆಳಗಿನ ಅಂದರೆ ಪೂರ್ವ ಅಥವಾ ಮೂಡಣ ಎಂಬ ಅರ್ಥ ಉಂಟಾಗುತ್ತದೆ. ಈ ಪದಗಳಲ್ಲಿರುವ ಕಲ್ಲುಶಿಲೆಯೆಂಬ ಅರ್ಥ ನೀಡಿದರೆ ಮತ್ತು ಕೆಳಗಿನ ಎಂಬ ಶಬ್ದವು ಭೌಗೋಳಿಕ ದಿಕ್ಕನ್ನು ತೋರಿಸುವ ಪೂರ್ವ ಅಥವಾ ಮೂಡಣ ಎಂಬ ಅರ್ಥವನ್ನು ನೀಡುವುದೆಂದು ಅರ್ಥೈಸಬಹುದು. ಈ ಎರಡು ಪದಗಳನ್ನು ಸಮ್ಮಿಲನಿಸಿಕೊಂಡು ಈ ಒಟ್ಟು ಪದದ ಅರ್ಥವು ರೂಪಗೊಂಡಿರಬಹುದೆಂದು ಎನಿಸುತ್ತದೆ. ಪೂರ್ವದ ನಾಡು ಎಂಬ ಅರ್ಥದಲ್ಲಿ ನಾವು ಇದನ್ನು ಪರಿಗಣಿಸುವುದು ಸೂಕ್ತ. ಇದೇ ತರಹದ ಹೆಸರಿರುವ ನಾಡುಗಳ ಕುರಿತು ಹಲವು ಶಾಸನಗಳಲ್ಲಿ ದಾಖಲಾಗಿರುವುದನ್ನು ಗುರುತಿಸಬಹುದು. ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣದ ಶಾಸನವೊಂದರಲ್ಲಿ ದೇವಯ್ಯನಹಳ್ಳಿಯ ಎರೆಗಾರಿ ಸತ್ತೊಡೆ ಆತನ ಮಗಂಬೀಚಂಗಂ ಕಲ್ಕಣಿನಾಡ ನೆಚ್ಚೂರ ಕಲ್ನಟುಗೊಚ್ಚರ ಎಂದು ಉಲ್ಲೇಖಿಸುತ್ತದೆ[೮]. ಹೀಗೆ ಬಹುಶಃ ಈ ಪದದಲ್ಲಿರುವ ಅರ್ಥವನ್ನು ಪರಿಭಾವಿಸಿದರೆ ತಪ್ಪಾಗಲಾರದು.

ಬಾದಾಮಿ ಚಾಲುಕ್ಯರಿಂದ ಭದ್ರಗೊಂಡ ಕನ್ನಡ ನಾಡಿನ ಭೌಗೋಳಿಕ ಸೀಮೆಗಳು ರಾಷ್ಟ್ರಕೂಟ ಹಾಗೂ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ತುಂಬಾ ವಿಸ್ತಾರವಾಗಿ ಹಬ್ಬಿಕೊಳ್ಳುತ್ತಾ ಹೋಗಿರುವುದು ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ. ಪ್ರಾಚೀನ ಕನ್ನಡ ನಾಡಿನ ಪೂರ್ವ ಭಾಗದಲ್ಲಿ ವಿಸ್ತರಿಸಿಕೊಂಡಿರುವ ಈ ವಿಭಾಗವನ್ನು ಸಹಜವಾಗಿ ಕೆಳಗುನಾಡು ಎಂದು ಕರೆಯಲಾಗಿದೆ. ಆದರೆ ಕಲ್ಲ ಎಂಬ ಪದವನ್ನು ನಿಸರ್ಗವಾಚಿಯ ರೂಪದಲ್ಲಿಯೇ ಬಳಸಿಕೊಳ್ಳುವುದು ಸಮಂಜಸವೆನಿಸುತ್ತದೆ. ರಾಷ್ಟ್ರಕೂಟ ಆಳ್ವಿಕೆಯ ಕಾಲದಲ್ಲಿಯೇ ಬಹುಶಃ ಕನ್ನಡನಾಡಿನ ಪೂರ್ವ ಭಾಗವು ವಿಸ್ತರಿಸಿಕೊಂಡಿರಬಹುದು. ಅಲ್ಲದೇ ಕನ್ನಡ ಭಾಷೆ ಬಲ್ಲ ಕನ್ನಡಗಿರು ಸಹ ಅದೇ ಸಮುದಾಯದಲ್ಲಿ ಹೆಚ್ಚಿನ ವಲಸೆ ಅಥವಾ ವಸಾಹತೀಕರಣ ಪ್ರಕ್ರಿಯೆಗೆ ಮೂಲಕ ಬೇರೆ ಬೇರೆ ಸ್ಥಳಗಳಳಿಗೂ ವಿಸ್ತರಿಸಿದ್ದಿರಬಹುದು. ಹಾಗಾಗಿ ಬೋಧನ ಮತ್ತು ವೆಂಗಿ ಮಂಡಲಗಳು ಸಹ ನಮ್ಮ ನಾಡಿನ ರಾಜರ ಅಧೀನಕ್ಕೊಳಪಟ್ಟು ಬೆಳೆದವು. ಆ ನಂತರ ಅವು ಅಚ್ಚ ಕನ್ನಡ ನಾಡಿನ ಭಾಗಗಳಾಗಿಯೇ ಹೆಚ್ಚಿನ ಪ್ರಸಿದ್ಧಿ ಪಡೆದವು. ಕನ್ನಡದ ಆದಿ ಕವಿಯೆಂದು ಗುರುತಿಸಲ್ಪಟ್ಟಿರುವ ಮಹಾಕವಿ ಪಂಪನು ವೆಂಗಿ ಮಂಡಲದಲ್ಲಿಯೇ ಇದ್ದವನು. ಅವನ ಪೂರ್ವಜರು ಅಣ್ಣಿಗೇರಿ(ಬೆಳ್ವೊಲ ಪ್ರಾಂತ) ಹಾಗೂ ಬನವಾಸಿಯಿಂದ ಈ ಕಡೆ ಹೋದವರೆಂಬುದನ್ನು ಹೇಳಿಕೊಂಡಿದ್ದಾರೆ. ಹಾಗಾಗಿ ಈ ಚರ್ಚೆಯಲ್ಲಿ ಈ ಸಂಗತಿಯು ಸಹ ಮುಖ್ಯ ವಿಷಯವಾಗುತ್ತದೆ. ಅಂಥ ವಿಭಾಗಗಳಿಗೆ ಹೊಂದಿಕೊಂಡು ಕಲ್ಲಕೆಳಗು ನಾಡು ಇರುವುದು. ನಮ್ಮ ಪ್ರಾಚೀನ ನಾಡಿನ ಪೂರ್ವದ ನಾಡಿಗಿದ್ದ ಕಲ್ಲ ಕೆಳಗು ನಾಡು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಹೆಚ್ಚಿನ ಮಹತ್ವ ಪಡೆದಿತ್ತು ಎಂದು ಅಭಿಪ್ರಾಯಿಸಬಹುದು.

ಕಲ್ಲ ಕೆಳಗು ನಾಡಿನ ಕುರಿತು ಯಾದಗಿರಿ ಜಿಲ್ಲೆಯ ವಂಕಸಮುದ್ರದ ಶಾಸನವು ಕೆಲವು ವಿವರಣೆಗಳನ್ನು ನೀಡುತ್ತದೆ[೪೪]. ಈ ಶಾಸನವನ್ನು ಮೊಟ್ಟಮೊದಲಿಗೆ ಬೆಳಕಿಗೆ ತಂದವರು ಡಾ.ಪಿ.ಬಿ.ದೇಸಾಯಿ ಅವರು. ಕ್ರಿ.ಶ.೧೧೩೬ರ ತೇದಿಯ ಈ ಶಾಸನವು ಮೂರನೆಯ ಸೋಮೇಶ್ವರನ ಕಾಲದಲ್ಲಿ ನಿರ್ಮಾಣವಾಗಿರುವಂಥದ್ದು. ಕಲ್ಲಕೆಳಗಯ್ನೂರರ ಮೊದಲ ಬಾಡಂ ರಾಜಧಾನಿ ಉಜ್ಜಿಗವೊಳಲ ಎಂದು ಉಲ್ಲೇಖಿಸಲಾಗಿದೆ. ಅಲ್ಲದೇ ಇದೇ ನಾಡಿನ ಬಗೆಗೆ ಅದೋನಿ ತಾಲೂಕಿನ(ಕರ್ನೂಲು ಜಿಲ್ಲೆ, ಆಂಧ್ರ ರಾಜ್ಯ). ಚಿಂನ್ನತಂಬಳಮ್ ಶಾಸನದಲ್ಲಿ ಮಣ್ಡಳಿಕ ಎಡೆದೊರೆರ್ಚ್ಛಾಸಿರಮುಮ ಕಲ್ಲಕೆಳಗೈನೂರಮನಾಳುತ್ತಾಮಿರೆ ಎಂಬ ಉಲ್ಲೇಖವು ದಾಖಲಾಗಿದೆ[೪೫]. ಈ ಶಾಸನದಲ್ಲಿ ವ್ಯಕ್ತವಾಗುವ ವಿಷಯದ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಎಡದೊರೆ ನಾಡಿನ ಮಾಂಡಳಿಕನ ಅಧೀನದಲ್ಲಿಯೇ ಈ ಕೆಳಗು ನಾಡು ಇದ್ದಿರುವ ಸೂಚನೆಗಳು ಹೊರಹೊಮ್ಮುತ್ತವೆ. ಎರಡದೊರೆ ನಾಡು ಇಂದಿನ ರಾಯಚೂರು ಜಿಲ್ಲೆಯ ಬಹುತೇಕ ಭಾಗವನ್ನು ಒಳಗೊಂಡಿರುವ ಪ್ರಾಚೀನ ಆಡಳಿತ ಘಟಕವಾಗಿತ್ತು. ಅಲ್ಲದೇ ಯಾದಗಿರಿ ತಾಲೂಕಿನ ಆಗ್ನೇಯ ಭಾಗದ ಕಡೇಚೂರು, ಸೈದಾಪುರ, ಧೂಪಳ್ಳಿ, ಬೊಮ್ಮರದೊಡ್ಡಿ, ರಾಜನಹಳ್ಳಿ ಗ್ರಾಮ ಪರಿಸರವು ಈ ಭಾಗಗಳಿಲ್ಲಿದ್ದವು. ಅವೆಲ್ಲವುಗಳು ಸಹ ಇಂದಿಗೂ ಎಡದೊರೆ ನಾಡಿಗೆ ಹೊಂದಿಕೊಂಡ ಗ್ರಾಮಗಳೇ ಆಗಿವೆ. ಈ ನಾಡನ್ನು ಕುರಿತು ಉಲ್ಲೇಖಿಸುವ ಒಂದೆರಡು ಶಾಸನಗಳು ಪ್ರಕಟವಾಗಿವೆ.

ಯಾದಗಿರಿ ತಾಲೂಕಿನ ಅನಪೂರ ಅಥವಾ ಅನ್ಫೂರ ಎಂಬ ಗ್ರಾಮದಲ್ಲಿರುವ ಶಾಸನಗಳನ್ನು ಇತ್ತೀಚಿನ ವರ್ಷಗಳಲ್ಲಿ ಬೆಳಕಿಗೆ ತರಲಾಗಿದೆ[೪೬]. ತಾಳಿಕೋಟೆ ಶಾಸನದಲ್ಲಿ ಶಿವಶರಣರ ಊರುಗಳನ್ನು ಉಲ್ಲೇಖಿಸುವ ಪ್ರಸಂಗದಲ್ಲಿ ಅಣಂಪೂರ ಎಂಬ ಊರಿನ ಪ್ರಸ್ತಾಪವು ಇದೆ. ಆದರೆ ಶರಣರ ಹೆಸರಿಲ್ಲ. ಬಹುಶಃ ಈ ಅನಪೂರಿನ ಶರಣನೊಬ್ಬ ಸುಪ್ರಸಿದ್ದ ಶರಣನಾಗಿದ್ದು ತಾಳಿಕೋಟೆ ಶಾಸನದಲ್ಲಿ ಉಕ್ತಗೊಂಡಿರಬಹುದೆಂದು ಸಾಂಭಾವ್ಯ ಊಹೆ ಮಾಡಬಹುದಾಗಿದೆ ಎಂದು ಅಭಿಪ್ರಾಯಿಸಲಾಗಿದೆ[೪೭]. ಆದರೆ ಆ ಶಾಸನವನ್ನು ಗಮನಿಸಿದಾಗ ಅಂಥ ಯಾವ ಹೆಸರುಗಳು ಕಂಡುಬಂದಿಲ್ಲ[೪೮].

ಈ ಶಾಸನವು ಕ್ರಿ.ಶ. ೧೧೮೪ರ ತೇದಿಯದ್ದು ಅಂದರೆ ಕಲ್ಯಾಣ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಕಾಲದ್ದು. ಅದರಲ್ಲಿರುವ ವಿವರವು ಈ ರೀತಿಯಲ್ಲಿ ವ್ಯಕ್ತವಾಗಿದೆ.

ದಿಂ ಮರೆವರುಂ ಪರಸಮಯ ಗಿರಿವಜ್ರದಂಡರು ಜಗದಲುದ್ದಂ
ಡರುಂ ಜಿನಸಮಯ ವನಹದನ ದಾವಾನಳರುಂ ಮುನಿದರ್ಗ್ಗೆ
ಹಾಳಾಹಳರುಂ ಬೌದ್ಧಸಮಯ ವಿಧ್ವಂಸನ ಪ್ರವೀಣರುಂ ಬಗೆ
ಯಲು ಜಾಣರುಂ ಅನ್ಯಸಮಯಿಗಳ ಜಿನ್ನಬಾರನೆತ್ತುವರುಂಸೆ
ಣಸುವರ ನೆತ್ತರಂ ಮರುಳ್ಗಳಿಂ ಕುಡಿಸುವರುಂ ಪರಸಮಯ

ಘರಟ್ಟರುಂ ವೀರರು(ಪ)ರವಟ್ಟರುಂ ಕಾಲನ ನಾಲಗೆಯಂ ಕೀಳ್ವರುಂ

(ಬಾ)ರಿಯಂ ಕೂರದಗ್ಗೀವರುಂ ನಂಜನಂಜದುಂಬರುಂ

ಜಸಿಮಾರ್ಕೊಳ್ವಕುಂ ಬಹುವಿಧ ನಿಷ್ಠಾವಶೀಕೃತ ಜ

(ರು) ಅಸಂಖ್ಯಾತ ಸಂಖ್ಯಾಭಿಧೇಯ ಮಹಾ

ಪರಸಮಯ ಸರಸಿಜಾತ ಸಮೂಹ ಮದಕರಿಗಳಂ

(ಹು)ವಿಧನಿಷ್ಠೆಯಿಂ ಹರನುಂ ಪರಿಕ್ಸಿ ಭವಮನಂತರ್ಸಿ ಪರಸಮ

ಮುಂ ಸಂಹರ್ಸಿ ಜರಮಂ ಮಾಂಕರಿಸುವುದ್ದಂಡರುಂ

ಲ್ಲೆ ಗಂಡರುಂ ಪರಿಯಳಿಗೆ ಅಣಿಲೆವಾಡ, ಉಣುಕಲ್ಲು ಸಂಪಗಾವಿ

ಅಬ್ಬಲೂರು ಮಾರುಡಿಗೆ ಅಣಂಪೂರ ಕರಹಾಡ ಕೆಂಭಾವಿ

ಬಮ್ಮುಕೂರು ಮೊದಲಾಗಿ ಅನನ್ತದೇ ಶದೇಶಾನ್ತರದಲಿದಿ

ರಾದ ಪರಸಮಯಿಗಳಂ ಪಡಲ್ವಡ್ಸಿ ಲೋಕ ಮನಾಕಂಪಂ ಗೊ

ಳ್ಸಿ ಬಸದಿಗಳಂ ಹೊಸದು ಮುಕ್ಕಿ ಶಿವಲಿಂಗಸಿಂಹಾಸ ನಮಂ

ಣ್ಗೊಳ್ಸಿ ಚಲಮಂ ಮೆಱ(ರೆ)ದು ಧೀರರೊಳು ನೆರೆದು ಸ್ವರ್ಗ್ಗಮರ್ತ್ಯ

ಪಾತಾಳದೊಳನಂಗಾರಿಯ ಹೆಮ್ಮೆಯ್ಮಂ ತಮ್ಮ ಭ್ರಿ

ತ್ಯಾಚಾರದ ತೊಮ್ಮೆಯ್ಮಂ ತಳದಲಿಕ್ಕಿ ತೋರ್ಪ್ಪನ್ತೆ ತೋರಿದ

ಪುರಾತನ ನೂತನರೆನಿಸಿದ ಅಸಂಖ್ಯಾತಗಣಂಗಳ

ಎಂದು ಮಾತ್ರ ಉಲ್ಲೇಖಿಸಿದೆ. ಈ ವಿವರವನ್ನು ದೀರ್ಘವಾಗಿ ಪ್ರಸ್ತಾಪಿಸುವ ಕಾರಣವೆಂದರೆ ತಾಳಿಕೋಟೆ ಶಾಸನದಲ್ಲಿಯೂ ಸಹ ಆ ಶರಣರ ಹೆಸರು ಉಲ್ಲೇಖವಾಗಿಲ್ಲ. ಕೇವಲ ಊರುಗಳ ಹೆಸರು ಮಾತ್ರ ವ್ಯಕ್ತವಾಗಿವೆಯೆಂದು ಗಮನಿಸಬಹುದು.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯ ಕಲ್ಯಾಣಪುರದ ರಾಜಧಾನಿಯಿಂದ ಆಳುತ್ತಿದ್ದಾಗ ಅವನ ಪಿರಿಯರಸಿ ಚಂದಲದೇವಿಯರ ಮಗನಾದ ಜಗದೇಕಮಲ್ಲ ಕುಮಾರ ಸತ್ಯಾಶ್ರಮದೇವರು ಮಹಾಮಂಡಳೇಶ್ವರರಾಗಿ ರಾಜ್ಯಭಾರ ಮಾಡುತ್ತಿದ್ದ ಆ ಸಂದರ್ಭದಲ್ಲಿ ಕಲ್ಲಕೆಳಗು ನಾಡಿನ ರಾಜಧಾನಿಯಾದ ಉಜ್ಜಿಗವೊಳಲಿನ ಆನೆಮೇಶ್ವರ ದೇವರ ಪೂಜೆ-ಪುನಸ್ಕಾರಗಳಿಗಾಗಿ ಅಲ್ಲಿ ಆಚಾರ್ಯ ದಿವ್ಯಶಕ್ತಿ ಪಂಡಿತರ ಕಾಲ್ತೊಳೆದು ಬಿಟ್ಟ ಭೂದತ್ತಿ, ಕೆರೆ, ದೇವರ ಕೇರಿಗಳನ್ನು ತಿಳಿಸುತ್ತದೆ[೬೯]. ಇದರ ಕಾಲ ಕ್ರಿ.ಶ.೧೧೦೭ಕ್ಕೆ ಸರಿಹೊಂದುತ್ತದೆಂದು ಅಭಿಪ್ರಾಯಿಸಲಾಗಿದೆ.

ನಾಲ್ಕು ದಿಶಾಭಾಗದ ಚತುಸ್ಸೀಮೆಯಿನ್ನಿದು ಮತ್ತಂ ಉಜ್ಜಿಗವೊಳಂದ ವ್ರಿತ್ತಿಯ ಕೆಯ್ಯಿ ಮತ್ತು ಮೂರ್ವತ್ತು ಕೆರೆಯೊಂದು ದೇವರಿಗಾಳ್ವ ಕೇರಿಯೊಂದು ಪೂವಿನ ತೋಂಟವೆರಡು ಎಂಬ ಉಲ್ಲೇಖಗಳು ಈ ಶಾಸನದಲ್ಲಿ ಬರುತ್ತವೆ[೭೦]. ಇದರಲ್ಲಿ ಉಲ್ಲೇಖವಾದ ದೇವರಕೇರಿ

ಬಹುಶಃ ಆ ದೇವರಿಗೆ ಸಂಬಂಧಿಸಿದ ಉತ್ಸವ ಆಚರಣೆಗಳಿಗೆ ಸಂಬಂಧಿಸಿದ ರಥಬೀದಿಯಾಗಿರಬಹುದೆಂದು ಊಹಿಸಬಹುದು.

ಇದೇ ಶಾಸನದ ಮಧ್ಯಭಾಗದಿಂದ ಅಂದರೆ ಮೂವತ್ತನಾಲ್ಕನೆಯ ಸಾಲಿನಿಂದ ಬೇರೊಂದು ದತ್ತಿಯ ಬಗೆಗೆ ಉಲ್ಲೇಖ ಬರುತ್ತದೆ. ಮಹಾಪ್ರಧಾನ ದಣ್ಡನಾಯಕ ಪೋತರಸರು ಕಲ್ಲಕೆಳಗು ನಾಡ ಮೊದಲ ಬಾಡ ರಾಜಧಾನಿ ಉಜ್ಜಿಗವೊಳಲ ಆನೆಮೇಶ್ವರರ ಮಠದಲ್ಲಿ ಶ್ರೀ ಶಾರದೆಯನ್ನು ಪ್ರತಿಷ್ಠಾಪಿಸಿ ವಾಚಸ್ಪತಿ ಪಂಡಿತರ ಕಾಲ್ತೊಳೆದು ದತ್ತಿ ಬಿಟ್ಟಿರುವ ವಿವರವುಂಟು(ಅದೇ ಪುಟ.೨೬೬). ಆದರೆ ಇದರ ಕಾಲ ಮಾತ್ರ ಕ್ರಿ.ಶ.೧೧೧೨ರ ತೇದಿಯದ್ದು ಒಂದೇ ಶಾಸನದಲ್ಲಿ ಎರಡು ಕಾಲಮಾನದ ವಿವರಗಳು ದಾಖಲಾಗಿವೆ. ದೇವಾಲಯದಲ್ಲಿರುವ ಇಂಥ ಮಠಗಳು ವಿಶೇಷವಾಗಿ ಚಿಕ್ಕಮಕ್ಕಳಿಗೆ ಶಿಕ್ಷಣ ನೀಡುವ ಅಥವಾ ವಿದ್ಯಾಭ್ಯಾಸ ನೀಡುವ ಕೇಂದ್ರಗಳಾಗಿದ್ದವು. ಅಂಥ ಮಠದಲ್ಲಿ ವಿದ್ಯಾದೇವತೆಯಾದ ಶಾರದೆಯನ್ನು ಸ್ಥಾಪಿಸಿ ಪ್ರತಿಷ್ಠಾಪಿಸಿರುವ ಸಂಗತಿ ದಾಖಲಾಗಿದೆ.

ಇದೇ ಗ್ರಾಮದಲ್ಲಿ ಕಂಡುಬಂದಿರುವ ಇನ್ನೊಂದು ಶಾಸನವು ಕ್ರಿ.ಶ.೧೧೨೬ರ ತೇದಿಯದ್ದು. ಇದು ಸಹ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಗೆ ಸಂಬಂಧಿಸಿದ್ದೆಂದು ತಿಳಿದುಬರುತ್ತದೆ. ಮಹಾಪ್ರಧಾನ ದಂಡನಾಯಕ ಭೋಗಭಟ್ಟಯ್ಯಗಳು ಮತ್ತು ಅಚ್ಚುಪನ್ನಾಯದಧಿಷ್ಟಾಯಕ ದಂಡನಾಯಕ ಇಂದ್ರಭಟ್ಟಯ್ಯಗಳು ಮತ್ತು ಮಹಾಪ್ರಧಾನ ಗೋಪರಸರು ರಾಜಧಾನಿ ಉಜ್ಜಿಗವೊಳಲಿನ ಶ್ರೀಮೂಲಸ್ಥಾನದ ಸ್ವಯಂಭು ಮಹಾಕಾಳದೇವರ ಪೂಜೆಗೆ ಸಂಬಂಧಿಸಿದಂತೆ ದತ್ತಿ ಬಿಟ್ಟಿರುವ ಉಲ್ಲೇಖವಿದೆ[೧]. ಈ ಶಾಸನದಲ್ಲಿ ವ್ಯಕ್ತವಾಗಿರುವ ವಿಷಯದಿಂದ ತಿಳಿಯಬಹುದಾದ ಸಂಗತಿಯೆಂದರೆ ಈ ಪ್ರದೇಶದಲ್ಲಿ ಮಹಾಕಾಳ ದೇವರ ಉಲ್ಲೇಖಗಳು ಹೆಚ್ಚಿನ ಪ್ರಮಾಣದಲ್ಲಿ ಹಲವಾರು ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ವಿಶೇಷವಾಗಿ ಗಮನಿಸಬಹುದಾಗಿದೆ. ಇಂಥ ಪ್ರತಿಷ್ಠಾಪನೆಗಳಿಗೆ ಶ್ರೀಶೈಲದ ಪ್ರಭಾವವೇನಾದರೂ ಈ ಪ್ರದೇಶ ಮೇಲೆ ಹೆಚ್ಚಾಗಿ ಪರಿಣಮಿಸಿರಬಹುದೇ ಆ ಕುರಿತು ಹೆಚ್ಚಿನ ಅಧ್ಯಯನಗಳ ಅವಶ್ಯಕತೆ ಇದೆ. ಇದೇ ನಾಡಿನಲ್ಲಿದ್ದ ಇಡ್ಲೂರಿನ ಶಾಸನವು ಸಹ ಮಹಾಕಾಲನ ಕುರಿತು ವಿವರಿಸುತ್ತದೆ. ಕಲ್ಲ-ಕೆಳಗು ಬಾಡಂ ಮೊದಲ ಬಾಡಂನಲ್ಲಿರುವ ರಾಜಧಾನಿ ಉಜ್ಜಿಗವೊಳಲು ಎಂದು ಉಲ್ಲೇಖಿತವಾಗಿದೆ. ಬಾಡಂ ಎಂಬ ಅರ್ಥವು ಹಳ್ಳಿ ಅಥವಾ ಗ್ರಾಮ ಎಂದಾಗಿರುತ್ತದೆ. ಕೆಲವು ಹಳ್ಳಿಗಳಿಂದ ಕೂಡಿದ ಘಟಕ ಎಂದು ಇದನ್ನು ಪರಿಭಾವಿಸಬಹುದಾಗಿದೆ. ಅಂಥ ಹಲವಾರು ಘಟಕಗಳಿಂದ ಕೂಡಿದ ಈ ನಾಡಿನ ಮೊದಲ ರಾಜಧಾನಿ ಉಜ್ಜಿಗವೊಳಲು ಆಗಿತ್ತು ಎಂಬುದು ಇದರ ಅರ್ಥ.

ಯಾದಗಿರಿ ತಾಲೂಕಿನ ಆಗ್ನೇಯ ಭಾಗದಲ್ಲಿರುವ ಇಡ್ಲೂರು ಗ್ರಾಮವು ತುಂಬಾ ಪ್ರಾಚೀನ ಪ್ರಸಿದ್ಧಿ ಪಡೆದ ಊರಾಗಿತ್ತು. ಅಲ್ಲಿರುವ ಶಾಸನವು ಕಲ್ಲಕೆಳಗುನಾಡಿನ ಕುರಿತು ವಿವರಿಸುತ್ತದೆ.

ಪ್ರಸ್ತುತ ಶಾಸನವು ಶಂಕರಲಿಂಗ ದೇವಾಲಯದ ಆವರಣದಲ್ಲಿ ಇಂದಿಗೂ ಕಂಡುಬರುತ್ತದೆ. ಇದು ಸಹ ಪ್ರಕಟಗೊಂಡಿದೆ[೨]. ಅಲ್ಲದೇ ಇದು ಕೂಡಾ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು. ಕ್ರಿ.ಶ.೧೧೧೫ರ ತೇದಿಯ ಈ ಶಾಸನವು ಆತನ ಪಿರಿಯರಸಿ ಚಂದಲದೇವಿಯ ಮಗನೂ ಮಹಾಮಂಡಳೇಶ್ವರನೂ ಆದ ಜಗದೇಕಮಲ್ಲ ಇರೆವಬೆಡಂಗ ಸತ್ಯಾಶ್ರಯನನ್ನು ಹೆಸರಿಸಿ ಆತನ ಮಹಾಸಾಮಂತನಾದ ಭೂತರಸರು ಸತ್ಯಾಶ್ರಯದೇವನ ಹೇಳಿಕೆಯಂತೆ ಕಲ್ಲಕೆಳಗೆ ನಾಡಿನ ಇಡುಗುಲೂರಲ್ಲಿಯ ಭೂಮಿಯನ್ನು ಜಡೆಯ ಶಂಕರ ದೇವರಿಗೆ ದಾನವಾಗಿ ಇತ್ತುದನ್ನು ತಿಳಿಸುತ್ತದೆ[೩].

ಈ ಶಾಸನದಲ್ಲಿ ಇನ್ನೊಂದು ಪ್ರಮುಖ ವಿಚಾರವನ್ನು ಪ್ರಸ್ತಾಪಿಸಲಾಗಿದೆಯೆಂದು ಅಭಿಪ್ರಾಯಿಸಲಾಗಿದೆ. ವಿಕ್ರಮಾದಿತ್ಯನಿಗೆ ಐದು ಜನ ಮಕ್ಕಳಿದ್ದರೆಂಬ ಉಲ್ಲೇಖಗಳು ಈ ಶಾಸನದಲ್ಲಿ ಮಾತ್ರ ವ್ಯಕ್ತವಾಗಿವೆ ಎಂಬುದು. ಈಗಾಗಲೇ ಪ್ರಕಟವಾದ ಬೇರೆ ಬೇರೆ ಸ್ಥಳಗಳಲ್ಲಿದ್ದ ಶಾಸನಗಳಲ್ಲಿ ಭೂಲೋಕಮಲ್ಲ ಸರ್ವಜ್ಞ ಸೋಮೇಶ್ವರ, ತೈಲಪ ಮತ್ತು ಜಯಕರ್ಣರೆಂಬ ಮೂರುಗಂಡು ಮಕ್ಕಳು ಹಾಗೂ ಇನ್ನೊಬ್ಬಳು ಮಗಳು(ಅವಳ ಹೆಸರು ತಿಳಿದು ಬಂದಿಲ್ಲ, ಅಲ್ಲದೇ ಅವಳ ಮಗನೇ ಕಳಚೂರ್ಯ ಬಿಜ್ಜಳನೆಂದು ಸೂಚಿಸುತ್ತಾರೆಂದು ಅಭಿಪ್ರಾಯಿಸಲಾಗಿದೆ). ಇದ್ದಳೆಂಬ ವಿವರವನ್ನು ಸಾಮಾನ್ಯವಾಗಿ ಹೆಚ್ಚಿನ ಸಂಖ್ಯೆಯ ಶಾಸನಗಳು ವಿವರಿಸುತ್ತವೆ. ಆದರೆ ಇಡ್ಲೂರಿನ ಈ ಶಾಸನವು ಇನ್ನೊಬ್ಬ ಮಗ ಜಗದೇಕಮಲ್ಲ ಬಿರುದಿನ ಇರಿವಬೆಡೆಂಗ ಸತ್ಯಾಶ್ರಯ ಹೆಸರಿನ ಮಗನೊಬ್ಬನನ್ನು ಸಹ ಉಲ್ಲೇಖಿಸಲಾಗಿದೆ ಎಂದು ಹೇಳಲಾಗಿದೆ[೪]. ಅವನೇ ಎರಡನೆಯ ಇರೆವಬೆಡಂಗ ಸತ್ಯಾಶ್ರಯ. ಅವನು ಮಹಾಮಂಡಳೇಶ್ವರ ಹುದ್ದೆಯಲ್ಲಿದ್ದವನು. ಶಾಸನದಲ್ಲಿ ಉಲ್ಲೇಖಿತ ಜಗದೇಕಮಲ್ಲ ಇರೆವಬೆಡಂಗನ ತಾಯಿ ಪಿರಿಯರಿಸಿ ಚಂದಲದೇವಿಯು ಇದಕ್ಕಿಂತ ಸ್ವಲ್ಪ ಪೂರ್ವದಲ್ಲಿ ಅಂದರೆ ಕ್ರಿ.ಶ.೧೧೯೯ರ ಹೊತ್ತಿಗೆ ಆಲಂದೆ ಸಾಸಿರ ನಾಡಿನಲ್ಲಿರುವ ಕೆಲವು ಪ್ರಮುಖ ಭತ್ತಗ್ರಾಮಗಳನ್ನು ಆಳುತ್ತಿದ್ದಿರುವ ಕುರಿತು ಕಲಬುರ್ಗಿ ತಾಲೂಕಿನ ಹುಣಸಿಹಡಗಲಿಯ ಕ್ರಿ.ಶ.೧೧೯೯ರ ತೇದಿಯ ಶಾಸನದಲ್ಲಿ ಉಲ್ಲೇಖವಾಗಿದೆ[೫]. ಆಲಂದೆ ಸಾಸಿರ ನಾಡಿನಲ್ಲಿರುವ ಗೊಂಕನಾಡು, ಸರವಡಿಗೆ ಕಂಪಣ, ಅರಲು-೩೦೦ರ ಪ್ರದೇಶ ಹಾಗೂ ಕಲಂಬುರಗಿ ಪಟ್ಟಣ ಪರಿಸರಗಳೆಲ್ಲವು ಕಲ್ಲಕೆಳಗು ನಾಡಿನ ಸರಹದ್ದಿಗೆ ಹೊಂದಿಕೊಂಡೆ ಇದ್ದಂತಹ ಪ್ರದೇಶಗಳಾಗಿದ್ದವು. ಇಡ್ಲೂರಿನ ಇದೇ ಶಾಸನದ ಇನ್ನೊಂದು ಬದಿಯ ವಿವರಣೆಯು ಇಡುಗಲೂರ ಜಡೆಯ ಶಂಕರ ದೇವರಿಗೆ ಸೌಧರೆ ಬೋವಯನಾಯಕ, ತಿಪ್ಪೆಯ ನಾಯಕ, ಹೆಗ್ಗಡೆ ಆಳುಪರಸರು, ತಿಮ್ಮರಸರು ಸೇರಿ ಹಣದ ದತ್ತಿ ಬಿಟ್ಟಿರುವ ಉಲ್ಲೇಖವು ಈ ಶಾಸನದಲ್ಲಿ ದಾಖಲಾಗಿದೆ[೬].

ಯಾದಗಿರಿ ತಾಲೂಕಿನ ಅಂಚಿನಲ್ಲಿರುವ ಮಧ್ವಾರ(ಮಹಾದ್ವಾರ) ಗ್ರಾಮದ ಶಾಸನವು ಕಲ್ಲ ಕೆಳಗು ನಾಡಿನ ಕುರಿತು ಉಲ್ಲೇಖಿಸುವ ಮತ್ತೊಂದು ಶಾಸನ. ಇದರ ಹೆಚ್ಚಿನ ಭಾಗವು

ತೃಟಿತಗೊಂಡಿದೆ. ಕ್ರಿ.ಶ.೧೦೭೯ರ ಕಾಲದ ಈ ಶಾಸನವು[೬೭] ಪ್ರಕಟಗೊಂಡಿದೆ. ಇದು ಸಹ ತ್ರಿಭುವನಮಲ್ಲ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದಾಗಿದ್ದು ಇದು ಉಜ್ಜಿಗವೊಳಲಿನ ನಖರರಾದ ಬಮ್ಮಿಸೆಟ್ಟಿ ದೇವಕಾರ್ಯಗಳಿಗಾಗಿ ದಾನಕೊಟ್ಟ ಉಲ್ಲೇಖವನ್ನು ನೀಡುತ್ತದೆ. ಆದರೆ ಶಾಸನದ ಹೆಚ್ಚಿನ ಭಾಗಗಳು ಸವೆದಿದುದರಿಂದ ವಿವರವಾದ ವಿಷಯಗಳು ತಿಳಿದುಬರುವುದಿಲ್ಲ.

ಮದ್ವಾರ ಸ್ಥಳ ಕುರಿತು ಕೆಲವು ವಿಚಾರಗಳನ್ನು ವ್ಯಕ್ತಪಡಿಸಬಹುದು. ಈ ಸ್ಥಳವು ಬಹುಶಃ ಕಲ್ಲಕೆಳಗು ನಾಡಿನ ಪಶ್ಚಿಮದ ಮೇರೆಯಾಗಿದ್ದಿರಬಹುದು. ಅಥವಾ ಅರಲು-೩೦೦ ಮತ್ತು ಕಲ್ಲಕೆಳಗ ನಾಡಿನ ಭೌಗೋಳಿಕ ವ್ಯಾಪ್ತಿಯನ್ನು ಗೊತ್ತುಪಡಿಸುವ ಗಡಿಯಾಗಿರಬಹುದೆಂದು ತಿಳಿಯಬಹುದು. ಅಥವಾ ಕಲ್ಲಕೆಳಗು ನಾಡಿನ ರಾಜಧಾನಿ ಉಜ್ಜಿಗವೊಳಲಿನ ಅಥವಾ ಉಜ್ಜಲಿ ಪಟ್ಟಣಕ್ಕೆ ಮಹಾದ್ವಾರವಾಗಿರಬಹುದೇ ಎಂಬ ಅನುಮಾನಗಳು ಹುಟ್ಟಿಕೊಳ್ಳುತ್ತವೆ. ಯಾದಗಿರಿ ತಾಲೂಕಿನ ಗುರುಮಿಟ್ಕಲ್ ಪ್ರದೇಶದಿಂದ ಕಡೇಚೂರು ಪ್ರದೇಶದವರೆಗೆ ಲಂಬಪಟ್ಟಿಯಂತೆ ಕಾಣುವ ಈ ಭಾಗದಲ್ಲಿರುವ ಬಹುತೇಕ ಗ್ರಾಮಗಳು ಕಲ್ಲಕೆಳಗು ನಾಡಿನ ವ್ಯಾಪ್ತಿಯೊಳಗೆ ಇದ್ದಿರುವಂಥವು. ಇದೇ ಪ್ರದೇಶದಲ್ಲಿರುವ ಇಡ್ಲೂರಿನಲ್ಲಿ ಶಂಕರಲಿಂಗ ಎಂಬ ಹೆಸರಿನ ಗುಡಿಯೊಂದಿದ್ದು ಅದನ್ನು ಶಾಸನದಲ್ಲಿ ಮಹಾಕಾಳನ ದೇವಾಲಯವೆಂದು ಉಲ್ಲೇಖಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಇಡ್ಲೂರು ಗ್ರಾಮದಲ್ಲಿರುವ ಶಂಕರಲಿಂಗ ಮತ್ತು ತಿರುಮಲೇಶ್ವರಿ ಎಂಬ ಹೆಸರಿನ ಈ ಎರಡು ದೇವಾಲಯಗಳು ಸ್ವಲ್ಪಮಟ್ಟಿಗೆ ಭದ್ರವಾಗಿ ಉಳಿದುಕೊಂಡು ಬಂದಿವೆ. ಇಡೀ ತಾಲೂಕಿನ ಉಳಿದೆಲ್ಲ ಗ್ರಾಮಗಳಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯ ಮಾಡಿದಾಗ ಕಂಡು ಬಂದಿರುವ ಸ್ಥಿತಿಗತಿಗಳು ಏನೆಂದರೆ ಈ ಗ್ರಾಮದ ದೇವಾಲಯಗಳನ್ನು ಹೊರತುಪಡಿಸಿ ಉಳಿದಾವ ಗ್ರಾಮದಲ್ಲಿಯೂ ಇಷ್ಟೊಂದು ಸುಸ್ಥಿತಿಯಲ್ಲಿ ಉಳಿದುಕೊಂಡು ಬಂದಿರುವ ಯಾವುದೇ ಸ್ಮಾರಕಗಳು ಕಂಡುಬಂದಿಲ್ಲ ಎಂಬುದು. ಆದರೆ ಕಲ್ಲಕೆಳಗು ನಾಡಿನ ಕುರಿತಂತೆ ವಿವರಿಸುವ ಬೆರಳೆಣಿಕೆಯ ಶಾಸನಗಳು ಮಾತ್ರ ಈವರೆಗೂ ಯಾದಗಿರಿ ತಾಲೂಕಿನ ಕೆಲವು ಗ್ರಾಮಗಳಲ್ಲಿ ಕಂಡುಬಂದಿವೆ. ಅವುಗಳಲ್ಲಿ ಹೆಚ್ಚಿನವು ದೇವಾಲಯಗಳಿಗೆ ನೀಡಿದ ದಾನ-ದತ್ತಿಗಳ ವಿವರಗಳನ್ನು ಉಲ್ಲೇಖಿಸುತ್ತವೆ. ಆದರೆ ಗಮನಿಸಬಹುದಾದ ಪ್ರಮುಖ ವಿಚಾರವೆಂದರೆ ದೊರಕಿರುವ ಮಾಹಿತಿಗಳಲ್ಲೂ ಮಹಾಕಾಳ ದೇವರ ಕುರಿತು ಪ್ರಸ್ತಾಪಿಸುತ್ತವೆ. ಬಹುಶಃ ಈ ರೀತಿಯ ಸಂಗತಿಗಳು ದಾಖಲೆಗೊಳ್ಳಲು ರಾಜಧಾನಿ ಉಜ್ಜಗವೊಳಲಿನ (ಉಜ್ಜಲಿಯ)ಲ್ಲಿದ್ದ ಮಹಾಕಾಳ ದೇವರ ಪ್ರಭಾವ ಉಳಿದೆಲ್ಲ ಸ್ಥಳಗಳಲ್ಲಿರುವ ದೇವಾಲಯಗಳ ಮೇಲೂ ಆಗಿರಬಹುದೆಂದು ಅಭಿಪ್ರಾಯಿಸಬಹುದು. ಇದೇ ಪರಿಸರದಲ್ಲಿರುವ ಅಥವಾ ಮಹಾದ್ವಾರ(ಮಧ್ವಾರ) ಗ್ರಾಮ ಪರಿಸರಕ್ಕೆ ಹೊಂದಿಕೊಂಡಂತಿರುವ ವಂಕಸಮುದ್ರ ಅಥವಾ ಮಂಕಸಂದ್ರ ಗ್ರಾಮದ ಶಾಸನವು ಸಹ ಕಲ್ಲಕೆಳಗು ನಾಡಿನ ರಾಜಧಾನಿ ಉಜ್ಜಿಗವೊಳಲಿನ ಕುರಿತು ಪ್ರಸ್ತಾಪಿಸುತ್ತದೆ[೬೮]. ಈ ಶಾಸನವನ್ನು ಶಾಸನ ತಜ್ಞರಾದ ಡಾ.ಪಿ.ಬಿ.ದೇಸಾಯಿ ಅವರು ಮೊಟ್ಟಮೊದಲಿಗೆ ಪತ್ತೆಹಚ್ಚಿ ಪ್ರಕಟಿಸಿದರೆಂಬ ಮಾಹಿತಿಗಳುಂಟು.

ಪ್ರಸ್ತುತ ಯಾದಗಿರಿ ಜಿಲ್ಲೆಯು ಹೊಂದಿರಬಹುದಾದ ಪ್ರಾಚೀನ ಆಡಳಿತ ಘಟಕಗಳ ಬಗೆಗೆ ವಿಸ್ತಾರವಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಶಹಾಪುರ ಹಾಗೂ ಸುರಪುರ ತಾಲೂಕಿನ ಕೆಲವು ಗ್ರಾಮಗಳು ಸಗರನಾಡಿನಲ್ಲಿದ್ದರೆ ಇದೇ ತಾಲೂಕಿನ ನೈಋತ್ಯ ಭಾಗದಲ್ಲಿದ್ದ ಗ್ರಾಮಗಳು ಹಗರಟಗಿ ನಾಡಿನಲ್ಲಿ ಕೇಂದ್ರೀಕೃತವಾಗಿದ್ದವು. ಅದರಂತೆ ಯಾದಗಿರಿ ಜಿಲ್ಲೆಯ ಪೂರ್ವಭಾಗದ ಲಂಬಪಟ್ಟಿಯಂತೆ ಕಾಣುವ ಈ ಪ್ರದೇಶವು ಕಲ್ಲ-ಕೆಳಗು ನಾಡಿನಲ್ಲಿತ್ತು ಎಂದು ತಿಳಿಯಲಾಗುವುದು. ಅಲ್ಲದೇ ಈ ಪ್ರದೇಶದಲ್ಲಿ ಪ್ರಸ್ತುತ ತೆಲಂಗಾಣ ರಾಜ್ಯದ ಮೆಹಬೂಬನಗರ ಜಿಲ್ಲೆಯ ಮುಕ್ತಲ್ ತಾಲೂಕಿನಲ್ಲಿರುವ ಹಾಗೂ ನಾರಾಯಣಪೇಟೆ ಪರಿಸರದಲ್ಲಿರುವ ಬಹುತೇಕ ಎಲ್ಲ ಗ್ರಾಮಗಳು ಪ್ರಾಚೀನ ಕಲ್ಲಕೆಳಗು ನಾಡಿನ ಭೌಗೋಳಿಕ ವ್ಯಾಪ್ತಿಯಲ್ಲಿದ್ದವು ಎಂದು ಗುರುತಿಸಬಹುದು. ಅಲ್ಲದೇ ಯಾದಗಿರಿ ತಾಲೂಕಿನ ಯಾದಗಿರಿ ಪಟ್ಟಣ ಒಳಗೊಂಡು ಯರಗೋಳ, ಹತ್ತಿಕುಣಿ, ಗಾಜರಕೋಟೆ, ಚಿಂತಕುಂಟಾ, ಮೈಲಾಪುರ, ಅರಕೇರಿ ಪ್ರದೇಶಗಳು ಹಾಗೂ ಗುಡ್ಡತಗ್ಗುಗಳಿಂದ ಕೂಡಿದ ಈ ಬಯಲು ಪ್ರದೇಶ ಮತ್ತು ಭೀಮಾನದಿಯ ದಂಡೆಗುಂಟಾ ವಿಸ್ತರಣೆಗೊಂಡಿರುವ ಲಿಂಗೇರಿ, ಸಾವೂರು, ಮಲ್ಹಾರ, ಬೆಳಗುಂದಿ ಮತ್ತು ಗೋವಿಂದಹಳ್ಳಿ ಮುಂತಾದ ಗ್ರಾಮಗಳು ಬಹುಶಃ ಅರಲು-೩೦೦ರ ಆಡಳಿತ ವಿಭಾಗದಲ್ಲಿದ್ದರಬಹುದೆಂದು ಅಭಿಪ್ರಾಯಿಸಬಹುದು. ಇತಿಹಾಸ ಪ್ರಸಿದ್ಧ ಸನ್ನತಿ ಮತ್ತು ಕಣಗಿನಾಳ ಗ್ರಾಮ ವ್ಯಾಪ್ತಿಗಳು ಇದೇ ತಾಲೂಕಿನ ಭಾಗಗಳಿಗೆ ಹೊಂದಿಕೊಂಡಂತೆ ಇದ್ದವು. ಅರಲು-೩೦೦ ವಿಭಾಗದಲ್ಲಿದ್ದ ನಾಗಾಯಿ ಘಟಕಾಸ್ಥಾನವು ಅಧ್ಯಯನಾಸಕ್ತರಿಗೆ ಬಹುಮುಖ್ಯ ನೆಲೆಯಾಗಿ ಕಂಡುಬಂದಿದೆ. ಯಾದಗಿರಿ ತಾಲೂಕಿನ ಆಗ್ನೇಯ ಭಾಗದಲ್ಲಿರುವ ಹಾಗೂ ಸ್ಥಳೀಯವಾಗಿ ಸೈದಾಪುರ ಪಟ್ಟಿ ಎಂದು ಪ್ರಸ್ತುತ ದಿನಮಾನಗಳಲ್ಲಿ ಕರೆಯುತ್ತಿರುವ ಈ ಭೌಗೋಳಿಕ ಪ್ರದೇಶದಲ್ಲಿ ಬರುವ ಸೈದಾಪುರ, ಕಾಳೇಬೆಳಗುಂದಿ, ಬಳಿಚಕ್ರ, ಕಿಲ್ಲನಕೆರಾ ಮತ್ತು ರಾಚನಹಳ್ಳಿ ವ್ಯಾಪ್ತಿಯು ಬಹುಶಃ ಅರಲು-೩೦೦ ಅಥವಾ ಕಲ್ಲಕೆಳಗು ನಾಡಿನ ಆಡಳಿತ ವ್ಯಾಪ್ತಿಗೆ ಒಳಗಾಗಿದ್ದಿರಬಹುದೆಂದು ಸಂಭಾವ್ಯ ಊಹೆಯನ್ನು ಮಾಡಬಹುದಾಗಿದೆ. ಇತಿಹಾಸ ಪ್ರಸಿದ್ಧ ಖ್ಯಾತಿಯನ್ನು ಪಡೆದಿರುವ ಬಳಿಚಕ್ರದ ಹತ್ತಿರ ಇರುವ ಸಿದ್ಧರಬೆಟ್ಟ ಅಥವಾ ಗುಡ್ಡದಲ್ಲಿ ನವಶಿಲಾ ತಾಮ್ರಯುಗ ಕಾಲದ ಕಲ್ಲಾಸರೆಯ ಗವಿಚಿತ್ರವು ಇಂದಿಗೂ ಸುರಕ್ಷಿತವಾಗಿ ಉಳಿದು ಬಂದಿದೆ. ಕಲಿಯುಗ ಕಡೆಯ ಶರಣನೆಂದೇ ಹೆಸರು ಪಡೆದಿರುವ ಬಸಲಿಂಗ ಅಥವಾ ಬಸವಲಿಂಗಯ್ಯನವರು ಇದೇ ಗುಡ್ಡದಲ್ಲಿ ಪವಾಡಗಳನ್ನು ಮೆರೆದರು ಎಂಬ ಐತಿಹ್ಯಗಳಿವೆ.

**ಇತರೆ ಆಡಳಿತ ಘಟಕಗಳು**

ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಭೌಗೋಳಿಕ ವ್ಯಾಪ್ತಿಯಲ್ಲಿ ಪ್ರಮುಖವಾಗಿ ಮೂರು ನಾಡುಗಳು ಅಥವಾ ಆಡಳಿತ ಘಟಕಗಳಿದ್ದವೆಂದು ಈಗಾಗಲೇ ದೀರ್ಘವಾಗಿ

ಚರ್ಚಿಸಲಾಗಿದೆ. ಸಗರನಾಡು, ಹಗರಟಗಿ ಮತ್ತು ಕಲ್ಲಕೆಳಗುನಾಡುಗಳಲ್ಲಿ ಈ ಜಿಲ್ಲೆಯು ವಿಸ್ತರಿಸಿಕೊಂಡಿತು. ಅಲ್ಲದೇ ಈ ನಾಡುಗಳ ಮುಂದೆ ಸಂಖ್ಯಾ ಸೂಚಕಗಳಿದ್ದು ಅವೆಲ್ಲವುಗಳು ಗ್ರಾಮಗಳೆಂದು ಪರಿಭಾವಿಸಿದಲ್ಲಿ ಒಟ್ಟು ಸುಮಾರು ಸಾವಿರದ ಮುನ್ನೂರು ಹಳ್ಳಿಗಳಿಂದ ಕೂಡಿದ ವ್ಯಾಪ್ತಿಯು ಇದಾಗಿತ್ತು ಎಂದು ಅಭಿಪ್ರಾಯಿಸಬಹುದು. ಅಲ್ಲದೇ ಈ ಪ್ರಮುಖ ಘಟಕಗಳಲ್ಲಿ ಚಿಕ್ಕ ಚಿಕ್ಕನಾಡು ಹಾಗೂ ಕಂಪಣಗಳು ಇದ್ದಿರುವ ಬಗೆಗೆ ಶಾಸನಗಳಲ್ಲಿ ಮಾಹಿತಿಗಳು ದಾಖಲಾಗಿದ್ದುಂಟು. ಅವುಗಳಲ್ಲಿ ಕೆಲವು ಕಂಪಣ ಅಥವಾ ಚಿಕ್ಕ ಘಟಕಗಳನ್ನು ನಿರ್ದಿಷ್ಟ ಪಡಿಸಿದ ಸಂಖ್ಯೆಯಿಂದ ಸಂಬೋಧಿಸಲಾಗಿದೆ.

ಪ್ರಾಚೀನವಾದ ಈ ಘಟಕಗಳಲ್ಲಿ ಇದ್ದಿರಬಹುದಾದ ಚಿಕ್ಕ ಕಂಪಣಗಳಲ್ಲದೇ ಬೇರೆ ಬೇರೆ ನಾಡು ಅಥವಾ ಆಡಳಿತ ಘಟಕಕಗಳ ಕುರಿತು ಸಹ ಶಾಸನಗಳಲ್ಲಿ ವಿವರಗಳು ದಾಖಲಾಗಿದ್ದುಂಟು. ಉದಾಹರಣೆಗೆ ಕರ್ನೋಲು ನೂರೆಪ್ಪತ್ತು, ದೋಣಿ ನಾಲ್ನೂರು, ಅಟ್ಟವಳೆನಾಡು, ಅರಲು ಮುನ್ನೂರು ಹಾಗೂ ಗೊಂಕನಾಡಿನ ಕುರಿತು ಉಲ್ಲೇಖಗಳಿವೆ. ಇದು ಅತ್ಯಂತ ಪ್ರಾಚೀನ ಆಡಳಿತ ಘಟಕಗಳಾಗಿದ್ದು ತುಂಬಾ ಪ್ರಸಿದ್ಧಿಯನ್ನು ಪಡೆದ ವಿಭಾಗವಾಗಿತ್ತು. ಕೇವಲ ಸುತ್ತಮುತ್ತ ಇರುವ ಘಟಕಗಳಲ್ಲದೇ ಬಹುದೂರದ ಗಂಗ, ವಂಗ, ಕಳಿಂಗ, ಕಾಂಬೋಜ ಕೊಂಗು, ಕೊಂಕಣ, ಸೌರಾಷ್ಟ್ರ ವರಾಳ, ಮಘದ, ಮಾಳವ, ಲಾಳ, ತುರಸ್ಕ, ಕಾಶ್ಮೀರ, ಚೇರ, ಚೋಳ, ಪಾಂಡ್ಯ, ಆಂಧ್ರ ಕರ್ಣ್ನಾಟಕಗಳ ಉಲ್ಲೇಖಗಳು ಸಹ ಹಗರಟಗಿಯ ಕ್ರಿ.ಶ. ೧೧೪೪೮ ತೇದಿಯ ಶಾಸನದಲ್ಲಿ ದಾಖಲಾಗಿದ್ದುಂಟು[™]. ಇದರಲ್ಲಿ ಉಲ್ಲೇಖವಾದ ತುರಷ್ಕ ಅಥವಾ ತುರಸ್ಕ ಎಂಬ ಸ್ಥಳದ ಹೆಸರು ಸ್ವಲ್ಪಮಟ್ಟಿಗೆ ವಿಶೇಷ ಗಮನ ಸೆಳೆಯುತ್ತೆಂದು ಭಾವಿಸಬಹುದು. ಕ್ರಿ.ಶ. ಸುಮಾರು ೧೧ನೇ ಶತಮಾನದ ಪ್ರಾರಂಭದಿಂದಲೇ ಭರತ ಭೂಮಿಯ ಮೇಲೆ ಮುಸ್ಲಿಂ ದಾಳಿಗಳು ಅವ್ಯಾಹತವಾಗಿ ನಡೆಯುತ್ತಿದ್ದವು. ಇಂಥ ಪರಿಣಾಮಗಳು ಹೆಚ್ಚಾಗಿ ಉತ್ತರ ಭಾರತದ ಮೇಲೆ ಕೇಂದ್ರೀಕೃತವಾಗಿದ್ದವು. ಆದರೆ ಆ ಕುರಿತು ಆ ಹೊತ್ತಿನಲ್ಲಿ ಪರಕೀಯರಾಗಿದ್ದ ಮುಸ್ಲಿಂರ ದಾಳಿಗಳ ಹಾಗೂ ಅವರ ಪ್ರದೇಶಗಳ ಬಗೆಗೆ ಹಗರಟಗಿಯ ಮಾನ್ಯರಿಗೆ ತಿಳುವಳಿಕೆಗಳಿದ್ದವು ಎಂಬುದು ತುಂಬಾ ಮುಖ್ಯವಾದ ಸಂಗತಿ ಎನಿಸುತ್ತದೆ. ಅಲ್ಲದೇ ಕಾಕತಾಳೀಯ ಎಂಬಂತೆ ಉತ್ತರ ಆಕ್ರಮಣದ ಜೊತೆಗೆ ಮುಸ್ಲಿಂ ಸೈನಿಕರು ಸಹ ಪ್ರಸ್ತುತ ಯಾದಗಿರಿ ಪ್ರದೇಶದಲ್ಲಿ ಮೊಟ್ಟಮೊದಲಿಗೆ ಇಡೀ ದಕ್ಷಿಣ ಭಾರತಕ್ಕೆ ಅನ್ವಯಿಸುವಂತೆ ಮೊದಲ ಪ್ರದೇಶವಾಯಿತೆಂದು ಅಭಿಪ್ರಾಯಿಸಬಹುದು. ಈ ಪ್ರದೇಶದಲ್ಲಿದ್ದ ಚಿಕ್ಕ ಚಿಕ್ಕದಾಗಿದ್ದ ಪ್ರಮುಖ ಆಡಳಿತ ಘಟಕಗಳ ಕುರಿತು ಕೆಲವು ವಿವರಗಳನ್ನು ದಾಖಲಿಸಲಾಗಿದೆ.

ಸಗರನಾಡು ಅಥವಾ ಸಗರ ಐದನೂರರ ಆಡಳಿತ ವಿಭಾಗವು ಈ ಪ್ರದೇಶದಲ್ಲಿ ಹೆಚ್ಚಿನ ಮಹತ್ವ ಹಾಗೂ ವಿಸ್ತಾರ ಪಡೆದಿತ್ತು. ಪ್ರಾರಂಭದಲ್ಲಿ ಅದು ಸಹ ಮುನ್ನೂರು ಹಳ್ಳಿಗಳ

ವ್ಯಾಪ್ತಿಯನ್ನೇ ಹೊಂದಿತ್ತು. ತದನಂತರ ೧೨ನೇ ಶತಮಾನದ ಮಧ್ಯಾವಧಿಯ ನಂತರ ಶಾಸನಗಳು ಈ ನಾಡನ್ನು ಸಗರ ಐದನೂರು ಎಂದು ಉಲ್ಲೇಖಿಸಲು ಪ್ರಾರಂಭಿಸಿವೆ ಎಂಬುದನ್ನು ಈಗಾಗಲೇ ಚರ್ಚಿಸಲಾಗಿದೆ. ಈ ನಾಡಿನಲ್ಲಿ ಪ್ರಮುಖವಾಗಿ ಪಿರಿಯ ಬೆಳ್ಳುಂಬಟ್ಟೆ(ಜೇವರ್ಗಿ ತಾಲೂಕು) ಶಿವಪುರ ಎಳರಾಮೆ(ಯಡ್ರಾಮಿ-ಜೇವರ್ಗಿ ತಾಲೂಕು) ಐವೂರು (ಸುರಪುರ ತಾಲೂಕು) ತಿಂಥಿಣಿ ಸಿರವರ(ಸುರಪುರ ತಾಲೂಕು) ಹಾಲಂಗೆರೆ(ಶಹಾಪುರ ತಾಲೂಕು) ಸಗರ (ಶಹಾಪುರ ತಾಲೂಕು) ಶಿರವಾಳ ಮತ್ತು ಮದ್ರಕಿ(ಶಹಾಪುರ ತಾಲೂಕು) ಕಕ್ಕೇರಿ(ಸುರಪುರ ತಾಲೂಕು) ನದಿಯುಂಬೊಳೆ(ನರಿಬೋಳು-ಜೇವರ್ಗಿ ತಾಲೂಕು) ಹೆಮ್ಮಡಗಿ(ಸುರಪುರ ತಾಲೂಕು) ಹಾಗೂ ಶೆಳ್ಳಗಿ ಅಥವಾ ಸೆಲೆದಹಳ್ಳಿ(ಸುರಪುರ ತಾಲೂಕು) ಮುಂತಾದ ಗ್ರಾಮ ಘಟಕಗಳು ಸಗರ ಐದನೂರರ ಆಡಳಿತ ವಿಭಾಗದಲ್ಲಿದ್ದವೆಂದು ಶಾಸನಗಳಲ್ಲಿ ದಾಖಲಾಗಿದೆ. ಅಲ್ಲದೇ ಆ ಕಾಲದ ಅತೀ ಪ್ರಸಿದ್ಧಿ ಪಡೆದಿದ್ದ ಪ್ರಾಚೀನ ಘಟಕಗಳಾದ ಕೆಂಬಾವಿ ಹಾಗೂ ಮುದನೂರ ಆಡಳಿತ ಕಂಪಣಗಳು ಹಗರಟಗಿ-೩೦೦ರ ರಿಂದ ಬೇರ್ಪಡೆಗೊಂಡು ತದನಂತರ ಸಗರ ಐದನೂರರ ಆಡಳಿತ ವಿಭಾಗಕ್ಕೆ ಸೇರಿರುವ ಸೂಚನೆಗಳು ಶಾಸನ ವಿವರಗಳಲ್ಲಿ ಲಭ್ಯವಾಗಿವೆ[೧೦೦].

ಸಗರ ಐದನೂರರ ಆಡಳಿತ ವಿಭಾಗಗಳಲ್ಲಿ ಇನ್ನೆರಡು ಗ್ರಾಮಾಡಳಿತ ಘಟಕಗಳೆಂದರೆ ನಗರವುರು ಮತ್ತು ಕಂನಡನೂರು. ಆದರೆ ಅವು ಪ್ರಸ್ತುತ ಸಂದರ್ಭದಲ್ಲಿ ಇಂದಿನ ಯಾವ ಗ್ರಾಮಗಳು ಅಂದಿನ ಹೆಸರಿಸಿರುವ ಆ ಗ್ರಾಮಗಳಾಗಿದ್ದವು ಎಂಬುದು ಗುರುತಿಸುವುದು ಕಷ್ಟಕರವಾಗಿದೆ. ಕ್ರಿ.ಶ.೧೦೫೪ರ ತೇದಿಯ ಕೆಂಭಾವಿಯ ಶಾಸನದಲ್ಲಿ ಸಗರ-೩೦೦ರ ಬಳಿಯ ನಗರವುರದ ಮಂನ್ನೆಯಸಾಮ್ಯಮಿಂಚಿನಿತುಮ ಎಂಬ ಉಲ್ಲೇಖವಿದೆ. ಸಗರ ಸುತ್ತಮುತ್ತ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಆ ಹೆಸರಿನ ಊರು ಕುರಿತು ಮಾಹಿತಿ ಲಭ್ಯವಾಗಿಲ್ಲ. ಹಾಗಾಗಿ ಅದು ಬೇರೆ ಹೆಸರಿನಿಂದ ಬದಲಾವಣೆಗೊಂಡಿರಬಹುದೆಂದು ಅಥವಾ ಇತಿಹಾಸದ ಕಾಲಕೋಶದಲ್ಲಿ ಕರಗಿ ಹೋಗಿರಬಹುದೆಂದು ಅಭಿಪ್ರಾಯಿಸಬಹುದು. ಇದೇ ರೀತಿ ಸುರಪುರಗೊಂಡ ಸಗರಾವನಿಯಲ್ಲಿ ನದಿಪ್ರದೇಶದೊಳು ಸೋಮಸರಾಹುಪರ್ವ್ವದೊಳು ಕಂನ್ನಡನೂರನೆದತ್ತಿ ಮಡಿದಂ ಮಾಡಿಮತ್ತಂ ಮುಂನ್ನ ಚಂಡಿಗದೇವ ಕೊಳ್ಳಬಿನ ಹಾಲಂಗೆರೆಯಿಂ ಮಹಲಿಂಗ ಹರದೇಸ್ವರ ದೇವರಿಗೆ ಧಾರೆಯಂ ಮಾಡಿ ಕೊಟ್ಟದಂ ಪುನರ್ದ್ಧಾರೆ ಮಾಡಿ ಅಂತಾ ಕಂನಡನೂರುಂ ಹಾಲಂಗೆರೆಮ್ಮಂ ಎಂಬ ವಿವರದಲ್ಲಿರುವ ಈ ಗ್ರಾಮವನ್ನು ಗುರುತಿಸುವುದು ಸಹ ಕಷ್ಟಕರವೆ.

**ಕೆಂಬಾವಿ-೨೪**

ಸುರಪುರ ತಾಲೂಕಿನಲ್ಲಿರುವ ಪ್ರಮುಖ ಗ್ರಾಮವಾಗಿರುವ ಕೆಂಬಾವಿ ಐತಿಹಾಸಿಕ ಕಾಲದಿಂದಲೂ ತುಂಬಾ ಮಹತ್ವದ ಪಾತ್ರವನ್ನು ವಹಿಸಿದೆ. ವಚನಕಾರ ಕೆಂಬಾವಿ

ಭೋಗಣ್ಣನಿಂದಾಗಿ ಈ ಗ್ರಾಮವು ವಿಶೇಷ ಗಮನ ಸೆಳೆದಿದೆ ಎಂದರೆ ತಪ್ಪಾಗಲಾರದು. ಅಲ್ಲದೇ ವಿಜಯನಗರದ ಅರಸ ಕೃಷ್ಣದೇವರಾಯ ಕೆಂಬಾವಿ ಯುದ್ಧವನ್ನು ಜಯಿಸಿ ಆನಂತರ ಕಲಬುರ್ಗಿಯ ಕೋಟೆಯನ್ನು ವಶಪಡಿಸಿಕೊಂಡು ರಾಜಕೀಯವಾಗಿ ತಲೆದೋರಿದ್ದ ಅಸ್ಥಿರತೆಯನ್ನು ಉಪಶಮನಗೊಳಿಸಿ "ಯವನ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದು ಪಡೆದನೆಂಬ ವಿವರಗಳುಂಟು. ಪ್ರಾಚೀನ ಪ್ರಸಿದ್ಧಿ ಪಡೆದಿದ್ದ ಕೆಂಬಾವಿ ಹೈಹಯ ಮಹಾಮಂಡಳೇಶ್ವರರ ರಾಜಧಾನಿ ಹಾಗೂ ಮುಖ್ಯ ಪಟ್ಟಣವಾಗಿತ್ತೆಂದು ಶಾಸನಗಳಲ್ಲಿ ತುಂಬಾ ವಿವರಗಳು ದಾಖಲಾಗಿವೆ.

ಕ್ರಿ.ಶ.೧೦೫೪ರ ತೇದಿಯ ಕೆಂಬಾವಿಯ ಶಾಸನವು ಪ್ರಾಚೀನ ಪಟ್ಟಣದ ಕುರಿತು ಮಹತ್ವದ ವಿವರಗಳನ್ನು ನೀಡುವ ದಾಖಲೆಯಾಗಿದೆ. ಕಲ್ಯಾಣದ ಚಕ್ರವರ್ತಿ ತ್ರೈಲೋಕ್ಯಮಲ್ಲ ಮೊದಲನೆಯ ಸೋಮೇಶ್ವರನ ಕಾಲದಲ್ಲಿ ಈ ಶಾಸನವನ್ನು ಬರೆಯಲಾಗಿದೆ[೧೦೨]. ತುಸು ದೀರ್ಘವಾಗಿರುವ ಈ ಶಾಸನವು ಸಗರನಾಡನ್ನಾಳಿದ ಪ್ರಮುಖ ಮಹಾಮಂಡಳೇಶ್ವರರಲ್ಲಿ ಒಬ್ಬರಾಗಿದ್ದ ಹೈಹಯರ ಕುರಿತು ಹಮತ್ವದ ವಿವರಗಳನ್ನು ನೀಡುತ್ತದೆ. ಅಲ್ಲದೇ ಅವರ ವಂಶಾವಳಿಯ ಬಗೆಗೆ ಇದರಲ್ಲಿ ಮಾಹಿತಿ ಇದೆ[೧೦೩].

ಚಂದ

↓

ನಿಂಬ

↓ ↓

ಚಂದಭೂಪಾಳ-೨೯ಕ್ರಿ.ಶ.೧೦೧೪) ಅಲ್ಲಪುಲಿ

↓

ರೇವರಸ+ಮಾಳಿಯಬ್ಬರಸಿ(ಕ್ರಿ.ಶ.೧೦೫೪)

ರೇವರಸನ ಹೆಂಡತಿ ಮಾಳಿಯಬ್ಬರಸಿ ಕೆಂಬಾವಿಯಲ್ಲಿ ಮಾಳಿಬೇಶ್ವರ ದೇವಸ್ಥಾನವನ್ನು ಕಟ್ಟಿಸಿ ದೇವರ ಅಂಗಭೋಗ, ರಂಗಭೋಗ, ತಪೋಧನರ ವಿದ್ಯಾರ್ಥಿಗಳ ಆಹಾರ ದಾನಕ್ಕಾಗಿ ಸಾವಿರ ಮತ್ತರ ಭೂಮಿಯನ್ನು ರಾಜಧಾನಿ ಕೆಂಬಾವಿಯ ಪೂರ್ವಭಾಗದಲ್ಲಿ ಬಿಟ್ಟುದ್ದನ್ನು ತಿಳಿಸುತ್ತದೆ[೧೦೪]. ಆದರೆ ಕ್ಷೇತ್ರಕಾರ್ಯದಲ್ಲಿ ಗಮನಿಸಿದಾಗ ಈ ಹೆಸರಿನ ದೇವಾಲಯ ಪ್ರಸ್ತುತ ಗ್ರಾಮದಲ್ಲಿ ಕಂಡುಬಂದಿಲ್ಲ. ಬಸವಣ್ಣ, ಭೋಗೇಶ್ವರ ಹಾಗೂ ರೇಣಸಿದ್ದೇಶ್ವರ ದೇವಾಲಯಗಳು ಮಾತ್ರ ಈ ಗ್ರಾಮದಲ್ಲಿರುವುದನ್ನು ಕಾಣುತ್ತೇವೆ. ಅಲ್ಲದೇ ಇನ್ನೊಂದು ಈಶ್ವರಲಿಂಗ ಅಥವಾ ಮಲ್ಲಿಕಾರ್ಜುನ ಹೆಸರಿನ ದೇವಾಲಯ ಇದ್ದು ಅದು ಸಹ ಅಂಥ ಮಹತ್ವದ ಸ್ಮಾರಕವಲ್ಲ. ಈ ಸಂದರ್ಭದಲ್ಲಿ ವಿವೇಚಿಸಬಹುದಾದ ಸಂಗತಿ ಏನೆಂದರೆ ಪ್ರಸ್ತುತ ರೇವಣಸಿದ್ದೇಶ್ವರನ

ಹೆಸರಿನಿಂದ ಕರೆಯಲ್ಪಡುತ್ತಿರುವ ದೇವಾಲಯವೇ ಆ ದಿನಗಳಲ್ಲಿದ್ದ ಮಾಳಿಬೇಶ್ವರ ದೇವಾಲಯವಾಗಿರುವ ಸಾಧ್ಯತೆಗಳು ಹೆಚ್ಚಾಗಿವೆ. ಬಹುಶಃ ಆ ಹೆಸರು ಮರೆಮಾಚಿ ರೇವರಸ ಹೆಸರು ರೇವಣಸಿದ್ದೇಶ್ವರ ಎಂದು ರೂಪಾಂತರಗೊಂಡು ಬದಲಾಗಿರಬಹುದೆ? ಅಥವಾ ಕಾಳಾಮುಖದಿಂದ ಸಿಡಿದು ಪಾಶುಪತದ ಮೂಲಕ ನಾಥ ಪರಂಪರೆಯನ್ನು ಬೆಳೆಸಿದ ರೇವಣಸಿದ್ಧಣ ಹೆಸರಿನಲ್ಲಿ ಈ ದೇವಾಲಯ ಉಲ್ಲೇಖಿಸಲ್ಪಟ್ಟಿದೆಯೋ? ಖಚಿತವಾಗಿ ಹೇಳಲಿಕ್ಕಾಗದು.

ತಪೋಧನರ್ಕಂ ಮಠದಲೋದುವ ವಿದ್ಯಾರ್ತ್ಥಿಗಳ್ಗ ಮಾಹಾರಕ್ಕಂ ಪ್ರತಿದಿನಕ್ಕವೊಂದು ಭೋಗಮಿಂಚು ತ್ರಿಭೋಗಂ ಮಾಡಿ ಪೆರ್ಬ್ಬಾಳ ೫ ವಭಳಾರರ್ಗ್ಗೆ ರಾಜಧಾನಿ ಕೆಂಬಾವಿಯ ಮೂಡವೊಲದೋಟ ಸರ್ವ್ವಬಾಧಾ ಪರಿಹಾಂಮಾಡಿಬಿಟ್ಟ ಕೆಯ್ಮತ್ತರ್ ೧೦೦೦ ಎಂಬ ಉಲ್ಲೇಖವಿದೆ[೧೦೫]. ಹಾಗೂ ಕೆಂಬಾವಿ-೨೪ರ ಬಳಿಯ ಕಡಿಕಲ್ಲೂಟಲಿಗೆಯಂ ತೆರೆದುಂದಾಟದ ಮಂನೆಯಸ್ವಾಮಿಯ್ಯಂ ಸಗರ-೩೦೦ರ ಬಳಿಯ ನಗರವುರದ ಮನ್ನೆಯ ಸಾಮ್ಯಮಿಂತಿನಿತುಮ ಎಂಬ ವಿವರಗಳು ಕೆಲವು ಸ್ಪಷ್ಟವಾದ ಮಾಹಿತಿಗಳನ್ನು ಈ ಕಂಪಣದ ಕುರಿತು ನೀಡುತ್ತವೆ.

ಮಹಾಮಂಡಳೇಶ್ವರ ಹೈಹಯ ರೇವರಸರು ಮುಖ್ಯ ರಾಜಧಾನಿ ಕೆಂಬಾವಿಯಲ್ಲಿ ಆಳುತ್ತಿದ್ದಾಗ ಎಂಬ ಉಲ್ಲೇಖ ಕ್ರಿ.ಶ. ೧೨೦೬ರ ಶಾಸನದಲ್ಲಿ ದಾಖಲಾಗಿದೆ[೧೦೬].

ಈ ಪ್ರಾಚೀನ ಆಡಳಿತ ವಿಭಾಗ ಕುರಿತಂತೆ ಇನ್ನೊಂದು ವಿಚಾರವನ್ನು ಚರ್ಚಿಸಲಾಗಿದೆ. ಕ್ರಿ.ಶ.೧೦೫೪ರ ಕೆಂಬಾವಿ ಶಾಸನದಲ್ಲಿ ಕೆಂಬಾವಿ-೨೪ ಎಂದು ಶಾಸನಗಳು ಸಂಬೋಧಿಸಿದರೆ ಕ್ರಿ.ಶ. ೧೦೭೪ರ ಶಾಸನದಲ್ಲಿ ಕೆಂಬಾವಿ-೧೨ ಎಂಬ ಉಲ್ಲೇಖ ಇರುವುದುಂಟು. ಇಂಥ ವ್ಯತ್ಯಾಸಕ್ಕೆ ಕಾರಣಗಳೇನು ಎಂದು ಅಭಿಪ್ರಾಯಿಸಲಾಗಿದೆ. ಪ್ರಾಯಶಃ ಈ ರೀತಿ ಅಭಿಪ್ರಾಯಪಡಬಹುದೇನೋ, ಕೆಂಬಾವಿ ಪ್ರಾರಂಭದಲ್ಲಿ ಸ್ವತಂತ್ರವಾಗಿ ಆ ನಂತರ ಕೆಲವಾರು ವರ್ಷಗಳ ನಂತರ ಹಗರಟಗಿ-೩೦೦ರಲ್ಲಿ ಮುಖ್ಯ ಕಂಪಣವಾಗಿದ್ದಾಗ ೨೪ ಗ್ರಾಮಗಳನ್ನು ಹೊಂದಿದ್ದಿರಬಹುದು. ಆದರೆ ಆನಂತರ ಅದು ವಿಭಾಗ ಅಥವಾ ನಾಡ ಬದಲಾವಣೆ ಪ್ರಕ್ರಿಯೆಗೆ ಒಳಗಾಗಿ ಹನ್ನೆರಡು ಗ್ರಾಮಗಳನ್ನು ಕಳೆದುಕೊಂಡು ಕೇವಲ ಹನ್ನೆರಡು ಗ್ರಾಮಗಳೊಂದಿಗೆ ಮಾತ್ರ ಸಗರ-೫೦೦ರ ಸೇರಿರಬಹುದು. ಕ್ರಿ.ಶ.೧೨೦೬ರ ಎಡೆಯಾಪುರ ಶಾಸನದಲ್ಲಿ ಅದರಲ್ಲಿದ್ದ ಗ್ರಾಮಗಳ ಸಂಖ್ಯೆಯನ್ನು ನಮೂದಿಸಿಯೇ ಇಲ್ಲ. ಕೆಂಬಾವಿ-೧೨ರ ವಿಭಾಗದಲ್ಲಿ ಪ್ರಮುಖವಾಗಿ ಬೈಸಬಾಳು(ಬೈಚಳಾಳು), ಕರಡಕಲ್ಲು, ಕೂಡಲಗಿ ಹಾಗೂ ಮುದನೂರು ಗ್ರಾಮಗಳು ಸೇರಿರಬಹುದೆಂದು ಗುರುತಿಸಬಹುದು. ಸಗರ-ಐದನೂರು ವಿಭಾಗದಲ್ಲಿ ನದಿಯಂಬೊಳೆ-೭೦ ಎಂಬ ಹೆಸರಿನ ಘಟಕವು ಇತ್ತು. ಅದರ ಕೇಂದ್ರ ಸ್ಥಾನ ಇಂದಿನ ನರಬೋಳ ಆಗಿತ್ತು. ಅದು ಪ್ರಸ್ತುತ ಜೇವರ್ಗಿ ತಾಲೂಕಿನಲ್ಲಿರುವುದು. ಇಷ್ಟೊಂದು ವಿವರಗಳು ಶಾಸನಗಳಲ್ಲಿ ಉಲ್ಲೇಖಿತವಾದ ವಿವರಗಳ ಮೇಲೆ ಕಟ್ಟಲಾಗಿದೆ. ಪ್ರಸ್ತುತ ಯಾದಾಗಿರಿ

ಜಿಲ್ಲೆಯ ಪ್ರಾಚೀನ ಪ್ರದೇಶಗಳನ್ನು ಪರಿಗಣಿಸಿದರೆ ಪ್ರಾಯಶಃ ಪ್ರಸ್ತುತ ದಿನಮಾನಗಳಲ್ಲಿ ಅವರ ಭೌಗೋಳಿಕ ಕ್ಷೇತ್ರ ತುಂಬಾ ಸಂಕುಚಿತಗೊಂಡಿದೆ ಎಂದು ಗಮನಿಸಬಹುದು.

## ಆಡಳಿತ ವ್ಯವಸ್ಥೆ

ಸುಗಮ ಮತ್ತು ಸಮರ್ಥ ಆಡಳಿತಕ್ಕಾಗಿ ವಿಸ್ತಾರವಾದ ರಾಜ್ಯವನ್ನು ವಿಭಾಗಿಸಿ ಅಧಿಕಾರ ವಿಕೇಂದ್ರೀಕರಣ ಮಾಡುವ ಪದ್ಧತಿ ತುಂಬಾ ಪ್ರಾಚೀನ ಕಾಲದಿಂದಲೇ ಬೆಳೆದು ಬಂದಿರುವುದನ್ನು ಗಮನಿಸಬಹುದು. ನಮ್ಮ ನಾಡಿನ ಪ್ರಾಚೀನ ಮತ್ತು ಮಧ್ಯಕಾಲೀನ ಆಡಳಿತ ವ್ಯವಸ್ಥೆಯು ಸಹ ಇದಕ್ಕೆ ಹೊರತಾಗಿರಲಿಲ್ಲ. ಆ ಕುರಿತು ಪ್ರಮುಖವಾಗಿ ಶಾಸನಗಳು ಹಾಗೂ ಆಂಶಿಕವಾಗಿ ಆಯಾ ಕಾಲ ಸಂದರ್ಭದಲ್ಲಿ ರಚನೆಗೊಂಡಿದ್ದ ಸಾಹಿತ್ಯ ಆಕರಗಳು ಆಡಳಿತ ವ್ಯವಸ್ಥೆಯ ಕುರಿತು ಮಾಹಿತಿ ಒದಗಿಸುತ್ತವೆ. ಸಾಮಾನ್ಯವಾಗಿ ಆಡಳಿತ ವ್ಯವಸ್ಥೆಯನ್ನು ಕೇಂದ್ರಾಡಳಿತ, ನಾಡಾಳಿತ ಹಾಗೂ ಊರಾಡಾಳಿತ ಎಂದು ವಿಭಾಗಿಸಲಾಗಿತ್ತೆಂಬ ಅಭಿಪ್ರಾಯಗಳುಂಟು[೧೦೭]. ಅಲ್ಲದೇ ಅವೆಲ್ಲವುಗಳೂ ಒಂದನ್ನೊಂದು ಒಳಗೊಂಡೇ ನಿರ್ವಹಿಸಲ್ಪಡುತ್ತಿದ್ದವು.

ಮುಖ್ಯವಾಗಿ ಕೇಂದ್ರದಲ್ಲಿ ರಾಜ ಅಥವಾ ಚಕ್ರವರ್ತಿ, ನಾಡು ಅಥವಾ ನಾಡಾಳಿತಗಳಿಗೆ ರಾಜನಿಂದ ನೇಮಕವಾದ ಅಥವಾ ಮಾನ್ಯತೆ ಪಡೆದ ಮಹಾಮಂಡಳೇಶ್ವರ, ಮಹಾಸಾಮಂತ, ಸಾಮಂತ, ಮನ್ನೆಯ ಎಂಬ ಸ್ಥಾನಮಾನ ಹೊಂದಿದ ಅಧಿಕಾರಿಗಳು ಆಡಳಿತ ನಿರ್ವಹಿಸುತ್ತಿದ್ದರು. ಅಲ್ಲದೇ ಕೆಲವು ಸಂದರ್ಭದಲ್ಲಿ ಕೇಂದ್ರ ಅಥವಾ ರಾಜನಿಂದಲೇ ನೇಮಕವಾಗಿದ್ದ ಮಹಾಪ್ರಧಾನ, ದಂಡನಾಯಕ, ಮಹಾದಂಡನಾಯಕ ಮತ್ತು ಸೇನಾಪತಿಯ ಸ್ಥಾನಮಾನ ಹಾಗೂ ವಿಶೇಷಣಗಳನ್ನು ಹೊಂದಿದ್ದ ಅಧಿಕಾರ ವರ್ಗವು ನಾಡಿನ ಆಡಳಿತದ ಪ್ರಮುಖ ನಿರ್ವಾಹಕರಾಗಿ ಕಾರ್ಯಮಾಡುತ್ತಿದ್ದರು. ಈ ರೀತಿಯ ಅಧಿಕಾರಿಗಳ ನೇಮಕವು ಕೇಂದ್ರದ ಹಸ್ತಕ್ಷೇಪದಿಂದ ನೇರವಾಗಿ ನಾಡುಗಳಲ್ಲಿ ಚಲಾವಣೆಯಾಗುತ್ತಿತ್ತು ಎಂಬ ಅಭಿಪ್ರಾಯಗಳನ್ನು ಹೊಂದಲಾಗಿದೆ[೧೦೮].

ಊರಾಡಳಿತ ಅಥವಾ ಚಿಕ್ಕ ಚಿಕ್ಕ ಆಡಳಿತ ಗ್ರಾಮ ಘಟಕಗಳು ಪ್ರಭುಗಾವುಂಡರು ಮತ್ತು ಗಾವುಂಡರ ಆಳ್ವಿಕೆಗೆ ಒಳಪಟ್ಟಿದ್ದವು. ಅಲ್ಲದೇ ಊರಾಡಳಿತದಲ್ಲಿದ್ದ ಪಟ್ಟಣಗಳಿಗೆ ವರ್ತಕ ಶ್ರೇಣಿ ಅಥವಾ ವ್ಯಾಪಾರಿ ವರ್ಗವೇ ತಮಗೆ ಬೇಕಾದವರನ್ನು ನೇಮಕಮಾಡಿಕೊಳ್ಳುತ್ತಿತ್ತು. ಅಗ್ರಹಾರದ ಆಡಳಿತವನ್ನು ಮಹಾಜನರು ನಿರ್ವಹಿಸುತ್ತಿದ್ದರು. ಕೆಲವೊಮ್ಮೆ ರಾಜನ ನೇರ ಹಿಡಿತದಲ್ಲಿರುತ್ತಿದ್ದವು. ಆಡಳಿತದ ಅನುಕೂಲಕ್ಕಾಗಿ ಈ ರೀತಿಯ ವಿಕೇಂದ್ರೀಕರಣ ಮಾಡಲಾಗಿತ್ತು. ಆದರೆ ಅಂತಿಮವಾದ ಅಧಿಕಾರದ ದಂಡ ಅಥವಾ ನಿಯಂತ್ರಣ ಮಾತ್ರ ರಾಜ ಅಥವಾ ಚಕ್ರವರ್ತಿಯ ಹಿಡಿತದಲ್ಲಿತ್ತು. ಇಂಥ ಸ್ಥಾನಮಾನಗಳು ಅನೂಚಾನವಾಗಿ, ವಂಶಪಾರಂಪರ್ಯವಾಗಿ ಹಾಗೂ ಹೊಸ ನೇಮಕಗಳಿಂದ ಆಗಿದ್ದರೂ ಅವರನ್ನು ಬದಲಾಯಿಸುವ ಹಾಗೂ ಕಿತ್ತೆಸೆಯುವ ಸಂಪೂರ್ಣ ಅಧಿಕಾರ ಮಾತ್ರ ರಾಜನದ್ದೇ ಆಗಿತ್ತು.

ರಾಜ

ರಾಜನ ಸಹಾಯಕ್ಕಾಗಿ ಮಂತ್ರಿಮಂಡಳ ಹಾಗೂ ಹಲವು ಬಗೆಯ ಅಧಿಕಾರ ವರ್ಗವೂ ಅವನ ಜೊತೆಯಾಗಿಯೇ ಕೇಂದ್ರದಲ್ಲಿದ್ದರೂ ಅಂತಿಮವಾಗಿ ರಾಜನೇ ಅತ್ಯಂತ ಉನ್ನತ ವ್ಯಕ್ತಿಯಾಗಿದ್ದ. ರಾಜ್ಯದ ಎಲ್ಲ ಆಗು-ಹೋಗುಗಳ ಸೂತ್ರಧಾರನಾಗಿ ಅವನು ಅಧಿಕಾರ ಹಿಡಿದಿಟ್ಟುಕೊಂಡಿದ್ದ. ರಾಜ್ಯ ಅಥವಾ ಸಾಮ್ರಾಜ್ಯದ ಎಲ್ಲ ಜನತೆಯ ಏಕೈಕ ಪ್ರತಿನಿಧಿ ಅಥವಾ ನಾಯಕ ಆತನೇ ಆಗಿದ್ದರಿಂದ ಇಡೀ ರಾಜ್ಯದ ಸರ್ವಸ್ವ ಅವನ ಕೈಯಲ್ಲಿತ್ತು. ರಾಜ್ಯದ ಎಲ್ಲ ಘಟನೆಗಳ ಒಳಿತು-ಕೆಡಕುಗಳ ಜವಾಬ್ದಾರನು ಅವನಾಗಿದ್ದರಿಂದ ಅವನಿಗೆ ನಾಡಿನ ಜನತೆಯು ತೆತ್ತಬೆಲೆ ಸಣ್ಣದಲ್ಲ. ಅದು ಮಳೆ-ಬೆಳೆಗಿಂತ ದೊಡ್ಡದು ಎಂಬ ವಿವರಗಳು ದಾಖಲಾಗಿವೆ[೧].

ಅವನ ಚರಿತ್ರೆ ದೇಶ ಚರಿತ್ರೆಯಾಯಿತು. ಅಂಥ ಪರಿಣಾಮಗಳಿಂದಾಗಿಯೇ 'ದೊರೆಯಂತೆ ಧರೆ' 'ರಾಜಾಪ್ರತ್ಯಕ್ಷ ದೇವತಾ' ಮತ್ತು 'ರಾಜಾ ಕಾಲಸ್ಯ ಕಾರಣಂ' ಎಂಬ ಆದರ್ಶ ಸೂಕ್ತಿಗಳು ಹುಟ್ಟಿಕೊಂಡವು. ಹಾಗಾಗಿಯೇ ಶಾಸನದಲ್ಲಿ ಉಲ್ಲೇಖವಾದ ಮೊದಲು ಸಾಲುಗಳು ರಾಜನನ್ನು ಹಾಡಿ-ಹೊಗಳಲು ಹುಟ್ಟಿಕೊಂಡವು ಎಂದು ಪರಿಭಾವಿಸಬಹುದು. ಅವರನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ತಳುಕು ಹಾಕಿ ಸಮಸ್ತ 'ಭುವನಾಶ್ರಯ' 'ಪೃಥ್ವಿವಲ್ಲಭ' ಮುಂತಾದ ಬಿರುದುಗಳಿಂದ ಪ್ರತಿ ರಾಜನನ್ನು ಕೊಂಡಾಡಿರುವುದನ್ನು ಬಹುತೇಕ ಶಾಸನಗಳು ಉಲ್ಲೇಖಿಸುತ್ತವೆ.

ಕ್ರಿ.ಶ.೧೦೭೭ರ ತೇದಿಯ ಏವೂರಿನ ಶಾಸನದಲ್ಲಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಕುರಿತು ಈ ವಿವರಗಳು ದಾಖಲಾಗಿವೆ.

ಜಯತ್ಯಾದಿಷ್ಕೃತಂ ವಿಷ್ಣೋರ್ವ್ವಾದಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತ ದಂಷ್ಟ್ರಾಗ್ರ ಭುವನವಪುಃ॥ ಶ್ರೀಯಮುಪಹರತಾವ್ವಃ ಶ್ರೀಪತಿಃ ಕ್ರೋಡರೂಪೋ ವಿಕಟವಿಶದ ದಂಷ್ಟ್ರಾಪ್ರಾನ್ತ ವಿಶ್ರಾನ್ತಿಭಾಜಂ॥ ಅವಹದದಯದಂಷ್ಟ್ರಾಕೃಷ್ಟ ವಿಸ್ಪಷ್ಟ ಕಾಣ್ಡಪುತನುವಿಶಜಟಾಗ್ರಗ್ರನ್ಥಿತದ್ಯೋ ಧರಿತ್ರೀಂ ಎಂಬ ವಿಶೇಷಣರಿಂದ ಹೊಗಳಲಾಗಿದೆ[೨]. ಅಲ್ಲದೇ ಕಲ್ಯಾಣದ ಚಾಲುಕ್ಯ ಅರಸರಿಗೆ ಸಂಬಂಧಪಟ್ಟ ಶಾಸನಗಳಲ್ಲಂತೂ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಎಂಬ ವಿಶೇಷಣಗಳಂತೂ ಸರ್ವೇ ಸಾಮಾನ್ಯವಾಗಿ ದಾಖಲಾಗಿವೆ.

ಕಳಚೂರ್ಯ ಅರಸರು ತಮ್ಮನ್ನು ಸ್ವಲ್ಪ ಬೇರೆ ರೀತಿಯಾಗಿ ಹೊಗಳಿಕೊಂಡಿದ್ದಾರೆ. ಡಮರುಗತೂರ್ಯನಿರ್ಘೋಷಣ ಕಳಚೂರ್ಯ ಕುಳಕಮಳಮಾರ್ತಾಂಡ, ಸುಭಟರಾದಿತ್ಯ ಪ್ರತಾಪಲಂಕೇಶ್ವರ, ಪರನಾರೀ ಸಹೋದರ ಎಂದು ಸಂಬೋಧಿಸಿಕೊಂಡಿದ್ದಾರೆ. ಆದರೆ ದೇವಗಿರಿ ಸೇವುಣ(ಯಾದವ)ರು ಕಲ್ಯಾಣದ ಚಾಲುಕ್ಯ ದೊರೆಗಳು ಸಂಬೋಧಿಸಿ ಕಂಡುಂಡಂತ

ವಿಶೇಷಣಗಳನ್ನೇ ಉಳಿಸಿಕೊಂಡಿರುವುದನ್ನು ಕಾಣಬಹುದು. ಒಟ್ಟಾರೆ ರಾಜನಾದವನು ಸಾಮಾನ್ಯ ಜನರಿಗಿಂತ ಭಿನ್ನವಾದವನು ಹಾಗೂ ಅವರ ರಕ್ಷಕನೆಂದು ಪರಿಭಾವಿಸಿಕೊಂಡಂತೆ ಈ ಹೊಗಳಿಕೆಗಳು ದಾಖಲಾಗಿವೆ.

ರಾಜನಾದವನು ಜನರಿಗಾಗಿ ಏನುಮಾಡಬೇಕು ಅಥವಾ ಹೇಗಿರಬೇಕು ಎಂಬುದನ್ನು ಕವಿ ನಯಸೇನ ಈ ರೀತಿ ಅಭಿಪ್ರಾಯ ಪಟ್ಟಿದ್ದಾನೆಂದು ವಿವರಿಸಲಾಗಿದೆ.

ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಂಗಳಂ ಕಾದು ತ
ಸ್ಕದರಂ ಬಂಧಿಸಿ ಕಷ್ಟರಂ ಕಿಡಿಸಿ ದಂಡಂಗೊಂಡು ಮಿಂತರ್ಕಳಂ
ಭರದಿಂ ಬಗ್ಗಿಸಿ ಶಿಷ್ಟರಿಷ್ಟಪದಮಂ ಸಂತೋಷದಿಂ ಕೊಟ್ಟು ಧೂ
ರ್ತರ ಬೇರಂ ನೆರೆಕಿಳ್ತು ಪಾಲಿಸುವುದುರ್ವೀಚಕ್ರಮಂ ಕ್ಷತ್ರಿಯರ್॥[೧೧೧]

ರಾಜನಿಗೆ ರಾಜಕೀಯ ವ್ಯವಹಾರಗಳೊಂದಿಗೆ ಧಾರ್ಮಿಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಮುಖ್ಯವಾಗಿದ್ದವು. ಹಾಗಾಗಿ ಜನಸಾಮಾನ್ಯರ ಜೊತೆಗೂ ಬೆರೆತು ಅವರ ಕಷ್ಟಸುಖಗಳನ್ನು ಆಲಿಸುತ್ತಿದ್ದ. ರಾಜಸತ್ತೆ ಅಥವಾ ಅಧಿಕಾರವು ಅನುವಂಶಿಕವಾಗಿದ್ದರೂ ಕೆಲವು ಸಂದರ್ಭಗಳಲ್ಲಿ ಅವರವರ ಬಲಾಬಲವನ್ನು ಪಣಕ್ಕಿಟ್ಟು ಅಧಿಕಾರವನ್ನು ಪಡೆದ್ದುದುಂಟು.

**ರಾಣಿಯರು**

ರಾಜ್ಯಾಡಳಿತದಲ್ಲಿ ರಾಣಿಯರು ಸಹ ಅಮೋಘವಾದ ಪ್ರಭಾವ ಮತ್ತು ಪಾತ್ರವನ್ನು ವಹಿಸಿರುವುದು ಶಾಸನಗಳಲ್ಲಿ ದಾಖಲಾಗಿವೆ. ಆಡಳಿತದ ಜೊತೆಗೆ ಸಾಮಾಜಿಕ ಮತ್ತು ಧಾರ್ಮಿಕ ಚಟವಟಿಕೆಗಳಲ್ಲಿ ಭಾಗವಹಿಸಿ ಜನರ ಪ್ರೀತಿಗೆ ಪಾತ್ರರಾಗುತ್ತಿದ್ದರು. ರಾಜನಿಗೆ ಹಲವು ರಾಣಿಯರಿರುತ್ತಿದ್ದರು. ಬಹುಪತ್ನಿತ್ವ ಆ ಸಂದರ್ಭದ ವಾಡಿಕೆಯಾಗಿತ್ತು. ತನ್ನ ರಾಜ್ಯವನ್ನು ವಿಸ್ತರಿಸಿಕೊಳ್ಳುವ ಅಥವಾ ಮತ್ತಷ್ಟು ಭದ್ರಪಡಿಸಿಕೊಳ್ಳುವುದಕ್ಕೋಸ್ಕರ ಬೇರೆ ಬೇರೆ ರಾಜರ ಸುಪ್ರತಿಯರನ್ನೋ ಅಥವಾ ಸಹೋದರಿಯರನ್ನೋ ರಾಜನು ಮದುವೆ ಮಾಡಿಕೊಳ್ಳುತ್ತಿದ್ದನು. ಕೆಲವೊಮ್ಮೆ ಅದು ಬಲವಂತದ ಅಥವಾ ಒತ್ತಾಯದ ವಿವಾಹವು ಆಗಿರುತ್ತಿತ್ತು. ಇಂಥ ಸಂಬಂಧಗಳು ವೈರಿ ರಾಜರೊಡನೆ ಸೌಹಾರ್ದತೆ ಬೆಳೆಸುವ ಅಲ್ಲದೇ ರಾಜಕೀಯ ಪ್ರತಿಷ್ಠೆ ಸಂತಾನ ಪ್ರಾಪ್ತಿಯಿಂದ ವೈಯಕ್ತಿಕ ಹಿತಾಸಕ್ತಿಗಳೂ ಇರುತ್ತಿದ್ದವು ಎಂದು ಅಭಿಪ್ರಾಯಿಸಲಾಗಿದೆ[೧೧೨].

ರಾಜನಿಗೆ ಹಲವಾರು ರಾಣಿಯರು ಇರುತ್ತಿದ್ದರೂ ಅವರಿಗೆಲ್ಲಾ ಸರಿಸಮಾನವಾದ ಹಕ್ಕು ಬಾಧ್ಯತೆಗಳು ಇರಲಿಲ್ಲ. ಹಾಗಾಗಿ ಕೆಲವೊಮ್ಮೆ ಸವತಿ ಮತ್ಸರವು ಅನೇಕ ಬಗೆಯ ಅವಘಡಗಳಿಗೂ ಗುರಿಯಾಗಿದ್ದುಂಟು. ರಾಜನ ಹಿರಿಯ ರಾಣಿ(ಮೊದಲ ಹೆಂಡತಿ)ಯನ್ನು ಹಿರಿಯರಸಿ ಮತ್ತು ಅಗ್ರಮಹಿಷಿ ಎಂದು ಕರೆಯಲಾಗುತ್ತಿತ್ತು ಎಂಬ ವಿವರಗಳಿವೆ. ಇಂಥದ್ದೇ

ಸಂಗತಿಗಳು ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ದಾಖಲಾಗಿವೆ. ಆರನೆಯ ವಿಕ್ರಮಾದಿತ್ಯನಿಗೆ ಪಿರಿಯರಸಿ ಪಟ್ಟಮಹಾದೇವಿ ಮಲಯಮತಿದೇವಿ ಹಾಗೂ ಪಿರಿಯರಸಿ ಚಂದಲದೇವಿಯರು ತುಂಬಾ ಪ್ರಸಿದ್ಧಿ ಪಡೆದ ರಾಣಿಯರಾಗಿದ್ದರೆಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಪಿರಿಯರಸಿಗೆ ಮಕ್ಕಳಾದರೆ ಅವಳು ಪಟ್ಟದ ರಾಣಿಯಾಗುತ್ತಿದ್ದಳು. ಅವಳ ಹಿರಿಯ ಮಗನು ಯುವರಾಜನಾಗಿ ನೇಮಕಗೊಳ್ಳುತ್ತಿದ್ದ. ಅಲ್ಲದೇ ಉಳಿದ ಪತ್ನಿಯರು ಸಹ ರಾಣಿಯರೆಂದೇ ಕರೆಸಿಕೊಳ್ಳುತ್ತಿದ್ದರು ಎಂದು ಅಭಿಪ್ರಾಯಿಸಲಾಗಿದೆ. ಆದರೆ ಈ ಅಭಿಪ್ರಾಯ ಒಪ್ಪಿಕೊಳ್ಳಲಾಗದು. ಕಾರಣ

ಆರನೆಯ ವಿಕ್ರಮಾದಿತ್ಯನಿಗೆ ಅತ್ಯಂತ ಪ್ರೀತಿ ಪಾತ್ರಳಾದ ಮಡಿದೆಯೆಂದು ಕರೆಯಿಸಿಕೊಳ್ಳುತ್ತಿದ್ದ ಚಂದಲದೇವಿಯು ಮಲಯಮತಿ ದೇವಿಗಿಂತ ಮೊದಲೆ ವಿಕ್ರಮಾದಿತ್ಯನನ್ನು ಮದುವೆ ಆಗಿದ್ದರೂ ಅವಳು ಪಟ್ಟದರಸಿ ಅಥವಾ ಪಟ್ಟವುಹಾದೇವಿ ಆಗಲಿಲ್ಲ. ಆದರೆ ಅವಳ ಪಟ್ಟಮಹಾದೇವಿಯಾಗದಿದ್ದರೂ ಅವಳ ಮಗ ಮೂರನೆಯ ಸೋಮೇಶ್ವರನೇ ಆರನೆಯ ವಿಕ್ರಮಾದಿತ್ಯನ ನಂತರ ರಾಜನಾಗಿರುವುದನ್ನು ಗಮನಿಸಬಹುದು.

ರಾಣಿಯರು ಆಡಳಿತದಲ್ಲಿ ಕಾರ್ಯನಿರ್ವಹಿಸಿದರೂ ವಿಶೇಷವಾಗಿ ಅಗ್ರಹಾರ ಹಾಗೂ ಭತ್ತಗ್ರಾಮ ಅಥವಾ ಭತ್ತಗ್ರಾಮೆಗಳನ್ನು ಆಳುತ್ತಿದ್ದರೆಂದು ಹೆಚ್ಚಿನ ಉಲ್ಲೇಖಗಳಲ್ಲಿ ದಾಖಲಾಗಿವೆ. ಇಲ್ಲಿ ಚಕ್ರವರ್ತಿ ತನ್ನ ರಾಣಿಯರನ್ನು ಅಗ್ರಹಾರಗಳಲ್ಲಿರಿಸುತ್ತಿದಕ್ಕೆ ಪ್ರಮುಖ ಕಾರಣ ರಾಜಕೀಯ ಭದ್ರತೆ ಎನ್ನುವುದಕ್ಕಿಂತ ರಾಣಿಯರ ಸುರಕ್ಷಿತತೆ ಎನ್ನಬಹುದು. ರಾಣಿಯರ ಚಿತ್ತಾಚಂಚಲವಾಗದಂಥ ಧಾರ್ಮಿಕ ವಾತಾವರಣ ಅಗ್ರಹಾರಗಳಲ್ಲಿರುತ್ತಿತ್ತು. ಯಾವನೇ ರಾಜ ಬಂದರೂ ಹೋದರೂ ಅವು ಸುರಕ್ಷಿತವಾಗಿರುತ್ತಿದ್ದವು ಎಂದು ಅಭಿಪ್ರಾಯಿಸಲಾಗಿದೆ[೧೧೩]. ರಾಜರು ತಮ್ಮ ಬಹುಸಂಖ್ಯಾತ ರಾಣಿಯರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟು ಸವತಿ ಮತ್ಸರ ತಪ್ಪಿಸಿದಂತೆ ಹಾಗೂ ರಾಜಕೀಯದತ್ತ ತಾವು ತಮ್ಮ ಮನಸ್ಸನ್ನು ತೊಡಗಿಸಿ ಕಾರ್ಯೋನ್ಮುಖರಾಗುತ್ತಿದ್ದರು. ಇದು ಅವರ ರಾಜಕೀಯ ನೈಪುಣ್ಯತೆ ತೋರಿಸುತ್ತದೆಂದು ಊಹಿಸಬಹುದೆಂದು ಅಭಿಪ್ರಾಯಿಸಲಾಗಿದೆ. ಇದು ಒಂದರ್ಥದಲ್ಲಿ ಸಂಸಾರಿಕ ನೆಮ್ಮದಿ ಇನ್ನೊಂದರ್ಥದಲ್ಲಿ ರಾಜಕೀಯ ಭದ್ರತೆಗೆ ಕಾರಣವಾಗಿತೆಂದು ಉಲ್ಲೇಖಿಸಲಾಗಿದೆ[೧೧೪].

ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಿರುವ ಕೆಲವಾರು ಶಾಸನಗಳಲ್ಲಿ ಪ್ರಾಚೀನ ರಾಣಿಯರ ಕುರಿತು ಉಲ್ಲೇಖಗಳಿವೆ. ಕ್ರಿ.ಶ.೧೦೭೭ರ ತೇದಿಯ ಏವೂರಿನ ಶಾಸನವು ಕಲ್ಯಾಣದ ಚಾಲುಕ್ಯ ರಾಜ್ಯ ಸ್ಥಾಪಕ ಇಮ್ಮಡಿ ತೈಲಪನ(ಕ್ರಿ.ಶ.೯೭೩-೯೯೭). ಮಡದಿ ಜಾಕಬ್ಬೆ ಕುರಿತ ಮಾಹಿತಿ ನೀಡುತ್ತದೆ[೧೧೫]. ಚಾಳುಕ್ಯ ವಂಶಾಂಬರ ಭಾರಮೀ ಶ್ರೀತೈಲಭೂಪಾಳ ಉಪಾಯತೈನಾಂ। ಎಂದು ಹೊಗಳಿದೆ. ಆದರೆ ಅವಳು ಆಡಳಿತ ವ್ಯವಸ್ಥೆಗೆ ಸಂಬಂಧಿಸಿದಂತೆ ಅಂಥ ಮಹತ್ವದ

ಕಾರ್ಯನಿರ್ವಹಿಸಿದ್ದರ ಬಗೆಗೆ ಮಾಹಿತಿಗಳಿಲ್ಲ. ಎರಡನೆಯ ತೈಲಪನ ಮಗನಾದ ದಶವರ್ಮ(ದಸವರ್ಮ) ಹೆಂಡತಿ ಭಾಗ್ಯವತಿ ಕುರಿತು ಇದೇ ಶಾಸನ ಪ್ರಸ್ತಾಪಿಸಿದೆ.

ದಸವರ್ಮನ ಮಗನೂ ಹಾಗೂ ಕಲ್ಯಾಣದ ಚಾಲುಕ್ಯ ವಂಶದ ಆಳ್ವಿಕೆಯ ಎರಡನೆಯ ದೊರೆಯು ಆದ ಐದನೆಯ ವಿಕ್ರಮಾದಿತ್ಯನ ಹೆಂಡತಿ ಬೊಂಥಾದೇವಿಯ ಕುರಿತು ಕ್ರಿ.ಶ.೧೦೭೭ರ ಐವೂರಿನ ಶಾಸನವು ಉಲ್ಲೇಖಿಸುತ್ತದೆ[೧೧೬]. ಕ್ರಿ.ಶ.೧೧೮೨ರ ತೇದಿಯ ಹೆಮ್ಮಡಗಿಯ ಶಾಸನದಲ್ಲಿ ಅವಳನ್ನು ಸಂಭಾವಿತೆ ವಿನೂತೆ ಎಂದು ಕರೆಯಲಾಗಿದೆ[೧೧೭]. ಆದರೆ ಬೋ ಎಂಬ ಅಕ್ಷರ ಮಾತ್ರ ಉಳಿದಿದ್ದು ಉಳಿದೆಲ್ಲ ಅಕ್ಷರಗಳು ಸವೆದು ಹೋಗಿರುವುದನ್ನು ಗಮನಿಸಬಹುದು.

ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ನೆಚ್ಚಿನ ಮಡದಿ ಹಾಗೂ ಆ ಕಾಲದ ಹಲವಾರು ಶಾಸನಗಳಲ್ಲಿ ಹೆಚ್ಚಾಗಿ ಉಲ್ಲೇಖವಾಗುವ ರಾಣಿಯೆಂದರೆ ಚಂದಲದೇವಿ. ಇವಳು ವಿಕ್ರಮಾದಿತ್ಯನಿಗೆ ಅತ್ಯಂತ ಪ್ರೀತಿಪಾತ್ರಳಾಗಿದ್ದಳು. ಅಲ್ಲದೇ ಪಟ್ಟಮಹಾದೇವಿ ಪಟ್ಟವನ್ನು ಅಲಂಕರಿಸಿ ಮಲಯಮತಿಗಿಂತ ಮೊದಲೇ ರಾಜನ ರಾಣಿಯಾಗಿದ್ದವಳು. ಅವಳ ಮಗನಾದ ಮೂರನೆಯ ಸೋಮೇಶ್ವರನೇ ವಿಕ್ರಮಾದಿತ್ಯನ ತರುವಾಯ ಪಟ್ಟಕ್ಕೆ ಬಂದನು. ಈ ರಾಣಿಯ ಕುರಿತು ರಾಜನಕೋಳೂರಿನ ಎರಡು ಶಾಸನಗಳು ಬಹುಮುಖ್ಯವಾದ ಮಾಹಿತಿಗಳನ್ನು ನೀಡುತ್ತವೆ.

ಕ್ರಿ.ಶ.೧೦೯೧ರ ಕಾಲದ ಈ ಗ್ರಾಮದ ಶಾಸನವು ದಾನಗುಣೋತ್ತಮೆ ರಾಯನಾರಾಯಣ ಹೃದಯಹ್ಲಾದಿಂ ಮೃಗಮದಾಮೋದಿನಿ ಸೌಭಾಗ್ಯ ಸಮುದ್ಭಾಸಿನಿ ಶ್ರೀಮತ್ರಿಭುವಮನಮಲ್ಲದೇವ ವಿಷಾಳವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮಚ್ಚೆಂದಲ ಮಹಾದೇವಿಯರ್॥ ಎಂಬ ಉಲ್ಲೇಖವಿದೆ[೧೧೮]. ಅಲ್ಲದೇ ಮುಖ್ಯವಾಗಿ ಇವಳು ಭತ್ತಗ್ರಾಮ ರಾಜನಕೋಳೂರಿನ ಸರ್ವ್ವನಮಸ್ಯವಾಗಿ ಬ್ರಹ್ಮಪುರಿಯ ಬ್ರಾಹ್ಮಣರಿಗೆ ದಾನ ನೀಡಿದ ವಿವರಗಳು ದಾಖಲಾಗಿವೆ.

ಇನ್ನೊಂದು ತೇದಿಯ ಕ್ರಿ.ಶ. ೧೦೯೭ರ ಶಾಸನದಲ್ಲಿಯೂ(ರಾಜನಕೋಳೂರು) ಸಹ ಇಂಥದ್ದೇ ಉಲ್ಲೇಖಬರುತ್ತದೆ. ಚಕ್ರವರ್ತಿಯ ಅರಸಿ ಚಂದಲದೇವಿಯು ಭತ್ತಗ್ರಾಮವಾದ ರಾಜನಕೋಳೂರಿನಲ್ಲಿಯ ಶಂಕರನಾರಾಯಣ ದೇವರಿಗೆ ಭೂಮಿ, ತೋಟ, ಗಾಣ ಮತ್ತು ನಿವೇಶನಗಳನ್ನು ದತ್ತಿಯಾಗಿ ಬಿಟ್ಟಿರುವ ವಿವರಗಳನ್ನು ನೀಡುತ್ತದೆ[೧೧೯].

ಕ್ರಿ.ಶ.೧೧೦೭ರ ತೇದಿಯ ಯಾದಗಿರಿ ತಾಲೂಕಿನ ಅನ್ಪೂರ ಗ್ರಾಮದಲ್ಲಿ ಇತ್ತೀಚೆಗೆ ದೊರಕಿರುವ ಶಾಸನದಲ್ಲಿಯೂ ಸಹ ಚಂದಲದೇವಿಯ ಉಲ್ಲೇಖವಿದೆ[೧೨೦]. ಚಾಳುಕ್ಯ ಕುಳೋತ್ತುಂಗ ಶ್ರೀಮತ್ಪಿರಿಯರಸಿ ಚಂದಲದೇವಿಯರಣುಂಗಂ ನಾಮಾದಿ ಸಮಸ್ತ ರಾಜಾವಳಿ ವಿರಾಜಮಾನಂ ಶ್ರೀ ಮನ್ಮಹಾಮಣ್ಡಳೇಶ್ವರಂ ಜಗದೇಕಮಲ್ಲ ಕುಮಾರ ಸತ್ಯಾಶ್ರಯದೇವರು ಎಂಬ ಉಲ್ಲೇಖ ಈ ಶಾಸನದಲ್ಲಿದೆ. ಅಲ್ಲದೇ ಇದೇ ತಾಲೂಕಿನ ಕ್ರಿ.ಶ. ೧೧೧೫ರ ತೇದಿಯು ಇಡ್ಲೂರಿನ ಶಾಸನವು ಸಹ ಮೇಲಿನ ರೀತಿಯ ಮಾಹಿತಿಗಳನ್ನೇ ಪ್ರಕಟಪಡಿಸುತ್ತದೆ[೧೨೧].

ಈ ಮೇಲಿನ ಎರಡು ಶಾಸನಗಳಲ್ಲಿ ವ್ಯಕ್ತವಾದ ವಿಷಯದಿಂದ ತಿಳಿಯಬಹುದಾದ ಸಂಗತಿಗಳೇನೆಂದರೆ ರಾಜ ಆರನೆಯ ವಿಕ್ರಮಾದಿತ್ಯ ಮತ್ತು ಪಿರಿಯರಸಿ ಬಿರುದಾಂಕಿತ ಚಂದಲದೇವಿಯರಿಗೆ ನಾಲ್ಕು ಜನ ಗಂಡು ಮಕ್ಕಳು ಹಾಗೂ ಒಬ್ಬಳೇ ಒಬ್ಬಳು ಹೆಣ್ಣುಮಗಳಿದ್ದು ಒಟ್ಟಾರೆ ಐದು ಜನ ಮಕ್ಕಳು ಅವರಿಗಿದ್ದರು ಎಂದು ತಿಳಿಸುವ ಏಕೈಕ ಶಾಸನ ಇದಾಗಿದೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೧೨೨]. ಇತಿಹಾಸಕಾರರು ಈವರೆಗೂ ಭೂಲೋಕಮಲ್ಲ ಸರ್ವಜ್ಞಸೋಮೇಶ್ವರ, ತೈಲಪ ಹಾಗೂ ಜಯಕರ್ಣರೆಂಬ ಹೆಸರಿನ ಮೂರು ಮಾತ್ರ ಗಂಡುಮಕ್ಕಳಿದ್ದರೆಂದು ವಿವರಿಸುತ್ತಿದ್ದರು. ಆದರೆ ಈ ಶಾಸನದಲ್ಲಿ ಜಗದೇಕಮಲ್ಲ ಬಿರುದಿನ ಇರೆವಬೆಡಂಗ ಸತ್ಯಾಶ್ರಯ ಹೆಸರಿನ ಮಗನೊಬ್ಬನಿದ್ದನೆಂದು ತಿಳಿದುಬರುತ್ತದೆ. ಇವರಿಗಿದ್ದ ಮಗಳ ಮಗನೇ ಕಳಚೂರ್ಯ ಬಿಜ್ಜಳನೆಂದು ಸೂಚಿಸಲಾಗುತ್ತದೆ. ಆದರೆ ಅವಳ ಹೆಸರು ಶಾಸನದಲ್ಲಿ ದಾಖಲಾಗಿಲ್ಲವೆಂದು ವಿವರಿಸಲಾಗಿದೆ.

ಪಿರಿಯರಸಿ ಚಂದಲದೇವಿಯು ಎಷ್ಟೊಂದು ಪ್ರಸಿದ್ಧಿ ಪಡೆದಿದ್ದಳು ಎಂದರೆ ಮಹಾಮಂಡಳೇಶ್ವರರು, ದಂಡನಾಯಕರು, ಸಾಮಂತ ಅಧಿಕಾರಿಗಳು ಹಾಗೂ ಮುಂತಾದ ಆಡಳಿತದಲ್ಲಿದ್ದ ಅಧಿಕಾರಿಗಳು ತಮ್ಮನ್ನು ಅವಳ 'ಪ್ರಿಯಪುತ್ರ' ಎಂಬ ವಿಶೇಷಣದಿಂದ ಕರೆದುಕೊಂಡಿದ್ದಾರೆ. ಕ್ರಿ.ಶ. ೧೨ನೇ ಶತಮಾನದ ಮುದನೂರಿನ ಶಾಸನದಲ್ಲಿ[೧೨೩]. ಶ್ರೀಮನ್ಮಹಾಮಂಡಳೇಶ್ವರ ಲಕ್ಷ್ಮರಸನ ಕುಮಾರ ಕಪ್ಪದೇವರಸರು 'ಕರ್ಣ್ಣಾವತಂಸಂ ಬಗೆಕಾರ ಸ್ವರಿಶಲಿಂಗಂ ಚಂದಲ ದೇವಿಯರಣುಗಂ' ಎಂದು ಕರೆದುಕೊಂಡಿದ್ದಾನೆ.

ಇದೇ ಗ್ರಾಮದ ಕ್ರಿ.ಶ. ೧೧೦೫ರ ಶಾಸನದಲ್ಲಿ[೧೨೪]. ಮಹಾಮಂಡಳೇಶ್ವರ ಜೋಗಮರಸಂ ಸಹ ಚಂದಲದೇವಿಯಣುಗಂ ಎಂದು ಸಂಬೋಧಿಸಿಕೊಂಡಿದ್ದಾನೆ. ಈ ಜೋಗಮರಸ ಹಾಗೂ ಲಕ್ಷ್ಮರಸರು ಸೋದರರಾಗಿದ್ದರು. ಅದರಲ್ಲಿರುವ ಲಕ್ಷ್ಮರಸರ ಮಗನೇ ಕಪ್ಪದೇವರಸನು. ಆತನು ಯಾವ ಪಟ್ಟಮಹಾದೇವಿಯರ ಅಣುಗ ಎನ್ನುವ ಪ್ರಶ್ನೆ ಉದ್ಭವವಾಗುತ್ತದೆ ಎಂದು ಅಭಿಪ್ರಾಯಿಸಲಾಗಿದೆ. ಬಹುಶಃ ಶಾಸನದಲ್ಲಿ ಉಲ್ಲೇಖಿತ ಕಪ್ಪದೇವರಸನು ಆರನೆಯ ವಿಕ್ರಮಾದಿತ್ಯನ ರಾಣಿ ಮಲಯಮತಿಯ ಅಣುಗ ಆಗಿರಬೇಕು ಕಾರಣ ವಿಕ್ರಮಾದಿತ್ಯನ ರಾಣಿಯರಲ್ಲಿ ಪಟ್ಟಮಹಾದೇವಿಯ ಸ್ಥಾನ ಹೊಂದಿದ್ದು ಮಲಯಮತಿ ಮಾತ್ರ ಎಂಬುದು. ಜೋಗಮರಸ ಹಾಗೂ ಲಕ್ಷ್ಮರಸರ ಸಮಕಾಲೀನಳಾಗಿದ್ದ ಚಂದಲದೇವಿಯು ಮಲಯಮತಿಗಿಂತ ಮೊದಲೇ ತೀರಿಕೊಂಡಿದ್ದರಿಂದ ಲಕ್ಷ್ಮರಸನ ಮಗ ಕಪ್ಪದೇವರಸ ತಮ್ಮ ತಂದೆಯಂತೆ ಮಲಯಮತಿದೇವಿಯ ಅಣುಗ ಎಂದು ಕರೆದುಕೊಂಡಿರುವುದು ಸಹಜವಾಗಿದೆ.

ರಾಣಿ ಚಂದಲದೇವಿಯನ್ನು ಚಂದ್ರಿಕಾ ದೇವಿಣಿಯೆಂದೂ ಶಾಸನಗಳು ಉಲ್ಲೇಖಿಸಿವೆ.[೧೨೫] ಯಾದಗಿರಿ ಜಿಲ್ಲೆಯ ಶಾಸನಗಳಲ್ಲಿ ಈ ರಾಣಿಯ ಕುರಿತು ವ್ಯಕ್ತವಾದ ಮಾಹಿತಿಗಳನ್ನು ಈಗಾಗಲೇ ವಿವೇಚಿಸಲಾಗಿದೆ. ಆದರೆ ಅವಳು ಆಡಳಿತಗಾರಳಾಗಿದ್ದಳೆಂಬ ನಿರ್ದಿಷ್ಟ ಮಾಹಿತಿ

ಆ ಶಾಸನಗಳಲ್ಲಿ ದಾಖಲಾಗಿಲ್ಲ. ಆದರೆ ಕ್ರಿ.ಶ. ೧೦೯೯ರ ತೇದಿಯ ಕಲಬುರ್ಗಿ ತಾಲೂಕಿನ ಹುಣಸಿ ಹಡಗಲಿ ಗ್ರಾಮದ ಶಾಸನದಲ್ಲಿ ವಂದಿ ಚಿಂತಾಮಣಿ। ಅಂತಃಪುರ ಚೂಡಾಮಣಿ। ಮಲಪ ವಿದ್ಯಾಧರಿ। ಸರಳ ಕಳಾಭರಿ। ರಾಯ ಮನೋಜರಾಜರತಿ। ಅಡಬಳ ಸರಸ್ವತಿ। ನೃತ್ಯ ವಿದ್ಯಾಧರಿ। ಸ್ವಸ್ತಿ ಗಜಕೇಸರಿ। ಕಲಿಕಾಲ ಸರಸ್ವತಿ। ಶ್ರೀಮತ್ರಿ ಭುವನಮಲ್ಲದೇವ ವಿಶಾಲಕ್ಷಸ್ಥಳ ನಿವಾಸಿಯರಪ್ಪ ಶ್ರೀಮತ್ಪಿರಿಯರಿಸಿ ಚಂದಲದೇವಿಯರು ಆಲಂದೆ ಸಾಸಿರದ ಪ್ರಮುಖವನೇಕ ಭತ್ತ ಗ್ರಾಮಂಗಳುಮಂದುಷ್ಟನಿಗ್ರಹ ಶಿಷ್ಟ ಪ್ರತಿಪಾಲದಿಂದಲ್ ಅರಸುಗೆಯ್ಯುತ್ತಾಮಿರೆ। ಎಂದು ಆಕೆಯನ್ನು ವಿಶೇಷವಾಗಿಯೆ ಹೊಗಳುತ್ತದೆ.

ರಾಣಿ ಚಂದಲದೇವಿಯ ಕುರಿತು ಬಿಲ್ಹಣನ ವಿಕ್ರಮಾಂಕದೇವ ಚರಿತದಲ್ಲಿ ಅತ್ಯಂತ ಮನನೋಹಕವಾದ ವಿವರಗಳು ದಾಖಲಾಗಿವೆಯೆಂದು ಅಭಿಪ್ರಾಯಿಸಲಾಗಿದೆ. ಈಕೆಯನ್ನು ವಿಕ್ರಮಾದಿತ್ಯನು ಸ್ವಯಂವರದ ಮೂಲಕ ಮದುವೆ ಮಾಡಿಕೊಳ್ಳುತ್ತಾನೆ. ಇವಳ ಶಿಲಾಹಾರ ವಂಶದ ರಾಜಪುತ್ರಿಯಾಗಿದ್ದಳು. ಅವಳ ಅಸಾಧಾರಣ ಸೌಂದರ್ಯ ವರ್ಣನೆಯನ್ನು ಕೇಳಿದ ವಿಕ್ರಮಾದಿತ್ಯನಿಗೆ ಒಂದು ರೀತಿಯಲ್ಲಿ ಹುಚ್ಚು ಹಿಡಿಯುತ್ತದೆ. ಅವನಿಗೆ ಪ್ರೇಮಜ್ವರ ಬರುತ್ತದೆ. ಅವಳ ಮನದ ಇಂಗಿತವನ್ನು ಅರಿಯಲು ದೂತನೊಬ್ಬನನ್ನು ಕರಹಾಟ(ಕರಹಾಡ ಅಥವಾ ಕರಾಡ್, ಮಹಾರಾಷ್ಟ್ರ ರಾಜ್ಯ) ರಾಜ್ಯಕ್ಕೆ ಕಳುಹಿಸುತ್ತಾನೆ. ಆಕೆಯಿಂದ ಸಿಹಿಯಾದ ಸುದ್ದಿಯನ್ನು ತಂದು ವಿಕ್ರಮಾದಿತ್ಯನಿಗೆ ಹೀಗೆ ಹೇಳುತ್ತಾನೆ. ಓ ಪ್ರಭುವೆ ನಿನ್ನ ಪ್ರತಿಭೆ, ಗುಣಗಳಿಂದಾಗಿಯೋ ಅಥವಾ ಬ್ರಾಹ್ಮಣನ ಹೇಳಿಕೆಯಿಂದಾಗಿಯೋ ಏನೋ ನಿನ್ನ ವರ್ಣನೆಯನ್ನು ಆಕೆಯ ಎದುರಿಗೆ ಮಾಡಿದಾಗ ಆಕೆ ನಿನಗೆ ಆಕರ್ಷಿತಳಾಗಿ ಕಾಮತಾಪದಿಂದ ಒಲಿದಳು ಎಂದು ಮುಂತಾಗಿ ವಿವರಿಸಿ ಚಂದ್ರಲೇಖೆಯೂ ವಿಕ್ರಮಾದಿತ್ಯನನ್ನೇ ಪ್ರೇಮಿಸುತ್ತಿದ್ದ ವಿಷಯವನ್ನು ಹೇಳುತ್ತಾನೆ[೧೨೬].

ಉಳಿದೆಲ್ಲ ರಾಣಿಯರಲ್ಲಿಯೇ ಬಹುಪ್ರಸಿದ್ಧಿ ಪಡೆದಿದ್ದ ಚಂದಲದೇವಿ ಆಲಂದೆ ಸಾಸಿರ, ಅರಲು-೩೦೦, ಸಗರ-೫೦೦ ಹಾಗೂ ಕಲ್ಲಕೆಳಗು-೫೦೦ರ ನಾಡಿನಲ್ಲಿರುವ ಹಲವು ಭತ್ತ ಗ್ರಾಮಗಳನ್ನು ಆಳುತ್ತಿದ್ದಳೆಂದು ಶಾಸನಗಳಲ್ಲಿ ವಿವರಗಳು ದಾಖಲಾಗಿವೆ.

ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಬೊಮ್ಮನಹಳ್ಳಿಯ ಕ್ರಿ.ಶ. ೧೧೦೬ರ ಶಾಸನದಲ್ಲಿ ರಾಣಿ ಧಾರಲದೇವಿಯ ಉಲ್ಲೇಖವಿದೆ. ಅಲ್ಲದೇ ಅವಳ ಕುರಿತು ಹೆಚ್ಚಿನ ವಿವರಗಳ ತಿಳಿದಿಲ್ಲ ಎಂಬ ಅಭಿಪ್ರಾಯಗಳು ದಾಖಲಾಗಿವೆ[೧೨೭]. ಈ ಶಾಸನವು ಅವಳನ್ನು ವಿಶೇಷವಾಗಿ ಹೊಗಳಿದೆ ಎಂದರೆ ತಪ್ಪಾಗಲಾರದು. ಗುಣದಂಕಾರ್ತಿವಿಕ್ರಮಾದಿತ್ಯದೇವ, ಜಿನಪೂಜಾಲತೆ ಹಾಗೂ ಮಹಾಸತಿತಿಳಕೆ ಲಲನಾಜನಾಗ್ರಣಿ ಶ್ರೀಮತ್ರಿಭುವನಮಲ್ಲದೇವ ವಿಶಾಲವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮದ್ಧಾರಲದೇವಿಯರು ಬ್ರಿತದನೊಂಪಿ(ವೃತ) ನಿಮಿತ್ತವಾಗಿ ಎಂಬ ವಿವರಗಳು ಮೂಡಿಬಂದಿವೆ. ಇದರಲ್ಲಿ ಉಲ್ಲೇಖವಾದ ಮಹಾಸತಿ ತಿಳಿಕೆ ಮತ್ತು ಗುಣದಂಕಕಾರ್ತಿ

ಎಂಬ ವಿಶೇಷಣಗಳು ದಾನಚಿಂತಾಮಣಿ ಅತ್ತಿಮಬ್ಬೆಯ ಬಿರುದುಗಳು ಇವಳಿಗೂ ಇದ್ದವೆಂಬುದು ಮುಖ್ಯವಾದ ವಿಚಾರವೆಂದು ಪ್ರಸ್ತಾಪಿಸಲಾಗಿದೆ. ಅಲ್ಲದೇ ಉಲ್ಲೇಖವಾದ ಜಿನಪೂಜಾಲತೆ ಹಾಗೂ ವ್ರತನೋಂಪಿ ಎಂಬ ವಿವರಗಳು ಅವಳು ಜೈನಧರ್ಮದ ಅನುಯಾಯಿ ಆಗಿದ್ದಳೆಂಬುದನ್ನು ಗುರುತಿಸಲು ಸಹಾಯಕ ಅಂಶಗಳಾಗಿವೆ.

ಶಹಾಪುರ ತಾಲೂಕಿನ ಸಗರ ಗ್ರಾಮದ ಕ್ರಿ.ಶ. ೧೦೭೧ರ ತೇದಿಯ ಶಾಸನವು ಸಹ ರಾಣಿ ಧಾರಲದೇವಿಯ ಕುರಿತು ಉಲ್ಲೇಖಿಸುತ್ತದೆ. ಭೋಗ ಭಾಗದಿನಿ ದ್ವಿತೀಯ ಲಕ್ಷ್ಮೀ ಸಮಾನೆ ಶ್ರೀಮದ್ಭುವನೈಕ ಮಲ್ಲದೇವ ವಿಶಾಲವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮದ್ಧೇವಲ ಮಹಾದೇವಿಯರ್ ಎಂಬ ವಿವರ ನೀಡುತ್ತದೆ[೧೨೮].

ಈ ಜಿಲ್ಲೆಗೆ ಸಂಬಂಧಿಸಿದಂತೆ ಕಂಡುಬಂದಿರುವ ಶಾಸನಗಳಲ್ಲಿ ಪಿರಿಯರಸಿ ಪಟ್ಟಮಹಾದೇವಿ ಮಲಯಮತಿದೇವಿ ಬಗೆಗೆ ಒಂದೆರಡು ಶಾಸನಗಳಲ್ಲಿ ಉಲ್ಲೇಖಗಳು ಕಂಡುಬಂದಿವೆ. ರಾಜನಿಗೆ ಹಲವು ರಾಣಿಯರು ಅಥವಾ ಮಡದಿಯರಿರುತ್ತಿದ್ದರು. ಈ ಪಟ್ಟ ಮಹಾದೇವಿಯರ ಕುರಿತು ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ. ಚಕ್ರವರ್ತಿಗಾಗಲಿ ಅಥವಾ ಆತನ ಕೆಳಗಿನ ಮಹಾಮಂಡಳೇಶ್ವರರಿಗಾಗಲಿ ಒಬ್ಬಳು ಪಟ್ಟದರಾಣಿ ಇರುತ್ತಿದ್ದಳು. ಪಟ್ಟದರಾಣಿ ಎಂಬುದು ಚಕ್ರವರ್ತಿಯಂತೆ ಒಂದು ಪದವಿಯಾಗಿತ್ತು. ಉಳಿದ ಎಲ್ಲ ರಾಣಿಯರಿಗಿಂತ ಇವಳ ಸ್ಥಾನ ಹಿರಿಯದಾಗಿತ್ತು. ಅವಳು ಚಕ್ರವರ್ತಿಯೊಂದಿಗೆ ಎಲ್ಲ ಧಾರ್ಮಿಕ, ಸಾಮಾಜಿಕ ಮೊದಲಾದ ಕಾರ್ಯಗಳಲ್ಲಿ ಈಕೆ ಪತಿಯೊಂದಿಗೆ ಭಾಗವಹಿಸುತ್ತಿದ್ದಳು. ಈ ಹಕ್ಕು ಇತರರಿಗೆ ಇರುತ್ತಿದ್ದಿಲ್ಲ. ಅಲ್ಲದೇ ಡಾ.ಎಂ.ಚಿದಾನಂದಮೂರ್ತಿ ಅವರು 'ಧವಳಶಂಖ, ಉದ್ದಂಡ, ಪುಂಡಲೀಕ ಕನಕದಂಡ ಚಾಮರಸ್ತೋಮಗಳು ಪಟ್ಟದರಾಣಿಯರ ಚಿಹ್ನೆಗಳಾಗಿದ್ದವು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ[೧೨೯]. ಪಿರಿಯರಸಿಯರು ಒಬ್ಬ ಅರಸನಿಗೆ ಹಲವರಿರಬಹುದು. ಆದರೆ ಪಿರಿಯರಿ ಪಟ್ಟಮಹಾದೇವಿ ಮಾತ್ರ ಒಬ್ಬಳೇ ಇರುತ್ತಿದ್ದಳೆಂದು ಅಭಿಪ್ರಾಯಿಸಲಾಗಿದೆ. ಅಂಥ ಪಟ್ಟಹೊಂದಿದ್ದ ಮಲಯಮತಿದೇವಿ ಬಗೆಗೆ ಈ ಪ್ರದೇಶದಲ್ಲಿರುವ ಒಂದೆರಡು ಶಾಸನಗಳು ಉಲ್ಲೇಖಿಸುತ್ತವೆ.

ರಾಣಿಯರ ಆಡಳಿತದ ಕುರಿತು ಇನ್ನೊಂದು ವಿಚಾರವನ್ನು ಪ್ರಸ್ತಾಪಿಸಲಾಗಿದೆ. ವಾಸ್ತವವಾಗಿ ರಾಣಿಯರು ವಿಭಾಗಗಳನ್ನು ಆಳುತ್ತಿದ್ದಿಲ್ಲ. ಅವರು ಆಳುತ್ತಿದ್ದುದು ಬಿಡಿಯಾದ ಅಗ್ರಹಾರ ಇಲ್ಲವೆ ಅವರ ಜೀವನೋಪಾಯಕ್ಕಾಗಿ ಕೊಟ್ಟ ಬಿಡಿಯಾದ ಭತ್ತಗ್ರಾಮವನ್ನು ಮಾತ್ರ ಎಂದು ಅಭಿಪ್ರಾಯಿಸಲಾಗಿದೆ[೧೩೦].

ಪಿರಿಯರಸಿ ಪಟ್ಟಮಹಾದೇವಿಯು ಕ್ರಿ.ಶ. ೧೧೦೭-೧೧೧೭ರ ವರೆಗಿನ ಕಾಲಾವಾಧಿಯಲ್ಲಿದ್ದಳೆಂದು ವಿವರಿಸಲಾಗಿದೆ. ಆದರೆ ಸುರಪುರ ತಾಲೂಕಿನ ಹುಣಸಗಿಯ ಶಾಸನವು ಕ್ರಿ.ಶ. ೧೧೨೦ರ ತೇದಿಯನ್ನು ಗೊತ್ತಿಪಡಿಸುತ್ತದೆ. ಹಾಗಾಗಿ ಅವಳ ಅವಧಿಯನ್ನು ಕ್ರಿ.ಶ. ೧೧೨೦ರವರೆಗೂ ಹಿಗ್ಗಿಸಬಹುದಾಗಿದೆ.

ವಿಕ್ರಮಾದಿತ್ಯನ ಪಟ್ಟಮಹಾದೇವಿ ಸ್ಥಾನವನ್ನು ಅಲಂಕರಿಸಿದವರಲ್ಲಿ ಮಲೆಯಮತಿದೇವಿ ಒಬ್ಬಳು. ಅವಳು ಸಿಂದವಾಡಿ ನಾಡಿನ ಅಗ್ರಹಾರ ಚಿನ್ನತುಂಬಳವನ್ನು ಆಳುತ್ತಿದ್ದಳೆಂದು ಹೇಳಲಾಗಿದೆ. ಅಲ್ಲದೇ ಇವಳು ಹೈಹಯ ವಂಶದ ರಾಜಕುಮಾರಿಯಾಗಿದ್ದಿರಬೇಕೆಂದು ಅಭಿಪ್ರಾಯಿಸಲಾಗಿದೆ. ಹೈಹಯ ವಂಶದ ಮಹಾಮಂಡಳೇಶ್ವರ ಅಯ್ಯಾಣದೇವನು ಹಾಗೂ ಮನ್ನೆಯ ಲೋಕರಸನೂ ಈಕೆಯ ಸೇವಕನಾಗಿದ್ದನೆಂದು ವಿವರಿಸಲಾಗಿದೆ[೧೩೧].

ಈ ಎಲ್ಲ ವಿವರಗಳನ್ನು ಪರೀಕ್ಷಿಸಿದಾಗ ತಿಳಿದುಬರುವ ಮುಖ್ಯ ಸಂಗತಿ ಎಂದರೆ ಪಿರಿಯರಸಿ ಪಟ್ಟಮಹಾದೇವಿಯ ಪದವಿಯನ್ನು ಹೊಂದಿದ್ದ ಮಲಯಮತಿ ದೇವಿಯು ಬಹುಶಃ ಸಗರನಾಡಿನವಳಾಗಿದ್ದಿರಬಹುದು. ಅಥವಾ ಈ ನಾಡಿಗೆ ಹೊಂದಿಕೊಂಡಿದ್ದ ಆಳಂದೆಸಾಸಿರ ನಾಡಿನವಳಾಗಿರಬಹುದು. ಒಟ್ಟಾರೆ ಅಭಿಪ್ರಾಯಿಸುವುದಾದರೆ ಈ ಪ್ರದೇಶವು ಕಲ್ಯಾಣ ಚಾಲುಕ್ಯರ ಶಕ್ತಿ ಸಂವರ್ಧನೆಯರ ಮುಖ್ಯಕೇಂದ್ರವಾಗಿತ್ತು. ಹಾಗಾಗಿ ಈ ನಾಡುಗಳಿಗೆ ಅವರು ಹೆಚ್ಚಿನ ಪ್ರಾಶಸ್ತ್ಯ ನೀಡಿ ಪಟ್ಟ ಪಿರಿಯರಸಿ ಮಹಾದೇವಿ ಪದವಿಯನ್ನು ಸಹ ಇದೇ ಭಾಗದ ಸ್ತ್ರೀಯರಿಗೆ ನೀಡಿರುವುದು ಸೂಕ್ತವಾಗಿ ಪರಿಗಣಿಸುತ್ತದೆ. ಮಲಯಮತಿ ಹಾಗೂ ವಿಕ್ರಮಾದಿತ್ಯ ದಂಪತಿಗಳಿಗೆ ಮೈಳಲದೇವಿ ಎಂಬ ಮಗಳಿದ್ದಳು. ಅವಳನ್ನು ಗೋವೆಯ ಕದಂಬ ವಂಶದ ಎರಡನೆಯ ಜಯಕೇಸಿಗೆ ಮದುವೆ ಮಾಡಿಕೊಟ್ಟು ತನ್ನ ಸಾಮ್ರಾಜ್ಯವನ್ನು ವಿಕ್ರಮಾದಿತ್ಯ ರಾಜನು ಇನ್ನಷ್ಟು ಬಲಪಡಿಸಿಕೊಂಡನೆಂದು ಇತಿಹಾಸಕಾರರು ಅಭಿಪ್ರಾಯಿಸುತ್ತಾರೆ.

ಇವಳ ಕುರಿತು ಉಲ್ಲೇಖ ನೀಡುವ ಈ ಜಿಲ್ಲೆಯಲ್ಲಿರುವ ಏಕೈಕ ಶಾಸನವು ಹುಣಸಗಿಯಲ್ಲಿ ದೊರೆತಿದೆ. ಕ್ರಿ.ಶ. ೧೧೨೦ರ ತೇದಿಯ ಈ ಆಕರವು ಶ್ರೀಮತ್ತಿಮಭುವನಮಲ್ಲದೇವ ವಿಶಾಳವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮದಭಿನವ ಸರಸ್ವತಿ–ಶ್ರೀ ಮತ್ಪಿರಿಯರಸಿ ತ್ರಿಭುವನಮಲ್ಲದೇವ ಪಟ್ಟಮಹಾದೇವಿ ಶ್ರೀಮತು ಮಲೆಯಮತಿದೇವಿರ ನಿತ್ಯಭೂಮಿದಾನ ಸರ್ವನಮಸ್ಯರಗ್ರಹಾರ ವಿಕ್ರಮತೀರ್ಥ ಹಾರನೊಳವೆ ಎಂದು ಉಲ್ಲೇಖಿಸಲಾಗಿದೆ[೧೩೨]. ಪ್ರಾಯಶಃ ವಿಕ್ರಮತೀರ್ಥವು ಇಂದಿನ ಬೈಲಾಪುರ(ತಾಂಡಾದ) ಪರಿಸರವಾಗಿರಬಹುದೆಂದು ಈಗಾಗಲೇ ಸಾಕ್ಷಾಧಾರಗಳ ಸಹಿತ ಸಾಬೀತುಪಡಿಸುವ ಪ್ರಯತ್ನ ಮಾಡಲಾಗಿದೆ.

ಕಲ್ಯಾಣದ ಚಾಲುಕ್ಯರ ನಂತರ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಕಳಚೂರ್ಯರು ಹಾಗೂ ದೇವಗಿರಿ ಸೇವುಣರ ಅರಸರುಗಳ ಕುರಿತಂತೆ ಉಲ್ಲೇಖಗಳಿವೆ. ಹೊರತು ಅವರುಗಳ ರಾಣಿಯರ ಬಗೆಗೆ ಒಂದೇ ಒಂದು ಉದಾಹರಣೆಗಳು ದಾಖಲಾಗಿರುವುದನ್ನು ಕಾಣಲಾಗುವುದಿಲ್ಲ. ಬಹುಶಃ ಇಂಥ ಕೊರತೆಗೆ ಕೆಲವು ಕಾರಣಗಳನ್ನು ನೀಡಬಹುದು. ಕಲಚೂರ್ಯರು ಕೆಲವು ಕಾಲ ರಾಜ್ಯ ಸಿಂಹಾಸನ ಪಡೆದಿದ್ದರೂ ಅವರಿನ್ನು ಸ್ಥಳೀಯ ಮಹಾಮಂಡಳೇಶ್ವರರ ಹಾಗೂ ಅಧಿಕಾರಿಗಳ ಸಂಪೂರ್ಣ ಬೆಂಬಲ ಪಡೆದಿರಲಿಲ್ಲ ಎಂಬುದು. ಹಾಗಾಗಿ ರಚನೆಗೊಂಡಿರುವ ಶಾಸನಗಳಲ್ಲಿ ಅವರನ್ನು ಅಷ್ಟಾಗಿ ಒಪ್ಪಿ ಪ್ರಕಟಿಸಿದಂತೆ ಕಂಡಿಲ್ಲ. ದೇವಗಿರಿ ಯಾದವರು ಈ

ಪ್ರದೇಶದಿಂದ ಬಹುದೂರದ ನಾಡಿನಲ್ಲಿದ್ದು ಆಳ್ವಿಕೆ ಮಾಡುತ್ತಿದ್ದರು. ಅಲ್ಲದೇ ಅವರಿಗೆ ರಾಜಕೀಯ ವಿಸ್ತರಣೆಯ ಕಾರ್ಯ ತಂತ್ರಗಳೇ ಮುಖ್ಯವಾಗಿದ್ದವೆ ಹೊರತು ಸಾಂಸ್ಕೃತಿಕವಾಗಿ ಅವರು ಅಷ್ಟಾಗಿ ಈ ನಾಡಿನಲ್ಲಿ ಬೇರೂರಲು ಸಾಧ್ಯವಾಗಲಿಲ್ಲ. ಕೇವಲ ದಾಳಿ ಮತ್ತು ಅಧಿಕಾರದ ವಿಸ್ತರಣೆಗಳು ಅವರ ಮುಖ್ಯ ಗುರಿಗಳಾಗಿದ್ದವು. ಹಾಗಾಗಿ ಬಲವಾಗಿ ಬೇರೂರಲು ಈ ಪ್ರದೇಶದಲ್ಲಿ ಅವರಿಗೆ ಸಾಧ್ಯವಾಗಿರಲಿಕ್ಕಿಲ್ಲ.

ಪ್ರಮುಖ ಸಾಮ್ರಾಜ್ಯ ಹಾಗೂ ಪ್ರಮುಖ ರಾಜರ ರಾಣಿಯರಷ್ಟೇ ಈ ಪ್ರದೇಶದಲ್ಲಿನ ಸ್ಥಳೀಯ ಮಹಾಮಂಡಳೇಶ್ವರರ, ಸಾಮಂತರ, ದಂಡನಾಯಕ ಹಾಗೂ ಮುಂತಾದ ಆಡಳಿತ ವರ್ಗಗಳಿಗೆ ಸಂಬಂಧಿಸಿದ ಗಣ್ಯಮಾನ್ಯ ಮಡದಿಯರು ಅಥವಾ ರಾಣಿಯರ ಹೆಸರುಗಳು ಸಹ ಹೆಚ್ಚಿನ ಸಂಖ್ಯೆಯಲ್ಲಿ ಈ ಪ್ರದೇಶದ ಶಾಸನಗಳಲ್ಲಿ ದಾಖಲಾಗಿವೆ. ಅವರು ಸಹ ಆಡಳಿತ ವ್ಯವಸ್ಥೆಯಲ್ಲಿ ಇದ್ದವರು ಹಾಗೂ ಅವರು ಸಹ ಕೆಲವೊಮ್ಮೆ ರಾಣಿಯರನ್ನು ಮೀರಿಸುವಷ್ಟು ದಾನದತ್ತಿಗಳನ್ನು ನೀಡಿದ್ದಾರೆ. ಅಂಥ ಕೆಲವು ಉಲ್ಲೇಖಗಳು ಶಾಸನಗಳಲ್ಲಿ ದಾಖಲಾಗಿದ್ದುಂಟು.

ಕ್ರಿ.ಶ. ೧೦೫೪ರ ತೇದಿಯ ಕೆಂಬಾವಿ ಶಾಸನವು[೧೩೩]. ಹೈಹಯ ಮಹಾಮಂಡಳೇಶ್ವರ ರೇವರಸ) ಹಾಗೂ ಆತನ ಮನೆತನದ ಬಗೆಗೆ ಈಗಾಗಲೇ ಅಧ್ಯಾಯ ಎರಡರಲ್ಲಿ ಚರ್ಚಿಸಲಾಗಿದೆ. ಆತನ ಹೆಂಡತಿ ಮಾಳಿಯಬ್ಬರಸಿಯು ಕೆಂಬಾವಿಯಲ್ಲಿ ಮಾಳಿಬ್ಬೇಶ್ವರ ದೇವಾಲಯ ಕಟ್ಟಿಸುತ್ತಾಳೆ. ಅವಳು ನಿರ್ಮಿಸಿದ ಈ ದೇವುಳಕ್ಕೆ ಸಗರ-೩೦೦ರ ನಗರವು ಹಾಗೂ ಕರಡಿಕಲ್ಲು ಕೂಡಲಿಗೆಗಳನ್ನು ಮನ್ನೆಯ ಸಹಿತವಾಗಿ ದಾನ ಬಿಡಲಾಗುತ್ತದೆ. ಅವಳನ್ನು ಸಹ ಶಾಸನದಲ್ಲಿ ರೂಪಲಾವಣ್ಯ ಹಾವಭಾವ ವಿಳಾಸವತಿ। ಯಭಿನವ ಸರಸ್ವತಿ। ಗೋತ್ರ ಚಿಂತಾಮಣಿ ಎಂದು ಹೊಗಳಲಾಗಿದೆ.

ಕ್ರಿ.ಶ. ೧೧೦೫ರ ತೇದಿಯ ಶಾಸನವೊಂದು[೧೩೪] ಮಹಾಮಂಡಳೇಶ್ವರ ಜೋಗಮರಸನ ಮಡದಿ ತಾರಾದೇವಿಯನ್ನು ಉಲ್ಲೇಖಿಸುತ್ತದೆ. ಅವಳು ಅಗ್ರಹಾರ ಮುದನೀರು ತೀರ್ಥದಲ್ಲಿದ್ದ ಉತ್ತರೇಶ್ವರ ದೇವರಿಗೆ ಭೂದತ್ತಿ ನೀಡುತ್ತಾಳೆ. ಮಹಾಮಂಡಳೇಶ್ವರ ಜೋಗಮರಸನನ್ನು ಕಳಚೂರ್ಯ ಇಮ್ಮಡಿ ಬಿಜ್ಜಳನ ಅಜ್ಜನೆಂದು ವಿವರಿಸುವ ಅಭಿಪ್ರಾಯವೊಂದನ್ನು ಉಲ್ಲೇಖಿಸಲಾಗಿದೆ[೧೩೫]. ಈ ಅಭಿಪ್ರಾಯವು ಸರಿಯಾದುದು ಎಂದು ಒಪ್ಪಿದ್ದೆ ಆದರೆ ಇನ್ನೊಂದು ವಿವರವು ಸಹ ಬೆಳಕಿಗೆ ಬರುವುದು. ಅದೆಂದರೆ ಆರನೆಯ ವಿಕ್ರಮಾದಿತ್ಯನಿಗೆ ಅತ್ಯಂತ ಪ್ರೀತಿಪಾತ್ರಳಾದ ಪಿರಿಯರಸಿ ಚಂದಲದೇವಿಯ ಮಗಳ ಮಗನೇ ಈ ಬಿಜ್ಜಳನೆಂದು ವಿದ್ವಾಂಸರು ನಂಬಿದ್ದಾರೆ. ಹಾಗಾದರೆ ಜೋಗಮರಸ ಚಂದಲದೇವಿಗೆ ಸಹೋದರನೆಂದು ಪರಿಭಾವಿಸಬೇಕಾಗುತ್ತದೆ.

ಇತಿಹಾಸವೇ ಬೆರಗಾಗುವಂತೆ ಶಾಸನ ಕೆತ್ತಿಸಿ, ಗುಡಿ-ಕೆರೆಗಳನ್ನು ನಿರ್ಮಿಸಿ ದಾನ-ದತ್ತಿಗಳನ್ನು ನೀಡಿ ಹೆಸರುವಾಸಿಯಾದ ಶ್ರೀಮನ್ಮಹಾಪ್ರಧಾನಂ ಹೆರಿಲಾಳಸಾನ್ದಿವಿಗ್ರಹಿ ದಣ್ಡನಾಯಕ ರವಿಯಣಭಟ್ಟ ಅಥವಾ ರವಿಗಣ ಅಥವಾ ರವಿದೇವ ಚಮೂಪತಿಯಂ ತನ್ನ ಕಾರ್ಯಗಳನ್ನೆಲ್ಲ ಕ್ರಿ.ಶ. ೧೦೭೭ರ ಏವೂರಿನ ಶಾಸನದಲ್ಲಿ[೧೬]. ಸುದೀರ್ಘವಾಗಿ ಪ್ರಸ್ತಾಪಿಸಲಾಗಿದೆ. ಆತನ ತಾಯಿ ಪಂಪಕಬ್ಬೆ ಹಾಗೂ ಹೆಂಡತಿ ದೇವಲಬ್ಬೆಯ ಕುರಿತು ಈ ಶಾಸನದಲ್ಲಿ ಕೆಲವು ಉಲ್ಲೇಖಗಳುಂಟು. ಅವರೆಲ್ಲರೂ ಸಹ ಅವರ ಆಡಳಿತ ವ್ಯವಸ್ಥೆಯಲ್ಲಿ ಅವರು ಮಾಡಿದ ದೇವೋಪಾಸನೆ ಹಾಗೂ ದಾನಧರ್ಮದಲ್ಲಿ ಸರಿಸಮಾನವಾಗಿ ಭಾಗವಹಿಸಿದ್ದರೆಂದು ಅಭಿಪ್ರಾಯಿಸಬಹುದು.

ಮೇಲಿನ ವಿವರಗಳಲ್ಲಿ ವ್ಯಕ್ತವಾದ ಮಹಿಳೆಯರಲ್ಲದೇ ದಂಡನಾಯಕ ಸೌದೊರೆಗಳ ಹಾಗೂ ಗಾವುಂಡರ ಪತ್ನಿಯರುಗಳ ಉಲ್ಲೇಖಗಳು ಶಾಸನಗಲಲ್ಲಿ ದಾಖಲಾಗಿದ್ದುಂಟು. ಈ ನಾಡಿನ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಎಡಬಿಡದೆ ಭಾಗವಹಿಸಿ ಅವರು ಸಹ ತಮ್ಮ ಶಕ್ತ್ಯಾನುಸಾರ ಈ ನಾಡಿನ ಕೀರ್ತಿ ಹೆಚ್ಚಿಸಿರುವ ಕುರಿತು ಶಾಸನಗಳು ಅಮೋಘವಾಗಿಯೇ ಉಲ್ಲೇಖಿಸುತ್ತವೆ. ಅವುಗಳ ಕುರಿತಂತೆ ಇನ್ನೊಂದು ಪ್ರತ್ಯೇಕ ಅಧ್ಯಯನವೇ ಆಗಬೇಕಾದ ಜರೂರಿದೆ.

ಕ್ರಿ.ಶ.೧೧೮೨ರ ತೇದಿಯ ಹೆಮ್ಮಡಗಿ ಶಾಸನವು[೧೭] ಸೌದೊರೆ ಭಾವರಸನ ಮನೆತನದ ಕುರಿತು ಮಹತ್ವದ ಉಲ್ಲೇಖ ನೀಡುತ್ತದೆ. ಅವರ ವಂಶದಲ್ಲಿ ಚಾಮಿಕವ್ವೆ, ದೇಕವ್ವೆ, ಬಾಚಿಕವ್ವೆ, ಚಂದಲದೇವಿ, ಕಾಮಲದೇವಿ(ಕಾಮಿಯವ್ವೆ) ಮತ್ತು ಎಂಮ್ಮೆವಾಡಿಗೆ ಅಥವಾ ಹೆಮ್ಮಡಗಿಯ ಪ್ರಭು ಸೌದೊರೆ ಎರಡನೆಯ ಭಾವರಸನ ಮಡದಿ ಚಾಮಲದೇವಿಯರ ಕುರಿತು ಮಾಹಿತಿಗಳು ದಾಖಲಾಗಿದ್ದುಂಟು. ಹಗರಟಗಿಯ ಕ್ರಿ.ಶ.೧೨೯ರ ಶಾಸನದಲ್ಲಿ ಉಲ್ಲೇಖವಾದ ಬಹುಮುಖ್ಯವಾದ ವಿಷಯವೆಂದರೆ[೧೮]. ಕೇತಗಾವುಂಡ ಆತನ ಮಕ್ಕಳಾದ ರಾಮಗಾವುಂಡ ಹಾಗೂ ಸಿಂಗಮಗಾವುಂಡ ಹಾಗೂ ಅವರೆಲ್ಲರ ಕುಟುಂಬಗಳು ಸಹ ದಾನದತ್ತಿ ಹಾಗೂ ಗ್ರಾಮಾಡಳಿತದಲ್ಲಿ ಭಾಗವಹಿಸಿರುವ ಬಗೆಗೆ ವಿವರಗಳು ದಾಖಲಾಗಿವೆ.

**ಯುವರಾಜರು**

ಚಕ್ರವರ್ತಿಯ ನಂತರದ ಸ್ಥಾನ ಯುವರಾಜನ ಅಥವಾ ರಾಜಕುಮಾರನದ್ದಾಗಿತ್ತು. ಸಾಮಾನ್ಯವಾಗಿ ಚಕ್ರವರ್ತಿಯ ಹಿರಿಯ ಮಗನು ಆ ಸ್ಥಾನಕ್ಕೆ ಏರುತ್ತಿದ್ದನು. ಕೆಲವೊಮ್ಮೆ ವ್ಯತ್ಯಾಸವಾಗಿದ್ದುಂಟು. ಚಕ್ರವರ್ತಿ ಜೀವಂತವಾಗಿದ್ದಾಗಲೇ ಇಂಥ ಕಾರ್ಯವು ಜರುಗುತ್ತಿದ್ದವು. ರಾಜನಿಗೆ ಮಕ್ಕಳಿಲ್ಲದ್ದರೇ ಅವರ ಸಹೋದರನು ಆ ಪಟ್ಟಕ್ಕೆ ಏರುತ್ತಿದ್ದನು. ಅವರು ಉತ್ತಮ ಶಿಕ್ಷಣ ಮತ್ತು ಇತರೆ ವಿದ್ಯೆಗಳನ್ನು ಪಡೆದು ವಿವಿಧ ವಲಯಗಳಲ್ಲಿ ಆಡಳಿತದ ಅನುಭವ ಪಡೆಯುತ್ತಿದ್ದರೆಂಬ ಅಭಿಪ್ರಾಯಗಳಿವೆ. ಆಡಳಿತದ ತಿಳುವಳಿಕೆಗಾಗಿ ಅವರನ್ನು ಬೇರೆ ಬೇರೆ ಆಡಳಿತ ವಿಭಾಗಗಳಿಗೆ ಮೇಲ್ವಿಚಾರಕನ್ನಾಗಿ ಅಥವಾ ಮಹಾಮಂಡಳೇಶ್ವರ, ಮಹಾಸಾಮಂತ

ಪದವಿಗೇರಿಸಿ ಪರಿಣತಗೊಳಿಸಲಾಗುತ್ತಿತ್ತು. ರಾಜನಿಗೆ ಪಟ್ಟ ಬಂಧೋತ್ಸವ ನಡೆಯುವಂತೆ ಯುವರಾಜನಿಗೂ ಪಟ್ಟಗಟ್ಟುವ ಕಾರ್ಯ ಮಾಡಲಾಗುತ್ತಿತ್ತು.

ಆಡಳಿತದ ಅನುಭವಕ್ಕಾಗಿ ಅವರು ಬೇರೆ ಬೇರೆ ಹುದ್ದೆಗಳಲ್ಲಿದ್ದರೂ ಅವರ ಸ್ಥಾನಮಾನ ಹಾಗೂ ಅಧಿಕಾರವು ಇತರರಿಗಿಂತ ಉನ್ನತವಾಗಿರುತ್ತಿತ್ತು. ಚಕ್ರವರ್ತಿಯಾಗುವ ಯುವರಾಜ ಶಾಸ್ತ್ರೋಚಿತವಾಗಿ ಇಪ್ಪತ್ತನಾಲ್ಕು ವರ್ಷದವನಿರಬೇಕಾಗಿತ್ತು ಎಂಬ ಅಭಿಪ್ರಾಯಗಳು ದಾಖಲಾಗಿವೆ[೯೯]. ಯುವರಾಜನಾಗಿದ್ದುಕೊಂಡು ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳನ್ನು ಆಳ್ವಿಕೆ ಮಾಡಿದ ಸ್ಪಷ್ಟವಾದ ಉದಾಹರಣೆಗಳು ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವ್ಯಕ್ತವಾಗಿಲ್ಲವಾದುದು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಮಗನಾದ ಮಲ್ಲಿಕಾರ್ಜುನನು ಯುವರಾಜ ಪದವಿ ಹೊಂದಿದ್ದರ ಬಗೆಗೆ ಈ ಪ್ರದೇಶದಲ್ಲಿರುವ ಶಾಸನಗಳಲ್ಲಿ ಒಂದೇ ಒಂದು ಶಾಸನ ಮಾತ್ರ ದಾಖಲಿಸುತ್ತದೆ. ಚಕ್ರವರ್ತಿಯ ಮಗನಾಗಿದ್ದು ಮಹಾಮಂಡಳೇಶ್ವರನ ಜವಾಬ್ದಾರಿ ನಿರ್ವಹಿಸುತ್ತಿದ್ದ ಒಂದೆರಡು ಉದಾಹರಣೆಗಳು ಇಲ್ಲಿರುವ ಶಾಸನಗಳಲ್ಲಿ ದಾಖಲಾಗಿರುವುದನ್ನು ಗುರುತಿಸಬಹುದು.

ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನು ರಾಜನಾಗಿ ಪಟ್ಟಂಬಧೊತ್ಸರವನ್ನು ನೆರವೇರಿಸಿಕೊಂಡು ಚಕ್ರವರ್ತಿಯೆಂದು ಘೋಷಿಕೊಂಡ ವಿವರಣೆವುಳ್ಳ ಶಾಸನವು ಪ್ರಾಚೀನ ಸಗರನಾಡಿನ ವಡಗೇರಿ[೧೦೦].

ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕ ಚಾಳುಕ್ಯ ಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯ ರಾಜ್ಯ ಮತ್ತು ರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾ ಚಂದ್ರಾರ್ಕ್ಕ ತಾರಂ ಸಲುಮಿತ್ತರೆ ನಡವಿಯುಪ್ಪಯಣ ವೀಡಿನೊಳ್ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಾಮಿರೆ ಸ್ವಸ್ತಿ ಶ್ರೀ ಚಾಳುಕ್ಯ ವಿಕ್ರಮವರ್ಷದ ಪ್ರಥಮದ ನಳಸಂವತ್ಸರದ ಫಾಲ್ಗುನ ಶಬ್ದಪಂಚಮಿ ಬೃಹಸ್ಪತಿವಾರದಂದು ಪಟ್ಟಬನ್ದೋತ್ಸವ ನಿಮಿತ್ತದಿಂ ಫಲವುಂ ಮಹಾದಾನಂಗಳಂ ಮಾಡಿ ಎಂಬ ಉಲ್ಲೇಖ ಬರುತ್ತದೆ. ಆದರೆ ಅವನು ಯಾವ ಸ್ಥಳದಲ್ಲಿ ಈ ಕಾರ್ಯ ನೆರವೇರಿಸಿಕೊಂಡ ಎಂಬ ಸ್ಪಷ್ಟ ಮಾಹಿತಿಗಳು ಲಭ್ಯವಾಗಿಲ್ಲ. ಅಲ್ಲದೇ ಪಟ್ಟಬಂಧೋತ್ಸವದಂತಹ ತತ್‌ಕ್ಷಣದ ಸುದ್ದಿಯನ್ನು ಪ್ರಕಟಿಸಿದ ಮೊದಲ ಶಾಸನವು ಇದಾಗಿದೆ. ಮೊದಲ ವರ್ಷದ ಈ ಉಲ್ಲೇಖವು ಇದೇ ನಾಡಿನ ಶಾಸನದಲ್ಲಿ ಉಲ್ಲೇಖವಾಗುವ ಬಹುಮುಖ್ಯ ಕಾರಣವೆಂದರೆ ಆರನೆಯ ವಿಕ್ರಮಾದಿತ್ಯ ಯುವರಾಜನಾಗಿದ್ದಾಗ ಮುಖ್ಯವಾಗಿ ಸಿಂದವಾಡಿ ಪ್ರಾಂತವನ್ನು ಆಳುತ್ತಿದ್ದನೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಪ್ರಸ್ತುತ ಜಿಲ್ಲೆಯ ಪ್ರಾಚೀನ ವಿಭಾಗಗಳಾದ ಸಗರನಾಡು, ಅರಲು-೩೦೦ ಹಾಗೂ ಕಲ್ಲಕೆಳಗು ನಾಡಿನ ಜೊತೆಗೆ ಅವಿನಾಭಾವ ಸಂಬಂಧವನ್ನು ಸಿಂದವಾಡಿ ಪ್ರಾಂತವು ಹೊಂದಿರಬಹುದು. ಆಸಮಯಕ್ಕಿಂತ ಮುಂಚಿನ ದಿನಗಳಲ್ಲಿಯೇ ತ್ರಿಭುವನಮಲ್ಲ ವಿಕ್ರಮಾದಿತ್ಯ ಪ್ರಸ್ತುತ ಯಾದಗಿರಿ

ಜಿಲ್ಲೆಯಲ್ಲಿರುವ ಪ್ರಾಚೀನ ವಿಭಾಗಗಳಲ್ಲಿರುವ ಪಟ್ಟಣಗಳಲ್ಲಿ ಆತನು ಇದ್ದಿರುವ ಬಗೆಗೆ ಮಾಹಿತಿಗಳುಂಟು. ಇಂಥ ಹೇಳಿಕೆಗಳಿಗೆ ಆಧಾರವಾಗಿ ನೀಡಬಹುದಾದ ಸಾಕ್ಷಿಗಳೆಂದರೆ ಪ್ರಾಚೀನ ಏತಗಿರಿ(ಯಾದಗಿರಿ), ಏವೂರು(ಸುರಪುರ ತಾಲೂಕು), ಯಡ್ರಾಮಿ(ಎಳರಾಮೆ) ಮತ್ತು ವಡಂಗೇರಿ ಅಥವಾ ವಡಗೇರಿ(ಜೇವರ್ಗಿ ತಾಲೂಕು) ಹಾಗೂ ಕಲ್ಲಕೆಳಗು ನಾಡಿನ ರಾಜಧಾನಿ ಉಜ್ಜಿಗವೊಳಲು(ಉಜ್ಜಲಿ)(ಮಕ್ತಲ್ ತಾಲೂಕು-ಮೊಹಬೂಬನಗರ ಜಿಲ್ಲೆ) ಸ್ಥಳಗಳೊಂದಿಗೆ ವಿಶೇಷ ಸಂಬಂಧವನ್ನು ಆತ ಹೊಂದಿದ್ದನೆಂದು ಶಾಸನ ಆಧಾರಗಳಿಂದ ಗ್ರಹಿಸಬಹುದು. ಹಾಗಾಗಿ ಯುವರಾಜನ ಪದವಿಯಲ್ಲಿದ್ದಾಗಲೇ ಆತನು ಈ ಪ್ರದೇಶವನ್ನು ಆಳ್ವಿಕೆ ಮಾಡಿದ ಬಗೆಗೆ ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಬಹುದು.

ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಅಜ್ಜ ಜಗದೇಕಮಲ್ಲ ಎರಡನೆಯ ಜಯಸಿಂಹನೂ ಸಹ ಯುವರಾಜನಾಗಿದ್ದ ಸಂದರ್ಭದಲ್ಲಿಯೇ ಏತಗಿರಿ(ಯಾದಗಿರಿ) ನೆಲೆವೀಡಿನಿಂದ ಆಳ್ವಿಕೆ ಮಾಡಿರಬಹುದಾದ ಸಾಧ್ಯತೆಗಳುಂಟು.

ಯುವರಾಜನೆಂದು ಹೇಳಿಕೊಳ್ಳದಿದ್ದರೂ ಅವರ ತಂದೆ ಚಕ್ರವರ್ತಿಯಾಗಿದ್ದಾಗ ತಾನು ರಾಜಕುಮಾರನಾಗಿ ತಂದೆಯ ಪಾದಪದ್ಮೋಪಜೀವಿಯಾಗಿ ಮಹಾಮಂಡಳೇಶ್ವರ ಪದವಿಯಿಂದ ರಾಜ್ಯವಾಳಿರುವ ಉದಾಹರಣೆ ಯಾದಗಿರಿ ಜಿಲ್ಲೆಯ ಇಡ್ಲೂರಿನ ಕ್ರಿ.ಶ.೧೧೧೫ರ ತೇದಿಯ ಶಾಸನದಲ್ಲಿ ದಾಖಲಾಗಿದೆ[೧೪೧]. ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿಯ ಮಗನಾದ ಜಗದೇಕಮಲ್ಲ ಬಿರುದಾಂಕಿತ ಇರೆವಬೆಡಂಗ ಸತ್ಯಾಶ್ರಯ ಹೆಸರಿನ ಮಗನೊಬ್ಬ ತನ್ನ ತಂದೆ ಚಕ್ರವರ್ತಿಯಾಗಿದ್ದಾಗ ತಾನು ಸ್ವಸ್ತಿ ಸಮಸ್ತ ಭುವನೇಶ್ವರಂ ಸಮರಮಹೇಶ್ವರಂ ಯಾತಕಜನಚಿನ್ತಾಮಣಿ ಕುಮಾರ ಚೂಡಾಮಣಿ ಏಂರಿಬ್ರಿ(ಬೃ)ಂದ ಚಕೋರಚನ್ಮಂ ರಾಜಲಕ್ಷ್ಮೀ ಕುಳೋತ್ತುಂಗಂ ಶ್ರೀಮತ್ಪಿರಿಯರಸಿ ಚಂದಲದೇವಿಯರಣುಗಂ ನಾಮಾದಿ ಸಮಸ್ತ ರಾಜಾವಳೀವಿರಾಜಮಾನಂ ಶ್ರೀಮನ್ಮಹಾಮಂಡಳೇಶ್ವರಂ ಜಗದೇಕಮಲ್ಲಂ ಕುಮಾರಂ ಸತ್ಯಾಶ್ರಯದೇವರ ಎಂಬ ಉಲ್ಲೇಖವಿದೆ. ಇದರಲ್ಲಿ ಉಲ್ಲೇಖವಾದ ಕುಮಾರ ಎಂಬ ಶಬ್ದವು ಅವನು ರಾಜಕುಮಾರನಾಗಿದ್ದನೆಂಬ ವಿಷಯವನ್ನು ಸ್ಪಷ್ಟಪಡಿಸುತ್ತದೆ ಎಂದು ಹೇಳಬಹುದು.

ಚಕ್ರವರ್ತಿಗಳಿಗೆ ಸಂಬಂಧಿಸಿದ ಯುವರಾಜ ಅಥವಾ ರಾಜಕುಮಾರರು ಆಳ್ವಿಕೆ ಮಾಡಿರುವ ಬಗೆಗೆ ಹೆಚ್ಚಿನ ವಿವರಗಳು ಈ ಪ್ರದೇಶದಲ್ಲಿರುವ ಶಾಸನಗಳಲ್ಲಿ ದಾಖಲಾಗದಿದ್ದರೂ ಮಹಾಮಂಡಳೇಶ್ವರರ, ಸಾಮಂತಾಧಿಪತಿಗಳು ಹಾಗೂ ದಂಡನಾಯಕರ ಕುಮಾರರ(ಮಕ್ಕಳು) ಆಳ್ವಿಕೆ ಮಾಡಿದ ಹೆಚ್ಚಿನ ವಿವರಗಳು ಇಲ್ಲಿರುವ ಶಾಸನಗಳಲ್ಲಿ ಲಭ್ಯವಾಗಿವೆ. ಅವರು ಸಹ ತಮ್ಮನ್ನು ಕುಮಾರರೆಂದೇ ಸಂಬೋಧಿಸಿಕೊಂಡು ಆಳುತ್ತಿದ್ದರೆಂಬ ವಿಷಯವನ್ನು ಗಮನಿಸಬಹುದು.

## ರಾಜಧಾನಿಗಳು

ಪ್ರಸ್ತುತ ಸಂದರ್ಭದ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ವಿಶಾಲವಾದ ಇಡೀ ರಾಷ್ಟ್ರಕ್ಕೆ ಒಂದೇ ರಾಜಧಾನಿ ಪಟ್ಟಣ ಹಾಗೂ ರಾಜ್ಯಗಳಿಗೂ ಸಹ ಒಂದೇ ರಾಜಧಾನಿ ಪಟ್ಟಣ ಇರುವುದು ಇಂದಿನ ವಾಡಿಕೆ. ಆದರೆ ಸಾಮ್ರಾಜ್ಯಶಾಹಿ ಪ್ರಾಚೀನ ಆಡಳಿತ ವ್ಯವಸ್ಥೆಯಲ್ಲಿ ಮುಖ್ಯವಾದ ಒಂದೇ ರಾಜಧಾನಿ ಪಟ್ಟಣದ ಜೊತೆಗೆ ಇನ್ನೂ ಹಲವು ರಾಜಧಾನಿ ಪಟ್ಟಣಗಳು ಅಥವಾ ನೆಲವೀಡುಗಳ ಉಲ್ಲೇಖ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹಾಗಾಗಿ ನಮೂದಿಸಲ್ಪಟ್ಟ ನೆಲವೀಡುಗಳೆಲ್ಲವುಗಳು ರಾಜಧಾನಿಗಳಾಗಿದ್ದವೆ? ಎಂಬ ಸಂಶಯಗಳನ್ನು ಕೆಲವು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಅಂಥ ಭಿನ್ನಾಭಿಪ್ರಾಯಗಳ ಕುರಿತು ಈಗಾಗಲೇ ಅಧ್ಯಾಯ ಎರಡರಲ್ಲಿ ಚರ್ಚಿಸಲಾಗಿದೆ.

ರಾಜನು ರಾಜಧಾನಿಯಲ್ಲೇ ಇರಲಿ ಪ್ರವಾಸದಲ್ಲಿ ಇರಲಿ ತನ್ನ ಆ ನೆಲೆಯಿಂದ ಆಜ್ಞೆ ಹೊರಡಿಸುತ್ತಿರುವ ಸ್ಥಳಗಳೇ ನೆಲವೀಡುಗಳೆಂದು ಹೇಳುವುದು ಹೆಚ್ಚು ಸೂಕ್ತವಾದುದೆಂದು ಡಾ.ಎಸ್.ಕೆ.ಕೊಪ್ಪ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ[೧೪೨]. ಪ್ರಾಯಶಃ ಈ ಹೇಳಿಕೆಯೆ ಸಮಂಜಸವೆನಿಸುತ್ತದೆ. ಅಥವಾ ಅವು ಸಹ ಆ ಕಾಲದಲ್ಲಿ ರಾಜಧಾನಿಯಾಗುವ ಅರ್ಹತೆಯನ್ನು ಪಡೆದಿದ್ದವುಗಳೆಂದು ಅಭಿಪ್ರಾಯಿಸಬಹುದು. ಅಂಥ ಹಲವು ನೆಲವೀಡುಗಳ ಬಗೆಗೆ ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನ ಆಕರಗಳಲ್ಲಿ ವಿವರಗಳು ದಾಖಲಾಗಿರುವುದನ್ನು ಗಮನಿಸಬಹುದು.

ಕ್ರಿ.ಶ.೧೦೨೮ರ ತೇದಿಯ ಮದ್ರಕಿ ಶಾಸನದಲ್ಲಿ ನೆಲವೀಡಿನ ಕುರಿತು ಉಲ್ಲೇಖವಿದೆ[೧೪೩]. ಶ್ರೀಮಜ್ಜಗದೇಕಮಲ್ಲದೇವರೆ ಏತಗಿರಿಯ ನೆಲವೀಡಿನೊಳೆ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನ ಎಂಬ ವಿವರವಿದೆ. ಈ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಕಂಡುಬಂದಿರುವ ಎಲ್ಲ ಶಾಸನಗಳಲ್ಲಿ ನೆಲವೀಡಿನ ಕುರಿತು ಉಲ್ಲೇಖಿಸುವ ಮೊದಲ ಶಾಸನವು ಇದಾಗಿದೆಯೆಂದು ಅಭಿಪ್ರಾಯಿಸಬಹುದು. ಪ್ರಸ್ತುತ ಯಾದಗಿರಿ ಜಿಲ್ಲೆಯ ಮುಖ್ಯ ಕೇಂದ್ರವಾಗಿರುವ ಯಾದಗಿರಿ ಪಟ್ಟಣವನ್ನು ಪ್ರಾಚೀನ ಶಾಸನಗಳಲ್ಲಿ ಏತಗಿರಿ ಎಂದು ಉಲ್ಲೇಖಿಸಿವೆ. ಈ ಪದದ ಕುರಿತು ಕೆಲವರು ಹಲವು ಜಿಜ್ಞಾಸೆಗಳನ್ನು ವ್ಯಕ್ತಪಡಿಸಿದ್ದಾರೆ. ಆದರೆ ಅವು ಒಪ್ಪುವಂತಹ ಅಭಿಪ್ರಾಯಗಳಲ್ಲ.

ಯಾದವರು ಆಳಿದ ಗಿರಿ ಯಾದಗಿರಿ ಎಂತಲೂ, ಎತ್ತಿನಗಿರಿ ಯಾದಗಿರಿ ಎಂಬುದಾಗಿ ಎದ್ದಗಿರಿ, ಯಾತಗಿರಿ ಎಂದು ಅಭಿಪ್ರಾಯಿಸಲಾಗಿದೆ.[೧೪೪] ಅಲ್ಲದೇ ಇತ್ತೀಚೆಗೆ ಕೆಲವರು ಇಲ್ಲಿ ಬೌದ್ಧಯತಿಗಳು ವಾಸಿಸುತ್ತಿದ್ದರಿಂದ ಇದಕ್ಕೆ ಯತಿಗಿರಿ ಎಂಬ ಹೆಸರು ಬಂದಿದೆ ಎಂದು ಅಸಮಂಜಸವಾದ ವಿವರಗಳನ್ನು ಪ್ರಕಟಿಸುತ್ತಿದ್ದಾರೆ.

ಏತಗಿರಿ ಅಥವಾ ಯಾತಗಿರಿ ಎಂಬ ಹೆಸರು ಬಹುಶಃ ಎರಡ–ಮೂರು ಅಂಶಗಳನ್ನು ಪರಿಗಣಿಸಿ ನಿಷ್ಪತ್ತಿ ಮಾಡಬಹುದು. ಏತ ಅಥವಾ ಯಾತ ಎನ್ನುವುದು ಮೇಲೆ ಏರುವಿಕೆ, ಇನ್ನೊಂದು ಆ ಎತ್ತರವಾದ ಗುಡ್ಡದ ಮೇಲೂ ನೀರು ಇರುವುದರಿಂದ ಅದನ್ನೇ ಹೀಗೆ ವಿವರಿಸಿರಬಹುದು. ಯಾತ ತಲೆ ತೂಗಿದರೆ ಪಾತಾಳದ ನೀರು ಬಂತು ಎಂಬ ಅರ್ಥದಲ್ಲಿ ಹಾಗೂ ಮತ್ತೊಂದು ಈ ಪ್ರಾಚೀನವಾದ ಬೆಟ್ಟದಲ್ಲಿ ಅತ್ಯಂತ ಪ್ರಾಚೀನ ಮಾನವ ವಸತಿಗೆ ಸಂಬಂಧಿಸಿದ ರೇಖಾಚಿತ್ರಗಳು ಇಲ್ಲಿರುವ ಬಂಡೆಗಳ ಮೇಲೆ ಮೂಡಿರುವುದರಿಂದ ಈ ಹೆಸರು ಬಂದಿರಬಹುದೆಂದು ಅರ್ಥೈಸಬಹುದು.

ಏತಗಿರಿಗೆ ಸಂಬಂಧಿಸಿದ ಮೊದಲ ಶಾಸನ ಉಲ್ಲೇಖವು ಕಲ್ಯಾಣದ ಚಾಲುಕ್ಯ ಕಾಲಕ್ಕೆ ಸಂಬಂಧಪಟ್ಟಂತೆ ದೊರಕಿದ್ದರೂ ಆ ಪೂರ್ವದಲ್ಲಿಯೇ ಇಲ್ಲೊಂದು ಕೋಟೆ ಇತ್ತೆಂದು ಗುರುತಿಸಬಹುದು. ಇಲ್ಲಿರುವ ಕೋಟೆಯ ದ್ವಾರವಾಡದ ಮೇಲೆ ಈ ಕೋಟೆಯನ್ನು ಸಗರ ಜಗನ್ನಾಥ ಕಟ್ಟಿದನೆಂಬ ಉಲ್ಲೇಖವನ್ನು ದಾಖಲಿಸಲಾಗಿದೆ. ಅದರ ಬಗೆಗೂ ಸಹ ಕೆಲವು ಗುಮಾನಿಗಳುಂಟು. ಏತಗಿರಿ ಕೋಟೆ ಹಾಗೂ ಶಹಾಪುರದ ಕೋಟೆಯನ್ನು ರಾಷ್ಟ್ರಕೂಟ ಕಾಲದಲ್ಲಿ ಕಟ್ಟಿರಬಹುದೆಂದು ತರ್ಕಿಸಲು ಅವಕಾಶಗಳಿವೆ. ಒಟ್ಟಾರೆ ಏತಗಿರಿ ನೆಲವೀಡು ಕಲ್ಯಾಣ ರಾಜಧಾನಿಗಿಂತ ಮೊದಲೇ ರಚನೆಗೊಂಡದ್ದೆಂದು ಖಚಿತವಾಗಿ ಹೇಳಬಹುದು. ಏತಗಿರಿ ನೆಲೆವೀಡು ಮೊದಲು ಬಹುಶಃ ಪ್ರತ್ಯೇಕವಾಗಿಯೇ ಇತ್ತು. ಆ ನಂತರ ಅರಲ–೩೦೦ರ ವಿಭಾಗ ಹಾಗೂ ಸಗರ–೫೦೦ರ ಆಡಳಿತ ವಿಭಾಗಗಳೆರಡರಲ್ಲೂ ತನ್ನ ಪ್ರಭಾವವನ್ನು ಉಳಿಸಿಕೊಂಡು ಬಂದಿದೆ. ಈ ನೆಲವೀಡಿನ ಕುರಿತು ಉಲ್ಲೇಖಿಸುವ ಏಕೈಕ ಶಾಸನ ಮದ್ರಕಿಯಲ್ಲಿದೆ. ಆದರೆ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ರೂಗಿ ಅಥವಾ ರೂವಿಗೆಯ ಶಾಸನದಲ್ಲಿ ಈ ಕುರಿತು ಇನ್ನೂ ಮಹತ್ವದ ವಿಚಾರ ಪ್ರಸ್ತಾಪವಾಗಿದೆ[೧೪೫].

ಜಗದೇಕಮಲ್ಲಂ ಶ್ರೀಮಜ್ಜಯಸಿಂಘದೇವರ್ ಸುಖಸಂಕಥಾವಿವಿನೋದದಿಂದಾಚನ್ದ್ರಾರ್ಕ್ಕ ತಾರಂಬರಂ ಚತುಸ್ಸಾಗರ ಪರ್ಯ್ಯನ್ತಂ ರಾಜ್ಯಂಗೆಯ್ಯುತ್ತಮಿರೆ। ಏತಗಿರಿಯ ನೆಲವೀಡಿನೊಳ ಎಂಬ ವಿವರವಲ್ಲದೇ ಆ ಸಂದರ್ಭದಲ್ಲಿ ಆತನ ಅಂದರೆ ಶ್ರೀಮಜಗದೇಕಮಲ್ಲದೇವರ ಮಗಂ ಶ್ರೀಮದ್ಧಾಸರಸರ್(ರಸವರ್ಮ)ತರ್ದ್ದವಾಡಿನಾಡೊ(ಳ)ಗಣಗಖ್ರುಹಾರಂ ರೂವಿಗೆಯ ಮೆದಲಾಗಹಿ ಪರಿಸೆಂಟಗ್ರಹಾರಮನಾಳತಂ ಸುಖಸಂಕಥಾ ವಿನೋದದಿಂದವರಸುಗೆಯ್ಯುತ್ತಾಮಿರೆ ಎಂದು ಉಲ್ಲೇಖಿಸಲಾಗಿದೆ.

ಈ ವಿವರವನ್ನು ದಾಖಲಿಸಲು ಕಾರಣವೇನೆಂದರೆ ಈಗಾಗಲೇ ಹಿಂದಿನ ಪುಟಗಳಲ್ಲಿ ಚರ್ಚಿಸಿದಂತೆ ಏತಗಿರಿ ನೆಲವೀಡು ಕೇವಲ ಪ್ರವಾಸದಲ್ಲಿದ್ದ ಅಥವಾ ಆಜ್ಞೆ ಹೊರಡಿಸಿದ ಸ್ಥಳ ಮಾತ್ರವಲ್ಲ ಅದು ನಿಜವಾಗಿಯೂ ಅವರ ರಾಜಧಾನಿಯೇ ಆಗಿತ್ತು. ಇನ್ನು ಸ್ಪಷ್ಟವಾಗಿ ಅಭಿಪ್ರಾಯಿಸುವುದಾದರೆ ಕಲ್ಯಾಣದ ಚಾಲುಕ್ಯರು ಒಂದನೆಯ ಸೋಮೇಶ್ವರನ ಕಾಲದಲ್ಲಿ

ಕಲ್ಯಾಣವನ್ನು ರಾಜಧಾನಿ ಮಾಡಿಕೊಂಡರೆಂದು ಖಚಿತ ಮಾಹಿತಿಗಳಿವೆ. ಹಾಗಾಗಿ ಆತನ ತಂದೆ ಜಗದೇಕಮಲ್ಲನ ಕಾಲದಲ್ಲಿ ಏತಗಿರಿ ಪಟ್ಟಣವು ಕೇವಲ ಅವರ ನೆಲವೀಡು ಮಾತ್ರ ಆಗರಿಲಿಲ್ಲ. ಅದು ರಾಜಧಾನಿ ಪಟ್ಟಣವು ಆಗಿತ್ತು ಎಂಬುದು.

ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಏತಗಿರಿಯಷ್ಟೇ ಪ್ರಸಿದ್ಧಿ ಪಡೆದಿದ್ದ ನೆಲವೀಡು ಎಂದರೆ ಸೆಲೆಯಹಳ್ಳಿ. ಈ ಸೆಲೆಯ ಅಥವಾ ಸೆಲದಹಳ್ಳಿಯ ಕುರಿತು ಈಗಾಗಲೇ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಆ ಹಿನ್ನೆಲೆಯಲ್ಲಿ ಅಭಿಪ್ರಾಯಿಸುವುದಾದರೆ ಸೆಲದಹಳ್ಳಿಯು ಇಂದಿನ ಸುರಪುರ ತಾಲೂಕಿನ ಶೆಳಗಿ ಅಥವಾ ಶೆಳ್ಳಗಿ ಆಗಿದೆ ಎಂಬ ವಿವರವು ಹೆಚ್ಚು ಒಪ್ಪುವಂತಹದ್ದು. ಪ್ರಾಚೀನ ಸೆಲದಹಳ್ಳಿ ನೆಲವೀಡಿನ ಕುರಿತು ಈ ಪ್ರದೇಶದಲ್ಲಿ ಉಲ್ಲೇಖಿಸುವ ಮೊಟ್ಟ ಮೊದಲ ಶಾಸನವೆಂದರೆ ಹಾವಿನಾಳ ಗ್ರಾಮದ ಕ್ರಿ.ಶ. ೧೦೮೫ರ ತೇದಿಯದ್ದು[೧೪೬]. ಆರನೆಯ ವಿಕ್ರಮಾದಿತ್ಯನ ಕಾಲದ ಈ ಶಾಸನದಲ್ಲಿ ತ್ರಿಭುವನಮಲ್ಲರಸ ಸೆಲೆಯ ಹಳ್ಳಿಯ ನೆಲೆವೀಡಿನೊಳ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಎಂದು ದಾಖಲಾಗಿದೆ. ಅದರಂತೆ ಪ್ರಾಚೀನ ಹಗರಟಗೆ-೩೦೦ರ ನಾಡಿನಲ್ಲಿದ್ದ ತಾಳಿಕೋಟೆಯ ಕ್ರಿ.ಶ.ಸುಮಾರು ೧೧ನೇ ಶತಮಾನದ ತೇದಿಯ ಶಾಸನವೊಂದರಲ್ಲಿ ತ್ರಿಭುವನಮಲ್ಲ ವಿಕ್ರಮಾದಿತ್ಯನು ಸೆಲೆಯಹಳ್ಳಿಯ ನೆಲೆವೀಡಿನಿಂದ ಆಳುತ್ತಿದ್ದ ಮಾಹಿತಿಯು ದಾಖಲಾಗಿದೆ[೧೪೭]. ಇದೇ ಪ್ರಾಚೀನ ನಾಡಿನಲ್ಲಿದ್ದ ಸಿಂದಗಿ ತಾಲೂಕಿನ ಕಡ್ಲೇವಾಡ ಗ್ರಾಮದ ಕ್ರಿ.ಶ. ೧೧೭೯ರ ತೇದಿಯ ಶಾಸನದಲ್ಲಿ ಕಳಚೂರ್ಯ ಚಕ್ರವರ್ತಿ ರಾಯಮುರಾರಿ. ಭುಜಬಳಮಲ್ಲ ನೋವಿದೇವರ ಸೆಲೆಯಹಳ್ಳಿಯ ನೆಲೆವೀಡಿನಿಂದ ರಾಜ್ಯವಾಳುತ್ತಿರುವ ಬಗೆಗೆ ವಿವರಿಸಲಾಗಿದೆ[೧೪೮].

ಸುರಪುರ ತಾಲೂಕಿನ ಹೆಮ್ಮಡಗಿ ಅಥವಾ ಎಮ್ಮಡಗಿಯ ಕ್ರಿ.ಶ.೧೧೮೯ರ ತೇದಿಯ ಶಾಸನವು ತುಂಬಾ ಮುಖ್ಯವಾದ ಮಾಹಿತಿ ನೀಡುತ್ತದೆ[೧೪೯]. ಸುದೀರ್ಘವಾಗಿಯೇ ದಾಖಲಾಗಿರುವ ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ಕೊನೆಯ ಕುಡಿ ತ್ರಿಭುವಮನಲ್ಲ ವೀರಸೋಮೇಶ್ವರ ಅಥವಾ ನಾಲ್ಕನೆಯ ಸೋಮೇಶ್ವರನು ಕಳಚೂರ್ಯರಿಂದ ಮರಳಿ ರಾಜ್ಯ ಪಡೆದರೂ ಆತನು ಕಲ್ಯಾಣದಲ್ಲಿ ಉಳಿಯಲಿಲ್ಲ. ಬಹುಶಃ ನಡೆದುಹೋದ ಸಂಗತಿಗಳಿಂದ(ಕಲ್ಯಾಣ ಕ್ರಾಂತಿ) ಖಿನ್ನವಾಗಿ ತನ್ನ ಕೊನೆಯ ದಿನಗಳನ್ನು ಈ ಸೆಲೆಯಹಳ್ಳಿಯ ನೆಲೆವೀಡಿನಲ್ಲಿ ಕಳೆದನೆಂದು ಅಭಿಪ್ರಾಯಗಳು ದಾಖಲಾಗಿವೆ.

ಈವರೆಗೂ ವಿವರಿಸಿದ ಮಾಹಿತಿಗಳು ಈ ಪ್ರಾಚೀನ ಪ್ರದೇಶದಲ್ಲಿದ್ದ ಪ್ರಾಚೀನ ನೆಲವೀಡು ರಾಜಧಾನಿಗಳಾಗಿದ್ದವು. ಅವುಗಳಲ್ಲದೇ ಇಲ್ಲಿರುವ ಶಾಸನಗಳಲ್ಲಿ ಪೊಟ್ಟಲಕೆರೆ[೧೫೦](ನೆಲೆವೀಡಿನ ಕುರಿತು ಅಣಜಿ ಮತ್ತು ಕ್ರಿ.ಶ.೧೦೧೭ರ ಕಾಲದ ದೋರನಹಳ್ಳಿ[೧೫೧] ಶಾಸನಗಳಲ್ಲಿ ಉಲ್ಲೇಖಗಳಿರುವುದನ್ನು ಕಾಣುತ್ತೇವೆ. ಇದೇ ರೀತಿಯ ಪ್ರಾಚೀನ ನೆಲವೀಡುಗಳಾಗಿದ್ದ ಬಂಕಾಪುರ,

ಕಂಪಿಲೆ ಹಾಗೂ ಮೊದಗನೂರ ಎಂಬ ಸ್ಥಳಗಳ ಕುರಿತು ಕ್ರಮವಾಗಿ ಕ್ರಿ.ಶ. ೧೦೭೬ರ ಕನ್ನೆಳ್ಳಿ[೧೫೨]. ಕ್ರಿ.ಶ.೧೦೭೧ರ ಸಗರ[೧೫೩]. ಹಾಗೂ ಕ್ರಿ.ಶ. ೧೧೮೯ರ ತೇದಿಯ ಹುಲಿಕಲ್[೧೫೪] ಶಾಸನಗಳಲ್ಲಿ ಆ ನೆಲೆವೀಡುಗಳ ಕುರಿತು ಉಲ್ಲೇಖಗಳನ್ನು ನೋಡುತ್ತೇವೆ. ಅವುಗಳಲ್ಲಿರುವ ಎರಡು ಶಾಸನಗಳು ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದರೆ ಇನ್ನೊಂದು ಕಳಚೂರ್ಯರ ಸಂಕಮದೇವನ ಕಾಲಕ್ಕೆ ಸೇರಿದ್ದೆಂದು ತಿಳಿಯಬಹುದು.

ಈ ಪ್ರದೇಶದಲ್ಲಿ ಉಲ್ಲೇಖಿತ ಈ ನೆಲವೀಡುಗಳಲ್ಲದೇ ಒಂದೆರಡು ರಾಜಧಾನಿಗಳ ಬಗೆಗೂ ಕೂಡಾ ಈ ಪ್ರದೇಶದಲ್ಲಿರುವ ಶಾಸನಗಳಲ್ಲಿ ಉಲ್ಲೇಖಗಳು ದಾಖಲಾಗಿವೆ. ಮಹಾಮಂಡಳೇಶ್ವರ ಹೈಹಯರ ಮುಖ್ಯ ರಾಜಧಾನಿ ಪ್ರಾಚೀನ ಕೆಂಬಾವಿ ಪಟ್ಟಣವಾಗಿತ್ತು. ಆ ಕುರಿತು ಸುರಪುರ ತಾಲೂಕಿನ ಎಡೆಯಾಪುರದ ಕ್ರಿ.ಶ. ೧೨೦೬ರ ತೇದಿಯ ಶಾಸನವು ಉಲ್ಲೇಖಿಸುತ್ತದೆ[೧೫೫]. ಗಂಡಭೇರುಂಡ ಸಮಸ್ತಪ್ರಶಸ್ತಿ ಸಹಿತಂ ಶ್ರೀ ರೇವರಸನ ಮುಖ್ಯ ರಾಜಧಾನಿ ಕೆಂಬಾವಿಯೂರ ಎಂಬ ವಿವರವಿದೆ. ಅದೇ ರೀತಿ ಕೆಂಬಾವಿಯ ಕ್ರಿ.ಶ.೧೦೫೪ರ ತೇದಿಯ ಶಾಸನದಲ್ಲಿ ರೇವರಸನ ಹೆಂಡತಿ ಮಾಳಿಯಬ್ಬೆರಸಿ ಮಾಳಿಬೇಶ್ವರ ದೇವಾಲಯ ಕಟ್ಟಿಸಿ ಅದರ ನಿತ್ಯಕಾರ್ಯಗಳಿಗಾಗಿ ರಾಜಧಾನಿ ಕೆಂಬಾವಿಯ ಮೂಡವೊಲದೋಟಸರ್ವ್ವಬಾಧಾ ಪರಿಹಾರಂ ಮಾಡಿಬಿಟ್ಟ ಕೆಮ್ಮತ್ತರ ಎಂಬ ಉಲ್ಲೇಖವಿದೆ[೧೫೬]. ಹೆಸರಿಸಿರುವ ಈ ಎಲ್ಲ ನೆಲವೀಡುಗಳು ಹಾಗೂ ರಾಜಧಾನಿ ಪಟ್ಟಣಗಳು ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳಲ್ಲಿದ್ದ ಸ್ಥಳಗಳಾಗಿದ್ದವೆಂದು ಅಭಿಪ್ರಾಯಿಸಬಹುದು.

**ಮಂತ್ರಿ ಮಂಡಲ**

ವಿಶಾಲವಾದ ರಾಜ್ಯಭಾರ ಸುಗಮವಾಗಿ ನಿರ್ವಹಿಸಲು ಮಂತ್ರಿಗಳ ಅವಶ್ಯಕತೆ ಇತ್ತು. ಮಂತ್ರಿ ಹಾಗೂ ಮಂತ್ರಿ ಮಂಡಲದ ಮಹತ್ವ ಕುರಿತು ತುಂಬಾ ಪ್ರಾಚೀನ ಕಾಲದಿಂದಲೇ ರಾಜಕೀಯ ತಜ್ಞರು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರವು ಅಂಥ ವಿಚಾರಗಳ ಕುರಿತು ತಿಳಿ ಹೇಳುವ ಮುಖ್ಯ ಆಕರವಾಗಿದೆ. ಶುಕ್ರನೀತಿಸಾರದಲ್ಲಿಯೂ ಸಹ ಮಂತ್ರಿಮಂಡಲದ ಬಗೆಗೆ ತುಂಬಾ ಉಪಯುಕ್ತ ಮಾಹಿತಿಗಳು ದಾಖಲಾಗಿರುವುದು ತಿಳಿದಿರುವ ಸಂಗತಿಗಳಾಗಿವೆ. ಆಡಳಿತವನ್ನು ನಿರ್ವಹಿಸುವ ಮಂತ್ರಿಗಳ ಸಂಖ್ಯೆ ಮಾತ್ರ ಎಷ್ಟಿರಬೇಕೆಂಬ ಏಕಾಭಿಪ್ರಾಯವಂತೂ ಇಲ್ಲ. ಆದರೆ ಮೂರನೆಯ ಸೋಮೇಶ್ವರ ವಿರಚಿತ ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ ಗ್ರಂಥದಲ್ಲಿ ಏಳು ಅಥವಾ ಎಂಟು ಜನ ಮಾತ್ರ ಇರುವ ಮಂತ್ರಿಮಂಡಳ ಹೆಚ್ಚು ಆರೋಗ್ಯಕರವಾದುದೆಂದು ತಿಳಿಸುತ್ತದೆ. ಯಶಸ್ತಿಲಕ ಚಂಪೂವಿನ ಸೋಮದೇವಸೂರಿಯು ಯಾವಾಗಲೂ ಒಬ್ಬ ಮಂತ್ರಿಯನ್ನು ಅವಲಂಬಿಸಬಾರದೆಂದು ಎಚ್ಚರಿಸಿದ್ದಾನೆ. ಅಲ್ಲದೇ ಮಂತ್ರಿ ಪದವಿಯನ್ನು ವಂಶಪಾರ್ಯಂಪರ್ಯವಾಗಿ ಕೊಡಮಾಡುತ್ತಿದ್ದರೂ ಅವರಿಗಿರುವ ಅರ್ಹತೆಗಳನ್ನು ರಾಜನು ಗಮನಿಸುತ್ತಿದ್ದನೆಂಬುದು ಮುಖ್ಯ

ಸಂಗತಿ[೧೫೭]. ಆದರೆ ಇಂಥ ಹುದ್ದೆಗಳು ಹೆಚ್ಚಾಗಿ ವಂಶಪಾರ್ಯಂಪರ್ಯವಾಗಿ ಮುಂದುವರೆಯುತ್ತಿದ್ದವು ಎಂದು ಅಭಿಪ್ರಾಯಿಸಬಹುದು.

ರಾಜ್ಯದ ಆಗುಹೋಗುಗಳ ಕುರಿತು ರಾಜನು ಮಂತ್ರಿಗಳ ಸಭೆ ಕರೆದು ಚರ್ಚಿಸುತ್ತಿದ್ದ. ಆ ಸ್ಥಳವೇ ರಾಜಾಸ್ಥಾನ ಇಲ್ಲವೆ ರಾಜಸಭೆ. ಕನ್ನಡದಲ್ಲಿ ರಾಜಸಭೆಯನ್ನು ಓಲಗ ಎಂದು ಕರೆಯುತ್ತಿದ್ದರು. ಇದೇ ಓಲಗ ಅಥವಾ ಸಭೆಯಲ್ಲಿ ಕುಳಿತು ಅಧೀನರಿಂದಲ್ಲಾ ಕಪ್ಪು ಕಾಣಿಕೆಗಳನ್ನು ಸ್ವೀಕರಿಸುತ್ತಿದ್ದ. ಕೆಲವು ವಿಶೇಷ ಸಂದರ್ಭಗಳಲ್ಲಿ ಸಕಲ ವೈಭವಗಳಿಂದೊಡಗೂಡಿದ ಮೆರವಣಿಗೆಯಲ್ಲಿ ಹೋಗುತ್ತಿದ್ದ ಎಂಬ ವಿವರಗಳು ದಾಖಲಾಗಿವೆ[೧೫೮].

ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಆಡಳಿತ, ಮಂತ್ರಿಗಳ ಹಾಗೂ ಅವರ ಕಾರ್ಯಭಾರಗಳ ಕುರಿತಂತೆ ಹಲವಾರು ವಿಚಾರಗಳು ವ್ಯಕ್ತವಾಗಿವೆ. ಸಾಮಾನ್ಯವಾಗಿ ಈ ನಾಡಿನ ಎಲ್ಲ ಪ್ರದೇಶಗಳ ಶಾಸನಗಳಲ್ಲಿ ಉಕ್ತವಾದ ಮಹಾಪ್ರಧಾನ, ಮಹಾಪ್ರಚಂಡ ದಂಡನಾಯಕ, ಸಂಧಿವಿಗ್ರಹಿ, ಬಾಹತ್ತರ ನಿಯೋಗಾಧಿಪತಿ, ಮಹಾಸಾಮಂತ ಲಾಳ ಸಂಧಿವಿಗ್ರಹಿ, ಹೇರಿಲಾಳಸಂಧಿ ವಿಗ್ರಹಿ, ಮಹಾಪ್ರಭು, ಸರ್ವಾಧಿಕಾರಿ ಎಂಬ ಸ್ಥಾನಮಾನಗಳು ಪ್ರಸ್ತುತ ಜಿಲ್ಲೆಯ ಶಾಸನಗಳಲ್ಲಿ ಪ್ರಕಟವಾಗಿವೆ. ಅಲ್ಲದೇ ನಾಡಾಳಿತ, ಊರಾಡಾಳಿತ, ಪಟ್ಟಣ ಹಾಗೂ ಅಗ್ರಹಾರ ಆಡಳಿತ ನಿರ್ವಹಿಸುವ ವ್ಯಕ್ತಿಗಳ ಬಗೆಗೂ ಸಹ ಮಾಹಿತಿಗಳು ಶಾಸನಗಳಲ್ಲಿ ದಾಖಲಾಗಿವೆ. ಅಂಥ ವಿವರಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಹೆಸರಿಸಿದ ಎಲ್ಲ ಮಾನ್ಯರು ಮಂತ್ರಿಮಂಡಳದಲ್ಲಿ ಕಾರ್ಯನಿರ್ವಹಿಸುತ್ತಿದ್ದರಲ್ಲದೆ ಅವಶ್ಯಕತೆ ಇದ್ದಾಗ ರಾಜನ ಸಲಹೆ-ಸೂಚನೆಗಳ ಮೇಲೆ ಬೇರೆ ಬೇರೆ ಪ್ರಾಂತಾಡಳಿತದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಅಲ್ಲದೇ ತಾವು ಹೊಂದಿರುವ ಸ್ಥಾನಮಾನಗಳಿಗಿಂತ ಮೇಲ್ದರ್ಜೆಯ ಹುದ್ದೆಯನ್ನು ಅವಶ್ಯಕತೆ ಕಂಡು ಬಂದಾಗ ನಿರ್ವಹಿಸುತ್ತಿದ್ದುದ್ದುಂಟು. ಶಾಸನಗಳಲ್ಲಿ 'ಮೇಲಾಳಿಕೆ' ಎಂಬ ಪದದ ಪ್ರಯೋಗ ಆಗಿರುವುದನ್ನೂ ಚರ್ಚಿಸಲಾಗಿದೆ[೧೫೯]. ಇದಕ್ಕಾಗಿ ಕೆಲವರನ್ನಾದರೂ ನಿಯಮಿಸಲಾಗುತ್ತಿತ್ತೆಂದು ಹೇಳಲಾಗಿದೆ. ಮಹಾಸಾಮಂತ ಮೂಕರಸನು ಪಗಟೆನಾಡ(ಹಗರಟಗಿ) ಮೇಲಾಳ್ಕೆಯನ್ನು ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿಂದಾಳುತ್ತಿದ್ದ ಎಂದು ಉಲ್ಲೇಖಿಸಲಾಗಿದೆ[೧೬೦]. ಈ ಮೇಲಾಳಕೆಗೆ ಹಣ ಸಂದಾಯವಾಗುತ್ತಿದ್ದು ನಾಡಿನ ಪ್ರತಿ ಹಳ್ಳಿಗಳೂ ಇಂಥ ಮೇಲಾಳಿಕೆಯ ವ್ಯಾಪ್ತಿಗೆ ಸೇರಿ ಹಣ ಸಂದಾಯ ಮಾಡುತ್ತಿದ್ದುವೆನ್ನಬಹುದೆಂದು ಅಭಿಪ್ರಾಯಿಸಲಾಗಿದೆ.

ಮೇಲಾಳಿಕೆಯ ವಿವರ ಇರುವ ಉಲ್ಲೇಖವೊಂದು ಈ ಜಿಲ್ಲೆಯ ಶಾಸನದಲ್ಲಿ ವ್ಯಕ್ತವಾಗಿದೆ. ಕ್ರಿ.ಶ. ೧೧೭೮ರ ತೇದಿಯ ಸಿರಿವಾಳ ಶಾಸನವೊಂದು(ಅದರ ಕಾಲ ಕ್ರಿ.ಶ.೧೧೮೯ ಎಂದು ಆಗಬೇಕಿತ್ತು) ನಾಡಗ್ರಾಮಿತರು ಶ್ರೀಮತು ಭಿಲ್ಲಮದೇವರ ಮಹಾಪಸಾಯಿತಂ ಅಧಿಕಾರಿ ಪಯ್ಯನಾಯಕರುಂ ಎಳಮೇಲು(ಆಲಮೇಲ-ಇಂಡಿ ತಾಲೂಕು) ಎಪ್ಪತ್ತರ ಬಳಿಯ ಬಾಡ ಮುರುಡಿಯ ಮಂನ್ನೆಯ

ಮೇಲಾಳಿಕೆಯು ಬಾಹಿರ ಸೀಮೆಯೊಳಗಣ ನಿಧಿನಿಧಾನ ನಿಕ್ಷೇಪ ಜಲಪಾಷಾಣ ಮಾಳಾಪ್ರಿಕ್ಷಗುಲು ಮಲಂತಾವಳಿ ಚತುರಾಘಾಟ ಕಲ್ಲಕಣಿ ಆರುವಣ ಮೂಲೆಗರುವರಣ ಅಷ್ಟಭೋಗತೇಜ ಸಾಮ್ಯದಂಡೋಪಕಾಣಿಕೆ ಎಂದು ಉಲ್ಲೇಖಿಸಲಾಗಿದೆ[೧೬೧].

ಆಡಳಿತದಲ್ಲಿ ಭಾಗಿಯಾದ ಮಂತ್ರಿಗಳೆಲ್ಲರ ಅಧಿಕಾರ ಸ್ವರೂಪ ಅಂದರೆ ಅವರು ಹೊಂದಿದ್ದ ಸ್ಥಾಮಾನ ಹಾಗೂ ವ್ಯಾಪ್ತಿಯ ಬಗೆಗೆ ಒಂದು ನಿರ್ದಿಷ್ಟವಾದ ಗೆರೆ ಹೊಡೆದಂತಹ ಮಾನದಂಡ ಇರಲಿಲ್ಲವೆಂದು ಅಭಿಪ್ರಾಯಿಸಲಾಗಿದೆ[೧೬೨]. ಪ್ರಾಯಶಃ ಇಂಥದ್ದೇ ತೊಡಕುಗಳು ಸಹ ಪ್ರಸ್ತುತ ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ಕಂಡುಬರುತ್ತವೆ. ಅಲ್ಲದೇ ಮಹಾಮಂಡಳೇಶ್ವರರಿಗೆ ಕಡ್ಡಾಯವಾಗಿ ನಮೂದಾಗುತ್ತಿದ್ದ 'ಪಂಚಮಹಾಸಬ್ದ' ಅಥವಾ ಪಂಚ 'ಮಹಾಶಬ್ದ' ಎನ್ನುವ ಅರ್ಹತೆ ಮಹಾಸಾಮಂತ ಪ್ರಚಂಡ ದಂಡನಾಯಕರಿಗೂ ಉಲ್ಲೇಖವಾಗಿದೆ. ಕ್ರಿ.ಶ.೧೦೭೪ರ ಬೈಚಬಾಳ ಶಾಸನದಲ್ಲಿ[೧೬೩]. ಸಮಧಿಗತ ಪಂಚಮಹಾಶಬ್ದ ಮಹಾಸಾಮಾನ್ತಾಧಿಪತಿ ಮಹಾಪ್ರಚಂಡದಂಡನಾಯಕ ಶ್ರೀಮದ್ದಂಡನಾಯಕಂ ಸಿಂಗರಸನ ಉಲ್ಲೇಖವಿದೆ. ಅಲ್ಲದೇ ತೀರಿಹೋಗಿದ್ದ ತನ್ನ ತಂದೆ ಶ್ರೀಮದಯ್ಯದಂಡನಾಯಕ ರೆಬ್ಬರಾಯ್ಯನು ಸಹ ಆಡಳಿತದಲ್ಲಿದ್ದ ಬಗೆಗೆ ಮಾಹಿತಿ ದೊರಕಿರುತ್ತದೆ. ದಂಡನಾಯಕನಾಗಿದ್ದ ತನ್ನ ತಂದೆಯನ್ನು ಮೀರಿ ಮಗನಾದ ಸಿಂಗರಸನು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನಿಂದ ತುಂಬಾ ಗೌರವದ ಪಂಚಮಹಾಶಬ್ದ ಮರ್ಯಾದೆಯಿಂದ ಕೂಡಿದ್ದ ಮಹಾದಂಡಾಧಿಪತಿ ಮಹಾಪ್ರಚಂಡದಂಡ ನಾಯಕನಾಗಿ ಹುದ್ದೆ ಪಡೆದಿದ್ದ ಶಾಸನಗಳಲ್ಲಿ ದಾಖಲಾಗಿದೆ.

ಕ್ರಿ.ಶ. ೧೧೨೦ ಹುಣಸಗಿ ಶಾಸನದಲ್ಲಿ ಸಮಧಿಗತ 'ಪಂಚಮಹಾಶಬ್ದ' ಮಹಾಸಾಮಂತಾಧಿಪತಿ ಮಹಾಪ್ರಚಂಡ ನಾಯಕ ಹಾಗೂ ಶ್ರೀಮತ್ರಿಭುವನಮಲ್ಲ ದೇವರ ಶ್ರೀ ಮಾಣಿಕ್ಯ ಬಂಡಾರಿಗೆ ಮಹಾವಡಿಯಂಕ(ಮಹಾಒಡೆಯರು) ಎಂದು ಧವಳಪಯ್ಯನು ಕರೆಯಿಸಿಕೊಂಡರೇ ಅವನ ಮಗ ಶ್ರೀಮಲ್ಲಪ್ಪಯ್ಯನು ದಂಡನಾಯಕನೆಂಬ ಸ್ಥಾನ ಮಾತ್ರ ಹೊಂದಿರುವುದನ್ನು ಗಮನಿಸಬಹುದು. ಅಂದರೆ ತಂದೆ ಉನ್ನತ ಸ್ಥಾನದಲ್ಲಿದ್ದರೆ ಮಗ ಪ್ರಾರಂಭದ ದಂಡನಾಯಕ ಸ್ಥಾನದಲ್ಲಿದುದ್ದನ್ನು ಗುರುತಿಸಬಹುದು. ಕೆಲವೊಮ್ಮೆ ಈ ಪದವಿಗಳು ವಂಶಪರಂಪರೆಯಿಂದಲೂ ಬರುತ್ತಿದ್ದರು ಎಂಬುದಕ್ಕೆ ಇದೊಂದು ಉದಾಹರಣೆಯಾಗಿದೆ.

ಕ್ರಿ.ಶ.೧೧೦೬ರ ತೇದಿಯ ಗೋನಾಳ ಶಾಸನದಲ್ಲಿ ಗೋನಾಳದ ಪ್ರಭು ಶ್ರೀಮನ್ಮಹಾಪ್ರಧಾನಂ ಬಜಿದೇವನ ಉಲ್ಲೇಖವಿದೆ[೧೬೪]. ಮುದನೂರಿನ ಕ್ರಿ.ಶ.೧೧೭೫ರ ತೇದಿಯ ಶಾಸನದಲ್ಲಿ[೧೬೫]. ಕುಮಾರ ಬಮ್ಮಿದೇವರಸನನ್ನು ಮಹಾಪ್ರಧಾನ, ಸೇನಾಧಿಪತಿ ದಂಡನಾಯಕ ಎಂದು ಉಲ್ಲೇಖಿಸಲಾಗಿದೆ.

ಹಗರಟಗಿಯ ಕ್ರಿ.ಶ.೧೦೯೨ ಶಾಸನದಲ್ಲಿ ಅವರು ಹೊಂದಿದ್ದ ಸ್ಥಾನಮಾನ ಸ್ವರೂಪದಲ್ಲಿ ಬದಲಾಗಿರುವುದನ್ನು ಕಾಣುತ್ತೇವೆ[೧೬೬]. ಸಮಧಿಗತಪಂಚಮಹಾಶಬ್ದ–ಮಹಾಸಾಮಂತಾಧಿಪತಿ ಪ್ರಚಂಡ ದಂಡನಾಯಕನೆಂದು ಶ್ರೀ ರುದ್ರಭಾಸ್ಕರ ಪಂಡಿದೇವನನ್ನು ಕರೆದಿದ್ದರೆ ಇದೇ ಶಾಸನದಲ್ಲಿ ಇನ್ನೊಂದು

ವಿವರವು ಶ್ರೀಮನ್ಮಹಾಪ್ರಧಾನ ದಂಡನಾಯಕಂ ಎಂದು ಅಹವಮಲ್ಲರಸನನ್ನು ಸಂಬೋಧಿಸಿದೆ. ಬಹುಶಃ ಅವನು ರುದ್ರಭಾಸ್ಕರ ಪಂಡಿತನಿಗಿಂತ ಕೆಳಗಿನ ಸ್ಥಾನ ಹೊಂದಿರಬಹುದೆಂದು ತಿಳಿಯಬಹುದು.

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನ ಆಕರಗಳನ್ನು ಮಂತ್ರಿಮಂಡಳ ಹಾಗೂ ಮಂತ್ರಿಗಳ ಸಂಬಂಧವಾಗಿ ಸೂಕ್ಷ್ಮವಾಗಿ ಅವಲೋಕಿಸಿದಾಗ ತಿಳಿದು ಬರುವ ಸಂಗತಿ ಏನೆಂದರೆ ಒಂದೊಂದೇ ಹುದ್ದೆಯನ್ನು ಮಾತ್ರ ಹೊಂದಿದ ಅಧಿಕಾರಿಗಳ ಬಗೆಗೆ ತುಂಬಾ ವಿವರಗಳು ಇಲ್ಲಿರುವ ಶಾಸನಗಳಲ್ಲಿ ದಾಖಲಾಗಿವೆ. ಮಹಾಪ್ರಧಾನ ದಂಡನಾಯಕ ಮಹಾದಂಡನಾಯಕ ಮಹಾಸಾಮಂತ, ಗಾವುಂಡ ಮತ್ತು ಮಹಾಪ್ರಚಂಡ ದಂಡನಾಯಕ ಎಂದು ಸೂಚಿಸುವ ಸ್ಥಾನಗಳನ್ನು ಹೊಂದಿರುವ ಅಧಿಕಾರಿಗಳು ಸಹ ದಾಖಲಾಗಿದ್ದಾರೆ. ಕ್ರಿ.ಶ. ೧೧೩೭ರ ಸಿರಿವಾಳ ಶಾಸನವು ಶ್ರೀಮನ್ಮಹಾಪ್ರಧಾನಂ ದಂಡನಾಯಕ ತಿಕ್ಕರಸನನ್ನು ಉಲ್ಲೇಖಿಸಿದೆ[೧೧೭]. ಮಹಾಪ್ರಧಾದಂಡನಾಯಕ ಪೋತರಸ[೧೧೮], ಮಹಾಪ್ರಧಾನ ದಂಡನಾಯಕ ಭೋಗಭಟ್ಟಯ್ಯಗಳ[೧೧೯] ಉಲ್ಲೇಖವು ಸಹ ಈ ಶಾಸನದಲ್ಲಿದೆ.

ಕ್ರಿ.ಶ.ಸುಮಾರು ೧೨ನೇ ಶತಮಾನದ ಮರಮಕಲ್ ಶಾಸನವು[೧೨೦] ಕುಮಾರ ಚಂಡುಗಿ ದೇವರಸನನ್ನು ಸಹಣಧಿಪತಿ ಮಹಾಪ್ರಚಂಡ ದಂಡನಾಯಕನೆಂದು ಉಲ್ಲೇಖಿಸಿದೆ. ಮಹಾಸಾಮಂತ ಸ್ಥಾನ ಹೊಂದಿದ ಹಲವಾರು ಅಧಿಕಾರಿಗಳು ಯಾದಗಿರಿ ಜಿಲ್ಲೆಯ ಪ್ರಾಚೀನ ನಾಡುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇರುವುದನ್ನು ಗುರುತಿಸಬಹುದು. ಮಹಾಸಾಮಂತ ದಂಡನಾಯಕ[೧೨೧].

ಮಹಾಸಾಮಂತ ಭೋಗರಸ[೧೨೨], ಚಟ್ಟರಸ ಮತ್ತು ಬರ್ಮರಸ[೧೨೩] ರಾಯರಸ[೧೨೪]. ಅಲ್ಲದೇ ಮಹಾಪ್ರಧಾನ ಗೋವರಸ[೧೨೫]ರ ಉಲ್ಲೇಖಗಳು ದಾಖಲಾಗಿವೆ. ಕ್ರಿ.ಶ. ೧೨೨೯ರ ತೇದಿಯ ಹಗರಟಗಿ ಶಾಸನದಲ್ಲಿ[೧೨೬] ಸಮಸ್ತ ಪ್ರಶಸ್ತ ಸಹಿತಂ ಶ್ರೀಮನು ಮಹಾಪ್ರಧಾನಂ ಬಾತ್ತರ ನಿಯೋಗಾಧಿಪತಿ ರಸಲಪತಿ ನಿಯೋಗ ಯೋಗಂಧರ ಶ್ರೀಮತು ಮಗರ ಮುರಾರಿ ಜಯಿತಪಳದೇವನ ಉಲ್ಲೇಖವಿದೆ. ಈ ಕುರಿತ ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ.

ಈ ಬಾಹತ್ತರ ನಿಯೋಗವು ಸಾಂಪ್ರದಾಯಿಕವಾಗಿ ಬರುವ ರಾಜ್ಯಾಡಳಿತದ ಎಪ್ಪತ್ತೆರಡು ವಿಭಾಗಗಳು ಅಥವಾ ಅಧಿಕಾರಗಳು ಎಂಬ ಅರ್ಥವಿದ್ದರೆ ಬಾಹತ್ತರ ನಿಯೋಗಾಧಿಪತಿ ಎಂಬ ಹುದ್ದೆಯು ಆ ನಿಯೋಗದ ಮುಖ್ಯಸ್ಥಾನ ಅಥವಾ ಆಡಳಿತೆಯ ವಿವಿಧ ವಿಭಾಗಗಳ ಮುಖ್ಯಸ್ಥ ಅಥವಾ ಮುಖ್ಯಕಾರ್ಯದರ್ಶಿ ಎಂಬ ಅರ್ಥಗಳನ್ನು ಹೊಂದಿರುವುದನ್ನು ಗಮನಿಸಬಹುದು[೧೨೭]. ಆದರೆ ಬಾಹತ್ತರ ನಿಯೋಗಿ ಎಂದರೆ ಸಾಂಪ್ರದಾಯಿಕ ಎಪ್ಪತ್ತೆರಡು ಅಧಿಕಾರಿಗಳಲ್ಲೊಬ್ಬ ಎಂಬುದು. ಶಾಸನದಲ್ಲಿ ಉಲ್ಲೇಖಿತನಾದ ಮಗರ ಮುರಾರಿ ಜಯಿತಪಳದೇವ ಬಾಹತ್ತರ ನಿಯೋಗಾಧಿಪತಿ ಆಗಿದ್ದ. ಅಂದರೆ ಎಲ್ಲ ವಿಭಾಗಗಳಿಗೂ ಮುಖ್ಯಸ್ಥ ಅಥವಾ ಮುಖ್ಯಕಾರ್ಯದರ್ಶಿಯಾಗಿದ್ದ ಎಂಬುದನ್ನು ಗುರುತಿಸಬಹುದು.

ಈ ಹೊಸ ಶಾಪ ದೇವಗಿರಿ ಸೇವುಣರ ಕಾಲಕ್ಕೆ ಹೆಚ್ಚು ಪ್ರಚಲಿತದಲ್ಲಿದ್ದಂತಿರುವುದು. ಹಾಗಾಗಿ ಈ ಪ್ರದೇಶದಲ್ಲಿ ಲಭ್ಯವಿರುವ ಅವರ ಕಾಲದ ಶಾಸನ ಒಂದರಲ್ಲಿ ಮಾತ್ರ ಈ ವಿಚಾರ ಕಂಡುಬಂದಿದೆ.

ಇಂಥಹದ್ದೇ ಇನ್ನೊಂದು ಬದಲಾವಣೆಯನ್ನು ನಾಡಾಳಿತ ಕುರಿತಂತೆ ಸೇವುಣ ಅರಸರು ಜಾರಿಗೆ ತಂದರು. ಮಹಾಸಾಮಂತ ಮತ್ತು ಮಹಾಮಂಡಳೇಶ್ವರ ಜಾಗದಲ್ಲಿ ಸರ್ವಾಧಿಕಾರಿಗಳು ನೇಮಕವಾದರು. ಕ್ರಿ.ಶ.೧೨೭೯ರ ತೇದಿಯ ಹಗರಟಗಿ ಶಾಸನವು[೧೭೮]. ನಿಯೋಗಾಧಿಪತಿ ಜಯತಪಳ ದೇವನ ರಾಜ್ಯಭ್ಯರೆಂದು ಕರಣಕಾರಣನಮಪ್ಪ ಹಗರಟ್ಟಿಗೆ-೩೦೦ರ ಸರ್ವಾಧಿಕಾರಿ ಪಾರಿಸಸೆಟ್ಟಿಯರುಂ ಎಂಬ ಉಲ್ಲೇಖ ನೀಡುತ್ತದೆ. ಇಂಥ ಉದಾಹರಣೆ ಈ ಜಿಲ್ಲೆಯ ಪ್ರಾಚೀನ ವಿಭಾಗಗಳಿಗೆ ಸಂಬಂಧಿಸಿದಂತೆ ಸಿಗುವುದು ಸಹ ಇದೊಂದೆ. ಬಹುಶಃ ತುಂಬಾ ಶತಮಾನಗಳ ನಂತರ ಆಡಳಿತ ವ್ಯವಸ್ಥೆಯಲ್ಲಿ ಪರಿಣಾಮಕಾರಿಯಾದ ಬದಲಾವಣೆಗಳು ಸೇವುಣರ ಕಾಲದಲ್ಲಿ ಘಟಿಸಿದವೆಂದು ಅಭಿಪ್ರಾಯಿಸಲಾಗುತ್ತದೆ.

ಮಹಾಸಾಮಂತ, ಮಹಾಮಂಡಳೇಶ್ವರರಿಗೂ ಸರ್ವಾಧಿಕಾರಿಗೂ ಇರುವ ಮುಖ್ಯ ವ್ಯತ್ಯಾಸವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಮಹಾಸಾಮಂತ ಮತ್ತು ಮಹಾಮಂಡಳೇಶ್ವರರು ಹೆಚ್ಚಾಗಿ ಒಂದು ನಾಡಿನ ವ್ಯಾಪ್ತಿಗೆ ಸೀಮಿತರಾಗಿದ್ದಾರೆ. ಸರ್ವ್ವಾಧಿಕಾರಿ ಹಲವಾರು ನಾಡುಗಳ ಆಡಳಿತ ನೋಡಿಕೊಳ್ಳಬೇಕಿತ್ತು. ಇದರಿಂದಾಗಿ ಸಹಜವಾಗಿಯೇ ಆಡಳಿತದ ಮೇಲಿನ ಹಿಡಿತ ಸಡಿಲಗೊಂಡಿತು. ಅಲ್ಲದೇ ಇದು ಸೇವುಣರ ರಾಜ್ಯನಾಶಕ್ಕೆ ಕಾರಣಸಹಿತವಾದ ಬದಲಾವಣೆಯಾದವು ಎಂಬ ಅಭಿಪ್ರಾಯಗಳಿವೆ[೧೭೯]. ಮಹಾಮಂಡಳೇಶ್ವರರು ಹಾಗೂ ಮಹಾಸಾಮಂತರಿಂದ ಆಡಳಿತ ವ್ಯವಸ್ಥೆ ಕೇಂದ್ರ ಮಂತ್ರಿಮಂಡಳದಲ್ಲಿಯೇ ವಿಪರೀತವಾಗಿ ಕೇಂದ್ರೀಕರಣಗೊಂಡಿದ್ದರಿಂದ ಸ್ಥಳೀಯವಾದ ವ್ಯವಸ್ಥೆಯು ತುಂಬಾ ನಿರಾಸಕ್ತಿಯನ್ನು ಹೊಂದಿದವು. ಇದರ ಪರಿಣಾಮದಿಂದಾಗಿಯೇ ಉತ್ತರದ ಮುಸ್ಲಿಂರ ದಾಳಿಗಳು ಸೇವುಣ ರಾಜ್ಯವನ್ನು ವೇಗವಾಗಿ ಬಲಹೀನಗೊಳಿಸುವಲ್ಲಿ ಯಶಸ್ವಿಯಾದವು ಎಂಬ ಹಿನ್ನೆಲೆಯಲ್ಲಿ ಇಂಥ ಅಭಿಪ್ರಾಯಗಳು ವ್ಯಕ್ತವಾಗಿವೆ.

ಮಂತ್ರಿಮಂಡಳದ ಈ ಸದಸ್ಯರನ್ನು ಯಾವ ಅರ್ಹತೆಯ ಮೇಲೆ ನಿರ್ಧರಿಸಲಾಗುತ್ತಿತ್ತು ಎಂಬುದು ತಿಳಿದುಬರುವುದಿಲ್ಲ. ಅಲ್ಲದೇ ಒಬ್ಬನಲ್ಲಿಯೇ ಹೆಚ್ಚು ಶಾಖೆಗಳು ಅಡಕವಾಗಿರುವ ಅಭಿಪ್ರಾಯಗಳಿವೆ[೧೮೦]. ಅಂಥದ್ದೇ ವಿವರಗಳನ್ನು ಸಹ ಈ ಜಿಲ್ಲೆಯ ಪ್ರಾಚೀನ ಆಡಳಿತಕ್ಕೆ ಸಂಬಂಧಿಸಿದಂತೆ ಗುರುತಿಸಬಹುದು. ಕ್ರಿ.ಶ. ೧೧೩೭ರ ತೇದಿಯ ಸಿರಿವಾಳ ಶಾಸನವು ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಧಾನಂ ಸೇನಾಧಿಪತಿ ಕಡಿತವೆರ್ಗ್ಗಡೆ ಕಂನಡಸನ್ಧಿವಿಗ್ರಹಿ ಹಿರಿಯದಂಡನಾಯಕ ಕಾಶಿಮರಸನೆಂದು[೧೮೧]. ಕ್ರಿ.ಶ.೧೧೪೩ರ ಸಂಗಮ ಶಾಸನವು ಪ್ರತಾಪಚಕ್ರವರ್ತಿ ಜಗದೇಕಮಲ್ಲದೇವರ ಮಹಾಪ್ರಧಾನಂ ಸೇನಾಪತಿ ಕಡಿತವೆರ್ಗ್ಗಡೆ ಕನ್ನಡ ಸಂಧಿವಿಗ್ರಹಿ ಹಿರಿಯದಂಡನಾಯಕ ಬಂಮಣಯ್ಯ ಎಂಬ ಉಲ್ಲೇಖವು[೧೮೨]. ಒಬ್ಬ ಅಧಿಕಾರಿಯು ಹಲವು ಬಗೆಯ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿದ್ದನೆಂದು ತಿಳಿಯಲು ಬಹು ಮುಖ್ಯ ಸಂಗತಿಗಳಾಗಿ ತೋರುತ್ತವೆ. ಆದರೆ ಈ ಹುದ್ದೆಗಳು ಕ್ರಮವಾಗಿ ಪಡೆಯುತ್ತಾ ಹೋದ(ಬಡ್ತಿ) ಹುದ್ದೆಗಳೇ ಅಥವಾ ಒಂದೇ ಕಾಲದಲ್ಲಿ ಅವುಗಳನ್ನೆಲ್ಲ ನಿರ್ವಹಿಸುತ್ತಿದ್ದರು ಎಂಬುದರ ಬಗೆಗೆ ಸ್ಪಷ್ಟತೆ ಇಲ್ಲ.

ಹಲವಾರು ಹುದ್ದೆಗಳನ್ನು ನಿರ್ವಹಿಸಿ ಈ ಭಾಗದ ಕೀರ್ತಿ ಪತಾಕೆಯನ್ನು ಹಾರಿಸಿದ ದಂಡನಾಯಕ ರವಿಯಣಭಟ್ಟನ ಕುರಿತು ಅಪರೂಪವೆನ್ನಬಹುದಾದ ಉದಾಹರಣೆಯೊಂದು ಈ ಪ್ರದೇಶದಲ್ಲಿರುವ ಶಾಸನದಲ್ಲಿ ಕಂಡುಬಂದಿದೆ. ಮೂರು ಜನ ಕಲ್ಯಾಣ ಚಕ್ರವರ್ತಿಗಳಿಗೆ ನಿಷ್ಠಾವಂತನಾಗಿ ದಕ್ಷತೆಯಿಂದ ಸೇವೆ ಸಲ್ಲಿಸಿದ ರವಿಗಚಮೂಪನು ಚಕ್ರವರ್ತಿ ಅಹವಮಲ್ಲನನ್ನು ವಿದ್ಯಾವೈಭವದಿಂದ ಮೆಚ್ಚಿಸಿ ಕೇವಲ ಚಮೂಪನೆಂದೆನಿಸಿಕೊಂಡ ಈತ ಅಧಿಕಾರಿಗಳ ಮೇಲಿನ ಅಧಿಕಾರವಾದ ಲಾಳಸಂಧಿವಿಗ್ರಹಿ ಪದವಿಯನ್ನು ಪಡೆದ. ಆರನೆಯ ವಿಕ್ರಮಾದಿತ್ಯನನ್ನು ಒಲಿಸಿಕೊಂಡು ಸಕಲ ರಾಜ್ಯ ಚಿಹ್ನೆಗಳನ್ನು ಪಡೆದ. ಹಂತಹಂತವಾಗಿ ಚಮೂಪತಿ ಸ್ಥಾನದಿಂದ ಲಾಳಸಂನ್ಧಿವಿಗ್ರಹಿಯಾಗಿ, ಹೇರಿಲಾಳಸನ್ಧಿವಿಗ್ರಹಿಯಾಗಿ ಹಾಗೂ ದಂಡನಾಯಕನಾಗಿ ಅಧಿಕಾರ ಸ್ಥಾನಗಳಲ್ಲಿ ಮೇಲೇರಿ ಶ್ರೀಮನ್ಮಹಾಪ್ರಧಾನ ಹೇರಿಲಾಳ ಸನ್ಧಿವಿಗ್ರಹಿ ದಂಡನಾಯಕನೆನೆಸಿಕೊಂಡ ಮಾಹಿತಿಗಳು ತುಂಬಾ ಸುದೀರ್ಘವಾಗಿಯೇ ಐವೂರಿನ ಕ್ರಿ.ಶ.೧೦೭೮ರ ಶಾಸನದಲ್ಲಿ ದಾಖಲಾಗಿವೆ[೧೮೩]. ಈತನ ನಿರ್ದೇಶನದ ಮೇರೆಗೆ ಪೆರ್ಗಡೆ ನಾಗವರ್ಮ ಐವೂರಿನಲ್ಲಿ ಸ್ವಯಂಭು ಶಿವದೇವಾಲಯ ನಿರ್ಮಾಣ ಮಾಡಿ ಲೋಕ ವಿಖ್ಯಾತಿ ಹೊಂದಿದ ಎಂಬ ವಿವರಗಳು ಈ ಶಾಸನದಲ್ಲುಂಟು. ಇದರಲ್ಲಿ ಉಲ್ಲೇಖವಾದ ಚಮೂಪ ಇದು ಸಾಮಾನ್ಯ ಸೈನ್ಯಾಧಿಕಾರಿಯ ಪದವಿಯನ್ನು ಮಾತ್ರ ಸೂಚಿಸುತ್ತದೆ. ಈ ಹುದ್ದೆಯಲ್ಲಿದ್ದ ರವಿಯಗಣಭಟ್ಟನು ತುಂಬಾ ವಿಸ್ತಾರವಾದ ಚಾಲುಕ್ಯ ರಾಜ್ಯದ ವಿದೇಶಿ ವ್ಯವಹಾರಗಳನ್ನು ನಿಭಾಯಿಸುವ ಮಟ್ಟಕ್ಕೆ ಬೆಳೆದಿರುವುದು ಆತನ ಸಾಮರ್ಥ್ಯವನ್ನು ತೋರಿಸುತ್ತದೆ.

ಕ್ರಿ.ಶ.೧೧೮೨ರ ತೇದಿಯ ಹೆಮ್ಮಡಿಗೆ ಶಾಸನವು[೧೮೪]. ನೂರ್ಮಡಿ ವಂಶವರ್ಧನ ವಿಭುತ್ವ ಚಮೂಪತಿ ನಾಗವರ್ಮ್ಮನಂ ಎಂದು ಉಲ್ಲೇಖಿಸುತ್ತದೆ.

ಕೆಲವು ಶಾಸನಗಳಲ್ಲಿ ಉಲ್ಲೇಖವಾದಂತೆ ಮಹಾಮಂಡಳೇಶ್ವರ ಮತ್ತು ಮಹಾಸಾಮಂತರಿಗೂ ಹಾಗೂ ಅವರ ಮಡದಿಯರಿಗೂ ಸಹ ಅಧಿಕಾರಿಗಳು ತಮ್ಮ ನಿಷ್ಠೆ ವ್ಯಕ್ತಪಡಿಸಿ ಆ ಹುದ್ದೆಯನ್ನು ನಿರ್ವಹಿಸುತ್ತಿದ್ದುದ್ದರು ಎಂಬ ವಿವರಗಳು ದಾಖಲಾಗಿವೆ. ಕ್ರಿ.ಶ.೧೧೩೦ರ ಸಿರಿವಾಳ ಗ್ರಾಮದ ಶಾಸನವು[೧೮೫]. ಶ್ರೀಮನ್ಮಹಾಮಂಡಳೇಶ್ವರಂ ಸೆವಿದೇವರಸರವ್ವೆ ಲೋಕಾದೇವಿಯುಮವರ ಮಹಾಪ್ರಧಾನಂ ಸಗರವವನ್ನುರುಂಬಾಡದ ಹೆರ್ಗ್ಗಡೆ ದಣ್ಣನಾಯಕಂ ಅಲ್ಲಹುಲಿಯರಸರಂ ಎಂದು ಉಲ್ಲೇಖಿಸಿದೆ.

ದಂಡನಾಯಕ ಎಂಬ ವಿಶೇಷಣ ಸಾಮಾನ್ಯವಾಗಿ ಎಲ್ಲ ಆಡಳಿತಾಧಿಕಾರಿಗೆ ಬಳಕೆಯಾಗಿರುವುದನ್ನು ಗಮನಿಸಿದರೆ ಅದೊಂದು ಆಡಳಿತ ಸೇವೆಯಲ್ಲಿನ ಅರ್ಹತೆಯಾಗಿರಬೇಕೆನಿಸುತ್ತದೆ. ಪ್ರತಿಯೊಬ್ಬರ ಸಾಮರ್ಥ್ಯವನ್ನು ಸಹಜ ರೀತಿಯಲ್ಲಿ ಗುರುತಿಸಲು ಸೈನ್ಯ ಕ್ಷೇತ್ರವು ಯೋಗ್ಯ ತಾಣವಾಗಿರುವುದರಿಂದ ಮಂತ್ರಿಮಂಡಳದ ಸದಸ್ಯರಲ್ಲಿ ಅನೇಕರು ಸೇನಾ ಸೇವೆಯಿಂದ ಬಂದಿರುವುದರ ಅರ್ಥವಿದೆ ಎಂಬ ಅಭಿಪ್ರಾಯಗಳಿವೆ[೧೮೬]. ದಂಡನಾಯಕನೆಂದು ಬಿರುದಾಂಕಿತ ಹಲವಾರು ಅಧಿಕಾರಿಗಳ ಬಗೆಗೆ ಈ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಪ್ರಾಚೀನ ಶಾಸನ ಆಕರಗಳು ಮಾಹಿತಿ ನೀಡುತ್ತವೆ. ಅಲ್ಲದೇ ಆ ಹುದ್ದೆಯ ಜೊತೆಗೆ ಶ್ರೀಕರಣ ಎಂಬ ವಿಶೇಷಣವು ಉಂಟು. ಇದು ದಾಖಲೆಗಳ ಮುಖ್ಯಾಧಿಕಾರಿ ಎಂಬ

ಅರ್ಥದಲ್ಲಿ ಪ್ರಯೋಗವಾಗುತ್ತಿತ್ತು ಎಂದೆಣಿಸಿದೆ. ಕ್ರಿ.ಶ. ೧೦೬೫ರ ಏವೂರು ಶಾಸನವು ಶ್ರೀಕರಣ ಸೋಮರಸ ಎಂಬ[೧೮೭] ಉಲ್ಲೇಖವನ್ನು ನೀಡುತ್ತದೆ. ಆದರೆ ಈ ತರಹದ ಅಧಿಕಾರಿಗಳೆಲ್ಲರೂ ದಂಡನಾಯಕರಾಗಿಗಿರುತ್ತಿದ್ದರೆಂದು ಹೇಳಲಾಗದು. ಕೇವಲ ಅಂಥ ಹುದ್ದೆಯ ಜವಾಬ್ದಾರಿ ಹೊಂದಿದ್ದ ಶ್ರೀಕರಣ ವೈಜಯ್ಯ ಎಂಬುವರರು ಕುರಿತು ಮುದನೂರಿನ ಶಾಸನವೊಂದು ಉಲ್ಲೇಖಿಸುತ್ತದೆ[೧೮೮].

ಇನ್ನು ಕೆಲವು ಶಾಸನಗಳು ಅಚ್ಚುಪನ್ನಾಯದಧಿಷ್ಟಾಯಕ ಎಂದು ಸಂಬೋಧಿಸಿವೆ. ಇವರು ಅಚ್ಚುಪನ್ನಾಯ ತೆರಿಗೆಯ ಪ್ರಕಾರದ ಮೇಲೆ ವಿಶೇಷವಾಗಿ ನೇಮಕವಾದಂತಹ ಅಧಿಕಾರಿಗಳಾಗಿದ್ದರು. ಕ್ರಿ.ಶ.೧೧೦೮ರ ತೇದಿಯ ಏವೂರ ಶಾಸನವು[೧೮೯]. ಶ್ರೀಮದಚ್ಚುಪನ್ನಾಯದಷ್ಟಾಯಕ ದಂಡನಾಯಕ ಮುದ್ದರಸನೆಂದು ಮತ್ತು ಕ್ರಿ.ಶ. ೧೧೧೨ರ ತೇದಿಯ ಅನ್ಸೂರ(ಯಾದಗಿರಿ ತಾಲೂಕು) ಶಾಸನವು ಪನ್ನಾಯದಧಿಷ್ಟಾಯಕಂ ದಂಡನಾಯಕಂ ಇಂದ್ರಭಟ್ಟಯ್ಯಾನನ್ನು ಕುರಿತು ಮಾಹಿತಿ ನೀಡುತ್ತದೆ[೧೯೦]. ಹಡಪದ ದಂಡನಾಯಕ ಎಂಬ ಇನ್ನೊಂದು ಉಲ್ಲೇಖವು ಸಹ ಈ ಭಾಗದಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು. ಹಡಪವಳವು ಚೀಲವನ್ನು ಅಥವಾ ಕರಂಡಕವನ್ನು ಹಿಡಿಯುವವ ಎಂಬ ಅರ್ಥವನ್ನು ನೀಡುತ್ತದೆ. ಅರಸನ ಅಥವಾ ಉಚ್ಚಾಧಿಕಾರಿಯ ತಾಂಬೂಲದ ಚೀಲವನ್ನು ಹಿಡಿಯುವ ಅಧಿಕಾರಿ ಎಂಬ ಅರ್ಥವಿದೆ[೧೯೧]. ಕ್ರಿ.ಶ.೧೦೮೧ರ ಕಾಲದ ಹಿರಿಯಹೆಬ್ಬಾಳ ಶಾಸನವು[೧೯೨]. ಹಡಪವಳಂ ದಣ್ಣನಾಯಕ ಎಂದು ವಿವರ ನೀಡಿರುವುದನ್ನು ಗಮನಿಸಬಹುದು. ಆದರೆ ಶಾಸನದ ಭಾಗವು ತೃಟಿತವಾಗಿದ್ದರಿಂದ ಅವನು ಯಾವ ಹೆಸರು ಹೊಂದಿದ್ದಿರಬಹುದೆಂದು ತಿಳಿಯಲಾಗದು.

ಕೆಲವೊಮ್ಮೆ ದಂಡನಾಯಕರು, ಮಹಾಮಂಡಳೇಶ್ವರ ಮಹಾಸಾಮಂತರಸರ ಮಹಾಪ್ರಧಾನ ದಂಡನಾಯಕರಿಗಿಂತ ಹೆಚ್ಚಿನ ಧೈರ್ಯಶಾಲಿಗಳಾಗಿದ್ದರು ಹಾಗೂ ಅನೇಕ ಪ್ರಕರಣಗಳಲ್ಲಿ ನಿರ್ಣಾಯಕ ಪಾತ್ರವಹಿಸುತ್ತಿದ್ದರೆಂದು ಶಾಸನ ಉಲ್ಲೇಖಗಳಿಂದ ತಿಳಿಯಬಹುದು. ಅಂಥ ಉದಾಹರಣೆಯೊಂದು ಸುರಪುರ ತಾಲೂಕಿನ ಹೆಮ್ಮಡಗಿಯ ಕ್ರಿ.ಶ.೧೧೮೨ರ ಶಾಸನದಲ್ಲಿ ಉಲ್ಲೇಖವಾಗಿದೆ. ಬಂಮ್ಮಿದೇವ ದಂಡಾಧಿನಾಥಂ ಶ್ರೀಮನುಮಹಾಮಂಡಳೇಶ್ವರಂ ಅಲ್ಲಹುಲಿದೇವರಸರ ಮೇಲೆ ಉಖ್ವೇಡಿಯಾಗಿ(ದಾಳಿ ಅಥವಾ ಎಗರು) ಬಂದು ಸೋಲಿಸಿ ದೇವಾಪುರದಲ್ಲಿ ಬೀಡುಬಿಟ್ಟನೆಂಬ ವಿವರವು ದಾಖಲಾಗಿವೆ[೧೯೩]. ಆದರೆ ಅವನೊಬ್ಬ ಸಾಮಾನ್ಯ ದಂಡನಾಯಕನಾಗಿದ್ದನೋ ಅಥವಾ ಆ ಹೆಸರನ್ನು ಪಡೆದಿದ್ದರೂ ಅವನೇ ಸೈನ್ಯದ ಮುಖ್ಯ ಕಮಾಂಡರ(ಮಹಾದಂಡನಾಯಕ) ಆಗಿದ್ದನು ಎಂಬುದು ನಿಖರವಾಗಿ ತಿಳಿಯಲಾರದ ವಿಷಯವಾಗಿದೆ.

### ನಾಡಾಡಳಿತ ಅಥವಾ ಪ್ರಾಂತಿಯ ಆಡಳಿತ

ರಾಜನ ಅಧೀನದಲ್ಲಿದ್ದರೂ ತಮ್ಮದೇ ಆದ ಸ್ಥಾನಮಾನ ಹಾಗೂ ಆಡಳಿತ ವ್ಯವಸ್ಥೆಯನ್ನು ಪ್ರಾಂತೀಯ ಆಡಳಿತಗಳು ಹೊಂದಿದ್ದವು. ಮುಖ್ಯವಾಗಿ ಮಹಾಮಂಡಳೇಶ್ವರರು ಇಂಥ ಆಡಳಿತದ ಸಂಪೂರ್ಣ ಜವಾಬ್ದಾರರಾಗಿದ್ದರು. ಸಾಮ್ರಾಜ್ಯವನ್ನು ನಾಡು, ಪ್ರಾಂತ, ವಿಷಯ ಹಾಗೂ ಕಂಪಣಗಳೆಂದು

ವಿಭಾಗಿಸಿ ಅವುಗಳಿಗೆ ತಮ್ಮ ನಿಷ್ಠರನ್ನು ಅಥವಾ ವಿಧೇಯತೆ ಹೊಂದಿದ್ದ ವಂಶಪಾರಂಪರ್ಯದಿಂದ ಕೂಡಿದ ಮನೆತನಗಳನ್ನೋ ಇಂಥ ಈ ಆಡಳಿತದ ಸ್ಥಾನಕ್ಕೆ ನೇಮಕ ಮಾಡುತ್ತಿದ್ದರು. ಅವರಲ್ಲಿ ಹೆಚ್ಚಿನ ಸಂಖ್ಯೆಯು ಅಧಿಕಾರಿಗಳಲ್ಲಿ ನಿರ್ವಹಿಸುತ್ತಿದ್ದವು. ರಾಜನಿಗೆ ನಿಷ್ಠರಾದ ಮನ್ನೆಯರು ಮತ್ತು ಮಹಾಮಂಡಳೇಶ್ವರರು ಪ್ರಮುಖರಾಗಿದ್ದರು. ಅವರನ್ನೆಲ್ಲಾ ಮುಖ್ಯರಾಜನ ಪಾದಪದ್ಮೋಪಜೀವಿ ಮಹಾಸಾಮಂತರೆಂದು ಶಾಸನಗಳು ಉಲ್ಲೇಖಿಸಿವೆ. ಅವರು ಸಹ ರಾಜನಂತೆ ಯಥೇಚ್ಛ ಬಿರುದುಗಳನ್ನು ಹೊಂದಿದ್ದರು. ಸಾಮಾನ್ಯವಾಗಿ ಅವರನ್ನು ಪಂಚಮಹಾಶಬ್ದ ಎಂಬ ಅಧಿಕಾರ ಸೂಚಕಗಳಿಂದ ಹೆಚ್ಚಾಗಿ ಉಲ್ಲೇಖಿಸಲಾಗಿದೆ. ಈ ಶಬ್ದದ ಕುರಿತು ಹಲವು ಜಿಜ್ಞಾಸೆಗಳು ವ್ಯಕ್ತವಾಗಿವೆ[೧೪]. ಇವು ಅವರಿಗೆ ಸಲ್ಲುವ ಗೌರವ ವಾದ್ಯಗಳಾಗಿದ್ದವು. ಅಲ್ಲದೇ ಶೌರ್ಯ ಮತ್ತು ಅಧಿಕಾರಿ ಸೂಚಕವಾದ ಪಂಚವಸ್ತು ಗೌರವಗಳನ್ನೇ ಇಲ್ಲಿ ಪಂಚಮಹಾಶಬ್ದವೆನ್ನಲಾಗಿದೆ. ಇಲ್ಲಿ ಶಬ್ದವನ್ನು ಧ್ವನಿ/ವಾದ್ಯ ಎಂಬರ್ಥದಲ್ಲಿ ತೆಗೆದುಕೊಳ್ಳದೇ ವಸ್ತುವನ್ನು ಸೂಚಿಸುವ ಶಬ್ದಾರ್ಥವಾಗಿ ತೆಗೆದುಕೊಳ್ಳಬೇಕು ಎಂಬ ಅಭಿಪ್ರಾಯಗಳಿವೆ[೧೫].

ಈ ರೀತಿಯ ಸೂಚಕಗಳಿದ ಉಲ್ಲೇಖಿತ ಕೆಲವು ಮಹಾಮಂಡಳೇಶ್ವರ ಹಾಗೂ ಮಹಾಸಾಮಂತರ ಉಲ್ಲೇಖಗಳು ಈ ಪ್ರದೇಶದ ವ್ಯಾಪ್ತಿಯಲ್ಲಿ ಸಿಕ್ಕಿರುವ ಪ್ರಾಚೀನ ಶಾಸನಗಳಲ್ಲಿ ವ್ಯಕ್ತವಾಗಿವೆ. ಮುಖ್ಯವಾಗಿ ಸಗರನಾಡಿನಲ್ಲಿ ಹೈಹಯ ಮಹಾಮಂಡಳೇಶ್ವರರು ಆಡಳಿತ ನಿರ್ವಹಿಸುತ್ತಿದ್ದಾರೆ. ಕಾಲಾನಂತರ ಹಗರಟಗಿ ನಾಡು ಎಲೆಮೇಳ ಶಿಲಾಹಾರರ ಈ ಮನ್ನೆಯದ ಆಳ್ವಿಕೆಗೆ ಒಳಗಾಯಿತು. ಕಲ್ಲಕೆಳಗು ನಾಡಿನ ಆಡಳಿತವನ್ನು ಆರನೆಯ ವಿಕ್ರಮಾದಿತ್ಯನ ಮಗ ಜಗದೇಕಮಲ್ಲ ಬಿರುದಾಂಕಿತ ಮಹಾಮಂಡಳೇಶ್ವರ ಇರೆವಬೆಡಂಗ ಸತ್ಯಾಶ್ರಯನು ನಿರ್ವಹಿಸುತ್ತಿರುವ ಬಗೆಗೆ ಶಾಸನಗಳು ಮಾಹಿತಿ ನೀಡುತ್ತವೆ. ಆ ಕುರಿತು ಈಗಾಗಲೇ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕ್ರಿ.ಶ.೧೦೬೭ರ ತೇದಿಯ ಸಂಗಮದ ಶಾಸನವು ಈ ಸಂದರ್ಭದಲ್ಲಿ ವಿಶೇಷವೆನಿಸುತ್ತದೆ[೧೬] ಶ್ರೀಮನ್ಮಹಾಮಂಡಳೇಶ್ವರ ಗೊಗ್ಗರರ್ ಸಗರಮ್ಮೈನೂರುಮನುಭಯಸಾಮ್ಯಂಬೆರೆದು ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತವಿರೆ ಎಂದು ಉಲ್ಲೇಖಿಸಿದೆ. ಇಲ್ಲಿ ಉಭಯಸ್ವಾಮ್ಯ ಎನ್ನುವುದು ಎರಡು ರೀತಿಯ ಒಡೆತನ ಎಂಬ ಅರ್ಥದಲ್ಲಿ ವ್ಯಕ್ತಗೊಳ್ಳುತ್ತದೆ. ಅಂದರೆ ಬಹುಶಃ ಇಲ್ಲಿ ತಿಳಿಯಬಹುದಾದ ಸಂಗತಿ ಎಂದರೆ ಈತನು ರಾಜ ವಿಕ್ರಮಾದಿತ್ಯನಿಗೆ ನಿಷ್ಠನಾಗಿದ್ದರೂ ಅದೇ ಕಾಲಕ್ಕೆ ತಾನೇ ಹೆಚ್ಚಿನ ಅಧಿಕಾರ ಒಡೆತನ ಹೊಂದಿದ್ದನೆಂದು ತರ್ಕಿಸಲು ಅವಕಾಶವಿದೆ. ಸ್ವಲ್ಪಮಟ್ಟಿಗೆ ಉಳಿದೆಲ್ಲ ಅಧಿಕಾರ ವರ್ಗಗಳಿಗಿಂತ ಈತನು ಹೆಚ್ಚಿನ ಸ್ವಾತಂತ್ರ್ಯ ಪಡೆದಿರಬಹುದು.

ಸಾಮಾನ್ಯವಾಗಿ ಮಹಾಸಾಮಂತ ಮತ್ತು ಮಹಾಮಂಡಳೇಶ್ವರರು ನಾಡಿನ ಅಧಿಕಾರದಲ್ಲಿ ಪ್ರಮುಖರಾಗಿದ್ದರೂ ಅವರ ಅಧಿಕಾರ ವ್ಯಾಪ್ತಿಯ ಸ್ವರೂಪ ಮಾತ್ರ ಸ್ಪಷ್ಟಗೊಳ್ಳುವುದಿಲ್ಲ. ಆದರೂ ಅವರಿಬ್ಬರೂ ಭಿನ್ನರೆಂದು ಅಭಿಪ್ರಾಯಿಸಲಾಗಿದೆ[೧೭]. ಮಹಾಸಾಮಂತರೂ ನೇರವಾಗಿ ರಾಜ ಅಥವಾ ಕೇಂದ್ರದಿಂದ ನೇಮಕವಾದ ಅಧಿಕಾರಿಗಳು ಎಂಬ ಸ್ಥೂಲ ಅಭಿಪ್ರಾಯಗಳಿವೆ. ಆದರೂ ಅವರು ಸಹ ಪಂಚಮಹಾಶಬ್ದ ಎಂಬ ಬಿರುದುಗಳನ್ನು ಹೊಂದಿದ್ದರೆಂದು ತಿಳಿದುಬರುತ್ತದೆ.

ಮನ್ನೆಯ ಮಹಾಮಂಡಳೇಶ್ವರರ ಕುರಿತು ಕೆಲವು ವಿಚಾರಗಳಿವೆ. ಅಧಿರಾಜನ ಆಶ್ರಿತರಾಜರಿಗೆ ಮನ್ನೆಯರೆನ್ನುತ್ತಿದ್ದರೆಂಬ ಅಂಶವು ಸ್ಪಷ್ಟವಾಗುತ್ತದೆ. ಪ್ರಾರಂಭದಲ್ಲಿ ಆಶ್ರಿತರಾಜರು(ಮನ್ನೆಯರು) ಮಾತ್ರ ಮಹಾಮಂಡಳೇಶ್ವರರೆನಿಸಿದ್ದು ನಂತರ ಅರಸನಿಂದ ನಿಯಮಮಿತರಾದ ಇತರರಿಗೂ ಅದು ಅನ್ವಯಿಸಿತೆಂದು ಅಭಿಪ್ರಾಯಿಸಲಾಗಿದೆ[೯೮]. ಅಂಥ ಕೆಲವು ಉದಾಹರಣೆಗಳು ಪ್ರಸ್ತುತ ಅಧ್ಯಯನ ಆಕರಗಳಲ್ಲಿಯೂ ವ್ಯಕ್ತವಾಗಿವೆ. ಇಡೀ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿಯೇ ಕಾಲಮಾನದ ದೃಷ್ಟಿಯಿಂದ ಎರಡನೆಯ ಅತಿ ಪ್ರಾಚೀನ ಶಾಸನವಾದ ಮಲ್ಲಾ ಬಿ.(ಸುರಪುರ ತಾಲೂಕು)ಯಲ್ಲಿ ದೊರಕಿರುವ ಕ್ರಿ>ಸ.೧೦೧೪ರ ತೇದಿಯ ಶಾಸನದಲ್ಲಿ ಹೈಹಯ ಮಹಾಮಂಡಳೇಶ್ವರರ ಚಂದರಸನನ್ನು ಸಮಧಿಗತ ಪಂಚ ಮಹಾಶಬ್ದ ಮಹಾಸಾಮಂತ–ಮನ್ನೆಯವೀರಂ ಎಂದು ಉಲ್ಲೇಖಿಸಲಾಗಿದೆ[೯೯]. ಇದೇ ತಾಲೂಕಿನ ಕ್ರಿ.ಶ.೧೦೫೪ರ ಶಾಸನವು[೨೦೦]. ಹೈಹಯ ಮಹಾಮಂಡಳೇಶ್ವರನಾದ ಹೈಹಯ ರೇವರಸರಿಗೆ ಸಂಬಂಧಿಸಿದಂತೆ ತೆರೆದುಂಬಾಡದ ಮುನ್ನೆಯಸ್ವಾಮ್ಯಂ ಸಗರ–೩೦೦ರ ಬಳಿಯ ನಗರವೊಂದ ಮಂನ್ನೆಯ ಸಾಮ್ಯಾಮಿಂತಿನಿತುಮ ಎಂಬ ಉಲ್ಲೇಖಗಳು ಮೇಲಿನ ಹೇಳಿಕೆಗಳನ್ನು ಸಮರ್ಥಿಸುತ್ತಿವೆಯೆಂದು ಅಭಿಪ್ರಾಯಿಸಬಹುದು.

ನಾಡಿನ ಆಡಳಿತವು ಸಹ ಕೇಂದ್ರಾಡಳಿತ ಮಾದರಿಯಲ್ಲಿಯೇ ರಚನೆಗೊಂಡಿತ್ತು. ಮಹಾಮಂಡಳೇಶ್ವರ ಅಥವಾ ಮಹಾಸಾಮಂತರ ಕೈಕೆಳಗೆ ಪೆರ್ಗಡೆ(ಹೆಜ್ಜುರ್ಂಕದ ವೆರ್ಗ್ಗಡೆ ದಂಡನಾಯಕ ಪೆಜ್ಜುರ್ಂಕರ ಸುಂಕವೆರ್ಗ್ಗಡೆ ಮತ್ತು ಸೇನಭೋವಗಳ ಉಲ್ಲೇಖವು ಈ ನಾಡಿನ ಪ್ರಾಚೀನ ಶಾಸನಗಳಲ್ಲಿ ಉಲ್ಲೇಖವಾಗುತ್ತದೆ. ಕ್ರಿ.ಶ.೧೦೭೭ರ ತೇದಿಯ ಏವೂರಿನ ಶಾಸನವು ಪೆರ್ಗ್ಗಡೆ[೨೦೧]. ನಾಗವರ್ಮನನ್ನು ಉಲ್ಲೇಖಿಸುತ್ತದೆ. ಅವನು ದಂಡನಾಯಕ ರವಿಗಣ ಚಮೂಪತಿಯ ಸೂಚನೆಯ ಮೇರೆಗೆ ಏವೂರಿನಲ್ಲಿ ಸ್ವಯಂಸೋಮೇಶ್ವರ ದೇವಾಲಯ ರಚಿಸುತ್ತಾನೆ. ಈ ಉದಾಹರಣೆ ಅಲ್ಲದೇ ಇನ್ನು ಕೆಲವು ಉಲ್ಲೇಖಗಳು ಈ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಕಂಡುಬಂದಿವೆ. ಸಗರ ನೂರವ್ವೆನೂರುಂಬಾಡದ ಹೆರ್ಜುಂಕ ವೆರ್ಗ್ಗಡೆ[೨೦೨]. ಕಂಚರಸ, ಪೆಜ್ಜುರ್ಂಕದ ಸುಂಕದ ವೆರ್ಗ್ಗಡೆ ಮಾದೆಯನಾಯಕ[೨೦೩]. ಹೆಗ್ಗಡೆ ಬಾಚರಸ ಹಾಗೂ ಹೆಗ್ಗಡೆ ಅಳುಪರಸರ ಮತ್ತು ಚಿಮ್ಮರಸರ ಕುರಿತು[೨೦೪]. ಶಾಸನಗಳು ಇಂಥ ಹಲವು ವ್ಯಕ್ತಿಗಳನ್ನು ಉಲ್ಲೇಖಿಸುತ್ತವೆ.

ಸೇನಬೋವರ ಕುರಿತು ಕೆಲವು ಶಾಸನಗಳಲ್ಲಿ ವ್ಯಕ್ತವಾದ ಸೇನಬೋವ ಸಿರಿಯಣ[೨೦೫] ಮತ್ತು ಸೇನಭೋವ(ಸೇನಭೋಗ) ನಾಗಿಯರ[೨೦೬]ರ ಬಗೆಗೆ ಮಾಹಿತಿಗಳಿವೆ. ಮಧ್ಯಕಾಲೀನ ಶಾಸನಗಳ ಸಂದರ್ಭದಲ್ಲಿ ಶಾಸನಗಳಲ್ಲಿ ಸೇನಬೋವ ಎಂದು ಉಲ್ಲೇಖಿಸಿದ್ದರೆ ಅದು ೧೬ನೇ ಶತಮಾನದ ಹೊತ್ತಿಗೆ ಸೇನುಭೋಗ ಎಂಬ ಬದಲಾವಣೆ ಪಡೆದಿರುವುದನ್ನು ಗುರುತಿಸಬಹುದು. ಮುಂದಿನ ದಿನಗಳಲ್ಲಿ ಅದು ಶಾನಭೋಗ ಎಂಬ ಹೆಸರಿನಿಂದ ಹೆಚ್ಚು ಪ್ರಚಲಿತಗೊಂಡಿತು.

ಮೊದಮೊದಲು ಇವರೆಲ್ಲ ಸೇನಾಸೇವೆಯಿಂದ ಸಾರ್ವಜನಿಕ ಸೇವೆಗೆ ಬಂದಿರಬಹುದೆಂದು ಊಹಿಸಬಹುದಾಗಿದೆ. ಕಾರಣ ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ತಮ್ಮ ಹುದ್ದೆಗಳ ಜೊತೆಗೆ

ದಂಡನಾಯಕ ಎಂಬ ಹೆಸರಿನಿಂದಲೂ ಸಹ ತಮ್ಮನ್ನು ಕರೆದುಕೊಂಡಿದ್ದಾರೆ. ದಂಡನಾಯಕ ಎನ್ನುವುದು ಸೇನೆಗೆ ಸಂಬಂಧಿಸಿದ್ದ ಪದವಿಯಾಗಿತ್ತೆಂದು ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ.

**ಊರಾಡಳಿತ**

ಈ ವ್ಯವಸ್ಥೆಯಲ್ಲಿ ಮುಖ್ಯವಾಗಿ ಗ್ರಾಮಗಳು, ಪಟ್ಟಣಗಳು ಹಾಗೂ ಅಗ್ರಹಾರ ಘಟಕಗಳು ಮುಖ್ಯವಾಗಿವೆ. ಚಿಕ್ಕ ಚಿಕ್ಕ ಊರುಗಳು ಬೆಳೆದು ಪಟ್ಟಣಗಳಾಗಿ ಅಥವಾ ಒಂದಕ್ಕೊಂದು ಹಳ್ಳಿಗಳು ಸೇರ್ಪಡೆಗೊಂಡು ದೊಡ್ಡ ಪಟ್ಟಣಗಳಾಗಿ ಬೆಳೆದು ಬಂದಿರುವ ಸಾಧ್ಯತೆಗಳಿವೆ. ಮಾನಸಾರ ಎಂಬ ಗ್ರಂಥವು ಒಂದು ಊರು ಪುರ ಎನ್ನಿಸಿಕೊಳ್ಳಬೇಕಾದರೆ ಅವರ ಸುತ್ತಮುತ್ತ ಆರಾಮಗಳೂ, ತೋಟಗಳು ಇರಬೇಕು. ಬಹು ಜನರು ವಾಸವಾಗಿರಬೇಕು ಮಾರಾಟಗಾರರಿಂದ ಮತ್ತು ಕೊಳ್ಳುವವರಿಂದ ಕಿಕ್ಕಿರಿದು ತುಂಬಿ ಗದ್ದಲದಿಂದ ಕೂಡಿರಬೇಕು. ಏಳು ದೇವತೆಗಳ ದೇವಸ್ಥಾನಗಳಿಂದ ರಾರಾಜಿಸುತ್ತಿರಬೇಕು ಎಂದು ವಿವರಿಸುಲಾಗಿದೆ[೨೦೭]. ಗ್ರಾಮವು ಪಟ್ಟಣವೆನಿಸಿಕೊಳ್ಳಬೇಕಾದರೆ ಅಲ್ಲೊಂದು ಸಂತೆ ನೆರವೇರಬೇಕು. ಅಲ್ಲದೇ ಬ್ರಾಹ್ಮಣರಿಗಾಗಿಯೇ ದತ್ತಿಬಿಟ್ಟುಕೊಟ್ಟ ಊರು-ಪಟ್ಟಣಗಳೇ ಅಗ್ರಹಾರಗಳಾಗಿದ್ದವು. ಇವೆಲ್ಲವು ಪಟ್ಟಣ ಅಥವಾ ನಗರದ ಮುಖ್ಯ ಲಕ್ಷಣಗಳಾಗಿವೆ.

**ಪಟ್ಟಣ ಆಡಳಿತ**

ಹಲವು ಕಾರಣಗಳಿಗಾಗಿ ಚಿಕ್ಕ ಚಿಕ್ಕ ಗ್ರಾಮಗಳು ಸೇರಿ ಪಟ್ಟಣಗಳಾಗಿರಬಹುದು ಅಥವಾ ಹೊಸದಾಗಿಯೇ ಆ ಕಾರಣಕ್ಕಾಗಿ ಪಟ್ಟಣಗಳನ್ನು ನಿರ್ಮಿಸಿರುವ ಸಾಧ್ಯತೆಗಳಿವೆ. ಮುಖ್ಯವಾಗಿ ನಾಡುಗಳ ಮುಖ್ಯ ಪಟ್ಟಣಗಳು ನೆಲವೀಡುಗಳ ರಾಜಧಾನಿ ಸ್ಥಳಗಳು ಕಂಪಣ ಕೇಂದ್ರಗಳು ಪಟ್ಟಣಗಳ ಸ್ವರೂಪದಲ್ಲಿದ್ದವು. ಅಲ್ಲದೇ ಹೆಚ್ಚಿನ ವ್ಯಾಪಾರ ವಹಿವಾಟು ಹಾಗೂ ಶೈಕ್ಷಣಿಕ ಚಟುವಟಿಕೆಗಳು ತೀವ್ರಗೊಂಡಿದ್ದ ಸ್ಥಳಗಳು ಪಟ್ಟಣಗಳಾಗಿದ್ದವು ಎಂದು ಗುರುತಿಸಬಹುದು. ಅಂಥ ಕೆಲವು ವಿವರ್ಣಗಳು ಪ್ರಸ್ತುತ ಅಧ್ಯಯನ ಕೈಕೈಗೊಂಡಿರುವ ಈ ಪ್ರದೇಶಗಳಲ್ಲಿರುವ ಶಾಸನಗಳಲ್ಲಿಯೂ ಲಭ್ಯವಾಗಿರುವುದನ್ನು ಗಮನಿಸಬಹುದು. ಗ್ರೀಕ್ ಸಾಮ್ರಾಜ್ಯದಲ್ಲಿ ಅಂಥ ಪಟ್ಟಣಗಳೇ ನಗರ ರಾಜ್ಯಗಳಾಗಿ (City-State) ಬೆಳೆದು ಬಂದಿರುವ ಇತಿಹಾಸವು ನಮ್ಮಲ್ಲಿರುವ ಮಹಾಜನಪದಗಳ ಮೂಲ ಸ್ವರೂಪವು ಹೀಗೆಯೇ ಬೆಳೆದವು ಎಂಬ ವಿಚಾರ ಎಲ್ಲರಿಗೂ ತಿಳಿದು ಸಂಗತಿಗಳಾಗಿವೆ.

ಪ್ರಾಚೀನ ಸಗರನಾಡಿನ ವ್ಯಾಪ್ತಿಯಲ್ಲಿ ನಗರ ಪಟ್ಟಣಗಳ ಕುರಿತು ವಿಶೇಷ ಉಲ್ಲೇಖಗಳು ಕಂಡುಬಂದಿರುವುದನ್ನು ಗುರುತಿಸಬಹುದು. ಕ್ರಿ.ಶ. ೧೦೫೪ರ ಕೆಂಬಾವಿ ಶಾಸನವು[೨೦೮]. ತೆರೆದುಂಬಾಡದ ಮಂನ್ನೆಯ ಸ್ವಾಮ್ಯಂ ಸಗರ-೩೦೦ರ ಬಳಿಯ ನಗರವುರದ ಮಂನ್ನೆಯಸ್ವಾಮ್ಯ ಎಂಬ ಉಲ್ಲೇಖವು ಅಲ್ಲಿ ಕಟ್ಟಿದ್ದ ಹೊಸ ನಗರದ ಕುರಿತಂತೆ ಪ್ರಸ್ತಾಪಿಸುತ್ತದೆ(ಆದರೆ ಕ್ಷೇತ್ರಕಾರ್ಯದಲ್ಲಿ ಆ ಹೆಸರಿನ ಹಳ್ಳಿಯ ಇದ್ದಿರಬಹುದಾದ ಯಾವ ಸೂಚನೆಗಳು ಕಂಡುಬಂದಿಲ್ಲ). ಸಗರನಾಡಿನಲ್ಲಿದ್ದ ಪ್ರಮುಖ ಅಗ್ರಹಾರ ಮೆಲ್ದರ್ಕೆ ಅಥವಾ ಮದ್ರಕಿ[೨೦೯]ಯನ್ನು ಸಗರದರ್ಮ್ಮತು ನಗರ ಎಂದು ಕರೆಯಲಾಗಿದೆ. ಅಲ್ಲದೇ ಇದೇ ಶಾಸನದಲ್ಲಿಯೇ ಮದ್ರಕಿಯನ್ನು ದ್ವಿಜನಿಕಮಾಚಾರತ್ರ್ಯನ್ನತಮೆರ್ರುದುಂಕೆ ನಗರಕ್ಕೆ

ಎಂದು ಉಲ್ಲೇಖಿಸಿರುವುದು ಆ ಅಗ್ರಹಾರವು ಆಗಿತ್ತೆಂಬುದನ್ನು ಹಾಗೂ ಅದು ನಗರವು ಹೊಂದಿದ ಮಹತ್ವವನ್ನು ತಿಳಿಸುತ್ತದೆ. ಈ ಪ್ರಾಚೀನ ನಗರದಲ್ಲಿದ್ದ ನಾಮಗಾವುಂಡನೊಬ್ಬ ಧರ್ಮೇತಿ ಬಾವಿಯನ್ನು ಕಟ್ಟಿಸಿರುವ ಉಲ್ಲೇಖವುಂಟು.

ಇತಿಹಾಸ ಪ್ರಸಿದ್ಧ ಸಿರಿವಾಳ(ಶಿರವಾಳ)ವು ಆ ಕಾಲದ ಅತ್ಯಂತ ಪ್ರಾಚೀನ ಪಟ್ಟಣವಾಗಿ ಸಗರನಾಡಿನಲ್ಲಿ ಶೋಭಿಸುತ್ತಿದ್ದ ವಿಷಯ ತಿಳಿದಿದ್ದೇ ಆಗಿದೆ. ಕ್ರಿ.ಶ.೧೧೩೭ರ ತೇದಿಯ ಸಿರಿವಾಳ ಶಾಸನವು[೨೧೦]. ಸಿರಿವಾಳದ ನಾಲ್ವರು ಸೆಟ್ಟಿಯರನ್ನು ಹಾಗೂ ಈ ಮಹಾನಗರದಲ್ಲಿದ್ದ ತಳದ ಬಳಂಜಿಗರ ಹಾಗೂ ಸಮಸ್ತ ಪ್ರಜೆಗಳ ಕುರಿತು ವಿವರಿಸುತ್ತದೆ. ಇದೇ ಗ್ರಾಮದ ಕ್ರಿ.ಶ. ೧೧೭೮(ಇದು ೧೧೪೯ ಆಗಬೇಕಿತ್ತು)ರ ಕಾಲದ ಶಾಸನವು[೨೧೧]. ಶ್ರೀಮದ್ದಕ್ಷಿಣ ವಾರಣಾಸಿ ಧರ್ಮ್ಮದ ಮನೆಯಾದಿಪಟ್ಟಣ ಸಿರಿವೊಳಲ ಎಂಬ ಉಲ್ಲೇಖ ಗಮನಿಸಿದರೆ ಇದು ಕೇವಲ ಪಟ್ಟಣ ಮಾತ್ರವಾಗಿರದೇ ಧರ್ಮಕಾರ್ಯಗಳಾದ ದಾನ-ದತ್ತಿಗಳಿಗೂ ತುಂಬಾ ಪ್ರಾಶಸ್ತ್ಯವನ್ನು ನೀಡಿದಂತೆ ಭಾಸವಾಗುತ್ತದೆ. ಆದ್ದರಿಂದ ಬಹುಶಃ ಈ ಹಿನ್ನೆಲೆಯಲ್ಲಿಯೇ ಸಿರಿವಾಳ ಶೆಟ್ಟಿಯರು ಎಂಬ ಉಲ್ಲೇಖವು ಹೆಚ್ಚು ಪ್ರಚಲಿತಗೊಂಡಿತು ಎಂದು ಅಭಿಪ್ರಾಯಿಸಬಹುದು.

ಆ ಕಾಲದಲ್ಲಿ ಪ್ರಸಿದ್ಧಿ ಪಡೆದಿದ್ದ ಸಗರ ಪಟ್ಟಣದ ಕುರಿತು ಈ ಪ್ರದೇಶ ಹಾಗೂ ಇನ್ನಿತರೆ ಪ್ರದೇಶಗಳಲ್ಲಿ ಲಭ್ಯವಾಗಿರುವ ಪ್ರಾಚೀನ ಶಾಸನಗಳಲ್ಲಿ ಇದರ ಕುರಿತು ಉಲ್ಲೇಖಗಳುಂಟು. ಕ್ರಿ.ಶ.೧೨೪೫ರ ತೇದಿಯ ಬಿಜಾಸಪುರ ಶಾಸನವು[೨೧೨]. ಧರ್ಮ್ಮಾಂಬುಧಿ ಮಹಾಪಟ್ಟಣಂ ಸಗರದ ಎಂಬ ಉಲ್ಲೇಖವು ಆ ನಾಡಿನ ಕುರಿತು ವಿವರಿಸುತ್ತದೆ. ಸಗರ ಗ್ರಾಮದಲ್ಲಿಯೇ ಲಭ್ಯವಿರುವ ಕ್ರಿ.ಶ.೧೦೭೧ರ ಶಾಸನವಂತೂ[೨೧೩]. ಆ ನಾಡಿನ ಹಾಗೂ ಅಲ್ಲಿದ್ದ ಜನವರ್ಗಗಳ ಕುರಿತು ಸುದೀರ್ಘವಾಗಿಯೇ ಪ್ರಸ್ತಾಪಿಸುತ್ತದೆ.

ಈ ಪಟ್ಟಣದಲ್ಲಿ ಸಚ್ಚಾರಿತ್ರ್ಯ ಹೊಂದಿದ್ದ ವಿನಯಾನ ವೀರಬಂಜರು, (ಬಣಜಿಗರು) ಅಷ್ಟಾದಶಯೋಗ ಪೀಠಮುಂ ಚೌಷಷ್ಟಿ ದೇವತಾವಾಸಮುಂ ಅರವತ್ತಾನಾಲ್ಕುಘಟಿಕಸ್ಥಾನಮುಂ ನಾಲ್ಕುರೆಸೆಯಾಸಿರಮುಂ, ಎಂಟುನಾಡಪದವರುವರು, ನಾನಾದೇಶಿಗಳು, ಗವರೆಗರು, ಗಾತ್ರಿಗರು, ಗಾವುಂಡ ಸ್ವಾಮಿಗಳು ಸೆಟ್ಟಿಯರು, ಸೆಟ್ಟಿಗುತ್ತರು, ಅಯ್ಯಾವೊಳೆ ಪುರುವಾಧೀಶ್ವರರು, ಪಂಚಮಹಾಶಬ್ದ ಪಡೆದ ಕಲಿಗಳು ತಪೋಧನರು, ಸ್ಥಾನಾಚಾರ್ಯರು ಹಾಗೂ ವೃತ್ತಿಕಾರರೆಲ್ಲರು ಈ ಪಟ್ಟಣದಲ್ಲಿದ್ದರು ಎಂಬ ವಿರಗಳು ವ್ಯಕ್ತವಾಗುತ್ತವೆ. ಅಲ್ಲದೇ ಅವರೇ ಈ ಪಟ್ಟಣ ಆಡಳಿತದ ಮುಖ್ಯ ಆಧಾರ ಸ್ತಂಭಗಳಾಗಿದ್ದರೆಂದು ಅಭಿಪ್ರಾಯಿಸಬಹುದು.

ಪಟ್ಟಣಗಳು ವ್ಯಾಪಾರಿ ಕೇಂದ್ರಗಳಾಗಿದ್ದರಿಂದ ಅಲ್ಲಿನ ಪ್ರತಿ ಚಟುವಟಿಕೆಗಳ ಮೇಲೂ ವರ್ತಕರ ಪ್ರಭಾವ ಎದ್ದು ಕಾಣುತ್ತಿತ್ತು. ಅವರೆಲ್ಲ ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಭಾಗಿಯಾಗುತ್ತಿದ್ದರು. ಅವರಲ್ಲಿ ಪ್ರಮುಖವಾಗಿ ಸೆಟ್ಟಿಗುತ್ತರು, ಸಮಸ್ತ ನಾಡುಗಳು ಮುಮ್ಮರಿದಂಡಗಳು, ತಳದ ಬಣಜಗಳು, ಎಂಟನಾಡು, ಎಂಟು ಹಿಟ್ಟ,

ಪಂಚಮಠಸ್ಥಾನ, ಅರುವತ್ತೊಕ್ಕಲು, ಹಗರಟಿಗೆಯ ಸೆಟ್ಟಿಗುತ್ತರು, ನಖರರು, ಅಯ್ಯಾವೊಳೆ ಐದನೂರು ವರ್ತಕ ಸಂಘ ಮತ್ತು ಇನ್ನಿತರರ ಬಗೆಗೆ ಈ ಜಿಲ್ಲೆಯ ಪ್ರಾಚೀನ ಶಾಸನಗಳು ಮಾಹಿತಿಗಳನ್ನು ನೀಡಿವೆ.

ಕ್ರಿ.ಶ. ೧೧೧೮ರ ಮುದನೂರಿನ ಶಾಸನವು[೨೧೫]. ಮುದನೂರಿನ ರಾಮೇಶ್ವರ ದೇವಾಲಯಕ್ಕೆ ಅಯ್ಯಾವೊಳೆ ಐನೂರು ಸ್ವಾಮಿಗಳು, ಉಭಯ ನಾನಾದೇಶಿಗಳು, ಮೂವತ್ತಾರು ಗ್ರಾಮದ ಮುಮ್ಮರಿದಂಡ, ಸಗರ ಐನೂರು ಗ್ರಾಮದ ಸೆಟ್ಟಿಗುತ್ತಾರು. ಆರುಮನೆ ಅಥವಾ ಆರು ಶಾಸನದ ಮನೆಯವರು, ಮುದಿನೀರು ಕೇಸರಸೆಟ್ಟಿಗಳ ಕುರಿತು ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ಮಾಹಿತಿ ದಾಖಲಾಗಿದೆ. ಇಲ್ಲಿ ಪ್ರಸ್ತಾಪಿತವಾದ ಆರು ಶಾಸನದ ಮನೆ ಸೆಟ್ಟಿಗರು ಮತ್ತು ಆರು ಸಾಸನದ ಮನೆಯ ಸೆಟ್ಟಿಯರು ಎಂಬ ಪ್ರಕಾರಗಳು ಬಹುಶಃ ಮುಮ್ಮರಿದಂಡ ವರ್ತಕ ಸಂಘದಲ್ಲಿರುವ ಇನ್ನೊಂದು ಚಿಕ್ಕ ಗುಂಪು ಎಂದು ಅಭಿಪ್ರಾಯಿಸಬಹುದು. ಸೌದೊರೆ ಸೌತಿಸೆಟ್ಟಿ ಮುಂತಾದ ವರ್ತಕ ಪ್ರಕಾರದವರೆಲ್ಲ ಸೇರಿ ದಾನ ಬಿಟ್ಟ ಉಲ್ಲೇಖವಿದೆ. ಅದೇ ರೀತಿ ಎಂಟು ನಾಡು ಪದನವರು[೨೧೬] ಎಂಟು ಹಾಗದ ಧರ್ಮಶ್ರೇಣಿ[೨೧೭] ನೂರಿಪ್ಪತ್ತೈದೊಕ್ಕಲು[೨೧೮]. ಬಣಜವ್ವೈನೂರ್ವ್ವರು[೨೧೯] ಹಾಗೂ ಮಹಾಪ್ರಭುಗಳು[೨೨೦] ಮುಂತಾದವರು ಹಲವು ದಾನದತ್ತಿಗಳ ಕಾರ್ಯದಲ್ಲಿ ತೊಡಗಿದ್ದುದನ್ನು ಶಾಸನಗಳಲ್ಲಿ ವ್ಯಕ್ತವಾದ ಸಂಗತಿಗಳಿಂದ ಗುರುತಿಸಬಹುದು. ಸೆಟ್ಟಿಗುತ್ತ ಸಮುದಾಯವಂತೂ ಈ ನಾಡಿನಲ್ಲಿ ದೊರಕಿರುವ ಬಹುತೇಕ ಶಾಸನಗಳಲ್ಲಿ ದಾಖಲಿಸಿದ್ದಾರೆ. ಪಟ್ಟಣ, ಅಗ್ರಹಾರ, ಬ್ರಹ್ಮಪುರಿ, ಉಭಯಪುರಿ ಹಾಗೂ ಊರುಗಳಲ್ಲಿ ನಡೆಯುವ ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ದಿನಂಪ್ರತಿಯು ತೋಡಗಿಸಿಕೊಂಡಂತೆ ತೋರುತ್ತದೆ ಎಂದರೆ ತಪ್ಪಾಗಲಾರದು.

**ಅಗ್ರಹಾರಗಳು**

ಮಧ್ಯಕಾಲೀನ ಕರ್ನಾಟಕ ಇತಿಹಾಸದಲ್ಲಿ ಅಗ್ರಹಾರಗಳು ಬಹುಮುಖ್ಯ ಪಾತ್ರ ವಹಿಸಿರುವುದನ್ನು ಶಾಸನಾಧಾರಗಳಿಂದ ತಿಳಿಯಬಹುದು. ಈ ವಿಚಾರ ಕುರಿತಂತೆ ಚರಿತ್ರೆಯಲ್ಲಿ ತುಂಬಾ ಪ್ರಾಚೀನ ಕಾಲದ ವಿವರಗಳುಂಟು. ಕದಂಬ, ರಾಷ್ಟ್ರಕೂಟರ ಕಾಲದಲ್ಲಿಯೇ ಈ ನಾಡಿನಲ್ಲಿ ಅಗ್ರಹಾರಗಳ ಕುರಿತು ಉಲ್ಲೇಖವಾಗಿರುವುದನ್ನು ಗುರುತಿಸಲಾಗಿದೆ. ಅಗ್ರಹಾರ ಮೂಲರೂಪದಿಂದ ಬಂದಿರುವ ಅಗ್ರಹಾರ–ಅಗ್ರ(ಶ್ರೇಷ್ಠ)+ಆಹಾರ(ಸ್ಥಳ) ಎಂಬೆರಡು ಪದಗಳ ಕೂಡು(ಸಮಾಸ)ಪದವಾಗಿದ್ದು. ಅದರರ್ಥ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದಾಗುತ್ತದೆ ಎಂದು ವಿವರಿಸಲಾಗಿದೆ[೨೨೧].

ಅಗ್ರಹಾರಗಳಲ್ಲಿ ವಿದ್ವಾಂಸರಾದ ಬ್ರಾಹ್ಮಣರಿಗೆ ಅವರು ತಮ್ಮ ಶೈಕ್ಷಣಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ಆಭಾದಿತವಾಗಿ ನಡೆಸಿಕೊಂಡು ಹೋಗಲು ಉಂಬಳಿಯಾಗಿ ಕೊಟ್ಟ ಗ್ರಾಮಗಳು. ಅಲ್ಲದೇ ಕೆಲವೊಮ್ಮೆ ಬೇರೆ ಬೇರೆ ಪ್ರದೇಶಗಳಿಂದ ವಿದ್ವಾಂಸರನ್ನು ಕರೆಸಿ ಇಂಥ ಗ್ರಾಮಗಳಲ್ಲಿ ಅವರು ನೆಲೆಸುವಂತೆ ಮಾಡಲಾಗುತ್ತಿತ್ತು. ಮತ್ತೆ ಕೆಲವೊಮ್ಮೆ ಎರಡು ಮೂರು ಗ್ರಾಮಗಳನ್ನು ಸೇರಿಸಿ ಒಂದು ಅಗ್ರಹಾರವಾಗಿ ಮಾಡುತ್ತಿದ್ದುಂಟು. ಇಂಥ ಗ್ರಾಮಗಳಲ್ಲಿಯ ಒಕ್ಕಲುತನದ ಭೂಮಿಯನ್ನು ವೃತ್ತಿಗಳಾಗಿ

ವಿಂಗಡಿಸಿ ಒಬ್ಬೊಬ್ಬ ವಿದ್ವಾಂಸರಿಗೆ ಕೊಡುತ್ತಿದ್ದರು. ಸಾಮಾನ್ಯವಾಗಿ ಇಂಥ ಭೂಮಿಗಳು ಕರದಿಂದ ವಿಮುಕ್ತವಾಗಿರುತ್ತಿದ್ದವು. ಅಗ್ರಹಾರಗಳಿಂದ ಬರುವ ಆದಾಯವನ್ನು(ಭೂಮಿಯಿಂದ) ಅಲ್ಲಿರುವ ವಿದ್ವಾಂಸರ ಹಾಗೂ ವಿದ್ಯಾರ್ಥಿಗಳ ಊಟೋಪಚಾರಗಳಿಗೆ ವ್ಯಯಮಾಡಲಾಗುತ್ತಿತ್ತು.

ಸಾಮಾನ್ಯವಾಗಿ ಬಹುತೇಕ ಹೆಚ್ಚಿನ ಪ್ರಮಾಣದಲ್ಲಿ ಮಹಾಜನರೇ ಅಗ್ರಹಾರದಲ್ಲಿ ವಾಸಿಸುತ್ತಿದ್ದರು. ಅವರು ವಿದ್ವತ್ತು ಮತ್ತು ಸಚ್ಚಾರಿತ್ರ್ಯದಿಂದ ಇದ್ದಿರಬಹುದಾದ ಹಲವು ಉದಾಹರಣೆಗಳು ದಾಖಲಾಗಿದ್ದುಂಟು. ಅಲ್ಲದೇ ಇಂಥ ವಿವರಗಳಿಗೆ ವ್ಯತಿರಿಕ್ತವಾದ ಅಂದರೆ ಆಬ್ರಾಹ್ಮಣರು ಸಹ ಮಹಾಜನಗಳಾಗಿದ್ದಿರುವ ಉದಾಹರಣೆಗಳು ಸಾಕಷ್ಟಿವೆ. ಅಲ್ಲದೇ ಅಲ್ಲಿದ್ದ ಮಹಾಜನರೆಲ್ಲ ಕೆಲವರು ಚಾರಿತ್ರ್ಯಹೀನತೆಯಿಂದ ಹೊರದೂಡಲ್ಪಟ್ಟ ಉದಾಹರಣೆಗಳು ದಾಖಲಾಗಿದ್ದುಂಟು.

ಅಗ್ರಹಾರದ ವ್ಯಾಪ್ತಿಗನುಗುಣವಾಗಿ ನಿರ್ದಿಷ್ಟ ಸಂಖ್ಯೆಯ ಮಹಾಜನರಿರುತ್ತಿದ್ದರು. ಕ್ರಿ.ಶ.೧೧೨೯ರ ಮುದನೂರಿನ ಶಾಸನದಲ್ಲಿ ಶ್ರೀಮದಗ್ರಹಾರ ಮುದಿನೀರೂರೊಡೆಯ ಪ್ರಮುಖ ಮಹಾಜನಂಗಳಯ್ನೂರ್ವ್ವರು ಎಂಬ ಐದನೂರರ ಸಂಖ್ಯೆ ದಾಖಲಾಗಿದೆ[೨೨೨], ಅದೇ ರೀತಿ ಹಗರಟಗಿ[೨೨೩] ಮದ್ರಕಿ[೨೨೪] ಅಗ್ರಹಾರಗಳಲ್ಲಿಯೂ ಐದನೂರು ಮಹಾಜನರಿದ್ದರೆಂಬ ಉಲ್ಲೇಖಗಳು ದಾಖಲಾಗಿವೆ. ಆದರೆ ವಿಕ್ರಮತೀರ್ಥ(ಹುಣಸಗಿ) ಆಳಂಬೆ ಅಥವಾ ಅಣಬೆ ಶಿರವಾಳ (ಶಹಾಪುರ ತಾಲೂಕು) ತಿಂಥಣಿ ಸಿರವರ(ಸುರಪುರ ತಾಲೂಕು) ಹಾಗೂ ಕೋಬಾಳ(ಶಹಾಪುರ ತಾಲೂಕು) ಶಾಸನಗಳಲ್ಲಿ ಅವು ಅಗ್ರಹಾರಗಳಾಗಿದ್ದವು ಎಂದು ವಿವರಿಸಲಾಗಿದೆ. ಹೊರತು ಅವುಗಳ ನಿರ್ದಿಷ್ಟ ಸಂಖ್ಯೆಯ ಕುರಿತು ಮಾಹಿತಿಗಳಿಲ್ಲ.

ಇಂಥ ಅಗ್ರಹಾರಗಳಲ್ಲಿ ವೇದ ಧರ್ಮಶಾಸ್ತ್ರ ಸಾಹಿತ್ಯ ವ್ಯಾಕರಣ ಮುಂತಾದ ಶಾಸ್ತ್ರಗಳ ಅಧ್ಯಯನ ಮತ್ತು ಅಧ್ಯಾಪನ ನಡೆಯುತ್ತಿದ್ದ ಉಲ್ಲೇಖಗಳುಂಟು. ಕ್ರಿ.ಶ. ೧೦೧೭ರ ತೇದಿಯ ತಿಂಥಣಿ ಶಾಸನದಲ್ಲಿ ಅಗ್ರಹಾರ ತಿಂಥಿಣಿ ಸಿರವಾರದಲ್ಲಿ ದುಗ್ಗಣಾರ್ಯಭಟ್ಟ ಕಟ್ಟಿಸಿದ ತ್ರೈಪುರುಷ ಶಾಲೆಯಲ್ಲಿ ಯಜ್ಜ್ಯುಶ್ಯಾಖೆಯನ್ನು ಅಭ್ಯಸಿಸುವ ವಿದ್ಯಾರ್ಥಿಗಳಿದ್ದರೆಂದು ಮಾಹಿತಿ ದಾಖಲಾಗಿದೆ[೨೨೫]. ಅಲ್ಲದೇ ಇಂಥ ಎಷ್ಟೋ ಅಗ್ರಹಾರ ಪೌರಾಣಿಕ ವ್ಯಕ್ತಿಗಳಿಂದ ಸ್ಥಾಪಿಸಲ್ಪಟ್ಟವುಗಳೆಂಬ ಪ್ರತೀತಿಯಿದೆ. ಕ್ರಿ.ಶ.೧೧೪೭ರ ಮುದನೂರಿನ ಶಾಸನವು[೨೨೬]. ಶ್ರೀರಾಮದತ್ತಿ ಸರ್ವನಮಸ್ಯದಗ್ರಹಾರಂ ದಕ್ಷಿಣವಾರಣಾಸಿ ಸಾ(ಶಾ)ಸನದ ಮನೆ ಮುದಿನೀರಲು ಎಂದು ಉಲ್ಲೇಖಿಸಲಾಗಿದೆ. ಅಲ್ಲದೇ ಕ್ರಿ.ಶ. ೧೨೯ರ ತೇದಿಯ ಹಗರಟಗಿ ಶಾಸನವು(ಆಶೇ)ಷ ಮಹಾಜನಂಗಳು ಎಂದು ವಿವರಿಸಲಾಗಿದೆ. ಈ ರೀತಿ ಪೌರಾಣಿಕ ವ್ಯಕ್ತಿ ಅಥವಾ ವಿವರಗಳಿಂದ ಅವುಗಳನ್ನು ಏಕೆ? ಸಂಬೋಧಿಸಲಾಗುತ್ತಿತ್ತು ಎಂಬುದು ಸ್ಪಷ್ಟವಾಗಿ ತಿಳಿಯದು. ಆದರೆ ಕೆಲವು ಸಲ ಅಗ್ರಹಾರ ಬಿಟ್ಟುಕೊಟ್ಟ ಅರಸನ ಹೆಸರು ಕಾಲಾಂತರದಲ್ಲಿ ಮರೆತು ಹೋದಾಗ ಅದನ್ನು, ಭರತವಂಶಜಾತ, ಜನಮೇಜಯ, ಭೂದತ್ತಿಯೆಂದು ಅನಾದಿ ಅಗ್ರಹಾರವೆಂದೂ ಹೇಳಲಾಗಿದೆ ಎಂಬ ಅಭಿಪ್ರಾಯಗಳಿವೆ[೨೨೭]. ಆದರೆ ಇಂಥ ಅಭಿಪ್ರಾಯಗಳು ಎಷ್ಟರ ಮಟ್ಟಿಗೆ ಒಪ್ಪಬಹುದೆಂದು ನಿರ್ದಿಷ್ಟವಾಗಿ ಹೇಳಲಿಕ್ಕಾಗದು. ಸರ್ವನಮಸ್ಯದಗ್ರಹಾರ ಎಂಬುದು ಎಲ್ಲ ಬಗೆಯ ಕರಗಳಿಂದ

ಮುಕ್ತವಾದ ಅಗ್ರಹಾರವೆಂದು ಹೇಳಬಹುದು. ಈ ಜಿಲ್ಲೆಯ ಪ್ರಾಚೀನ ಶಾಸನಗಳಲ್ಲಿ ದಾಖಲಾಗಿರುವ ಅಗ್ರಹಾರಗಳಲ್ಲಿ ಮುದನೂರು, ಹಗರಟಗಿ, ತಿಂಥಣಿ ಹಾಗೂ ವಿಕ್ರಮತೀರ್ಥ ಅಗ್ರಹಾರಗಳು ಸರ್ವನಮಸ್ಯಗ್ರಹಾರಗಳೆಂದು ಕರೆದುಕೊಂಡಿವೆ. ಒಂದು ಊರನ್ನು ಅಗ್ರಹಾರವನ್ನಾಗಿ ಮಾರ್ಪಡಿಸುವ ಉದ್ದೇಶ ಅದನ್ನು ಬ್ರಾಹ್ಮಣರಿಗೆ ದಾನವಾಗಿ ಕೊಡುವ ಮೂಲಕ ಪುಣ್ಯ ಸಂಪಾದಿಸ ಬಹುದೆನ್ನುವುದಾಗಿದ್ದರೂ, ಒಂದು ಪ್ರಭುತ್ವವನ್ನು ದಾಳಿ, ತೆರಿಗೆ ಇತ್ಯಾದಿ ಹಿಂಸೆಗಳಿಲ್ಲದೇ ನೆಲೆಗೊಳಿಸುವ ಪ್ರಕ್ರಿಯೆಯನ್ನು ಸಾಧ್ಯವಾಗಿಸುವುದಾಗಿತ್ತು. ಇದು ಧಾರ್ಮಿಕ ಸ್ವರೂಪದ ಸಾಮರ್ಥ್ಯದಿಂದ ಮಾತ್ರ ಸಾಧ್ಯ ಮತ್ತು ಆ ಸಾಮರ್ಥ್ಯ ಪುರೋಹಿತಶಾಹಿಗಿದ್ದುದನ್ನು ಅರಸರು ಗಮನಿಸಲು ಸಾಕು[೨೮]. ಈ ಅಭಿಪ್ರಾಯವು ವಿಚಾರಾರ್ಹ ಹಾಗೂ ಸಹಮತದಿಂದ ಕೂಡಿರುವಂಥದ್ದೆಂದು ಹೇಳಬಹುದು.

ಅಗ್ರಹಾರಗಳ ಒಡೆತನ ಹೊಂದಿ ಅಲ್ಲಿನ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸುವ ಮೂಲಕ ಆ ಊರಿನ ಒಡೆಯರು(ಊರೊಡೆಯರು) ಪ್ರಭುಗಳು ಎನಿಸಿಕೊಂಡರು. ಅಲ್ಲಿನ ಆದಾಯವನ್ನೆಲ್ಲ ಯಾವ ತೊಂದರೆ ಇಲ್ಲದೇ ಅನುಭೋಗಿಸಲು ಅರ್ಹರಾಗುತ್ತಿದ್ದರೆಂದು ಅಭಿಪ್ರಾಯಿಸಲಾಗಿದೆ. ಅಲ್ಲದೇ ಈ ಜನರು ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿಯೂ ಭಾಗಿಯಾಗಿ ದಾನ-ದತ್ತಿಗಳನ್ನು ಊರಿನ ಅಭ್ಯುದಯಕ್ಕಾಗಿ ನೀಡಿದ್ದಾರೆ. ಅಂಥ ಉದಾಹರಣೆಗಳನ್ನು ಮುದನೂರು, ಹಗರಟಗಿ, ಏವೂರು, ಮದ್ರಕಿ, ಅಣಬಿ, ತಿಂಥಣಿ, ಹುಣಸಗಿ ಹಾಗೂ ಬೆಳಗುಂದಿಯ ಗ್ರಾಮಗಳಿಂದ ಪ್ರಕಟವಾಗಿರುವ ಶಾಸನಗಳಲ್ಲಿ ಕಾಣಬಹುದು.

ಅಗ್ರಹಾರವನ್ನು ರಾಜ ಅಥವಾ ಅಧಿಕಾರಿಗಳಿಂದ ಬ್ರಾಹ್ಮಣ ಮುಖ್ಯಸ್ಥನೊಬ್ಬ ಪಡೆಯುತ್ತಿದ್ದನಾದರೂ ನಂತರ ಆತ ಅದನ್ನು ಇತರ ಬ್ರಾಹ್ಮಣ(ಮಹಾಜನ)ರೊಂದಿಗೆ ಹಂಚಿಕೊಳ್ಳುತ್ತಿದ್ದ ಹೀಗೆ ಹಂಚಿಕೊಳ್ಳುವಾಗ ಉಪಯೋಗಿಸಿದ ಮಾನದಂಡವಾಗಲೀ ಮುಖ್ಯಸ್ಥ ಮತ್ತು ಇತರರಿಗೆ ಇರುವ ಸಂಬಂಧವಾಗಲಿ ಶಾಸನಗಳಿಂದ ಸ್ಪಷ್ಟಪಡುವುದಿಲ್ಲ[೨೯]. ಈ ಅಭಿಪ್ರಾಯವು ಪ್ರಸ್ತುತ ಅಧ್ಯಯನ ಸಂದರ್ಭಕ್ಕೂ ಅನ್ವಯಿಸುವಂಥದ್ದು.

ದತ್ತಿಗಳನ್ನು ಸಾಮಾನ್ಯವಾಗಿ ಬ್ರಾಹ್ಮಣರಿಗೆ ಬಿಟ್ಟು ಕೊಡಲಾಗುತ್ತಿದ್ದರೂ ಕೆಲವು ಸಂದರ್ಭಗಳಲ್ಲಿ ಬ್ರಾಹ್ಮಣೇತರರಿಗೂ ಬಿಟ್ಟುಕೊಟ್ಟಿರುವುದಕ್ಕೆ ಉದಾಹರಣೆಗಳಿವೆ. ಶಾಸನಗಳಲ್ಲಿ ಕಂಡುಬರುವ ಭತ್ತಗ್ರಾಮದ ಉಲ್ಲೇಖಗಳು ಈ ದತ್ತಿಗಳನ್ನು ಸೂಚಿಸುವುತ್ತಿರುವಂತಿದೆ ಎಂದು ದಾಖಲಿಸಲಾಗಿದೆ[೩೦]. ಅದೇ ರೀತಿ ಉದಾಹರಣೆವುಳ್ಳ ಎರಡು ವಿವರಗಳುಈ ಜಿಲ್ಲೆಯ ಶಾಸನಗಳಲ್ಲಿಯೂ ವ್ಯಕ್ತವಾಗಿವೆ. ಕ್ರಿ.ಶ.೧೧೧೯ರ ತೇದಿಯ ಏವೂರಿನ ಶಾಸನವು[೩೧]. ತ್ರಿಭುವನಮಲ್ಲ ವಿಕ್ರಮಾದಿತ್ಯನ ಪರಮಾರಾಧ್ಯರಾದ ಬ್ರಹ್ಮಪ್ರಕಾಶಭಟ್ಟಾರಕದೇವರು ತಮ್ಮಾಳ್ಕೆಯ ಭತ್ತಗ್ರಾಮ ಏವೂರಿನ ಸ್ವಯಂಭೂ ಸೋಮೇಶ್ವರ ದೇವರ ಉತ್ತರದ ಕಟ್ಟೇಶ್ವರ ದೇವರಿಗೆ ಹಾಗೂ ತಪೋಧನರಿಗೆ ದಾನ ನೀಡಿದ ವಿವರವಿದೆ. ಕ್ರಿ.ಶ.೧೦೯೭ರ ರಾಜನಕೋಳೂರು ಶಾಸನವು[೩೨]. ಚಕ್ರವರ್ತಿಯ ಪಿರಿಯರಸಿ ಚಂದಲದೇವಿಯರು ಭತ್ತಗ್ರಾಮವಾದ ರಾಜನಕೋಳೂರಿನಲ್ಲಿರುವ ಶಂಕರನಾರಾಯಣ ದೇವರಿಗೆ ಭೂಮಿ, ತೋಟ, ಗಾಣ, ನಿವೇಶನಗಳನ್ನು

ದತ್ತಿಯಾಗಿ ಬಿಟ್ಟಿರುವ ವಿವರವನ್ನು ಹೊಂದಿದೆ. ಇದೇ ಗ್ರಾಮದ ಕ್ರಿ.ಶ.೧೮೯೧ರ ತೇದಿಯ ಇನ್ನೊಂದು ಶಾಸನದಲ್ಲಿ[೨೩]. ಭತ್ತಗ್ರಾಮೆ ರಾಜನಕೋಳೂರಲು ಸರ್ವನಮಸ್ಯವಾಗಿ ಬ್ರಹ್ಮಪುರಿಯ ಬ್ರಾಹ್ಮಣರು ೩೨ ಬ್ಬೆರ್ಗ್ಗೆಧಾರಾಪೂರ್ವ್ವಕಂ ಮಾಡಿ ದಾನ ನೀಡಿದ ಉಲ್ಲೇಖವಿದೆ. ಈ ವಿವರವು ಮೇಲಿನ ಹೇಳಿಕೆಗೆ ಸ್ವಲ್ಪ ಭಿನ್ನವಾಗಿ ತೋರುತ್ತದೆಂದು ಅಭಿಪ್ರಾಯಿಸಬಹುದು.

ಕೆಲವು ಶಾಸನಗಳಲ್ಲಿ ಬ್ರಹ್ಮಪುರಿಗಳ ಕುರಿತು ಉಲ್ಲೇಖಗಳು ದಾಖಲಾಗಿವೆ. ವಿದ್ವಾಂಸರಾದ ಬ್ರಾಹ್ಮಣರು ವಾಸವಾಗಿರುವ ಊರಿನ ಇಂಥ ಕೇರಿಗಳನ್ನು ಬ್ರಹ್ಮಪುರಿಗಳೆಂದು ಶಾಸನಗಳು ಕರೆದಿವೆ. ಅಲ್ಲದೇ ಬ್ರಹ್ಮಪುರಿಗಳು ನಗರಗಳಿಗೆ ಮಾತ್ರ ಸೀಮಿತವಾಗಿರದೆ ಅಗ್ರಹಾರ ಮತ್ತು ಊರುಗಳಲ್ಲಿ ಇದ್ದುದಕ್ಕೆ ನಿದರ್ಶನಗಳಿವೆ[೨೪]. ಯಾದಗಿರಿ ಜಿಲ್ಲೆಯಲ್ಲಿ ಕಂಡುಬಂದಿರುವ ಪ್ರಾಚೀನ ಶಾಸನಗಳಲ್ಲಿ ಬ್ರಹ್ಮಪುರಿ ಕುರಿತು ಉಲ್ಲೇಖಗಳು ಕಂಡುಬಂದಿವೆ.

ಕ್ರಿ.ಶ.೧೦೭೬ರ ತೇದಿಯ ಏವೂರು ಶಾಸನವು[೨೫]. ಬ್ರಹ್ಮಪುರಿ ಕುರಿತು ಮಹತ್ವದ ಮಾಹಿತಿ ನೀಡುತ್ತದೆ. ಶಿವಪುರವೆನ್ನುವ ಗ್ರಾಮವನ್ನು ನಿರ್ಮಿಸಿ ಅದರಲ್ಲಿನ ಪುರದ ಪಿರಿಯ ಕೇರಿಯಾಳ್ದೊ ಬ್ರಹ್ಮಪುರಿಯ ಬ್ರಾಹ್ಮಣರ್ಗ್ಗೆ ಎಳರಾಮೆಯ ಘಳೆಯೊಳ್ ಕಿರಿಯ ಬೆಳ್ಳುಂಬಟ್ಟಿಯ ಹೊಂಬೊಳ್ ಬಿಟ್ಟ ದಾನವನ್ನು ಪ್ರಸ್ತಾಪಿಸುತ್ತದೆ. ಹೊಸ ಊರೊಂದನ್ನು ನಿರ್ಮಿಸಿ ಅಲ್ಲಿ ಬ್ರಹ್ಮಪುರಿ ಸ್ಥಾಪಿಸಿದ್ದಕ್ಕೆ ಇದೊಂದು ಉದಾಹರಣೆ ಎನ್ನಬಹುದು. ಕ್ರಿ.ಶ.೧೮೯ರ ಕಡಕಲ್ಲ ಶಾಸನದಲ್ಲಿಯು ಬ್ರಹ್ಮಪುರಿಯ ಉಲ್ಲೇಖವಿದೆ[೨೬]. ಅಲ್ಲಿದ್ದ ನಾಗಯಷಣಂಗಿಯರಿಗೆ ಮತ್ತು ಸಿದ್ದೇಶ್ವರ ದೇವರಿಗೆ ದತ್ತಿಬಿಟ್ಟ ಬಗೆಗೆ ಮಾಹಿತಿ ಇದೆ. ಅಗ್ರಹಾರಗಳಲ್ಲಿರುವಂತೆ ಘಟಿಕಾಸ್ಥಾನಗಳಲ್ಲಿಯೂ ಬ್ರಹ್ಮಪುರಿಗಳಿದ್ದವು ಎಂಬ ವಿವರಗಳು ಈ ಪ್ರದೇಶದ ಶಾಸನಗಳಲ್ಲಿ ಮಾತ್ರ ದಾಖಲಾದಂತಿಲ್ಲ. ಶಹಾಪುರ ತಾಲೂಕಿನ ಸಂಗಮ ಶಾಸನದಲ್ಲಿ ಪಂಚಮಠ ಎಂದು ಉಲ್ಲೇಖವಿದೆ ಹೊರತು ಬ್ರಹ್ಮಪುರಿಯ ಉಲ್ಲೇಖವಿಲ್ಲ.

ಅಗ್ರಹಾರದ ಮಹಾಜನರು ಬ್ರಹ್ಮಪುರಿಗೆ ಬಿಟ್ಟ ವೃತ್ತಿಯನ್ನು ಕುರಿತು ಕ್ರಿ.ಶ.೧೨ನೇ ಶತಮಾನದ ಮುದನೂರಿನ ಶಾಸನವು ವಿವರಿಸುತ್ತದೆ[೨೭]. ಮುದನೂರಿನ ಮಹಾಜನಂಗಳೈನೂರ್ವ್ವರುಂ ಸಮಸ್ತರ ವಪ್ಪಗಳಿಂದ ದೇವರ ಬ್ರಹ್ಮಪುರಿಯ ಸತ್ರದ ಅಗ್ಗಿಷ್ಟಿಗೆಯಕ್ಕೆ(ಅಗ್ನಿ–ಸುರಪುರ ತಾಲೂಕು) ಬಿಟ್ಟ ವ್ರಿತ್ತಿವಕ್ಕಲದೆರೆಯಲೊಂದರೆವೀನಮಂ ಅನ್ಯಾಯ ಕಾಹು ಕಾಣಿಕೆಯೊಳಗಾಗಿ ಯೇನು ಬಂದಡಂ ವೊರೆತೆಯ ಪ್ರಮುಖ ಮಹಾಜನಂಗಳುಂ ಸಮಸ್ತ ಪೂಜೆಗಳುಂ ಕೂಸುವರು ಎಂಬ ವಿವರಗಳಿವೆ. ಅಲ್ಲದೇ ಬ್ರಹ್ಮಪುರಿಗಳು ವ್ಯಕ್ತಿನಾಮ ಹಾಗೂ ದೇವರ ಹೆಸರಿನಿಂದ ಕರೆಯಲ್ಪಡುತ್ತಿದ್ದವು. ಅಂಥ ಉದಾಹರಣೆಗೆ ಈ ಮೇಲಿನ ವಿವರವು ಮಾಹಿತಿ ಒದಗಿಸುತ್ತದೆ. ಬ್ರಹ್ಮಪುರಿ ಅಗ್ಗಿಷ್ಟಿಕೊಂಡಕ್ಕೆ ದೇವರ ಬ್ರಹ್ಮಪುರಿ ಎಂಬ ಹೆಸರವು ದಾಖಲಾಗಿರುವುದನ್ನು ಗಮನಿಸಬಹುದು.

ಬ್ರಹ್ಮಪುರಿಯಲ್ಲಿದ್ದ ಸದಾ ಉರಿಯುವ ಅಗ್ಗಿಷ್ಟಿಕೆ(ಅಗ್ನಿಯಿಂದ ಕೂಡಿದ ಕುಂಡ)ಯಿಂದಾಗಿ ಈ ಊರಿಗೆ ಅಗ್ನಿ ಎಂಬ ಹೆಸರು ಬಂದಿರಬಹುದು. ಕ್ರಿ.ಶ.೧೧೪೬ರ ಮುದನೂರಿನ ಶಾಸನವು[೨೮].

ಮುದನೂರಿನ ಮಹಾಗ್ರಹಾರವನ್ನು ಶ್ರೀರಾಮದತ್ತಿ ಸರ್ವ್ವನಮಸ್ಯದ ಅಗ್ರಹಾರಂ ದಣಕ್ಷಿವಾರಣೆಸಿ ಸಾ(ಶಾ)ಸನದ ಮನೆ ಮುದಿನೀರಲು ಎಂದು ಉಲ್ಲೇಖಿಸಿರುವುದು ತುಂಬಾ ಮಹತ್ವದ ಸಂಗತಿಯಾಗಿ ಕಂಡುಬರುತ್ತದೆ. ಇಂಥ ಉಲ್ಲೇಖಗಳು ಈ ಗ್ರಾಮದಲ್ಲಿ ಕಂಡುಬಂದಿರುವ ಕೆಲವಾರು ಶಾಸನಗಳಲ್ಲಿ ದಾಖಲಾಗಿವೆ.

ಹಗರಟಗಿ ಅಗ್ರಹಾರದ ಕುರಿತು ಸಹ ಈ ತರಹದ ವಿವರಗಳಿವೆ. ಕ್ರಿ.ಶ.೧೨೨೯ರ ಹಗರಟಗಿ ಶಾಸನವು[೨೯]. ದ್ವಿಜಗುರು ದೇವತಾ ಪೂಜಾತತ್ಪರರು ಸರ್ವನಮಸ್ಯದುತ್ತಮ ಅಗ್ರಹಾರಂ ಪಾಂಡವದತ್ತಿ ಹಗರಟ್ಟಿಗೆಯ ಆಶೇಷ ಮಹಾಜನಂಗಳುಂ ಎಂದು ಉಲ್ಲೇಖಿಸಿದೆ. ಅಲ್ಲದೇ ಹಗರಟಗಿಯನ್ನು ಉತ್ತಮ(ಸರ್ವನಮಸ್ಯರುತ್ತಮ) ಅಗ್ರಹಾರವೆಂದು ವಿವರಿಸುವುದು ಮುಖ್ಯವಾದುದು. ಕ್ರಿ.ಶ. ೧೦೧೭ರ ತಿಂಥಣಿಯ ಶಾಸನವು[೩೦]. ಎಡದೊರೆ ವಿಷಯ ಪ್ರತಿವಬ)ದ್ದ ಸಗರತ್ರಿಶತಮಧ್ಯವರ್ತಿನಿ ಕೃಷ್ಣವೇಣಾನದ್ಯುತ್ತರ ತೀರೋಪಾಶ್ರತೇ ತಿನ್ತಿಣಿ ಸಿರಿವರ ನಾಮನಿಮಹಾನಾಮಸ್ಯಾಗ್ರಹಾರೇ ಎಂದು ಉಲ್ಲೇಖಿಸುತ್ತದೆ. ಇಲ್ಲಿ ಕೌಂಡಿನ್ಯ ಗೋತ್ರದ ಯಜುಶ್ಯಾಖೆಯ ವಿದ್ಯಾರ್ಥಿಗಳು ಪಾಠ ಪ್ರವಚನ ಮಾಡುತ್ತಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ.೧೧೯೧ರ ತೇದಿಯ ರಾಜನಕೋಳೂರಿನ ಶಾಸನವು[೩೧]. ಭತ್ತಗ್ರಾಮೆ ರಾಜನಕೋಳೂರಲು ಸರ್ವ್ವನಮಸ್ಯವಾಗಿ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಪಿರಿಯರಸಿ ಚಂದಲದೇವಿಯು ದಾನಬಿಟ್ಟ ಉಲ್ಲೇಖ ನೀಡುತ್ತದೆ. ಕ್ರಿ.ಶ.೧೦೬೦ರ ಬೆಳಗುಂದಿಯ ಶಾಸನವು[೩೨]. ಬೆಳಗುಂದಿಯಲ್ಲಿದ್ದ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಊರೊಡೆಯರು ದತ್ತಿ ಬಿಟ್ಟ ಉಲ್ಲೇಖವಿದೆ.

ಕೆಲವು ಅಗ್ರಹಾರಗಳನ್ನು ಕೆಲವು ಮಹತ್ವದ ವಿಶೇಷಣಗಳಿಂದಲೂ ಸಂಬೋಧಿಸಲಾಗಿದೆ. ಕ್ರಿ.ಶ.೧೧೪೬ರ ತೇದಿಯ ಮುದನೂರಿನ ಶಾಸನವು[೩೩]. ಶ್ರೀಮಹಾಗ್ರಹಾಂ ಮುದಿನೀರೂರ(ರೊ)ಡೆಯ ಎಂದು ಹೆಸರಿಸಿದೆ. ಕ್ರಿ.ಶ.೧೧೬೭ರ ಶಾಸನದಲ್ಲಿಯೂ[೩೪] ಅಂಥದ್ದೇ ಉಲ್ಲೇಖವಿದೆ. ಅಲ್ಲದೇ ಇಲ್ಲಿದ್ದ ಮಹಾಜನರನ್ನೇ ಕುರಿತು ಕೆಲವು ವಿಶೇಷಣಗಳು ದಾಖಲಾಗಿರುವ ವಿವರಗಳುಂಟು. ಕ್ರಿ.ಶ.೧೧೮೦ರ ತೇದಿಯ ಶಾಸನವು[೩೫]. ಯಮ ನಿಯಮ ಸ್ವಾಧ್ಯಾಯ್ಯ ಧ್ಯಾನಥಾನಗಿ ಮೋನಾನುಷ್ಠಾಣ ಜಪಸಮಾಧಿ ಶೀಲಗುಣ ಸಂಪನ್ನರ್ ಸಮಸ್ತ ವಿದ್ವಜ್ಜನ ಪ್ರಸಂನ್ನರ್ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮ್ಮ ನಿರತರೌ ಪಾಸಾಗ್ನಿ ಹೋತ್ರ ದ್ವಿಜಗುರು ದೇವ ಪೂಜಾತತ್ಪಾರ ರುಂ ಅನೇಕ ತರ್ಕ್ಕ ವ್ಯಾಕರಣ ಕಾವ್ಯ ನಾಟಕ ದೇವಾಂದತ ಸಿದ್ಧಾಂತಾಭಿಜ್ಞರುಂ ಸರಳಕಳಾ ವಿದ್ಯಾಧರಪ್ಪ ಶ್ರೀರಾಮದತ್ತಿ ಸರ್ವ್ವನಮಸ್ಯದಗ್ರಹಾರಂ. ದಕ್ಷಿಣವಾರಣಾಸಿ ಮುದಿನೀರೂರೊಡೆಯ ಪ್ರಮುಖ ಆಶೇಷ ಮಹಾಜನಂಗಳ್ಯೆನೂರ್ವ್ವರ ಎಂಬ ಉಲ್ಲೇಖವು ಅವರು ಹೊಂದಿದ ವಿಶೇಷಣಗಳನ್ನು ವಿವರಿಸುತ್ತದೆ.

ಹಗರಟಗಿಯ ಕ್ರಿ.ಶ.೧೧೪೪ರ ಕಾಲದ ಶಾಸನವು[೩೬]. ಜಪ ಸಮಾಧಿಸೀಲಗುಣಸಂಪನ್ನ, ಸಕಲಸೂತ್ರ ವಿಷಾದ ರುಪುಪ್ಪ ದ್ವಿಜಗುರು ದೇವತಾಪೂಜಾತತ್ಪರರು ಆದ ಶ್ರೀಮತು ಸರ್ವನಮಸ್ಸದಗ್ರಹಾರ ಹಗರಟಗೆಯಶೇಷ ಮಹಾಜನಂಗಳೈಮಾರ್ಬರುಂ ಎಂದು ಉಲ್ಲೇಖಿಸುತ್ತದೆ.

ಅಗ್ರಹಾರದ ಮಹಾಜನಗಳೇ ಕೆಲವು ದತ್ತಿಕಾರ್ಯಗಳನ್ನು ಬಿಡುವ ಕೆಲಸ ಮಾಡಿದ್ದಾರೆ. ಅವರು ಕೇವಲ ವಿದ್ಯೆಯ ಪ್ರಸಾರ ಅಧ್ಯಾಪನದಲ್ಲಿ ಮಾತ್ರ ನಿರತರಾಗಿರದೇ ಸಾಮಾಜಿಕ ಆಡಳಿತಾತ್ಮಕ ಹಾಗೂ ಧಾರ್ಮಿಕ ಕಾರ್ಯಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿರುವ ಕುರಿತ ವಿವರಣೆಗಳುಂಟು. ಕ್ರಿ.ಶ. ೧೧೬೨ರ ಮುದನೂರಿನ ಶಾಸನವು[೨೪೭]. ಪ್ರಮುಖ ಅಶೇಸ ಮಹಾಜನಂಗಳು ಶ್ರೀ ಲಕ್ಷ್ಮೇಶ್ವರ ದೇವರ ಅಂಗಭೋಗ ನೈವೇದ್ಯಕ್ಕೆ ಅಲ್ಲಿಯ ಸ್ಥಾನಿಕ ಬಲ್ಲ ದೇವರಿಗೆ ತದಡಿರಲ್ ದಾರಿಯ ಬಟಗಲು ದೇವರ ಪೂರ್ವ್ವದ ಮಾನ್ಯರ ಭೂಮಿಯನ್ನು ದಾನವಾಗಿ ನೀಡಿರುವ ಉಲ್ಲೇಖವಿದೆ.

ಇದೇ ಗ್ರಾಮದ ಕ್ರಿ.ಶ. ೧೧೨೫ರ ಶಾಸನವು[೨೪೮]. ಇನ್ನೊಂದು ಮಹತ್ವದ ಮಾಹಿತಿ ನೀಡುತ್ತದೆ. ಮುದನೂರಿನ ಲಕ್ಷ್ಮಣೇಶ್ವರ ದೇವರ ಅಂಗಭೋಗಕ್ಕೆ ಮಹಾಜನರು ಸೇರಿದಂತೆ ಇನ್ನಿತರ ಅಧಿಕಾರಿಗಳು ಈ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖವಿದೆ. ಅಲ್ಲದೇ ಅವರು ಬಿಟ್ಟ ದತ್ತಿಯ ಭೂಮಿಗೆ ಸಂಬಂಧಿಸಿದಂತೆ ದೇವರ ಕೇರಿಯರುವಣ ಎಂಬ ಸಂಗತಿಯನ್ನು ದಾಖಲಿಸುತ್ತದೆ. ಇದು ದತ್ತಿ ಬಿಟ್ಟ ಭೂಮಿಯಿಂದ ಅರ್ಥ(ಅರೆ) ತೆರಿಗೆಯನ್ನೋ ಹೆಸರಿಗೆ ಮಾತ್ರ ತೆಗೆದುಕೊಳ್ಳುವ ತೆರಿಗೆಯನ್ನೋ ಸೂಚಿಸುವಂತೆ ತೋರುತ್ತದೆಂದು ಅಭಿಪ್ರಾಯಿಸಲಾಗಿದೆ. ಈ ಶಾಸನದಿಂದ ಇನ್ನೊಂದು ವಿಷಯವು ಕೂಡಾ ಕಂಡುಬರುತ್ತದೆ. ಅದೆಂದರೆ ಅಗ್ರಹಾರದಲ್ಲಿ ದೇವರಕೇರಿ ಎಂಬ ವಿಶೇಷವಾದ ಓಣಿ ಅಥವಾ ಗಲ್ಲಿಗಳಿದ್ದವು ಎಂದು ತೋರುತ್ತದೆ. ಇಂತಹ ಇನ್ನೊಂದು ಉದಾಹರಣೆ ಯಾದಗಿರಿ ತಾಲೂಕಿನ ಇಡ್ಲೂರಿನ ಶಾಸನದಲ್ಲಿಯು ದಾಖಲಾಗಿರುವುದನ್ನು ಗಮನಿಸಬಹುದು[೨೪೯].

ಕ್ರಿ.ಶ.೧೧೦೫ರ ತೇದಿಯ ಮುದನೂರಿನ ಶಾಸನವು[೨೫೦]. ಶ್ರೀಮದಗ್ರಹಾದಂ ಮುದಿನೀರೂರೊಡೆಯ ಪ್ರಮುಖವಶೇಷ ಮಹಾಜನಂಗಳ್ಗೆ ಅಯ್ವತ್ತು ಗದ್ಯಾಣ ಪೊನ್ನ ಕೊಟ್ಟ ಭೂಮಿ ಖರೀದಿಸಿ ಅಲ್ಲಿರುವ ಶ್ರೀಮದುತ್ತಾರೇಶ್ವರ ದೇವರ್ಗ್ಗೆ ದತ್ತಿಯನ್ನು ಮಹಾಮಂಡಳೇಶ್ವರನ ಹೆಂಡತಿಯೊಬ್ಬಳು ಬಿಟ್ಟಿರುವ ವಿವರ ದಾಖಲಾಗಿದೆ.

ಕ್ರಿ.ಶ.೧೧೮೮ರ ಮುದನೂರಿನ ಶಾಸನವು[೨೫೧] ಲಕ್ಷ್ಮಣೇಶ್ವರ ದೇವರ ಚೈತ್ಯ ಪವಿತ್ರ ಪರ್ವಗಳಿಗೆ ನೀಡಿದ ಸಂತೆಯ ಆಯ ಕುರಿತು ತಿಳಿಸುತ್ತದೆ. ಅಲ್ಲದೇ ಈ ದಾನವನ್ನು ಮುಂದುವರೆಸಿದವರು ಉಭಯನಾನಾದೇಸಿಯರು ಹಾಗೂ ಐನೂರರ್ವರ ಪ್ರತಿಪಾಳಿ(ಲಿ)ಸಿದರೆಂದು ವಿವರಿಸಲಾಗಿದೆ. ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ ಅಲ್ಲಿರುವ ರಾಮನಾಥನ ದೇವಾಲಯದ ಕಾರ್ಯಗಳಿಗೆ ಕೊಟ್ಟ ಸಂತೆಯ ಆಯಾವೂ ಸೆಟ್ಟಿಯೊಂದಿಗೆ ನೀಡುವ ವೃತ್ತಿಯ ವಿಷಯವು ಉಲ್ಲೇಖವಾಗಿದೆ. ಈ ಶಾಸನಗಳಲ್ಲಿರುವ ವಿಷಯಗಲಿಂದ ಇಳಿಯಬಹುದಾದ ಸಂಗತಿ ಏನೆಂದರೆ ಪಟ್ಟಣ ಅಥವಾ ನಗರಗಳಲ್ಲಿ ಸಂತೆಗಳು ನಡೆಯುತ್ತಿದ್ದವು ಎಂಬ ವಿಚಾರಗೊತ್ತಾಗುತ್ತದೆ. ಆದರೆ ಅದು ವಾರದ ಸಂತೆಯೋ ಅಥವಾ ದಿನಂಪ್ರತಿ ನಡೆಯುವ ಸಂತೆಯೋ ತಿಳಿಯದಾದ ವಿಷಯವಾಗಿದೆ.

ಅಗ್ರಹಾರದ ಮಹಾಜನಗಳು ದಾನದತ್ತಿಗಳನ್ನು ನೀಡುತ್ತಿದ್ದಲ್ಲದೇ ಇತರರು ದಾನ-ದತ್ತಿ ನೀಡುವಾಗ ತಾವು ಆ ಕಾರ್ಯಕ್ರಮದಲ್ಲಿ ಹಾಜರಾಗಿ ಅದರ ಮಹತ್ವವನ್ನು ಹೆಚ್ಚಿಸುತ್ತಿದ್ದರು. ಕೆಲವು ಶಾಸನಗಳಲ್ಲಿ ಅಶೇಷ ಮಹಾಜನಗಳ ಉಲ್ಲೇಖ ಬರುತ್ತಿದ್ದು ಅದಕ್ಕೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರು ಎನ್ನುವುದಕ್ಕಿಂತ

ಅಶೇಷ ಎಂಬ ಶಬ್ದ ಸಮಸ್ತ ಎಂಬುದನ್ನು ಮಹಾಜನವೆಂಬುದು ವಿಪ್ರ(ಬ್ರಾಹ್ಮಣ)ರನ್ನು ಸೂಚಿಸುತ್ತದೆಂದು ಪರಿಭಾವಿಸುವುದು ಸೂಕ್ತ ಎಂದು ಅಭಿಪ್ರಾಯಿಸಲಾಗಿದೆ[೨೫೨]. ಪ್ರಸ್ತುತ ಅಧ್ಯಯನದ ವಿಚಾರದಲ್ಲಿ ಇದೇ ಅಭಿಪ್ರಾಯವೇ ಹೆಚ್ಚು ಸೂಕ್ತವೆಂದು ತಿಳಿಯಬಹುದು.

ಅಗ್ರಹಾರಗಳ ಒಡೆತನ ಮಹಾಜನರದಾಗಿದ್ದರೂ ಅವುಗಳ ಮೇಲ್ವಿಚಾರಣೆಗಳಿಗೆ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು. ಅಲ್ಲದೇ ಸ್ವತಃ ರಾಜಕುಮಾರರೇ ಅಥವಾ ಚಕ್ರವರ್ತಿಗೆ ಸಂಬಂಧಿಸಿದ ತೀರ ಹತ್ತಿರದ ಬಂಧುಗಳು ಸಹ ಅಗ್ರಹಾರದ ಮೇಲ್ವಿಚಾರಣೆಯನ್ನು ಮಾಡಿರುವ ಬಗೆಗೆ ಮಾಹಿತಿಗಳಿವೆ. ಆದರೆ ಈ ಪ್ರದೇಶದಲ್ಲಿ ಲಭ್ಯವಿರುವ ಪ್ರಾಚೀನ ಶಾಸನಗಳಲ್ಲಿ ಅಂಥ ವಿವರಗಳು ಕಂಡುಬಂದಿಲ್ಲ.

**ಹಳ್ಳಿಗಳ ಆಡಳಿತ ಅಥವಾ ಗ್ರಾಮಾಡಳಿತ**

ಗ್ರಾಮ ಅಥವಾ ಹಳ್ಳಿಯು ರಾಜ್ಯದ ಕೊನೆಯ ಘಟಕವಾಗಿತ್ತು. ಅಲ್ಲದೇ ಹೆಚ್ಚಿನ ಜನಸಂಖ್ಯೆಯು ಇಂಥ ಪ್ರದೇಶಗಳಲ್ಲಿ ನೆಲೆಸುತ್ತಿತ್ತು. ಆ ಸಂದರ್ಭದಲ್ಲಿ ರಾಜ್ಯಕ್ಕೆ ಹೆಚ್ಚಿನ ಆದಾಯ ತರುವ ಸ್ಥಳಗಳು ಸಹ ಗ್ರಾಮಗಳಾಗಿದ್ದವು ಎಂದರೆ ತಪ್ಪಾಗಲಾರದು. ಪ್ರಾಚೀನ ಕಾಲದಿಂದಲೂ ನಮ್ಮ ದೇಶ ಮತ್ತು ನಾಡು ಇಂಥ ಹಳ್ಳಿಗಳ ಮೇಲೆ ಹೆಚ್ಚು ಅವಲಂಬಿತವಾಗಿ ಮುನ್ನಡೆದಿದೆ. ಇವು ರಾಜ್ಯಾಡಳಿತ ಹಾಗೂ ಕೇಂದ್ರಾಡಳಿತಗಳ ನಡುವಿನ ಕೊಂಡಿಯಾಗಿ ಕಾರ್ಯನಿರ್ವಹಿಸಿದ್ದವು. ಅಗಣಿತ ಸಂಖ್ಯೆಯಲ್ಲಿದ್ದ ಹಳ್ಳಿಗಳ ಅಥವಾ ಗ್ರಾಮಗಳ ಆಡಳಿತಗಳನ್ನು ಆಯಾ ಗ್ರಾಮದ ಗಾವುಂಡರು ನೋಡಿಕೊಳ್ಳುತ್ತಿದ್ದರು. ಅವರ ಜೊತೆಗೆ ಅಲ್ಲಿಯ ಮುಖಂಡರು, ಹಳ್ಳಿಯ ಸಮಸ್ತ ರಕ್ಷಣೆ, ಹಿತಾಸಕ್ತಿ, ನ್ಯಾಯ ಶಿಕ್ಷೆ ಹಾಗೂ ದಾನದತ್ತಿಗಳಂತಹ ಆಗುಹೋಗುಗಳಿಗೆ ಅಲ್ಲಿದ್ದ ಆಡಳಿತಗಾರರೇ ಜವಾಬ್ದಾರರಾಗುತ್ತಿದ್ದರು. ಗ್ರಾಮ ಘಟಕಗಳು ಸಾಮ್ರಾಜ್ಯದ ಮುಖ್ಯ ಕೇಂದ್ರದಿಂದ ಬಹು ದೂರವಿದ್ದರೂ ಅವುಗಳ ಮೇಲೂ ರಾಜಕೀಯ ಘಟನೆಗಳ ಪ್ರಭಾವಿಸದೇ ಇರಲಿಲ್ಲ. ಹಾಗಾಗಿ ನಿರಂತರವಾಗಿ ತೆರಿಗೆಯನ್ನು ರಾಜನಿಗೆ ತಪ್ಪದೇ ನೀಡಲೇಬೇಕಾಗಿತ್ತು. ಹಳ್ಳಿಗಳಿಂದ ಉತ್ಪನ್ನಗೊಂಡ ತೆರಿಗೆ ಹಾಗೂ ಲಾಭಗಳನ್ನು ರಾಜ್ಯಾದಾಯಕ್ಕೆ ರವಾನಿಸುವ ಕೆಲಸ ಅಲ್ಲಿದ್ದ ಗಾವುಂಡ ಅಥವಾ ಪ್ರಭುಗಾವುಂಡರು ನಿರ್ವಹಿಸುತ್ತಿದ್ದರು. ಅವರು ಹಳ್ಳಿಯ ಸಕಲ ಆಗುಹೋಗುಗಳ ವಾರಸ್ಸುದಾರರಾಗಿದ್ದರು ಎಂದರೆ ತಪ್ಪಾಗಲಾರದು.

ಗ್ರಾಮಾಡಳಿತ ಘಟಕದಲ್ಲಿದ್ದ ಈ ಅಧಿಕಾರಿಗಳು ಗಾವುಂಡ, ಪ್ರಭುಗಾವುಂಡ ಮತ್ತು ನಾಡಾಳ್ಪ್ರಭುಗಳೆಂಬ ಮುಂತಾದ ಹೆಸರುಗಳಿಂದ ಕರೆದುಕೊಂಡಿದ್ದಾರೆ. ಆ ಹುದ್ದೆಯು ಪ್ರಾಯಶಃ ವಂಶಪಾರಂಪರ್ಯವಾಗಿ ಮುಂದುವರೆದಿದ್ದು ಎಂಬ ಅಭಿಪ್ರಾಯಗಳೇ ಹೆಚ್ಚಾಗಿವೆ. ಅಲ್ಲದೇ ಒಂದೇ ಊರಿನಲ್ಲಿ ಹೆಚ್ಚಿನ ಸಂಖ್ಯೆಯ ಗಾವುಂಡರುಗಳ ಉಲ್ಲೇಖವು ಅಲ್ಲಿದ್ದ ಮುಖ್ಯ ಮನೆತನವು ಹಿರಿದಾಗುತ್ತಾ ಹೋದಾಗ ಗಾವುಂಡರ ಸಂಖ್ಯೆಯು ಹೆಚ್ಚಾಗುತ್ತಿತ್ತು ಎಂಬ ಅಭಿಪ್ರಾಯಗಳುಂಟು. ಇದೊಂದು ಸ್ವಾಭಾವಿಕ ಕ್ರಿಯೆ. ಗ್ರಾಮಾಡಳಿತದಲ್ಲಿ ಗಾವುಂಡರು ಮುಖ್ಯರಾಗಿದ್ದರೂ ತೀರ್ಮಾನಗಳನ್ನು ಮಾತ್ರ ಇತರರೊಂದಿಗೆ ಚರ್ಚಿಸಿ ತೆಗೆದುಕೊಳ್ಳುವ ರೂಢಿಯಿತ್ತು. ಹಾಗಾಗಿಯೇ ಗ್ರಾಮದಲ್ಲಿ ಏನೇ ದಾನದತ್ತಿ ಕಾರ್ಯಗಳು ನಡೆದರೂ ಸಕಲ ಜನರೆಲ್ಲ ಉಪಸ್ಥಿತರಿದ್ದ ವಿವರಗಳು ಶಾಸನಗಳಲ್ಲಿ ದಾಖಲಾಗಿವೆ ಎಂದು ಹೇಳಬಹುದು.

ಈ ಗಾವುಂಡ ಹುದ್ದೆಯು ಈವರೆಗೂ ಮುಂದುವರೆದುಕೊಂಡು ಬಂದಿರುವ ಸೂಚನೆಗಳನ್ನು ಹೇಳಲಾಗುತ್ತದೆ. ಗ್ರಾಮದಲ್ಲಿರುವ ಗೌಡರು(ಗೌವುಡಿಕೆ)ಗಳೇ ಅಂದಿನ ಗಾವುಂಡರ ಸ್ಥಾನಮಾನದಲ್ಲಿದ್ದವರೆಂದು ಅಭಿಪ್ರಾಯಿಸಲಾಗಿದೆ.

ಕ್ರಿ.ಶ.೧೨೦೬ರ ಎಡೆಯಾಪುರ ಶಾಸನವು[೨೫೩]. ಮುಖ್ಯ ರಾಜಧಾನಿ ಕೆಂಬಾವಿಯೂರ ಬಳಿ ಗೌಡ ಆಚಗೌಂಡ ಚೆಂನಗೌಡನಮಳವಾಜಗೌಡನು ಎಂಟುಹಿಟ್ಟು ಪಂಚಮಠ ಘಟಿಕಸ್ಥಾನ ಮುಖ್ಯ ಕಯ್ಯಲು ಸರ್ವಬಾಧಪರಿಹಾರವಾಗಿ ಎಡೆಯಾಪುರದ ಮಲ್ಲಿಕಾರ್ಜುನ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖ ನೀಡುತ್ತವೆ. ಈ ಜಿಲ್ಲೆಯಲ್ಲಿಯೇ ಲಭ್ಯವಿರುವ ಶಾಸನಗಳಲ್ಲಿ ಅತ್ಯಂತ ಮೊದಲ ತೇದಿಯ ಶಾಸನವಾದ ಕ್ರಿ.ಶ.೯೩೯ರ ಸಿರಿವಾಳ ಶಾಸನದಲ್ಲಿ[೨೫೪]. ಸಗರ ನಾಡನಾಳಗಾವುಂಡ ಚಣ್ದಯ್ಯನ ಉಲ್ಲೇಖವಿದೆ. ಅವನಿಗೆ ಕೆಲವು ಗದ್ಯಾಣ ಕೊಟ್ಟ ಭೂಮಿಯನ್ನು ಕೊಂಡು ಅಲ್ಲಿದ್ದ ಕೆಲವರು ದೇವರಿಗೆ ದತ್ತಿ ಬಿಟ್ಟಿರುವ ಉಲ್ಲೇಖ ಗಾವುಂಡನ ಕುರಿತು ಈ ಜಿಲ್ಲೆಯ ಮೊದಲ ಉಲ್ಲೇಖ ನೀಡುವ ಶಾಸನವು ಸಹ ಇದಾಗಿದೆ ಎಂದು ಪರಿಭಾವಿಸಬಹುದು.

ಕ್ರಿ.ಶ.೧೧೨೬ರ ಹಗರಟಗಿಯ ಶಾಸನವು[೨೫೫]. ಚಂದಿಗೌಡ, ಮೆಂಚನಗೌಡನು ಹಾಗೂ ಬಂಮಗೌಡನು ದತ್ತಿ ಬಿಟ್ಟ ಉಲ್ಲೇಖ ನೀಡುತ್ತದೆ. ಇದೇ ಗ್ರಾಮದ ಕ್ರಿ.ಶ. ೧೨೨೯ರ ಶಾಸನವು[೨೫೬]. ತುಂಬಾ ಮಹತ್ವದ ಮಾಹಿತಿ ನೀಡುತ್ತದೆ. ಹಗರಟಗಿಯ ಮಹಾಜನರು, ಸರ್ವಾಧಿಕಾರಿ ಪಾರಿಸಸೆಟ್ಟಿ, ಹಗರಟಗೆ-೩೦೦ರ ಸೆಟ್ಟಿಗುತ್ತ ರಾಮಿಸೆಟ್ಟಿ, ಮುಮ್ಮರಿದಂಡರು, ಸರ್ವಾಯಂಗಳು, ಎಂಟು ಗಾಮುಂಡರು ಇವರೆಲ್ಲರೂ ಮಹಾಸಭೆಯಾಗಿ ನೆರೆದಿದ್ದಾಗ ಕೇತಗಾಮುಂಡನ ಮಕ್ಕಳಾದ ರಾಮಗಾಮುಂಡ, ಸಿಂಗಗಾಮುಂಡರು ತಾವು ಪ್ರತಿಷ್ಠಾಪಿಸಿದ ರಾಮನಾಥ ದೇವರು, ಅಯನೂರ್ವ್ವೇಶ್ವರ ದೇವರು, ಬಾಚೇಶ್ವರ ದೇವರು, ಕೇತೇಶ್ವರ ದೇವರು ಹಾಗೂ ಚೌಡೇಶ್ವರಿ ದೇವಿ ಈ ಐದು ದೇವರಿಗೆ ಮಹಾಜನರು ದತ್ತಿಬಿಟ್ಟ ಉಲ್ಲೇಖ ನೀಡುತ್ತದೆ. ಇಲ್ಲಿ ವ್ಯಕ್ತವಾದ ವಿಷಯದಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಗಾವುಂಡರು ಅಥವಾ ಗಾಮುಂಡರು ಕೇವಲ ಚಿಕ್ಕಪುಟ್ಟ ಆಡಳಿತ ನಿರ್ವಹಿಸುವವರು ಮಾತ್ರ ಆಗಿರಲಿಲ್ಲ. ಅವರು ದೇವಾಲಯ ನಿರ್ಮಾಣದಂತಹ ಹೆಚ್ಚಿನ ಜವಾಬ್ದಾರಿ ಹಾಗೂ ಖರ್ಚಿನ ಕಾರ್ಯಚಟುವಟಿಕೆಗಳಲ್ಲಿಯೂ ತೊಡಗಿದ್ದರೆಂಬುದನ್ನು ಗಮನಿಸಬಹುದು.

ಅದೇ ರೀತಿಯ ಕಾರ್ಯವನ್ನು ತಳಬೀಡಿನ ಗಾವುಂಡರುಗಳು ಮಾಡಿರುವ ಉಲ್ಲೇಖವಿದೆ. ಕ್ರಿ.ಶ. ೧೨೦೮ರ ಶಾಸನವು[೨೫೭]. ತಳಬೀಡಿನ ಮಹಾಪ್ರಭು ಬೀರ ಗಾಮುಂಡ ಮತ್ತು ನನ್ನ ಗಾಮುಂಡರುಗಳು ಅಲ್ಲಿಯ ಬ್ರಹ್ಮೇಶ್ವರ ದೇವರಿಗೆ ಆಚಾರ್ಯ್ಯರಿಗೆ ದತ್ತಿಬಿಟ್ಟ ಉಲ್ಲೇಖವಿದೆ.

ಗಾವುಂಡರು ದೇವಸ್ಥಾನದಂತಹ ನಿರ್ಮಾಣ ಚಟುವಟಿಕೆಗಳಲ್ಲದೇ ಸಾರ್ವಜನಿಕ ಜನೋಪಯೋಗಿ ಕಾರ್ಯಗಳನ್ನು ನಿರ್ವಹಿಸಿದ್ದರು ಎಂಬ ವಿವರಗಳು ತುಂಬಾ ಮುಖ್ಯವಾಗುತ್ತವೆ. ಕ್ರಿ.ಶ.೧೦೨೮ರ ತೇದಿಯ ಮದ್ರಿಕಿಯ ಶಾಸನವು ಆ ತರಹದ ಉಲ್ಲೇಖ ಹೊಂದಿರುವುದನ್ನು ಗಮನಿಸಬಹುದು[೨೫೮]. ಇಲ್ಲಿಯ ಸ್ಥಳೀಯ ನಾಮಗಾವುಂಡನೊಬ್ಬ ಅಗ್ರಹಾರ ಮೆದ್ದೆರಿಕೆ ಅಥವಾ ಮದ್ರಿಕಿಯಲ್ಲಿ ಬಾವಿಯನ್ನು

ಕಟ್ಟಿಸುತ್ತಾನೆ. ಅದರ ನಿರ್ವಹಣೆಗಾಗಿ ಇಲ್ಲಿಯ ಮಹಾಜನರು ಹಾಗೂ ಊರೊಡೆಯರು ದತ್ತಿ ಬಿಟ್ಟ ಉಲ್ಲೇಖವು ತುಂಬಾ ವಿಶೇಷವಾಗಿ ಕಾಣುತ್ತದೆ.

ಗ್ರಾಮಾಡಳಿತದಲ್ಲಿ ಪ್ರಭುವರ್ಗವು ತುಂಬಾ ಮಹತ್ವದ ಪಾತ್ರವಹಿಸುತ್ತಿದ್ದ ಉದಾಹರಣೆಗಳು ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ದಾಖಲಾಗಿವೆ. ಇವರು ಪ್ರಭುವರ್ಗಕ್ಕೆ ಸೇರಿದವರಾಗಿದ್ದು ಮಹಾಸಾಮಂತರಿಗೆ ಅಧೀನರಾಗಿದ್ದರು. ಅವರು ಸಹ ತಮ್ಮ ಪ್ರಭುತ್ವಕ್ಕೆ ಒಳಪಟ್ಟ ಗ್ರಾಮಗಳನ್ನು ಆಳುತ್ತಿದ್ದರು. ಅವರ ಸಂಖ್ಯೆಯು ನಿರ್ದಿಷ್ಟವಾಗಿಯೇನೂ ಇರಲಿಲ್ಲ. ಅಲ್ಲದೇ ಅವರು ಇಂತಿಷ್ಟೇ ಗ್ರಾಮಗಳನ್ನು ಆಳಬೇಕೆಂಬ ನಿಯಮಗಳೇನು ಇರಲಿಲ್ಲ. ಪ್ರಭುವರ್ಗವನ್ನು ಉಲ್ಲೇಖಿಸುವ ಕೆಲವು ವಿವರಗಳು ಇಲ್ಲಿರುವ ಶಾಸನಗಳಲ್ಲಿ ಪ್ರಕಟವಾಗಿವೆ. ಅವರು ಸಹ ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸಿರುವ ವಿವರಗಳನ್ನು ಶಾಸನಗಳಲ್ಲಿರುವ ಉಲ್ಲೇಖಗಳ ಮೂಲಕ ಗಮನಿಸಬಹುದು.

ಕ್ರಿ.ಶ.೧೧೭೪ರ ಏವೂರಿನ ಶಾಸನವು[೨೫] ಏಹೂರಮಹಾಪ್ರಭು ತ್ರಿಪುರಾನ್ತಕದೇವರಸನ ಮಗ ಚಂಡೆಯ ನಾಯಕ ಸ್ಥಳೀಯ ಮಲ್ಲಿಕಾರ್ಜುನ ದೇವರಿಗೆ ದಾನ–ದತ್ತಿಬಿಟ್ಟ ಉಲ್ಲೇಖವನ್ನು ನೀಡುತ್ತದೆ. ಇದೇ ಗ್ರಾಮದ ಕ್ರಿ.ಶ.೧೧೭೯ರ ತೇದಿಯ ಶಾಸನವು[೨೬] ಏಹೂರ ಮಹಾಪ್ರಭು ತ್ರಿಪುರಾನ್ತಕ ದೇವರಸನನ್ನು ಹೆಸರಿಸಿದೆ. ಕ್ರಿ.ಶ. ೧೧೯೬ರ ಕಡಕಲ್ಲ ಶಾಸನವು[೨೭]. ಮಲಗತಿಯ(ಮಾಲಗತ್ತಿ) ಪ್ರಭು ಮಾತರಸ ಮತ್ತು ಮರಸ ಚಂದರಸರು ಸಿದ್ದೇಶ್ವರ ದೇವರಿಗೆ ದತ್ತಿ ಬಿಟ್ಟಿರುವ ಉಲ್ಲೇಖವುಂಟು. ಈ ಶಾಸನದಲ್ಲಿ ಆ ಗ್ರಾಮಕ್ಕೆ ಸಂಬಂಧಿಸಿದಂತೆ ಇಬ್ಬರು ನಾಳ್ಪ್ರಭುಗಳು ಆಳ್ವಿಕೆ ಮಾಡುತ್ತಿದ್ದರೆಂದು ಗಮನಿಸಬಹುದು.

ಅದೇ ರೀತಿ ಕ್ರಿ.ಶ. ೧೨೬೫ರ ಯಾಳಗಿ ಶಾಸನದಲ್ಲಿ[೨೮] ಸ್ಥಳೀಯ ಚನ್ನಕೇಶವ ದೇವರಿಗೆ ದತ್ತಿ ನೀಡುವಾಗ ಏಳಗೆಯ ಮಹಾಪ್ರಭುಗಳು ಅರುವತ್ತೊಕ್ಕಲು ಮುಂದುರಿದಂಡಗಳು ಎಂಬ ಬಹುವಚನದ ಪ್ರಯೋಗಗಳು ಬಹುಜನರನ್ನು ಸೂಚಿಸುತ್ತದೆಯೆಂದು ಗುರುತಿಸಬಹುದು. ಇನ್ನು ಸ್ಪಷ್ಟವಾಗಿ ಕ್ರಿ.ಶ. ೧೨೧೪ರ ತೇದಿಯ ರಾಜನಕೋಳೂರು ಶಾಸನದಲ್ಲಿ ಉಲ್ಲೇಖಿಸಲಾಗಿದೆ[೨೯]. ಶ್ರೀಮತುಭತ್ತಗ್ರಾಮೋ ರಾಜನಕೋಳೂರು ಮಹಾಪ್ರಭು ಬಂಮೊದರಸ(ಬೊಮ್ಮರಸ)ದೇವೊರಸ(ದೇವರಸ) ಮಾದರಸ ನಾಗರಸ ಮತ್ತು ಚಿಕ್ಕರಸರನ್ನು ಹೆಸರಿಸಿದೆ. ಒಂದೇ ಗ್ರಾಮದಲ್ಲಿರುವ ಪ್ರಭುರಸು ಸೇರಿ ಚಟುವಟಿಕೆಗಳಲ್ಲಿ ಭಾಗವಹಿಸುವ ವಿಚಾರ ಒಂದಾದರೆ ಹಲವಾರು ಗ್ರಾಮಗಳಲ್ಲಿದ್ದ ಪ್ರಭು ಅರಸರು ಸೇರಿ ದಾನ–ದತ್ತಿ ಚಟುವಟಿಕೆಗಳಲ್ಲಿ ಭಾಗವಹಿಸಿದ ಉದಾಹರಣೆಗಳುಂಟು.

ಕ್ರಿ.ಶ.೧೧೪೩ರ ತೇದಿಯ ಸಂಗಮ ಶಾಸನವು[೩೦]. ಶ್ರೀಮನ್ಮ ಮಹಾಮಂಡಳೇಶ್ವರಂ ಹೆಮ್ಮಡಿಯರಸ ಮುಖ್ಯ ಮಹಾಸಾಮಂತರುಗಳ ಹೆಗ್ಗಡೆಗಳು, ನಾಯಕರು, ಹಯ್ಯಾಳದ ಪ್ರಭು ನಾಗರಸ ದಂಡನಾಯಕರು, ಹಗರಟ್ಟಿಗಿ ಮುನ್ನೂರರ ಪ್ರಭು ತಿಪ್ಪಣಭಟ್ಟರು, ಮುಡಬಾಳ ಪ್ರಭು ಕೇಶವದೇವ, ಹಾರಣಗೇರಿಯ ಪ್ರಭು ಬಮ್ಮರಸ, ಸಗರದ ಪ್ರಭು ಹಾಗೂ ಜಗದೇಕಮಲ್ಲದೇವನ ಶ್ರೀಮನ್ಮಹಾಪ್ರಧಾನ ಸೇನಾಪತಿ

ಹಿರಿಯ ದಂಡನಾಯಕ ಚಿದ್ದರಸರಲ್ಲೆರೂ ಸೇರಿ ಮಹಾನಂದಿ ದಕ್ಷಿಣಪ್ರಯಾಗೆ ಕೃಷ್ಣವೇಣ್ಣಾ ಭೀಮರಥಿಯ ಸಂಗಮದಲ್ಲಿ ಸ್ನಾನಮಾಡಿ ಅಲ್ಲಿರುವ ದೇವರಿಗೆ ದತ್ತಿ ನೀಡಿದರೆಂಬ ಉಲ್ಲೇಖವಿದೆ. ಅಲ್ಲದೇ ಇದೇ ಶಾಸನದಲ್ಲಿ ವ್ಯಕ್ತವಾದ ಇನ್ನೊಂದು ಸಂಗತಿ ಎಂದರೆ ಪ್ರಭುಗಳು ಸಹ ಸೇನಾವೃತ್ತಿಯಲ್ಲಿ ದಂಡನಾಯಕ ಹುದ್ದೆಯಲ್ಲಿ ಇರುತ್ತಿದ್ದರೆಂಬುದನ್ನು ಈ ಶಾಸನವು ದಾಖಲಿಸುತ್ತದೆ.

ಕ್ರಿ.ಶ.೧೩೪೦ರ ತೇದಿಯ ಕೆಂಬಾವಿಯ ಶಾಸನವು[೨೫]. ಮೂಲಸಂಘ ಸರಸ್ವತೀಗಚ್ಛ ಬಲಾತ್ಕಾರಗಣ ಕೊಂಡಕುಂದಾನ್ವಯದ ರಾಜಗುರು ಮಂಡಲಾಚಾರ್ಯರಾದ ವಾದೀಂದ್ರ ವಿಶಾಲಕೀರ್ತಿಯತಿ, ಅಮರಕೀರ್ತಿ ಭಟ್ಟಾರಕ ದೇವರ ಶಿಷ್ಯ ಮಾಘಣಂದಿ ಸಿದ್ಧಾಂತದೇವರ ಶಿಷ್ಯ ಚಂದ್ರದೇವನಂದಿಯ ನಿಷಿದ್ಧಿಕಾ ಸ್ಥಂಭವನ್ನು ಹೊನಗುಂದದ ಮಹಾಪ್ರಭು ಬಿಸಣಿ ಹನುಮಂತ ಹಾಗೂ ಇನ್ನಿತರರು ಸೇರಿ ಪ್ರತಿಷ್ಠಾಪಿಸಿದರೆಂದು ಉಲ್ಲೇಖಿಸುತ್ತದೆ.

ಈ ಪ್ರದೇಶದ ಶಾಸನಗಳಲ್ಲಿ ವ್ಯಕ್ತವಾದ ವಿಚಾರಗಳಲ್ಲಿ ಊರೊಡೆಯರು ಸಹ ಪ್ರಮುಖರಾಗಿದ್ದಾರೆ. ಇವರು ಸಹ ಗ್ರಾಮಾಡಳಿತದಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ಕ್ರಿ.ಶ. ೧೦೫೫ರ ಕಚಕನೂರಿನ ಶಾಸನವು[೨೬]. ಕಚ್ಚೆಗನೂರ ಊರೊಡೆಯ ಕೇತರಸನ ಸಿಂಗಮಾನ್ಯಕ್ಕೆ ಎಂಬ ವಿವರವಿದೆ. ಕ್ರಿ.ಶ. ೧೧೧೪ರ ಮಲ್ಲಾ ಬಿ. ಶಾಸನ[೨೭] ಊರೊಡೆಯ ತೈಲಪಯ್ಯ ನಾಯಕನ ಉಲ್ಲೇಖ ನೀಡುತ್ತದೆ. ಕ್ರಿ.ಶ. ೧೨೯ರ ಹಗರಟಗಿ ಶಾಸನ[೨೮]. ವೂರೊಡೆಯ(ಊರೊಡೆಯ) ಬಾಚರಸನ ಮಾನ್ಯದ ಕೆಯಿಂ ಎಂಬ ವಿವರ ನೀಡಿದೆ. ಆದರೆ ಎಲ್ಲಕ್ಕಿಂತ ವಿವರವಾಗಿ ಮಾಹಿತಿ ನೀಡುವ ಕ್ರಿ.ಶ. ೧೦೨೮ರ ತೇದಿಯ ಮದ್ರಿಕಿಯ ಶಾಸನವು ಊರೊಡೆಯ ಸರ್ವ್ವದೇವಭಟ್ಟರು ಮಹಾ ಅಗ್ರಹಾರ ಮೆಳ್ದೆರ್ಕೆಗೆ ಮುಖ್ಯರಾಗಿದ್ದರೆಂಬುದನ್ನು ಉಲ್ಲೇಖಿಸುತ್ತದೆ. ಇವುಗಳಲ್ಲದೇ ಹಗರಟಗಿ, ಮುದನೂರು, ಏವೂರು ಹಾಗೂ ಯಾಳಗಿಯ ಶಾಸನಗಳು ಸಹ ಇಂಥ ಉದಾಹರಣೆಗಳನ್ನು ನೀಡುತ್ತವೆ.

ಸೇನಬೋವರು ಗ್ರಾಮದ ಗಾವುಂಡರ ಕೈಕೆಳಗೆ ಲೆಕ್ಕಪತ್ರ ಬರೆದುಕೊಳ್ಳುತ್ತಿದ್ದಂತಹ ಹುದ್ದೆಯಲ್ಲಿದ್ದವರು. ಅವರನ್ನು ಶಾಸನಗಳಲ್ಲಿ ಸೇನಬೋವ, ಸೇನಭೋಗ ಎಂದು ಕರೆಯಲಾಗಿದೆ. ಅವರೇ ಮುಂದಿನ ದಿನಗಳಲ್ಲಿ ಶಾನಭೋಗ ಶ್ಯಾನ್‌ಭೋಗ ಎಂದು ಹೆಸರು ಮಾಡಿದರು. ಕ್ರಿ.ಶ.೧೨೨೦ರ ಹಗರಟಗಿ ಶಾಸನ[೨೯]ದಲ್ಲಿ ಕೊಡೆಯ ಸಂಕರಸ ಬಾಚರಸಂಗಳ ಕೈಯಲು ಸೇನಬೋವ್ ಸಿರಿಎಣ್ಣನ(ಸಿರಿಯಣ್ಣ) ಎಂದು ಉಲ್ಲೇಖಿಸಲಾಗಿದೆ. ಅಂದರೆ ಅವರು ಅಧಿಕಾರಿಗಳ ಕೈಕೆಳಗೆ ಲೆಕ್ಕಪತ್ರಗಳನ್ನು ಬರೆದುಕೊಳ್ಳುತ್ತಿದ್ದವರೆಂದು ತಿಳಿಯಲು ಇದೊಂದು ಸ್ಪಷ್ಟ ಉದಾಹರಣೆ ಆಗಿದೆ. ಆದರೆ ಈ ಪದದಲ್ಲಿರುವ ಶಬ್ದದ ಪದ ಬದಲಾವಣೆ ಕೆಲವೇ ಶತಮಾನಗಳಲ್ಲಿ ಆಗಿರುವುದನ್ನು ಸಿರಿವಾಳದಲ್ಲಿರುವ ಶಾಸನದಲ್ಲಿ ಗಮನಿಸಬಹುದು. ಕ್ರಿ.ಶ.೧೫೩೭ರ ಸಿರಿವಾಳ ಶಾಸನ[೩೦]. ಸಗರನಾಡೊಳಗೆ ಸಿರಿವಳಲ ಗ್ರಾಮದಲಿ ಸೇನಭೋಗನಾಗಿಯರು ಪಸ್ಸಗ್ರಾಮದ ಹನುಮಂತದೇವರ ದೇವಸ್ಥಾನ ಶೋಭಕೃತನಾಮ ಸಂವತ್ಸರ ಮಿರುವರಿ ಚತುಸ್ತೀಮಂ ಸನಿವಾರದಲು ಮುಗಿತು ಶುಭಲಕ್ಷವತು ಎಂದು ಉಲ್ಲೇಖಿಸಿದೆ.

ಈ ಶಾಸನದಿಂದ ಎರಡು ವಿಚಾರಗಳನ್ನು ಗಮನಿಸಬಹುದು. ಸೇನಭೋವ ಎಂಬ ಪದವಿ ಸೇನಭೋಗ ಆಗಿ ಬದಲಾವಣೆಗೊಂಡಿದ್ದು ಅಲ್ಲದೇ ಅವರು ಸಹ ಗುಡಿಗುಂಡಾರಗಳನ್ನು ಕಟ್ಟುವ ಕಾರ್ಯದಲ್ಲಿ ತೊಡಗಿರುವುದು ಬಹುಶಃ ದೇವಗಿರಿ ಸೇವುಣರು ಹಾಗೂ ವಿಜಯನಗರ ಅರಸರ ಕಾಲದಲ್ಲಿ ಬ್ರಾಹ್ಮಣ ವರ್ಗವು ಇನ್ನು ಹೆಚ್ಚಿನ ಮಹತ್ವ ಪಡೆಯಿತು. ಹಾಗೂ ಲೆಕ್ಕಪತ್ರ ಕಾರ್ಯಗಳೇ ಮುಂದಿನ ದಿನಗಳಲ್ಲಿ ಹೆಚ್ಚಿನ ಪ್ರಾಧಾನ್ಯತೆ ಪಡೆದವು ಎಂಬುದು ಬಹುತೇಕರಿಗೆ ತಿಳಿದ ವಿಷಯಗಳಾಗಿವೆ.

ಗ್ರಾಮಾಡಳಿತದ ಕರ್ತವ್ಯದಲ್ಲಿ ಕಡೆಯ ಸ್ಥಾನದಲ್ಲಿ ಇದ್ದ ವರ್ಗವೆಂದರೆ ತಳಾರ ಅಥವಾ ತಳವಾರರು ಬಹುಶಃ ಇವರು ಅದೇ ಮೂಲ ಅಥವಾ ತಳದಲ್ಲಿದ್ದವರೆಂದೂ ಹಾಗಾಗಿ ಈ ಹೆಸರು ಬಂದಿರಬಹುದೆಂದು ಯೋಚಿಸಬಹುದು. ಗ್ರಾಮದ ರಕ್ಷಣೆ ಇವರ ಮುಖ್ಯ ಜವಾಬ್ದಾರಿಯಾಗಿತ್ತು. ಈ ಕುರಿತು ಮಾಹಿತಿ ಇರುವ ವಿಷಯ ಈ ಪ್ರದೇಶದಲ್ಲಿರುವ ಶಾಸನವೊಂದರಲ್ಲಿ ಉಲ್ಲೇಖವಾಗಿದೆ. ಅಲ್ಲದೇ ಈ ವಿವರದಿಂದ ಹೊಸದೊಂದು ವಿಚಾರವು ಗೊತ್ತಾಗುವುದು. ತಳವಾರ ಅಥವಾ ತಳಾರ ಹುದ್ದೆಯನ್ನು ಒಂದು ವರ್ಗ ಅಥವಾ ಒಂದೇ ವಂಶ ಮಾಡಬೇಕಾದ ಅವಶ್ಯಕತೆ ಇರಲಿಲ್ಲ. ಹಾಗೂ ಯಾರನ್ನಾದರೂ ಈ ಹುದ್ದೆಗೆ ನೇಮಕ ಮಾಡುತ್ತಿದ್ದರೆಂದು ಕಾಣುತ್ತದೆ. ಊರಿನ ಒಡೆಯ ಮಹಾಪ್ರಭುಗಳ ಮಕ್ಕಳು ಸಹ ಈ ಕಾರ್ಯವನ್ನು ಮಾಡುತ್ತಿದ್ದರೆಂದು ತೋರುವುದು. ಕ್ರಿ.ಶ.೧೧೭೪ರ ತೇದಿಯ ಏವೂರ ಶಾಸನವು[೨೧]. ಏಹೂರ ಮಹಾಪ್ರಭು ತ್ರಿಪುರಾನ್ತಕದೇವರಸರ ಮಗ ತಳವಾರ ಚಂಡೆಯನಾಯಕನೆಂದು ವಿವರಿಸುಲಾಗಿದೆ. ಈ ವಿವರದಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಆ ಸಂದರ್ಭದಲ್ಲಿ ಈ ಹುದ್ದೆಯು ವೃತ್ತಿಯಾಗಿತ್ತೇ ಹೊರತು ಜಾತಿ ವಾಚಕದಲ್ಲಿ ಇರಲಿಲ್ಲ. ಅಲ್ಲದೇ ಅದೊಂದು ಪ್ರತಿಷ್ಠಿತ ಹುದ್ದೆಯು ಆಗಿತ್ತು ಎಂಬುದು. ಕಾರಣ ಅವರು ಸಹ ದಾನದತ್ತಿಗಳನ್ನು ಬಿಡುವ ಹಾಗೂ ದೇವಾಲಯಗಳನ್ನು ಕಟ್ಟಿರುವ ಮಟ್ಟಿಗೆ ಉನ್ನತಸ್ಥಾನ ಹೊಂದಿದ್ದರು. ಆದರೆ ಮುಂದಿನ ದಿನಗಳಲ್ಲಿ ಕಾಲಕಳೆದಂತೆ ಇದು ಜಾತಿವಾಚಕ ರೂಪದಲ್ಲಿ ಬದಲಾವಣೆಗೊಂಡಿವೆ ಎಂದು ಅಭಿಪ್ರಾಯಿಸಬಹುದು.

ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಾಗಿರುವ ಪ್ರಾಚೀನ ಶಾಸನಗಳಲ್ಲಿ ವ್ಯಕ್ತವಾದ ವಿಚಾರವೆಂದರೆ ನಾಯಕ ಎನ್ನುವ ಪದ. ಅದು ವೃತ್ತಿವಾಚಕವೋ ಅಥವಾ ಜಾತಿವಾಚಕವಾಗಿದೆಯೋ ಎಂಬುದು. ಈ ಹಿನ್ನೆಲೆಯಲ್ಲಿ ಪ್ರಾಯಶಃ ಹೀಗೊಂದು ಊಹೆ ಮಾಡಲು ಅವಕಾಶವಿದೆ. ಸೈನ್ಯ ವೃತ್ತಿಗಳಿಗೆ ಸಂಬಂಧಿಸಿದ ಪದಗಳು ಅಥವಾ ವ್ಯಕ್ತಿಗಳನ್ನು ನಾವು ವೃತ್ತಿವಾಚಕದಲ್ಲಿ ಪರಿಗಣಿಸಬಹುದು. ಅಂದರೆ ಅದು ಅವರ ಹುದ್ದೆಯನ್ನು ಸೂಚಿಸುವ ಪದವಾಗಿತ್ತು. ಉದಾ. ದಂಡನಾಯಕ, ಮಹಾಪ್ರಚಂಡನಾಯಕ. ಮಹಾದಂಡನಾಯಕ ಮತ್ತು ಮಹಾನಾಯಕ ಎಂಬುದು. ಆದರೆ ಗ್ರಾಮಾಡಳಿತ ಘಟಕದಲ್ಲಿ ಕೊನೆಯ ವೃತ್ತಿಗಳಲ್ಲಿದ್ದ ನಾಯಕರುಗಳು ಕಾಲಕ್ರಮೇಣ ಜಾತಿ ಸೂಚಕದಲ್ಲಿ ಗುರುತಿಸಲಾರಂಭಿಸಿದರು.

ತಳವಾರ ವೃತ್ತಿಯಲ್ಲಿದ್ದ ಚಂಡೆಯನಾಯಕ[೨೨]. ಕಕ್ಕೇರಿಯ[೨೩]. ಬಮ್ಮೆಯ ನಾಯಕ ಮತ್ತು ಮಾದೆಯ ನಾಯಕ ಹಾಗೂ ಸಗರದ ಪ್ರಭು ಮಾದೆಯನಾಯಕರ[೨೪]. ಮಗ ಬಬಯ ನಾಯಕರನ್ನು ನಾವು ಜಾತಿ ವಾಚಕ ರೂಪದಲ್ಲಿ ಪರಿಗಣಿಸುವುದು ಸಮಂಜಸವೆಂದು ತೋರುತ್ತದೆ.

ಗ್ರಾಮದ ಪ್ರಭುಗಳು ಅಂದರೆ ಆ ಹುದ್ದೆಯಲ್ಲಿದ್ದ ವ್ಯಕ್ತಿಗಳು ಯಾರಾಗಿದ್ದರೋ ಅವರ ಮಕ್ಕಳೇ ತಳವಾರ ವೃತ್ತಿಯಲ್ಲಿ ಇದ್ದಿರುವುದನ್ನು ವಿಶೇಷವಾಗಿ ಗಮನಿಸಬಹುದು. ಯುದ್ಧ ಸಾಹಸ, ರಕ್ಷಣೆ ಹಾಗೂ ಕೋಟೆ ಕಾಯುವ ಕಾರ್ಯಗಳಲ್ಲಿ ಹೆಚ್ಚಾಗಿ ತೊಡಗಿದ್ದ ಈ ನಾಯಕರು ಬಹುಶಃ ವಿಜಯನಗರೋತ್ತರ ಕಾಲದಲ್ಲಿ ಸ್ಪಷ್ಟವಾಗಿ ತಮ್ಮನ್ನು ಜಾತಿ ಸೂಚಕ ರೂಪದಲ್ಲಿ ಗುರುತಿಸಿಕೊಳ್ಳುವ ಆಸೆಯನ್ನು ವ್ಯಕ್ತಪಡಿಸಿದಂತೆ ತೋರುತ್ತದೆ.

ಯಾದಗಿರಿ ಜಿಲ್ಲೆಯ ಬಹುಮುಖ್ಯ ಪ್ರಾಚೀನ ಆಡಳಿತ ವಿಭಾಗವಾಗಿದ್ದ ಸಗರ ನಾಡಿನ ಶಾಸನಗಳಲ್ಲಿ ಕಂಡುಬರುವ ಮತ್ತೊಂದು ಹುದ್ದೆ ಎಂದರೆ ಅದು ಸೌಧೊರೆಗಳದ್ದು. ಇದು ಚೌಧೊರೆ ಹಾಗೂ ಸೌಧೊರೆ ಅಥವಾ ಸೌದರೆ ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಸೌಧೊರೆ ಎನ್ನುವುದು ಅರಮನೆಯ ಸಂರಕ್ಷರ ಮುಖ್ಯಸ್ಥನೆಂದು ಗುರುತಿಸಲಾಗಿದೆ[೨೩]. ಇಂಥ ಅಧಿಕಾರಿಗಳ ಕುರಿತು ಕೆಲವಾರು ಶಾಸನಗಳಲ್ಲಿ ಉಲ್ಲೇಖವಾದ ವಿವರಗಳನ್ನು ಗಮನಿಸಬಹುದು. ಕ್ರಿ.ಶ.೧೩೪೦ರ ಕೆಂಬಾವಿ ಶಾಸನವು[೨೪]. ಜೈನ ಮುನಿಗೆ ಸಂಬಂಧಿಸಿದ ನಿಷಿದ್ಧಿಕಾ ಸ್ತಂಭವನ್ನು ಪ್ರತಿಷ್ಠಾಪಿಸುವಾಗ ಉಳಿದೆಲ್ಲಾ ಅಧಿಕಾರಿಗಳ ಜೊತೆಗೆ ಚಾ(ಚೌ)ಧರೆಯ ಸೋಜ ನಾಚಯ್ಯನು ದತ್ತಿ ನೀಡಿದನೆಂಬ ವಿವರವು ದಾಖಲಾಗಿದೆ.

ಈ ಹುದ್ದೆಯಲ್ಲಿದ್ದ ಅಧಿಕಾರಿಗಳ ಬಗೆಗೆ ಹೆಮ್ಮಡಗಿ(ಎಮ್ಮಡಗಿ) ಶಾಸನವಂತೂ ತುಂಬಾ ಮಹತ್ವ ವಿವರ ನೀಡುವ ದಾಖಲೆಯಾಗಿದೆ. ಕ್ರಿ.ಶ.೧೧೮೨ರ ತೇದಿಯ ಈ ಶಾಸನವು[೨೫]. ಸೌಧೊರೆಗಳೇ ಕಟ್ಟಿರುವ ದೇವಾಲಯ ಹಾಗೂ ಅದಕ್ಕೆ ಉಳಿದೆಲ್ಲ ಆಡಳಿತವರ್ಗವು ನೀಡಿದ ದಾನದತ್ತಿಗಳನ್ನು ಉಲ್ಲೇಖಿಸುತ್ತದೆ. ಸೌಧೊರೆಯಾಗಿದ್ದ ಪ್ರಭುಪಂದಿರಾಜ ಪಂದೇಶ್ವರ ದೇವಾಲಯ ಕಟ್ಟಿಸುತ್ತಾನೆ. ಅಲ್ಲದೇ ತಂದೆ ಕಟ್ಟಿಸಿದ ದೇವಸ್ಥಾನಕ್ಕೆ ಮಗ ಭಾವರಸ ಕಳಸಾರೋಹಣ ಮಾಡಿ ತಂದೆಯ ಹೆಸರು ಜಗತ್ಪ್ರಸಿದ್ಧವಾಗುವಂತೆ ಮಾಡಿದ ಎಂಬ ವಿವರಗಳಿವೆ. ಅವನನ್ನು ಈ ಶಾಸನವು ಅತೀಶಯ ಎನ್ನುವಷ್ಟು ವರ್ಣಿಸಿದೆ ಎಂದು ವಿವರಿಸಲಾಗಿದೆ[೨೬]. ಅಲ್ಲದೇ ಇದೇ ಶಾಸನದಲ್ಲಿ ಸೌಧೊರೆ ಭಾವರಸನ ವಂಶಾವಳಿಯನ್ನು ಸಹ ದಾಖಲಿಸಲಾಗಿದೆ.

ವಶಿಷ್ಟ

↓

ಚಂದಿರಾಜ+ಚಾಮಿಕವ್ವೆ

↓

ನಾಗವರ್ಮ್ಮ+ದೇಕವ್ವೆ

↓

ಮಲ್ಲಿದೇವ+ಜಾಚಿಕವ್ವೆ

↓

ದೇಮರಸ ಬಮ್ಮರಾಜ ವಿಭುಭಾವರಸ ೧+ ಚಂದಲದೇವಿ

↓

ಮಲ್ಲಿದೇವ-೨ ವಿಭುಪಂದಿರಾಜ+ಕಾಮಲದೇವಿ
(ಕಾಮಿಯಕ್ಕೈ)

↓

ಎಂಮ್ಮೆವಾಡಿಗೆ ಪ್ರಭುಸೌಧೊರೆಭಾವರಸ-೨+ಚಾಮಲದೇವಿ

ಹಾಗಾದರೆ ಇಷ್ಟೊಂದು ಪ್ರಸಿದ್ಧ ಪಡೆದಿದ್ದ ಈ ಸೌಧೊರೆ ಕುಟುಂಬ ಯಾವ ರಾಜನ ಅರಮನೆಯ ಸಂರಕ್ಷಕ ಮುಖ್ಯಸ್ಥರಾಗಿದ್ದರೆಂಬುದು ಕುತೂಹಲದ ಸಂಗತಿಯಾಗುತ್ತದೆ. ಕಲ್ಯಾಣದ ಚಾಲುಕ್ಯ ಅರಸನ ಕೊನೆಯ ಕಾಲಘಟ್ಟದ ಈ ಶಾಸನದ ಮಾಹಿತಿಯು ಇನ್ನು ಕೆಲವು ಮಹತ್ವ ವಿಚಾರಗಳನ್ನು ಹೊರಗೊಡುತ್ತದೆ.

ಕಲಚೂರ್ಯರಿಂದ ಸಿಂಹಾಸನ ಭ್ರಷ್ಟನಾಗಿ ಅಲೆದಾಡಿದ್ದ ನಾಲ್ಕನೆಯ ಸೋಮೇಶ್ವರನನ್ನು ದಂಡನಾಯಕ ಬಂಮಿದೇವ ಕಲ್ಯಾಣದ ಸಿಂಹಾಸನದ ಮೇಲೆ ಪುನರ್ ಪ್ರತಿಷ್ಠಾಪನೆ ಮಾಡಿದ್ದನ್ನು ಈ ಶಾಸನವು ವಿವರವಾಗಿ ದಾಖಲಿಸುತ್ತದೆ. ಅಲ್ಲದೇ ಅದೇ ಸಂದರ್ಭದಲ್ಲಿ ಈ ಪ್ರದೇಶದ ಮಹಾಮಂಡಳೇಶ್ವರನಾಗಿದ್ದ ಅಲ್ಲಹುಲಿ ದೇವರಸನು ತ್ರಿಭುವನಮಲ್ಲ ವೀರಸೋಮೇಶ್ವರನನ್ನು ಒಪ್ಪದೇ ತಿರಸ್ಕರಿಸಿದ್ದನು. ಆ ಕಾರಣಕ್ಕಾಗಿ ಬಮ್ಮಿದೇವನು ಆ ಮಹಾಮಂಡಳೇಶ್ವರನ ಮೇಲೆ ಎರಗಿ ಆತನನ್ನು ಒಪ್ಪುವಂತೆ ಮಾಡಿದ. ಯುದ್ಧಾನಂತರದಲ್ಲಿ ಬಮ್ಮಿದೇವನು ದೇವಪುರ(ಸುರಪುರ ತಾಲೂಕು)ದಲ್ಲಿ ತಂಗಿದ್ದಾಗ ಎಂಮ್ಮೆಡಿಗೆಯಲ್ಲಿ ಪಂದಿರಾಜ ಕಟ್ಟಿದ ದೇವಸ್ಥಾನಕ್ಕೆ ಅವನು ಮತ್ತು ಮಹಾಮಂಡಳೇಶ್ವರ ಅಲ್ಲಹುಲಿದೇವರಸ ಹಾಗೂ ಮುಂತಾದ ಆಡಳಿತವರ್ಗವು ದಾನ ನೀಡಿದ ಸುದೀರ್ಘ ಉಲ್ಲೇಖ ಈ ಶಾಸನದಲ್ಲಿದೆ. ಬಹುಶಃ ಭಾವರಸನು ಬಮ್ಮಿದೇವನ ಅರಮನೆಯ ಸಂರಕ್ಷಕ ವರ್ಗದ ಮುಖ್ಯಸ್ಥನಾಗಿರಬಹುದೇ? ಇದಕ್ಕೆ ಪುಷ್ಠಿದಾಯಕ ಆಧಾರಗಳೆಂಬಂತೆ ಕ್ರಿ.ಶ. ೧೧೮೫ರ ತೇದಿಯ ಹೋತಗಲ್ ಶಾಸನವು[೨೭]. ಅದೇ ದಂಡನಾಯಕ ಬಮ್ಮಿದೇವ ಮಹಾಮಂಡಳೇಶ್ವರ ಅಲ್ಲಹುಲಿದೇವರಸ ಸಹಿತವಾಗಿ ಶ್ರೀಮದಣಿಮಾದ್ಯಷ್ಟಗುಣ ಸಂಪನ್ನರಾದ ಸಿದ್ಧಶಿವಯೋಗಿ ಶಾನ್ತಿಮಯ್ಯಂಗಳ ಸಿದ್ಧರೇವಣಯ್ಯಗಳ ಕಾಲ್ತೊಳೆದು ಸೌಧೊರೆ ಬಮ್ಮಯ್ಯ(ಭಾವರಸ) ಸಗರ ಐದನೂರರ ಬಳಿಯ ಹೋತಗಲ್ಲನ್ನು ತ್ರಿಭೋಗಾಭ್ಯಂತರಂ ಸರ್ವನಮಸ್ಯವಾಗಿದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ.೧೧೭೩ರ ತೇದಿಯ ಇಡ್ಲೂರಿನ ಶಾಸನವು ಸಹ ಸೌಧೊರೆಗಳ ಕುರಿತು ಉಲ್ಲೇಖಿಸುತ್ತದೆ[೨೮]. ಇಡಗಲೂರು(ಇಡ್ಲೂರು) ಜಡೆಯ ಶಂಕರದೇವರ್ಗೆ ಅದರ ರಂಗಭೋಗ ಅಂಗಭೋಗ ಹಾಗೂ ನೈವೇದ್ಯಗಾಗಿ ಸೌಧೊರೆ ಬೋವಯನಾಯಕ ಹಾಗೂ ತಿಪ್ಪೆಯನಾಯಕ ಹೆಗಡೆ ಆಯಿತರಸರು ಹಾಗೂ ತಿಮ್ಮರಸರು ಈ ದಾನ ಬಿಟ್ಟ ಉಲ್ಲೇಖವಿದೆ.

ಈ ಸೌಧೊರೆಗಳ ಕುರಿತ ಉಲ್ಲೇಖಗಳು ಮಾತ್ರ ಹೆಚ್ಚಾಗಿ ಸಗರನಾಡಿನ ಹಾಗೂ ಕಲ್ಲಕೆಳಗು ನಾಡಿನ ಶಾಸನಗಳಲ್ಲಿ ಮಾತ್ರ ಕಂಡುಬರುತ್ತವೆ. ಆದರೆ ಹಗರಟಗಿ ನಾಡಿನ ಶಾಸನಗಳಲ್ಲಿ ಈ ಕುರಿತು ವಿವರಗಳು ಕಡಿಮೆಯೆಂದು ಅಭಿಪ್ರಾಯಿಸಬಹುದು.

**ಕೊನೆ ಟಿಪ್ಪಣಿ**

೧. ಕೊಪ್ಪ ಎಸ್.ಕೆ, ತರ್ದವಾಡಿ ನಾಡು ಒಂದು ಅಧ್ಯಯನ, ಪುಟ.೧೩

೨. ಆದೇ ಪುಟ.೧೪)

೩. ನಾಗಯ್ಯ ಜೆ.ಎಂ, ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪುಟ.೮೮

೪. ಅದೇ ಪುಟ–೮೮

೫. ಅದೇ ಪುಟ.೮೯

೬. ಅದೇ ಪುಟ–೮೯

೭. ಪಾಟೀಲ ಎಂ.ಬಿ(ಸಂ), ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೬೭

೮. ಕ.ಜಿ.ಶಾ.ಶಾ.ಸಂ.೧೮ ಮದ್ರಕಿ(ಶಹಾಪುರ).

೯. ಕವಿವಿ ಶಾಸನ ಸಂಪುಟ–೧೦, ಶಾಸನ ಸಂಖ್ಯೆ–೬೦, ಪುಟ.೨೦೩

೧೦. ಜೆ.ಎಂ.ನಾಗಯ್ಯ, ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ಪುಟ.೯೦

೧೧. ಅದೇ ಪುಟ.–೯೧

೧೨. ಬಡಿಗೇರ ವಾಸುದೇವ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ–೧, ಪುಟ.೧೧೫.

೧೩. ಗೋಪಾಲ ಆರ್, ಗುಲಬರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ.೧೫–೧೬

೧೪. ಪಾಟೀಲ ಎಂ.ಬಿ., ಗುಲಬರ್ಗಾ ಗ್ಯಾಜಿಟಿಯರ್, ಪುಟ.೩೪).

೧೫. ಪಂಡಿತ ಐರೋಡಿ ಯಜ್ಞನಾರಾಯಣ ಉಡುಪ, ಭಾರತ ಕೋಶ, ಪುಟ.೬೦೬-೬೦೮

೧೬. ನಾಗಯ್ಯ ಜೆ.ಎಂ, ಆರನೆಯ ವಿಕ್ರಮಾದಿತ್ಯ ಶಾಸನಗಳು: ಒಂದು ಅಧ್ಯಯನ, ಪುಟ.೨೦೪-೦೫

೧೭. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಪುಟ.xxiv

೧೮. ಶಿವಾನಂದ ವ್ಹಿ, ಹೈದರಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳ, ಪುಟ.೧೭೧೮

೧೯. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ ಪುಟ.೨೦೬

೨೦. ಗೋಗಿ ಹನುಮಾಕ್ಷಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ಪುಟ.೪೬೦.

೨೧. ಗೋಗಿ ಹನುಮಾಕ್ಷಿ, ಸು.ತಾ.ಶಾ. ಅದೇ, ಪುಟ.xxiv

೨೨. ಅದೇ ಪುಟ.೧೦೪

೨೩. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು:ಒಂದು ಅಧ್ಯಯನ, ಪುಟ.೨೦೫

೨೪. ಅದೇ ಪುಟ.೨೦೭

೨೫. ಅಕ್ಕಿ ಡಿ.ಎನ್. ಸಗರನಾಡ ದರ್ಶನ, ಪುಟ.೩೮-೪೨

೨೬. ಸುಂದರ ಅ., ಚರಿತ್ರೆ ಸಂಪುಟ–೧, ಕವಿವಿ, ಹಂಪಿ ಪ್ರಕಟಿಸಿರುವ ಗ್ರಂಥದ ಪುಟಸಂಖ್ಯೆ ೭೭–೮೨ರ ವಿವರಗಳನ್ನು ಆಧಾರವಾಗಿ ಪರಿಗಣಿಸಿದೆ

೨೭. ಅಕ್ಕಿ ಡಿ.ಎನ್, 'ಮಂದಾಕಿನಿ', ಹಕ್ಕಲುತೆನೆ, ಪುಟ.೪೨

೨೮. ಅಕ್ಕಿ ಡಿ.ಎನ್, ಹಕ್ಕಲುತೆನೆ, ಪುಟ.೪೨

೨೯. ಪಾಟೀಲ ಸಿ.ಎಸ್ ಮತ್ತು ಬಾಲಸುಬ್ರಮಣ್ಯ, ಶಿರವಾಳ, ಪುಟ.೧೩೪

೩೦. ನಾಗಯ್ಯ ಜೆ.ಎಂ, ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪುಟ.೧೨೬

೩೧. ಹೊಪ್ಪ ಎಸ್.ಕೆ, ತರ್ದವಾಡಿ ನಾಡು, ಪ್ರತಿಭಾ ಪ್ರಕಾಶನ, ಸಿಂದಗಿ, ೧೯೯೦

(ನಾಗಯ್ಯ ಜೆ.ಎಂ. ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೨ ಹಾಗೂ ಎಂ.ಬಿ.ಪಾಟೀಲ(ಸಂ) ಗುಲ್ಬರ್ಗಾ(ಕಲ್ಬುರ್ಗಿ) ಜಿಲ್ಲೆಯ ಗ್ಯಾಜಿಟಿಯರ್, ಬೆಂಗಳೂರು, ೧೯೯೬

೩೨. ಸು.ತಾ.ಶಾ.ಶಾಸನ ಸಂಖ್ಯೆ–೨, ಎಡೆಯಾಪುರ

೩೩. ಗೋಗಿ ಹನುಮಾಕ್ಷಿ, ಸು.ತಾ.ಶಾ. ಪುಟ xi

೩೪. ಕ.ಜಿ.ಶಾ.ಪುಟ.೩೪೫–೩೭೧

೩೫. ಕ.ಜಿ.ಶಾ.ಶಾ.ಸಂ.೧೭ ಭೀಮರಾಯನಗುಡಿ, ಶಹಾಪುರ ತಾಲೂಕು

೩೬. ಅದೇ ಶಾ.ಸಂ.೩೦, ಸಿರವಾಳ, ಶಹಾಪುರ ತಾಲೂಕು

೩೭. ಅದೇ ಪುಟ.ಶಾ.ಸಂ.೩೫, ಸಂಗಮ.ಶ.ತಾ.

೩೮. ಅದೇ ಪುಟ.೪೫೩

೩೯. ಅದೇ ಪುಟ.ಶಾ.ಸಂ.೪೨, ಹೋತಗಲ್ಲ ಶ.ತಾ.

೪೦. ಕೃಷ್ಣ ಎ (ಸಂ), ಸಗರನಾಡ ದರ್ಶನ, ಪುಟ.೩

೪೧. ಧ್ರುವನಾರಾಯಣ (ಎಂ) ಸಂ ಸುರಪುರ ಸಂಸ್ಥಾನದ ಇತಿಹಾಸ, ಪುಟ.೧೧-೧೨

೪೨. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಪುಟ.xi

೪೩. ಸುರಪುರ ತಾಲೂಕಿನ ಶಾಸನಗಳು, ಪುಟ.xi

೪೪. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ.೨೨, ಹಗರಟಗಿ

೪೫. ಸು.ತಾ.ಶಾ.ಶಾ.ಸಂ.೭೪, ರಾಜನಕೋಳೂರು

೪೬. ಲಅದೇ ಶಾ.ಸಂ.೫೨, ಮುದನೂರು

೪೭. ಅದೇ ಶಾಸನ ಸಂಖ್ಯೆ–೨೬, ಕಡಕಲ್ಲ

೪೮. ಕವಿವಿ ಶಾಸನ ಸಂಪುಟ–೧೦, ವಿಜಾಪುರ ಜಿಲ್ಲೆ

೪೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ.೧೦, ಶಾ.ಸಂ.೪೧ ತುಂಬಗಿ(ಮುದ್ದೇಬಿಹಾಳ ತಾಲೂಕು).

೫೦. ಅದೇ ಶಾಸನ ಸಂಖ್ಯೆ, ೪೨, ತುಂಬಗಿ(ಮುದ್ದೇಬಿಹಾಳ ತಾಲೂಕು), ಪುಟ.೫೫೫

೫೧. ಅದೇ ಶಾಸನ ಸಂಖ್ಯೆ ೩೬, ಬಾವುರು, (ಮುತಾ)ಪುಟ.೫೪೪–೪೫

೫೨. ಅದೇ ಶಾಸನ ಸಂಖ್ಯೆ–೫೦, ಬೇವೂರು(ಮುತಾ), ಪುಟ–೫೬೩–೬೪

೫೩. ಅದೇ ಶಾಸನ ಸಂಖ್ಯೆ: ೫೧, ತಾಳಿಕೋಟೆ,(ಮುತಾ) ಪುಟ.೬೫೬–೬೬

೫೪. ಅದೇ ಶಾಸನ ಸಂಖ್ಯೆ–೫೪, ತಾಳಿಕೋಟೆ(ಮುತಾ) ಪುಟ.೫೭೧–೫೭೨

೫೫. ಅದೇ ಶಾಸನ ಸಂಖ್ಯೆ ೩೭, ಮಿಣಜಗಿ(ಮುತಾ) ಪುಟ.೫೪೬–೫೪೮

೫೬. ಅದೇ ಶಾಸನ ಸಂಖ್ಯೆ ೪೨, ಕಡ್ಲೇವಾಡ, ಪುಟ.೨೯೬–೯೭

೫೭. ಅದೇ ಶಾಸನ ಸಂಖ್ಯೆ ೮೭, ಕಲಕೇರಿ(ಸಿಂದಗಿ ತಾಲೂಕು) ಪುಟ.೩೫೮–೫೬೧

೫೮. ಅದೇ ಶಾಸನ ಸಂಖ್ಯೆ ೮೫, ಕಲಕೇರಿ(ಸಿಂದಗಿ ತಾಲೂಕು) ಪುಟ.೩೫೦

೫೯. ಅದೇ ಶಾಸನ ಸಂಖ್ಯೆ:೮೬, ಕಲಕೇರಿ(ಸಿಂದಗಿ ತಾಲೂಕು) ಪುಟ.೩೫೬

೬೦. ಅದೇ ಶಾಸನ ಸಂಖ್ಯೆ:೬೦, ಸಾಲ್ವಡಗಿ(ಬ.ತಾಲೂಕು) ಪುಟ.೪೮೮–೮೯

೬೧. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೫೨

೬೨. ಅದೇ ಪುಟ.೫೪

೬೩. ಅದೇ ಪುಟ.೫೪

೬೪. ಅದೇ ಪುಟ.೫೬–೫೭

೬೫. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾಸನ ಸಂಖ್ಯೆ ೪೫, ಕೊಂಡಗುಳಿ,(ಜೇವರ್ಗಿ ತಾಲೂಕು) ಪುಟ.೩೩೫

೬೬. ಅದೇ ಪುಟ.೩೩೭

೬೭. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ ೮೧, ಹಗರಟಗಿ, ಪುಟ.೧೬೮

೬೮. ಅದೇ ಶಾಸನ ಸಂಖ್ಯೆ ೮೨, ಹಗರಟಗಿ, ಪುಟ.೧೬೯–೭೦

೬೯. ಅದೇ ಶಾಸನ ಸಂಖ್ಯೆ ೮೩, ಹಗರಟಗಿ, ಪುಟ.೧೭೧

೭೦. ಅದೇ ಶಾಸನ ಸಂಖ್ಯೆ ೮೫, ಹಗರಟಗಿ, ಪುಟ.೧೭೫–೭೯

೭೧. ಅದೇ ಶಾಸನ ಸಂಖ್ಯೆ ೮೬, ಹಗರಟಗಿ, ಪುಟ.೧೮೦–೧೮೨

೭೨. ಅದೇ ಶಾಸನ ಸಂಖ್ಯೆ ೮೮, ಹಗರಟಗಿ ಪುಟ.೧೮೫–೮೭

೭೩. ಅದೇ ಶಾಸನ ಸಂಖ್ಯೆ–೯೦, ಹಗರಟಗಿ, ಪುಟ.೧೮೯–೧೯೧

೭೪. ಗೋಪಾಲ ಆರ್.(ಸಂ), ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ.೨೧–೨೨

೭೫. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾ.ಸಂ.೪೦, ಹುಲಿಕಲ್(ಶಹಾಪುರ ತಾಲೂಕು), ಪುಟ.೪೫೯

೭೬. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೫೫

೭೭. ಸು.ತಾ.ಶಾ.ಶಾ.ಸಂ.೬೭, ಹಗರಟಗಿ

೭೮. ಸುರಪುರ ತಾಲೂಕಿನ ಶಾಸನಗಳು, ಪುಟ.ixix

೭೯. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಿಘಂಟು, ಸಂಪುಟ–ಐದು, ಪುಟ.೫೦೮೪

೮೦. ಅದೇ ಪುಟ. ೫೦೮೬

೮೧. ಪಾಟೀಲ ಎಂ.ಬಿ., ಗುಲ್ಬರ್ಗಾ ಗ್ಯಾಜಿಟಿಯರ್, ಪುಟ.೭೯೩

೮೨. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ–೯೦, ಹಗರಟಗಿ, ಪುಟ.೧೯೦

೮೩. ಕನ್ನಡ ನಿಘಂಟು, ಸಂಪುಟ–ಎರಡು, ಪುಟ.೧೬೦೧

೮೪. ನಾಗಯ್ಯ ಜೆ.ಎಂ, ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ಪುಟ.೧೨೬

೮೫. ಅದೇ ಪುಟ.೧೨೯

೮೬. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೬೫–೨೭೦

೮೭. ಅದೇ ಪುಟ.೨೬೬

೮೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧೦, ಶಾಸನ ಸಂಖ್ಯೆ ೫೪, ತಾಳಿಕೋಟೆ, ಪುಟ.೫೭೦–೫೭೨

೮೯. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೬೬

೯೦. ಅದೇ ಪುಟ.೨೬೬

೯೧. ಅದೇ ಪುಟ.೨೯೯

೯೨. ಅದೇ ಪುಟ.೨೭೧

೯೩. ಅದೇ ಪುಟ.೨೭೧

೯೪. ಅದೇ ಪುಟ.೨೭೧–೨೭೨

೯೫. ಶಿವಾನಂದ ವ್ಹಿ., ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ಶಾಸನ ಸಂಖ್ಯೆ ೨೬, ಹುಣಸಿ ಹಡಗಲಿ(ಕಲಬುರ್ಗಿ ತಾಲೂಕು) ಪುಟ.೫೮

೯೬. ಗೋಗಿ ಹನುಮಾಕ್ಷಿ, ಅನುಶಾಸನ ಸಂಪುಟ.೧, ಪುಟ.೨೭೪

೯೭. ಗೋಪಾಲ ಆರ್(ಸಂ), ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ.೧೫–೧೬

೯೮. ಅದೇ ಪುಟ.೧೬

೯೯. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ–೮೫, ಹಗರಟಗಿ, ಪುಟ.೧೭೬

೧೦೦. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಶಾಸನಸಂಖ್ಯೆ–೩೧, ಕೆಂಬಾವಿ ೫೯ ಮತ್ತು ೬೦ ಮುದನೂರು

೧೦೧. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ–೩೧, ಕೆಂಬಾವಿ ಪುಟ.೭೧

೧೦೨. ಅದೇ ಶಾಸನ ಸಂಖ್ಯೆ–೩೧ ಕೆಂಬಾವಿ, ಪುಟ.೬೮–೭೨

೧೦೩. ಅದೇ ಶಾಸನ ಸಂಖ್ಯೆ,-೩೧, ಕೆಂಬಾವಿ, ಪುಟ.೬೯

೧೦೪. ಅದೇ ಶಾ.ಸಂ.೩೧, ಕೆಂಬಾವಿ, ಪುಟ.೬೮

೧೦೫. ಅದೇ ಶಾಸನ-೩೧, ಕೆಂಬಾವಿ, ಪುಟ.೭೦

೧೦೬. ಅದೇ ಶಾಸನ ಸಂಖ್ಯೆ-೨, ಎಡೆಯಾಪುರ ಪುಟ.೩

೧೦೭. ಕೊಪ್ಪ ಎಸ್.ಕೆ, ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೯೫

೧೦೮. ಬಡಿಗೇರ ವಾಸುದೇವ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ-೧, ಪುಟ.೧೨೫

೧೦೯. ಕೊಪ್ಪ ಎಸ್.ಕ, ತರ್ದವಾಡಿನಾಡು: ಒಂದು ಅಧ್ಯಯನ, ಪುಟ.೯೫

೧೧೦. ಸುರಪುರ ತಾಲೂಕಿನ ಶಾಸನಗಳು, ಶಾಸಂಸಂಖ್ಯೆ-೮, ಐವೂರು, ಪುಟ.೧೩

೧೧೧. ಕೊಪ್ಪ ಎಸ್.ಕೆ, ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೯೫

೧೧೨. ಅದೇ, ಪುಟ.೯೬

೧೧೩. ಅದೇ ಪುಟ.೯೭

೧೧೪. ಅದೇ ಪುಟ.೯೭

೧೧೫. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ-೮, ಐವೂರು, ಪುಟ.೧೬

೧೧೬. ಅದೇ ಶಾಸನ ಸಂಖ್ಯೆ-೮, ಐವೂರು, ಪುಟ.೧೫).

೧೧೭. ಅದೇ ಶಾಸನ ಸಂಖ್ಯೆ-೯೮, ಹೆಮ್ಮಡಗಿ, ಪುಟ.೨೦೯

೧೧೮. ಅದೇ ಶಾಸನ ಸಂಖ್ಯೆ-೭೪, ರಾಜನಕೋಳೂರು, ಪುಟ.೧೫೭

೧೧೯. ಅದೇ ಶಾಸನ ಸಂಖ್ಯೆ-೭೫, ರಾಜನಕೋಳೂರು, ಪುಟ.೧೬೦

೧೨೦. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೬೬-೬೮

೧೨೧. ಅದೇ ಪುಟ.೨೭೨-೨೭೩

೧೨೨. ಅದೇ ಪುಟ.೨೭೧

೧೨೩. ಸು.ತಾ.ಶಾ.ಶಾ.ಸಂ.೬೬, ಮುದನೂರು, ಪುಟ.೧೩೮

೧೨೪. ಅದೇ ಶಾಸನ ಸಂಖ್ಯೆ-೬೫, ಮುದನೂರು, ಪುಟ.೧೩೩

೧೨೫. ಶಿವಾನಂದ ವ್ಹಿ., ಹೈದ್ರಾಬಾದ್ ಕರ್ನಾಟಕದ ಶಿಲಾಶಾಸನಗಳು, ಪುಟ.X

೧೨೬. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು, ಒಂದು ಅಧ್ಯಯನ, ಪುಟ.೩೬

೧೨೭. ಸುರಪುರ ತಾಲೂಕಿನ ಶಾಸನಗಳು, ಶಾಸನ ಸಂಖ್ಯೆ-೪೯, ಬೊಮ್ಮನಹಳ್ಳಿ, ಪುಟ.೧೦೪

೧೨೮. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾಸನ ಸಂಖ್ಯೆ.೨೮, ಸಗರ, ಪುಟ.೪೩೨

೧೨೯. ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ಪುಟ.೨೯

೧೩೦. ಅದೇ ಪುಟ.೨೯

೧೩೧. ಅದೇ ಪುಟ.೪೩

೧೩೨. ಸು.ತಾ.ಶಾ.ಶಾಸನಸಂಖ್ಯೆ–೯೪, ಹುಣಸಗಿ, ಪುಟ.೨೦೧

೧೩೩. ಅದೇ ಶಾಸನ ಸಂಖ್ಯೆ–೩೧, ಕೆಂಬಾವಿ ಪುಟ.೭೦

೧೩೪. ಅದೇ ಶಾಸನ ಸಂಖ್ಯೆ–೬೪, ಮುದನೂರು, ಪುಟ.೧೩೪

೧೩೫. ಅದೇ ಪುಟ.xxxiii

೧೩೬. ಅದೇ ಶಾ.ಸಂ.೮, ಐವೂರು

೧೩೭. ಅದೇ ಶಾಸನ ಸಂಖ್ಯೆ–೯೮ ಹೆಮ್ಮಡಗಿ

೧೩೮. ಅದೇ ಶಾಸನ ಸಂಖ್ಯೆ–೯೦, ಹಗರಟಗಿ

೧೩೯. ಕೊಪ್ಪ ಎಸ್.ಕೆ, ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೯೮

೧೪೦. ಕಲಬುರ್ಗಿಯ ಜಿಲ್ಲೆಯ ಶಾಸನಗಳು, ಶಾಸನ ಸಂಖ್ಯೆ ೭೦, ವಡಗೇರಿ, ಜೇವರ್ಗಿ ತಾಲೂಕು, ಪುಟ.೩೮೨

೧೪೧. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೭೧

೧೪೨. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೯೮

೧೪೩. ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಾಸನ ಸಂಖ್ಯೆ ೧೮, ಮದ್ರಕಿ, ಪುಟ.೪೧೬

೧೪೪. ದೊಣ್ಣೆಗೌಡ್ರು ವೆಂಕಣ್ಣ ಮತ್ತು ಸಿದ್ದಯ್ಯ ಕಲಾಲ, ಯಾದಗಿರಿ ತಾಲೂಕಿನ ದೇವಾಲಯಗಳ ವಾಸ್ತು ಶಿಲ್ಪ ಮತ್ತು ಇತರ ಲೇಖನಗಳು, ಸೋನಿ ಪ್ರಕಾಶನ, ಯಾದಗಿರಿ, ೨೦೦೧

೧೪೫. ಕ.ವಿ.ವಿ. ಶಾಸನ ಸಂಪುಟ.೧೦ ವಿಜಾಪುರ ಜಿಲ್ಲೆ, ಇಂಡಿ ತಾಲೂಕು, ಶಾಸನ ಸಂಖ್ಯೆ–೬೦, ರೂಗಿ, ಪುಟ.೨೦೨–೨೦೪

೧೪೬. ಸು.ತಾ.ಶಾ.ಶಾ.ಸಂ.೯೨, ಹಾವಿನಾಳ, ಪುಟ.೧೯೪

೧೪೭. ಕವಿವಿ ಶಾಸನ ಸಂಪುಟ.೧೦, ವಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲೂಕು, ಶಾಸನ ಸಂಖ್ಯೆ.೫೩, ತಾಳಿಕೋಟೆ, ಪುಟ.೫೬೩

೧೪೮. ಅದೇ ಸಿಂದಗಿ ತಾಲೂಕು ಶಾಸನ ಸಂಖ್ಯೆ–೪೯, ಕಡ್ಲೇವಾಡ, ಪುಟ.೨೯೭

೧೪೯. ಶಾ.ತಾ.ಶಾ.ಶಾ. ಸಂಖ್ಯೆ–೯೮, ಹೆಮ್ಮಡಗಿ, ಪುಟ.೨೦೨–೨೦೩

೧೫೦. ನೆಲೆವೀಡಿನ ಕುರಿತು(ಸುರಪುರ ತಾಲೂಕಿನ ಐವೂರು ಗ್ರಾಮದ ಕ್ರಿ.ಶ.೧೦೮೪ರ ಕಾಲದ ಶಾಸನ, ಸು.ತಾ.ಶಾ. ಶಾಸನ ಸಂಖ್ಯೆ–೬. ಐವೂರು, ಪುಟ.–೯

೧೫೧. ಕ.ಜಿ.ಶಾ.ಸಂ.೧೧, ದೋರನಹಳ್ಳಿ, (ಶಹಾಪುರ ತಾಲೂಕು) ಪುಟ.೪೦೬

೧೫೨. ಸು.ತಾ.ಶಾ. ಶಾಸನ ಸಂಖ್ಯೆ ೨೮, ಕನ್ನೆಳ್ಳಿ, ಪುಟ.೬೪

೧೫೩. ಕ.ಜಿ.ಶಾ. ಶಹಾಪುರ ತಾಲೂಕು, ಶಾಸನ ಸಂಖ್ಯೆ–೨೮, ಸಗರ, ಪುಟ.೪೩೨

೧೫೪. ಅದೇ, ಶಾಸನ ಸಂಖ್ಯೆ–೪೦, ಹುಲಿಕಲ್, ಪುಟ.೪೫೯

೧೫೫. ಅದೇ–ಶಾಸನ ಸಂಖ್ಯೆ.೨, ಎಡೆಯಾಪುರ, ಪುಟ.೩

೧೫೬. ಅದೇ ಶಾಸನ ಸಂಖ್ಯೆ-೩೧, ಕಂಬಾವಿ ಪುಟ-೭೦

೧೫೭. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೯೯

೧೫೮. ಅದೇ ಪುಟ.೯೯

೧೫೯. ಅದೇ, ಪುಟ.೯೯

೧೬೦. ಅದೇ ಪುಟ.೯೯

೧೬೧. ಕ.ಜಿ.ಶಾ.ಶಾ.ಸಂ.೩೩, ಸಿರಿವಾಳ. ಪುಟ.೪೪೩, ಶಹಾಪುರ ತಾಲೂಕು).

೧೬೨. ಅದೇ, ಪುಟ.೧೦೦

೧೬೩. ಸುತಾಶಾ.ಶಾ.ಸಂ.-೪೬, ಬೈಚಬಾಳ

೧೬೪. ಅದೇ ಶಾಸನ ಸಂಖ್ಯೆ-೪೯, ಗೋನಾಳ, ಪುಟ.೧೦೫

೧೬೫. ಅದೇ ಶಾ.ಸಂ.,೫೫, ಮುದನೂರು, ಪುಟ.೧೧೯

೧೬೬. ಅದೇ ಶಾ.ಸಂ.೮೧, ಹಗರಟಗಿ, ಪುಟ.೧೬೮

೧೬೭. ಕ.ಜಿ.ಶಾ.ಶಾ.ಸಂ.೩೨, ಸಿರಿವಾಳ(ಶಹಾಪುರ ತಾಲೂಕು), ಪುಟ.೪೩೯

೧೬೮. ಗೋಗಿ ಹನುಮಾಕ್ಷಿ, ಅನುಶಾಸನ-ಪುಟ.೨೬೬

೧೬೯. ಅದೇ ಪುಟ.೨೬೯

೧೭೦. ಅದೇ ಮರಮಕಲ್, ಶ.ತಾ.ಪುಟ.೪೨೪

೧೭೧. ಸು.ತಾ.ಶಾ.ಶಾಸನ ಸಂಖ್ಯೆ ೬೭, (ಮುದನೂರು, ಪುಟ.೧೪೨).

೧೭೨. ಅದೇ ಪುಟ.೨೭೧

೧೭೩. ಅದೇ ಪುಟ.೩೭೬

೧೭೪. ಅದೇ ಪುಟ.೨೮೦

೧೭೫. ಅದೇ ಪುಟ.೨೬೯

೧೭೬. ಸು.ತಾ.ಶಾ.ಶಾ.ಸಂಖ್ಯೆ ೯೦, ಹಗರಟಗಿ, ಪುಟ.೧೯೦

೧೭೭. ಶ್ರೀನಿವಾಸ ರಿತ್ತಿ(ಸಂ), ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷ ಕೋಶ, ಪುಟ.೧೯-೨೧

೧೭೮. ಸು.ತಾ.ಶಾ.ಶಾಸನ ಸಂಖ್ಯೆ-೯೦, ಹಗರಟಗಿ ಪುಟ.೧೯೦

೧೭೯. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೦೮

೧೮೦. ಅದೇ ಪುಟ.೧೦೦

೧೮೧. ಕ.ಜಿ.ಶಾ, ಶಾಸನ ಸಂಖ್ಯೆ ೩೨, ಸಿರಿವಾಳ(ಶಹಾಪುರ ತಾಲೂಕು) ಪುಟ.೪೩೯

೧೮೨. ಅದೇ ಶಾಸನ ಸಂಖ್ಯೆ, ೩೬, ಸಂಗಮ(ಶಹಾಪುರ ತಾಲೂಕು), ಪುಟ.೪೫೧

೧೮೩. ಸು.ತಾ.ಶಾ.ಶಾಸನ ಸಂಖ್ಯೆ.೮, ಏವೂರು. ಪುಟ.೨೨

೧೮೪. ಅದೇ ಶಾಸನ ಸಂಖ್ಯೆ, ೯೮, ಹೆಮ್ಮಡಗಿ, ಪುಟ.೨೧೧

೧೮೫. ಕ.ಜಿ.ಶಾ.ಶಾ.ಸಂ.೩೨, ಸಿರಿವಾಳ(ಶಹಾಪುರ ತಾಲೂಕು) ಪುಟ.೪೪೦

೧೮೬. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೦೧

೧೮೭. ಸ.ತಾ.ಶಾ.ಸಂ.೭, ಐವೂರು ಪುಟ.೧೧

೧೮೮. ಅದೇ ಶಾ.ಸಂ.೫೫, ಮುದನೂರು

೧೮೯. ಅದೇ ಶಾಸನ ಸಂಖ್ಯೆ-೧೩, ಐವೂರು, ಪುಟ.೩೬

೧೯೦. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೭೦

೧೯೧. ಶ್ರೀನಿವಾಸ ರಿತ್ತಿ(ಸಂ), ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪುಟ.೨೦೭

೧೯೨. ಸು.ತಾ.ಶಾ.ಶಾ.ಸಂ.೯೩, ಹಿರಿಯ ಹೆಬ್ಬಾಳ, ಪುಟ.೧೯೭

೧೯೩. ಅದೇ ಶಾಸನ ಸಂಖ್ಯೆ.೯೮, ಹೆಮ್ಮಡಗಿ, ಪುಟ.೨೧೦

೧೯೪. ಕೊಪ್ಪ ಎಸ್.ಕೆ., ತರ್ದವಾಡಿ ನಾಡು ಒಂದು ಅಧ್ಯಯನ, ಪುಟ.೧೦೪

೧೯೫. ಅದೇ ಪುಟ.೧೦೪

೧೯೬. ಕ.ಜಿ.ಶಾ.ಶಾ.ಸಂ.೩೫, ಸಂಗಮ(ಶಹಾಪುರ ತಾಲೂಕು)

೧೯೭. ಕೊಪ್ಪ ಎಸ್.ಕೆ, ತರ್ದವಾಡಿನಾಡು: ಒಂದು ಅಧ್ಯಯನ ಪುಟ.೧೦೫

೧೯೮. ಅದೇ ಪುಟ.೧೦೬

೧೯೯. (ಸು ತಾ.ಶಾ.ಶಾ.ಸಂ.೫೦, ಮಲ್ಲಾ ಬಿ., ಪುಟ.೧೦೭

೨೦೦. ಅದೇ ಶಾ.ಸಂ.೩೧, ಕೆಂಭಾವಿ, ಪುಟ.೬೮

೨೦೧. ಅದೇ ಶಾಸನ ಸಂಖ್ಯೆ-೮, ಐವೂರು, ಪುಟ.೨೪

೨೦೨. ಅದೇ ಶಾಸನ ಸಂಖ್ಯೆ ೧೭, ಐವೂರು, ಪುಟ.೪೪

೨೦೩. ಅದೇ ಶಾ.ಸಂ.೬೭, ಮುದನೂರು, ಪುಟ.೧೪೨

೨೦೪. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪು.೨೭೪

೨೦೫. ಸು.ತಾ.ಶಾ.ಶಾ.ಸಂ.೮೮, ಹಗರಟಗಿ, ಪುಟ.೧೮೬

೨೦೬. ಕ.ಜಿ.ಶಾ.ಸಂ.೩೪, ಸಿರಿವಾಳ(ಶಹಾಪುರ ತಾಲೂಕು), ಪುಟ.೪೪೫

೨೦೭. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೧೧

೨೦೮. ಸು.ತಾ.ಶಾ.ಶಾ.ಸಂ.೩೧, ಕೆಂಬಾವಿ, ಪುಟ.೭೧

೨೦೯. ಕ.ಜಿ.ಶಾ.ಶಾ.ಸಂ.೨೧, ಮದ್ರಿಕಿ(ಶಹಾಪುರ ತಾಲೂಕು), ಪುಟ.೪೨೧

೨೧೦. ಅದೇ ಶಾಸನ ಸಂಖ್ಯೆ ೩೨, ಸಿರಿವಾಳ(ಶಹಾಪುರ ತಾಲೂಕು), ಪುಟ.೪೪೦

೨೧೧. ಅದೇ, ಶಾಸನ ಸಂಖ್ಯೆ.೩೩, ಸಿರಿವಾಳ(ಶಹಾಪುರ ತಾಲೂಕು) ಪುಟ.೪೪೩

೨೧೨. ಸು.ತಾ.ಶಾ.ಶಾ.ಸಂ.೪೫, ಜಿಜಾಸಪುರ, ಪುಟ.೯೮

೨೧೩. ಕ.ಜಿ.ಶಾ.ಶಾ.ಸಂ.೨೮, ಸಗರ(ಶಹಾಪುರ ತಾಲೂಕು) ಪುಟ.೪೩೩

೨೧೪. ಸು.ತಾ.ಶಾ.ಸಂ.೬೧, ಮುದನೂರು, ಪುಟ.೧೨೯-೧೩೦

೨೧೫. ಅದೇ ಶಾಸನ ಸಂಖ್ಯೆ ೮೫, ಹಗರಟಗಿ

೨೧೬. ಅದೇ ಶಾ.ಸಂ.೯೦, ಹಗರಟಗಿ

೨೧೭. ಅದೇ ಶಾ.ಸಂ-೨, ಎಡೆಯಾಪುರ

೨೧೮. ಅದೇ ಶಾ.ಸಂ.ಸಂ.೮೪ ಹಗರಟಗಿ

೨೧೯. ಅದೇ ಶಾ.ಸಂ.೫೨, ಮುದನೂರು

೨೨೦. ಅದೇ ಶಾ.ಸಂ.೭೩, ಯಾಳಗಿ

೨೨೧. ಕೊಪ್ಪ ಎಸ್.ಕೆ., ತರ್ದವಾಡಿನಾಡು: ಒಂದು ಅಧ್ಯಯನ, ಪುಟ.೧೧೩

೨೨೨. ಸು.ತಾ.ಶಾ.ಶಾ.ಸಂ.೬೭, ಮುದನೂರು, ಪುಟ.೧೪೧

೨೨೩. ಅದೇ ಶಾಸಂ ೮೫, ಹಗರಟಗಿ

೨೨೪. ಕ.ಜಿ.ಶಾ.ಶಾ.ಸಂ.೧೮, ಮದ್ರಕಿ(ಶಹಾಪುರ ತಾಲೂಕು) ಪುಟ.೪೧೬

೨೨೫. ಸ.ತಾ.ಶಾ.ಶಾ.ಸಂಖ್ಯೆ-೩೭, ತಿಂಥಣಿ, ಪುಟ.೮೮

೨೨೬. ಅದೇ ಶಾ.ಸಂ.೫೩, ಮುದನೂರು ಪುಟ.೧೧೫

೨೨೭. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೧೫

೨೨೮. ಅದೇ ಪುಟ.೧೧೪

೨೨೯. ಅದೇ ಪುಟ.೧೧೫

೨೩೦. ಅದೇ ಪುಟ.೧೧೩

೨೩೧. ಸು.ತಾ.ಶಾ.ಶಾ.ಸಂ.೧೫, ಏವೂರು, ಪುಟ.೪೦

೨೩೨. ಅದೇ ಶಾ.ಸಂ.೭೫, ರಾಜನಕೋಳೂರು, ಪುಟ.೧೬೦

೨೩೩. ಅದೇ ಶಾ.ಸಂ.೭೪, ರಾಜನಕೋಳೂರು, ಪುಟ.೧೫೭

೨೩೪. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೧೭

೨೩೫. ಸು.ತಾ.ಶಾ.ಶಾ.ಸಂ-೮, ಏವೂರು, ಪುಟ.೨೫

೨೩೬. ಅದೇ ಶಾ.ಸಂ.೨೬, ಕಡಕಲ್ಲ, ಪುಟ.೬೦

೨೩೭. ಅದೇ ಶಾ.ಸಂ.೬೬, ಮುದನೂರು, ಪುಟ.೧೩೯.

೨೩೮. ಅದೇ ಶಾ.ಸಂ.೫೧೩, ಮುದನೂರು, ಪುಟ.೧೧೫

೨೩೯. ಅದೇ ಶಾ.ಸಂ.೯೦, ಹಗರಟಗಿ, ಪುಟ.೧೯೦

೨೪೦. ಅದೇ ಶಾಸನ ಸಂಖ್ಯೆ-೩೭, ತಿಂಥಣಿ, ಪುಟ.೮೭

೨೪೧. ಅದೇ ಶಾ.ಸಂ.೭೪, ರಾಜನಕೋಳೂರು, ಪುಟ.೧೫೭

೨೪೨. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೨೨

೨೪೩. ಅದೇ ಶಾ.ಸಂ.ಸಂ.೫೩, ಮುದನೂರು, ಪುಟ.೧೧೫

೨೪೪. ಅದೇ ಶಾ.ಸಂ.೫೪, ಮುದನೂರು, ಪುಟ.೧೧೬

೨೪೫. ಅದೇ ಶಾ.ಸಂ.೭೦, ಮುದನೂರು, ಪುಟ.೧೫೦

೨೪೬. ಸು.ತಾ.ಶಾ.ಶಾ.ಸಂ.೮೫, ಹಗರಟಗಿ, ಪುಟ.೧೭೬

೨೪೭. ಅದೇ ಶಾ.ಸಂ.೫೪, ಮುದನೂರು, ಪುಟ.೧೧೬

೨೪೮. ಅದೇ ಶಾ.ಸಂ.೫೫, ಮುದನೂರು, ಪುಟ.೧೧೮

೨೪೯. ಅದೇ ಪುಟ.೧೧೮

೨೫೦. ಅದೇ ಶಾ.ಸಂ.೬೪, ಮುದನೂರು ಪುಟ.೧೩೪

೨೫೧. ಅದೇ ಶಾ.ಸಂ.೫೭, ಮುದನೂರು

೨೫೨. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೧೫

೨೫೩. ಸು.ತಾ.ಶಾ.ಶಾ.ಸಂ.೨, ಎಡೆಯಾಪುರ, ಪುಟ.೩

೨೫೪. ಕ.ಜಿ.ಶಾ.ಶಾ.ಸಂ.೩೦, ಸಿರಿವಾಳ(ಶಹಾಪುರ ತಾಲೂಕು), ಪುಟ.೪೩೭

೨೫೫. ಸು.ತಾ.ಶಾ.ಶಾ.ಸಂ.೮೩, ಹಗರಟಗಿ, ಪುಟ.೧೭೧

೨೫೬. ಅದೇ ಶಾ.ಸಂ.೯೦, ಹಗರಟಗಿ, ಪುಟ.೧೯೦

೨೫೭. ಕ.ಜಿ.ಶಾ.ಶಾ.ಸಂ.೭, ತಳಬೀಡಿ(ಶಹಾಪುರ ತಾಲೂಕು), ಪುಟ.೩೯

೨೫೮. ಕ.ಜಿ.ಶಾ.ಶಾ.ಸಂ.೧೮, ಮದ್ರಿಕಿ(ಶಹಾಪುರ ತಾಲೂಕು), ಪುಟ.೪೧೬

೨೫೯. ಸು.ತಾ.ಶಾ.ಶಾ.ಸಂ.೧೮, ಐವೂರು, ಪು.೪೬

೨೬೦. ಅದೇ ಶಾ.ಸಂ.೧೯, ಐವೂರು, ಪುಟ.೪೮

೨೬೧. ಅದೇ ಶಾಸನ ಸಂಖ್ಯೆ, ೨೬, ಕಡಕಲ್ಲು, ಪುಟ.೬೧

೨೬೨. ಅದೇ ಶಾ.ಸಂ.೬೩ ಯಾಳಗಿ, ಪುಟ.೧೫೫

೨೬೩. ಅದೇ ಶಾಸನ ಸಂಖ್ಯೆ ೭೬, ರಾಜನಕೋಳೂರು, ಪುಟ.೧೬೧

೨೬೪. ಕ.ಜಿ.ಶಾ. ಶಾಸನ ಸಂಖ್ಯೆ–೩೬, ಸಂಗಮ(ಶಹಾಪುರ ತಾಲೂಕು), ಪುಟ.೪೫೧

೨೬೫. ಅದೇ ಶಾ.ಸಂ.೩೩, ಕೆಂಬಾವಿ, ಪುಟ.೭೬

೨೬೬. ಸು.ತಾ.ಶಾ.ಶಾ.ಸಂ.೨೩, ಕಚಕನೂರು, ಪುಟ.೫೫

೨೬೭. ಅದೇ ಶಾ.ಸಂ.೫೦, ಮಲ್ಲಾ ಬಿ. ಪುಟ.೧೦೭

೨೬೮. ಅದೇ ಶಾ.ಸಂ.೯೦, ಹಗರಟಗಿ, ಪುಟ.೧೯೧

೨೬೯. ಅದೇ ಶಾ.ಸಂ.೮೮, ಹಗರಟಗಿ, ಪುಟ.೧೮೯

೨೭೦. ಕಜಿಶಾ.ಶಾ.ಸಂ.೩೪, ಪುಟ.೪೪೫

೨೭೧. ಸು.ತಾ.ಶಾ.ಶಾ.ಸಂ.೧೮, ಐವೂರು, ಪುಟ.೪೬

೨೭೨. ಅದೇ ಶಾಸನ ಸಂಖ್ಯೆ ೧೮, ಏವೂರು, ಪುಟ.೪೬

೨೭೩. ಅದೇ ಶಾ.ಸಂ.೨೨, ಕಕ್ಕೇರಿ ಪುಟ.೫೩

೨೭೪. ಅದೇ ಶಾ.ಸಂ.೪೫, ಬಿಜಾಸಪುರ, ಪುಟ.೯೮

೨೭೫. ರಿತ್ತಿ ಶ್ರೀನಿವಾಸ(ಸಂ), ಪ್ರಾಚೀನ ಕರ್ನಾಟಕ ಆಡಳಿತ-ಪರಿಭಾಷಾ ಕೋಶ, ಪುಟ.೨೦೫

೨೭೬. ಸು.ತಾ.ಶಾ.ಶಾಸನ ಸಂಖ್ಯೆ ೩೩, ಕೆಂಬಾವಿ ಪುಟ.೭೬

೨೭೭. ಅದೇ ಶಾಸನ ಸಂಖ್ಯೆ-೯೮, ಹೆಮ್ಮಡಗಿ, ಪುಟ.೨೦೮-೨೧೩

೨೭೮. ಅದೇ ಪುಟ.xxxiii

೨೭೯. ಕ.ಜಿ.ಶಾ.ಶಾ.ಸಂ-೪೧, ಹೋತಗಲ್(ಶಹಾಪುರ ತಾಲೂಕು), ಪುಟ.೪೬೦

೨೮೦. ಹನುಮಾಕ್ಷಿ ಗೋಗಿ, ಅನುಶಾಸನ, ಸಂಪುಟ.೧, ಪುಟ.೨೭೬

## ಅಧ್ಯಾಯ ೪

# ಸಮಾಜೋ–ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳು

ಸಮಾಜ ಹಾಗೂ ಸಾಮಾಜಿಕ ಎಂಬ ವಿಷಯ ಕುರಿತು ವಿಶಾಲ ಅರ್ಥಗಳನ್ನು ಕಲ್ಪಿಸಲಾಗಿದೆ. ಮಾನವನು ನಾಗರಿಕತೆಯ ಜೀವನೋಪಾಯವನ್ನು ಪ್ರವೇಶಿಸುತ್ತಿದ್ದಂತೆ ವ್ಯವಸ್ಥಿತ ಬದುಕಿಗೊಂದು ಮುಂದಿಡಿ ಇಟ್ಟನು. ಹಾಗಾಗಿ ವಿಸ್ತಾರಗೊಂಡ ಜನಸಂಖ್ಯೆಯ ನಡುವೆ ಪರಸ್ಪರ ಸಂಬಂಧವುಳ್ಳ ರೀತಿಗಳು ಹೆಚ್ಚು ವ್ಯಾಪಕಗೊಂಡವು. ಅಂದರೆ ಅಂಥ ಸಮೂಹಗಳು ಒಂದೆಡೆ ನಿಂತು ಜೀವನ ನಿರ್ವಹಿಸುವ ಸ್ಥಿತಿಗೆ ಬಂದು ತಲುಪಿದವು. ಪರಸ್ಪರ ಸಂಬಂಧವುಳ್ಳ ಜನತೆಯ ವ್ಯವಸ್ಥಿತ ಸಮೂಹವನ್ನು ಸ್ಥೂಲವಾಗಿ ಸಮಾಜವೆನ್ನಬಹುದೆಂದು ಅಭಿಪ್ರಾಯಿಸಲಾಗಿದೆ. ಅಲ್ಲದೇ ಅಂಥ ಸಮೂಹಗಳು ಆಯಾ ನಾಮಾಜದ ಒಪ್ಪಿತ ಮೌಲ್ಯಕ್ಕೆ ಬದ್ಧವಾಗಿರುತ್ತವೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಅವು ಹೆಚ್ಚಿನ ಚರ್ಚೆಗೂ ಗ್ರಾಮವಾಗಿವೆ.

ಸಮಾಜ ಸಂರಚನೆಯಲ್ಲಿ ವರ್ಗ, ವರ್ಣ, ಕುಟುಂಬ ಮತ್ತು ಸಂಘ–ಸಂಸ್ಥೆಗಳು ಬಹುಮುಖ್ಯ ಅಂಶಗಳಾಗಿವೆ. ಅವುಗಳ ನಂಬಿಕೆ ಮತ್ತು ಸಂಪ್ರದಾಯ(ಆಚರಣೆ)ಗಳ ಮೇಲೆಯೇ ಸಾಮಾಜಿಕ ಸಂರಚನೆಯ ವಾಹನವು ಚಲಿಸುತ್ತಿರುತ್ತದೆ. ನಮ್ಮ ನಾಡಿನಲ್ಲಿಯೂ ಸಹ ಅತ್ಯಂತ ಪ್ರಾಚೀನ ಕಾಲದಿಂದಲೇ ಇಂತಹ ರಚನೆಯೊಂದು ಇದ್ದಿರುವ ಬಗೆಗಿನ ವಿಷಯಗಳನ್ನು ವಿದ್ವಾಂಸರು ಚರ್ಚಿಸುತ್ತಲೇ ಬಂದಿದ್ದಾರೆ. ಸಾಮಾಜಿಕ ಸಂರಚನೆಯ ಚೌಕಟ್ಟಿನಲ್ಲಿ ಪ್ರಸ್ತುತ ಯಾದಗಿರಿ ಜಿಲ್ಲೆಯಲ್ಲಿ ವ್ಯಕ್ತವಾದ ಅಂಶಗಳೇನು ಎಂಬುದನ್ನು ಸಾಮಾಜಿಕ ಸ್ಥಿತಿಗತಿಗಳು ಎಂಬ ವಿವರಗಳ ಅಡಿಯಲ್ಲಿ ತಿಳಿಯುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಈ ಜಿಲ್ಲೆಯಲ್ಲಿ ಉಪಲಬ್ದವಿರುವ ಶಾಸನಗಳನ್ನು ಅನುಲಕ್ಷಿಸಿ ಅಥವಾ ಅವುಗಳನ್ನೇ ಹೆಚ್ಚಿನ ಪ್ರಮಾಣದಲ್ಲಿ ಅವಲಂಬಿಸಿ ಇಲ್ಲಿ ವ್ಯಕ್ತಗೊಂಡಿರುವ ಸಂಗತಿಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಈ ಜಿಲ್ಲೆಯಲ್ಲಿ ಉಪಲಬ್ದವಿರುವ ಶಾಸನಗಳನ್ನು ಅನುಲಕ್ಷಿಸಿ ಈ ಅಧ್ಯಾಯವನ್ನು ವಿವರಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಪ್ರಾಚೀನ ಕಾಲದಲ್ಲಿ ನಿರ್ದಿಷ್ಟವಾಗಿ ಸಮಾಜ ಮತ್ತು ಧರ್ಮಗಳು ಹೇಗೆ ಮತ್ತು ಯಾವಾಗ ನಿರ್ದಿಷ್ಟತೆಯಿಂದ ಬೆಳೆದು ಬಂದವು ಎಂಬ ಸಂಗತಿಗಳು ವಿದ್ವತ್ ವಲಯದಲ್ಲಿ ಪಲವಾರು ದಶಕಗಳಿಂದಲೂ ವಿಶ್ಲೇಷಣೆಗೆ ಒಳಪಡುತ್ತಾ ಬಂದಿವೆ. ಅಲ್ಲದೇ ಸಾಮಾಜಿಕ

ಸ್ಥಿತಿಗತಿಗಳ ಮುಖ್ಯ ಭೂಮಿಕೆಯಲ್ಲಿ ಕಾಣಿಸಿಕೊಳ್ಳುವ ವರ್ಣ, ವರ್ಗ ಮತ್ತು ಜಾತಿಗಳ ಹುಟ್ಟಿನ ಬಗೆಗೆ ಖಚಿತ ಅಭಿಪ್ರಾಯುಗಳು ಈವರೆಗೂ ಮೂಡಿಬಂದಿಲ್ಲವೆಂದೇ ಅಭಿಪ್ರಾಯಿಸಬಹುದು. ಅಲ್ಲದೇ ಅಂತಹ ಚರ್ಚೆಗಳಿಂದ ಪ್ರಸ್ತುತ ಅಧ್ಯಯನದ ಪ್ರದೇಶವೂ ಹೊರತಾಗಿಲ್ಲ. ವರ್ಣಗಳ ಕುರಿತು ನಿರ್ದಿಷ್ಟ ಮತ್ತು ಲಿಖಿತ ಉಲ್ಲೇಖಗಳು ಇಲ್ಲಿರುವ ಶಾಸನಗಳಲ್ಲಿ ವ್ಯಕ್ತಗೊಂಡಿರುವ ಸೂಚನೆಗಳಿಲ್ಲ. ಆದರೆ ಕ್ಷಾತ್ರ ಅಥವಾ ಕ್ಷತ್ರೀಯ ಎಂಬ ಅರ್ಥದಲ್ಲಿ ಮಹಾಮಂಡಳೇಶ್ವರರಾದ ಹೈಹಯ ಅರಸರು ತಮ್ಮನ್ನು ಸಂಬೋಧಿಸಿಕೊಂಡಿರುವ ಒಂದೆರಡು ಉದಾಹರಣೆಗಳು ಲಭ್ಯವಾಗಿರುವ ಶಾಸನಗಳಲ್ಲಿ ದಾಖಲಾಗಿವೆ. ಬ್ರಾಹ್ಮಣ ಮತ್ತು ವೈಶ್ಯ ಕುಲವನ್ನು ಉಲ್ಲೇಖಿಸುವ ಹಲವು ವಿಚಾರಗಳು ಈ ಪ್ರದೇಶದಲ್ಲಿಯು ಸಹ ಕಂಡುಬಂದಿದ್ದರೂ ಅವು ವರ್ಣ ವ್ಯವಸ್ಥೆಯ ವಿರಾಟ ರೂಪದ ಚೌಕಟ್ಟಿನಲ್ಲಿ ನಮೂದಿತವಾದಂಥವುಗಳಲ್ಲ. ಆ ಉಲ್ಲೇಖಗಳು ಕೇವಲ ಜಾತಿಯ ನೆಲೆಯಲ್ಲಿ ಈ ಸಮುದಾಯಗಳನ್ನು ಪರಿಗಣಿಸಿದಂತಿವೆ. ಹಾಗಾಗಿ ಶಾಸನಗಳಲ್ಲಿ ಉಲ್ಲೇಖವಾಗಿರುವ ಹದಿನೆಂಟು ಜಾತಿಗಳ ಜೊತೆಗೆ ಬ್ರಾಹ್ಮಣ ಮತ್ತು ವೈಶ್ಯ ಸಮುದಾಯವು ಸಹ ಸೇರಿವೆ. ಒಂದೆರಡು ಶಾಸನಗಳಲ್ಲಿ ಹದಿನೆಂಟು ಸಂತತಿ ಎಂಬ ಪ್ರಯೋಗವಿದ್ದು, ಬಹುಶಃ ಅದು ಸಹ ಅಂದಿನ ಜಾತಿಯ ವ್ಯವಸ್ಥೆಯನ್ನು ತಿಳಿಪಡಿಸುವ ವಿವರವಾಗಿದೆ ಎಂದು ಅಭಿಪ್ರಾಯಿಸಬಹುದು.

### ವರ್ಗ–ವರ್ಣ–ಜಾತಿ

ಈ ವಿಚಾರಗಳ ಕುರಿತು ಸಾಕಷ್ಟು ಚರ್ಚೆಗಳು ನಡೆಯುತ್ತಲೇ ಇವೆ. ವರ್ಣ ಎಂಬುದು ಜಾತಿ–ಸೂಚಕವಾಗಿರದೇ ಅದು ಹೊರಗಿನವರ ಹಾಗೂ ಮೂಲನಿವಾಸಿಗಳ ನಡುವಿನ ವ್ಯತ್ಯಾಸವನ್ನು(ಭಾಷೆ, ಮತ, ಧರ್ಮ, ಬಣ್ಣ ಆಕರಗಳಲ್ಲಿ) ಸೂಚಿಸುವ ಪದವಾಗಿತ್ತು ಎಂಬ ಅಭಿಪ್ರಾಯಗಳಿವೆ[7]. ನಂತರದಲ್ಲಿ ವಿವಿಧ ವೃತ್ತಿಗಳಲ್ಲಿನ ಭೇದವು ಸಾಮಾಜಿಕವಾಗಿ ಮೇಲು ಕೀಳು ಭಾವನೆಗೆಡೆ ಮಾಡಿ ಚಾತುವರ್ಣಗಳಿಗೆ ಹಾದಿ ಮಾಡಿಕೊಟ್ಟಿರುವಂತಿದೆ. ವೃತ್ತಿ ವ್ಯತ್ಯಾಸ ಹಿಮ್ಮೆಟ್ಟಿ ವ್ಯಕ್ತಿಯ ಹುಟ್ಟು, ವರ್ಣವನ್ನು ನಿರ್ಣಯಿಸಲಾಯಿತೆಂಬ ಅಭಿಪ್ರಾಯಗಳು ಹಿನ್ನೆಲೆಯಲ್ಲಿ ವ್ಯಕ್ತವಾಗಿವೆ[8].

ನಮ್ಮ ನಾಡಿನ ಚರಿತ್ರೆಯಲ್ಲಿ ವರ್ಣದ ಅಸ್ತಿತ್ವ ಅಷ್ಟೊಂದು ತೀವ್ರತರವಾಗಿದ್ದಿರಲಿಲ್ಲ. ಅದು ಪ್ರಾಯಶಃ ಉತ್ತರ ಭಾರತದ ನೆಲೆಯಲ್ಲಿ ಹೆಚ್ಚು ಚಾಲ್ತಿಯಲ್ಲಿದ್ದಂತಹದೆಂದು ಹೇಳಬಹುದು. ಪ್ರಸ್ತುತ ಯಾದಗಿರಿ ಪ್ರದೇಶದ ಪ್ರಾಚೀನ ನಾಡುಗಳಲ್ಲಿ ವರ್ಗಗಳ ಕುರಿತು ವಿವರ ನೀಡುವ ಸ್ಪಷ್ಟ ಮಾಹಿತಿಗಳೇನು ದಾಖಲಾಗಿಲ್ಲ. ಈ ಪ್ರದೇಶದಲ್ಲಿ ಜಾತಿಸೂಚಕಗಳೇ ಹೆಚ್ಚಾಗಿ ಕಂಡುಬಂದಿವೆ. ಅಲ್ಲದೇ ಅವು ಮೇಲು–ಕೀಳು ಎಂಬ ಭಾವನೆಗಳು ಮೂಡಿಬಂದಿರುವುವು. ಜಾತಿಗಳು ಹೊಂದಿದ ಸ್ಥಾನಮಾನಗಳ ಮೇಲೆ ಅವರ ವರ್ಗವನ್ನು ಸ್ಥೂಲವಾಗಿ ಗುರುತಿಸಲಾಗುತ್ತಿತ್ತು. ಅವರು ಅನುಕೂಲಕ್ಕೆ ತಕ್ಕಂತೆ ಊರಿನ ಬೇರೆ ಬೇರೆ ಕೇರಿ ಅಥವಾ ಓಣಿಗಳಲ್ಲಿ ಅವರಿಗಾಗಿ ನಿಶ್ಚಿತಗೊಳಿಸಿದ ಸ್ಥಳಗಳಲ್ಲಿಯೇ ವಾಸವಾಗುತ್ತಿದ್ದರು.

ಸಾಮಾಜಿಕ ವ್ಯವಸ್ಥೆಯನ್ನು ಸ್ಥೂಲವಾಗಿ ಪ್ರಭುವರ್ಗ ಮತ್ತು ಶ್ರಮಿಕ ವರ್ಗವೆಂದು ವಿಂಗಡಿಸಲಾಗಿದೆ.

**ಪ್ರಭುವರ್ಗ**

ಈ ವರ್ಗದಲ್ಲಿ ಪುರೋಹಿತ ರಾಜ ಹಾಗೂ ವಿವಿಧ ಅಧಿಕಾರಿಗಳನ್ನೊಳಗೊಂಡ ಸಮುದಾಯಗಳಿದ್ದರೆ, ಬೇರೆ ವೃತ್ತಿಗಳನ್ನು ಕೈಕೊಂಡ ಜನಸಾಮಾನ್ಯರು ಶ್ರಮಿಕ ವರ್ಗವನ್ನು ಪ್ರತಿನಿಧಿಸುತ್ತಿದ್ದರು. ಇವೆರಡೂ ವರ್ಗಗಳ ಮಧ್ಯದ ವ್ಯಾಪಾರಿಗಳು ತಮ್ಮ ಆರ್ಥಿಕ ಸುಸ್ಥಿತಿಯಿಂದ ಪ್ರಭುವರ್ಗವನ್ನೇ ಪ್ರತಿನಿಧಿಸುತ್ತಾರೆ. ಸಮಾಜ ವ್ಯವಸ್ಥೆಯ ಮೇಲಸ್ತರದಲ್ಲಿ ವಿವಿಧ ಮತಗಳ ಪುರೋಹಿತರಿದ್ದು ಅವರು ಧರ್ಮ ಮತ್ತು ರಾಜಧರ್ಮವನ್ನು ನಿಯಂತ್ರಿಸುತ್ತಿದ್ದರು. ಅವರಲ್ಲಿ ಮುಖ್ಯವಾಗಿ ಮಹಾಜನರು, ಸ್ಥಾನಾಚಾರ್ಯರು, ಜಿನಮುನಿಗಳು ಹಾಗೂ ಶೈವ ಗುರುಗಳು ಪ್ರಮುಖರಾಗಿದ್ದರು.

**ಮಹಾಜನರು**

ಪಂಪ ಭಾರತದಲ್ಲಿ ಜಾತಿಯೊಳಗೆ ಉತ್ತಮ ಜಾತಿಯೆಂದು ಬ್ರಾಹ್ಮಣರನ್ನು ಹೆಸರಿಸಲಾಗಿದೆ. ಪ್ರಾಯಶಃ ಅಂದಿನ ಸಮಾಜವನ್ನು ಸೂಕ್ಷ್ಮ ಮತ್ತು ಸಮಗ್ರವಾಗಿ ಕಂಡಿದ್ದ ಆದಿಕವಿ ಪಂಪನು ಇಂಥ ಉಲ್ಲೇಖ ನೀಡಿರಬಹುದು. ಆದರೆ ಆತನ ಅಭಿವ್ಯಕ್ತಿಯ ಅಂತಃಕರಣ ಬೇರೆ ಆಗಿತ್ತು. ಹಾಗಾಗಿ ಮಾನವರೆಲ್ಲ ಒಂದೇ ಕುಲವೆಂದು ಸಹ ಅವನೇ ಹೇಳಲು ಸಾಧ್ಯವಾಗಿದೆ.

ಮಹಾಜನರು ಅಂದಿನ ಸಮಾಜದಲ್ಲಿ ಅಗ್ರಸ್ಥಾನದಲ್ಲಿದ್ದವರು. ಅವರು ಹೆಚ್ಚಾಗಿ ಅಗ್ರಹಾರದಲ್ಲಿಪಿ ಇರುವವರು. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿ ಗ್ರಹ ಇವು ಅವರ ಮುಖ್ಯ ಕರ್ತವ್ಯಗಳಾಗಿದ್ದವು. ಈ ಕರ್ತವ್ಯಗಳು ಷಟ್ಕರ್ಮಗಳೆನಿಸಿದ್ದವು(ಪಾಠವನ್ನು ಓದುವುದು, ಓದಿಸುವುದು, ಯಾಗವನ್ನು ಮಾಡುವುದು, ಮಾಡಿಸುವುದು ದಾನವನ್ನು ಮಾಡುವುದು ಮತ್ತು ಸ್ವೀಕರಿಸುವುದು ಷಟ್ಕರ್ಮಗಳು). ಅಂಥ ಉಲ್ಲೇಖವೊಂದು ಕ್ರಿ.ಶ.೧೧೦೦ರ ಮುದನೂರಿನ ಶಾಸನದಲ್ಲಿ ದಾಖಲಾಗಿದೆ[೩] ಯಮನಿಯಮ ಸ್ವಾಧ್ಯಾಯ ಧ್ಯಾನ್ಯ ಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಳ ಸಂಪನ್ನರ್ ಸಮಸ್ತ ವಿದ್ವಜ್ಜನ್ ಪ್ರಸನ್ನರ್ ಯಜನ, ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಘಟ್ಕರ್ಮ ನಿರತರ್ ದ್ವಿಜಗುರು ಎಂಬ ಉಲ್ಲೇಖವು ಅವರು ಮಾಡುತ್ತಿದ್ದ ಕಾರ್ಯಗಳನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇವರು ಮುಖ್ಯವಾಗಿ ವೇದಗಳನ್ನು ಬಲ್ಲವರಾಗಿದ್ದರು. ಆ ಕುರಿತು ಈ ಪ್ರದೇಶದ ಶಾಸನಗಳು ಮಹತ್ವದ ಮಾಹಿತಿ ನೀಡುತ್ತವೆ. ಹೆಚ್ಚಿನ ಶಾಸನಗಳಲ್ಲಿ ಚತುರ್ವೇದಪಾರಗರಪ್ಪ ಬ್ರಾಹ್ಮಣರನ್ನು ಕೊಂದ ಪಾತಕಕ್ಕೆ ಸಮಾನವೆಂಬುದು ಮತ್ತೆ ಮತ್ತೆ ಉಲ್ಲೇಖವಾಗಿರುವುದನ್ನು ಗಮನಿಸಿದರೆ ಅವರು ಅಂದಿನ ಸಮಾಜದಲ್ಲಿ ಹೊಂದಿದ್ದ ಮಹತ್ವವನ್ನು ಮನಗಾಣಬಹುದಾಗಿದೆ. ಆದರೆ ಎಲ್ಲ ಬ್ರಾಹ್ಮಣರು ನಾಲ್ಕೂ ವೇದಗಳನ್ನು ಬಲ್ಲವರೇನು ಆಗಿರಲಿಲ್ಲ. ಅವರಲ್ಲಿ ಏಕವೇದಿ ದ್ವಿವೇದಿ ತ್ರಿವೇದಿ ಮತ್ತು

ಚತುರ್ವೇದಿಗಳೆಂದು ತಮ್ಮನ್ನು ಕರೆದುಕೊಂಡಿದ್ದಾರೆ. ಅಂಥ ಹಲವು ಉದಾಹರಣೆಗಳನ್ನು ಈ ಪ್ರದೇಶದ ಶಾಸನಗಳಲ್ಲಿ ಗುರುತಿಸಬಹುದು.

ದಂಡನಾಯಕ ರವಿಯಣ್ಣ ಅಥವಾ ರವಿಗಣ ಚಮೂಪತಿಯು ಶ್ರೇಷ್ಠ ವಿಪ್ರಕುಲದಲ್ಲಿ ಹುಟ್ಟಿದವನೆಂದು ವಿವರಿಸುತ್ತವೆ. ಕ್ರಿ.ಶ.೧೦೭೭ರ ತೇದಿಯ ಏವೂರಿನ ಶಾಸನವು[೪] ವಿಪ್ರರ ಕುರಿತು ಸುದೀರ್ಘವಾದ ಮಾಹಿತಿಗಳನ್ನು ನೀಡುತ್ತವೆ. ಆತನ ಪೂರ್ವದ ಗ್ರಾಮವಾದ ಮುಕ್ಕಂದೆ ಅಥವಾ ಮುಕುಂದೆ(ಲಿಂಗಸೂರು ತಾಲೂಕು, ರಾಯಚೂರು ಜಿಲ್ಲೆ)ಯನ್ನು ಈ ಶಾಸನದಲ್ಲಿ ವಿಪ್ರಗ್ರಾಮವೆಂದು ಸಂಬೋಧಿಸಲಾಗಿದೆ. ತನ್ನದು ವಿಪ್ರಕುಲ ಕಾಶಪ್ಯ ಗೋತ್ರದವನೆಂದು ಪರಿಚಯಿಸಿಕೊಂಡಿದ್ದಾನೆ. ಅಲ್ಲದೇ ಆತನ ತಮ್ಮ ಮಾಚಯಭಟ್ಟನು ಸಹ ವೇದವಾರ್ದ್ಧಿ ಪಾರಂಗತನೆಂದು ಕರೆದುಕೊಂಡಿದ್ದಾನೆ. ಕ್ರಿ.ಶ.೧೨-೧೩ನೇ ಶತಮಾನದ ತೇದಿವುಳ್ಳ ಹುಣಸಗಿ ಶಾಸನವು[೫]. ಭರದ್ವಾಜಗೋತ್ರದ ಚತುರ ಕವೀಶ್ವರ ಎಂದು ಹೊಗಳಿಸಿಕೊಂಡ ಆದಿಭಟ್ಟನ ಕುರಿತು ಉಲ್ಲೇಖಿಸುತ್ತದೆ.

ಕ್ರಿ.ಶ.೧೦೧೭ರ ತೇದಿಯ ತಿಂಥಣಿ ಶಾಸನವು[೬] ಆ ಸಂದರ್ಭದ ಬ್ರಾಹ್ಮಣ ವರ್ಗವು ಪರಿಣತಿ ಹೊಂದಿದ್ದ ವಿದ್ಯಾಭ್ಯಾಸದ ಕ್ರಮದ ಬಗೆಗೆ ವಿವರ ಮಾಹಿತಿ ನೀಡುವುದು. ಎರಡನೆಯ ಜಯಸಿಂಹನ ಕಾಲದಲ್ಲಿ ಸಗರನಾಡಿನ ಮಧ್ಯೆದೊಳಗಿರುವ ಕೃಷ್ಣೆಯ ಮೇಲುದಂಡೆಯ ಆ ಮಹಾ ಅಗ್ರಹಾರ ತಿನ್ತಿಣಿಸಿರಿವರ(ತಿಂಥಣಿ)ದಲ್ಲಿ ದುಗ್ಗಣಾರ್ಯಭಟ್ಟ ಕಟ್ಟಿಸಿದ ತ್ರೈಪುರುಷ ಶಾಲೆಯಲ್ಲಿ ಕಾಣ್ಡನ್ಯಗೋತ್ರೇಣ(ಕಾಣ್ವಗೋತ್ರ)ದ ಯುಜ್ಯುಶಾಖೆಯನ್ನು ಅಭ್ಯಸಿಸುವ ವಿದ್ಯಾರ್ಥಿಗಳ ಅಶನಾಚ್ಛಾಆರ್ದನಕ್ಕಾಗಿ ದತ್ತಿ ನೀಡಿರುವ ಉಲ್ಲೇಖವಿದೆ. ತಮ್ಮದೇ ಆದ ಶಾಖೆಗಳನ್ನು ಸ್ಥಾಪಿಸಿ ತಮ್ಮ ನಂಬಿಕೆ-ಆಚಾರಣೆಗಳನ್ನು ಪ್ರತಿಪಾಳಿಸುತ್ತಿದ್ದರೆಂದು ಅಭಿಪ್ರಾಯಿಸಬಹುದು. ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿದ್ದ ಈ ಅಗ್ರಹಾರದ ಮಹಾಜನರು ಅಥವಾ ಬ್ರಾಹ್ಮಣರು ತಮಗಾಗಿಯೇ ಕೇರಿ(ಓಣಿ)ಯನ್ನೆ ಬಿಟ್ಟಿಸಿಕೊಂಡಿರುವ ಉದಾಹರಣೆಗಳುಂಟು[೭]. ಏವೂರಿನ ಬ್ರಾಹ್ಮಣರಿಗೆ ಪುರದ ಪಿರಿಯ ಕೇರಿಯೊಂದನ್ನು ಬಿಟ್ಟಿರುವ ಮಾಹಿತಿ ಈ ಶಾಸನದಲ್ಲಿ ದಾಖಲಾಗಿದೆ.

ಬ್ರಾಹ್ಮಣರು ಸಮಾಜದಲ್ಲಿ ಎಷ್ಟೊಂದು ಗೌರವ ಹೊಂದಿದ್ದರು ಅನ್ನುವುದಕ್ಕೆ ಮೇಲೆ ಉಲ್ಲೇಖಿಸಿದ ಶಾಸನವನ್ನೇ ಗಮನಿಸಬಹುದು. ಬ್ರಾಹ್ಮಣರ ಕೆಯ್ಮನೆಯ ತೇಜ ಸ್ವಾಮ್ಯಮೆಲ್ಲಂ ಬ್ರಾಹ್ಮಣರದೇ ಮಿಕ್ಕುದೆಲ್ಲಂ ದೇವರ್ಗ್ಗೆ ಎಂಬ ಉಲ್ಲೇಖವು ಅವರು ಹೊಂದಿದ್ದ ಸ್ಥಾನಮಾನ ಕುರಿತು ಹೇಳುವಂತಿದೆ. ಕ್ರಿ.ಶ.೧೦೫೬ರ ಕೆಂಬಾವಿ ಶಾಸನವು[೮]. ಪುರೋಹಿತ ಚಂದ್ರಾದಿತ್ಯ ಭಟ್ಟೋಪಾಧ್ಯಾಯ ಪ್ರಮುಖ ಬ್ರಾಹ್ಮಣಾಗ್ನಿಸಾಕ್ಷಿಗಳ್ ಶ್ರೀ ಮನ್ಮಮಂಡಳೇಶ್ವರ ರೇವರಸರು ಈ ದಾನವನ್ನು ನೀಡುತ್ತಾರೆಂಬ ಉಲ್ಲೇಖವಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಏವೂರು, ಮುದನೂರು, ಹುಣಸಗಿ, ಹಗರಟಗಿ, ತಿಂಥಣಿ, ಮದ್ರಕಿ, ಅಗ್ನಿ, ಅಣಬಿ, ಕೆಂಬಾವಿ, ಯಾಳಗಿ ಹಾಗೂ ಬೆಳಗುಂದಿ ಪ್ರದೇಶದಲ್ಲಿ ಅಗ್ರಹಾರಗಳು ನಿರ್ಮಾಣವಾಗಿರುವ ಉಲ್ಲೇಖಗಳು ಇಲ್ಲಿರುವ ಶಾಸನಗಳಲ್ಲಿ ವ್ಯಕ್ತವಾಗಿವೆ. ಅಲ್ಲಿದ್ದ ಮಹಾಜನರೆಲ್ಲ ಬಹುತೇಕ ಬ್ರಾಹ್ಮಣ ವರ್ಗಗಳಿಗೆ ಸೇರಿದಂತವರಾಗಿದ್ದರು. ಅವರು ತಮ್ಮ ತಮ್ಮ ಅಗ್ರಹಾರ ವ್ಯಾಪ್ತಿಗಳಲ್ಲಿ ದಾನ-ದತ್ತಿ ಹಾಗೂ ಸಾಮಾಜಿಕ-ಚಟುವಟಿಕೆಗಳಲ್ಲಿ ಭಾಗವಹಿಸಿರುವ ವಿವರಗಳುಂಟು. ಈ ಪ್ರದೇಶದಲ್ಲಿರುವ ಶಾಸನಗಳನ್ನು ಅವಲೋಕಿಸಿದಾಗ ಈ ಉನ್ನತ ವರ್ಗ ಸಮುದಾಯವು ಅಂಥ ಕಟ್ಟುನಿಟ್ಟಾದ ನಿಯಮ ನಿಷ್ಠೆಗಳನ್ನು ಉಳಿದ ಸಮುದಾಯಗಳ ಮೇಲೆ ಕಠಿಣವಾಗಿ ಹೇರಿಲ್ಲ ಎಂಬುದನ್ನು ಅರ್ಥೈಸಬಹುದು.

## ಸ್ಥಾನಾಚಾರ್ಯರು

ಶೈವ ಸಂಪ್ರದಾಯದ ಪಾಶುಪತ-ಕಾಳಾಮುಖ ಪಂಥಕ್ಕೆ ಸೇರಿದ ದೇವಸ್ಥಾನ ಮಠಗಳ ಆಚಾರ್ಯರೇ ಸ್ಥಾನಾಚಾರ್ಯರು ಇಲ್ಲವೆ ಸ್ಥಾನಪತಿಗಳೆಂದು ಕರೆಯಲಾಗಿದೆ. ಇದು ದೇವಾಲಯದ ಮುಖ್ಯಾಧಿಕಾರಿಯಾಗಿದ್ದವನನ್ನು ಸೂಚಿಸುತ್ತದೆ. ಹತ್ತನೆಯ ಶತಮಾನ ಮುಗಿದು ಜೈನರ ಪ್ರಭಾವ ಇಳಿಮುಖವಾಗುತ್ತಿದ್ದಂತೆಯೇ ಇವರು ರಾಜಪ್ರಭುತ್ವ ಮತ್ತು ಸಮಾಜ ಗೌರವದಿಂದ ತಮ್ಮ ಪ್ರಾಬಲ್ಯವನ್ನು ಸಾಧಿಸಿದರು[೯]. ಇವರಿಗೂ ಸಹ ರಾಜವರ್ಗ, ಪ್ರಭುವರ್ಗವು ದಾನ-ದತ್ತಿಗಳನ್ನು ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದು.

ಸ್ಥಾನಾಚಾರ್ಯರು ದೇವಾಲಯದ ಪೂಜೆ ಪುನಸ್ಕಾರ, ಪರ್ವ, ಪವಿತ್ರಗಳೊಂದಿಗೆ ಅಲ್ಲಿ ಓದುವ ತಪೋಧನರ, ಛಾತ್ರರವಸತಿ, ಊಟೋಪಚಾರದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಸ್ಥಾನಾಚಾರ್ಯರ ಒಪ್ಪಿಗೆಯಿಲ್ಲದೇ ದೇವಾಲಯದ ಯಾವುದೇ ಚಟುವಟಿಕೆಗಳು ನಡೆಯುತ್ತಿರಲಿಲ್ಲ. ದಾನ-ದತ್ತಿ ಧಾರ್ಮಿಕ ಕಾರ್ಯ, ಸ್ಥಾನಚಾರ್ಯರ ಪಾದಪೂಜೆಯಿಂದಲೇ ಪ್ರಾರಂಭಗೊಳ್ಳುತ್ತಿದ್ದವೆಂದು ಅಭಿಪ್ರಾಯಿಸಲಾಗಿದೆ[೧೦]. ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಕಾಳಾಮುಖ ಪಾಶುಪತ ಯತಿಗಳು ಹೆಚ್ಚಾಗಿ ಇರುತ್ತಿದ್ದದು. ಅವರು ಕಡ್ಡಾಯವಾಗಿ ಬ್ರಹ್ಮಚರ್ಯ ಅಥವಾ ನೈಷ್ಠಿಕ ಬ್ರಹ್ಮಚಾರಿಗಳಾಗಿರಬೇಕಾದದ್ದು ಅವಶ್ಯಕವಾಗಿತ್ತು. ಒಂದು ವೇಳೆ ಪಾಲಿಸಲಾಗದಿದ್ದರೆ ಅವರನ್ನು ಅಲ್ಲಿಂದ ಓಡಿಸಲಾಗುತ್ತಿತ್ತು. ಅಂಥದೊಂದು ಉದಾಹರಣೆ ಏವೂರಿನ ಕ್ರಿ.ಶ.೧೦೭೭ರ ಶಾಸನದಲ್ಲಿ ದಾಖಲಾಗಿದೆ[೧೧]. ಈಸ್ಥಾನದ ಆಚಾರ್ಯ್ಯರಕ್ಕೆ ತಪೋಧನರಕ್ಕೆ ನೈಷ್ಠಿಕ ಬ್ರಹ್ಮಚಾರಿಗಳಲ್ಲದೇ ಮಠದೊಳಿರಲ್ಸಲ್ಲದು. ಬ್ರಹ್ಮಚರ್ಯ್ಯವಿಲ್ಲದವರ ನೂರುಮಂನಕ ರಮುಮರಸುಮಿರ್ದ್ದು ಪೊರಮಡಿಸಿ ಕಳೆವರ್ ಎಂಬ ವಿವರಣೆ ಇದೆ. ಬ್ರಹ್ಮಚರ್ಯ ಪಾಲಿಸದಿದ್ದರೇ ಅಂಥವರನ್ನು ಮಠದಿಂದ ಓಡಿಸಿಬಿಡಬೇಕು ಎಂಬ ಅರ್ಥದಲ್ಲಿ ಈ ವಿವರವು ದಾಖಲಾಗಿದೆ. ಅಲ್ಲದೇ ಇದೇ ಶಾಸನದಲ್ಲಿ ವ್ಯಕ್ತವಾದ ಇನ್ನೊಂದು ಮುಖ್ಯ ವಿಚಾರವೆಂದರೆ ಅದರ ಸ್ಥಾನಾಪತಿ ಹುದ್ದೆ ಯಾರಿಗೆ ಸಲ್ಲುವಂಥದ್ದು ಎಂಬುದು.

ಸ್ಥಾನಪತಿ ಗೊರನಕ್ಕೀ ಸ್ಥಾನದ ಸಮಯಂಗಳಕ್ಕೆ ರತಿಲಂಪಟನೀ
ಸ್ಥಾನತೊಳಿರಲಾಗವನಂ ಸ್ಥಾನ ಮುಮರಸುಗಳುಮಿರ್ದು ಕಳೆಯಲುವೇಳ್ಕುಂ[೧೨]

ಕ್ರಿ.ಶ.೧೧೨೭ರ ಕಕ್ಕೇರಿ ಶಾಸನವು[೧೩] ಸ್ಥಾನಾಚಾರ್ಯ ಬ್ರಹ್ಮರಾಶಿ ಪಂಡಿತರ ಉಲ್ಲೇಖ ನೀಡುತ್ತದೆ. ಇವರು ಮೂಲತಹ ಹಗರಟಗಿಯ ಉಗ್ರಭೀಮೇಶ್ವರ ದೇವಾಲಯದ ಸ್ಥಾನಾಚಾರ್ಯರು. ಅದೇ ವೇಳೆಗೆ ಮುದನೂರಿನ ಕುಮಾರೇಶ್ವರ ದೇವಾಲಯದ ಸ್ಥಾನಪತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಅಲ್ಲದೇ ಇವರು ಮಹಾಸ್ಥಾನಂಗಳಾಚಾರ್ಯ ಸಿದ್ಧರೇವಣದೇವನ ಶಿಷ್ಯರಾಗಿದ್ದರೆಂಬ ಉಲ್ಲೇಖಗಳು ಈ ಭಾಗದ ಬೇರೆ ಬೇರೆ ಗ್ರಾಮಗಳಲ್ಲಿ ಸಿಕ್ಕಿರುವ ಶಾಸನಗಳಲ್ಲಿಯೂ ದಾಖಲಾಗಿವೆ. ಕ್ರಿ.ಶ.೧೧೪೨ ಮತ್ತು ೧೧೫೪ರ ತೇದಿವುಳ್ಳ ಮುದನೂರಿನ ಶಾಸನವು[೧೪]. ರಾಮನಾಥನ ದೇವಾಲಯಕ್ಕೆ ಗೋಕರ್ಣ್ನ ರಾಶಿಪಂಡಿತದೇವರ ಪ್ರಶಿಷ್ಯರಪ್ಪ ತೇಜೋರಾಶಿಪಂಡಿತ ದೇವರ ಸ್ಥಾನಾಚಾರ್ಯರಾಗಿದ್ದರು ಎಂಬ ಮಾಹಿತಿಯನ್ನು ನೀಡುತ್ತದೆ.

ಕ್ರಿ.ಶ.೧೧೪೪ರ ತೇದಿಯ ಹಗರಟಗಿ ಶಾಸನವು[೧೫] ಗವರೇಶ್ವರ ದೇವರ ಸ್ಥಾನಾಚಾರ್ಯ ಸೂರ್ಯರಾಶಿ ಪಂಡಿತರ ಬಗೆಗೆ ವಿವರಿಸುತ್ತದೆ. ಇವರು ಸಿಂಹಪರ್ಷೆಯ ಮಲೆಯಾಳ ಪಂಡಿತನ ಶಿಷ್ಯರಾಗಿದ್ದರು ಎಂಬ ವಿವರವು ಕೆಲವು ಕುತೂಹಲಕ್ಕೆ ಕಾರಣವಾಗುತ್ತದೆ. ಇಲ್ಲಿಯ ಸ್ಥಾನಾಚಾರ್ಯರೆಲ್ಲರೂ ಬಹುತೇಕ ಸಿಂಹಪರ್ಷೆಯ ಶಾಖೆಗೆ ಸಂಬಂಧಿಸಿದವರೆಂದೂ ಇದರ ಮುಖ್ಯ ಕೇಂದ್ರ ಮುದನೂರು ಹಾಗೂ ಯಡ್ರಾಮಿ(ಜೇವರ್ಗಿ ತಾಲೂಕು)ಗಳಾಗಿದ್ದವು ಎಂಬ ಪ್ರಮುಖ ಸಂಗತಿಯನ್ನು ಗಮನಿಸಬಹುದಾಗಿದೆ. ಈ ಭಾಗದಲ್ಲಿ ಸಿಂಹಪರ್ಷನಂಡ್ಡಳಿಯ ಉದಾಹರಣೆಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿದ್ದರೂ ಅಪರೂಪಕ್ಕೆ ಎಂಬಂತೆ ಕಾಳಮುಖ ಪರಂಪರೆಯ ಶಕ್ತಿಪರ್ಷಯ ಕಿಟ್ಟಗಾವೆ ಸಂತತಿಗೆ ಸಂಬಂಧಿಸಿದ ಯತಿಮುನಿಗಳ ಉಲ್ಲೇಖವೇ ಈ ಪ್ರದೇಶದ ಕೆಂಬಾವಿ ಶಾಸನದಲ್ಲಿ ಕಂಡುಬಂದಿದೆ. ಈ ಪರ್ಷೆಗಳಿಗೆ ಸಂಬಂಧಿಸಿದ ಸ್ಥಾನಾಚಾರ್ಯರ ಕುರಿತು ವಿಶೇಷವಾದ ಮಾಹಿತಿ ನೀಡುವ ಎರಡು ಶಾಸನಗಳು ಶಹಾಪುರ ತಾಲೂಕಿನಲ್ಲಿ ಲಭ್ಯವಾಗಿವೆ. ಕ್ರಿ.ಶ.೧೦೭೧ರ ಸಗರ ಶಾಸನವು[೧೬] ಲಾಕುಳ ಸಿದ್ಧಾಂತ ಶಾಸ್ತ್ರಾರ್ಥ ಸಮುದ್ಧರಣ ಶೀಲರ್। ಕಾಳಾಮುಖ ಮಹಾವ್ರತ ಪಾಶುಪತ ಶಿವ ಸಮಯ ಸಮಾನ ಪಕ್ಷಪಾತರ್ ಎಂದೂ ಸಂಬಂಧಿಸಿದ ಆಚಾರ್ಯರ ಕುರಿತು ತರ್ಕಶಾಸ್ತ್ರಾರ್ಥ ವಿಧಾನ ಪರಿಣತ್ ಎಂದು ಉಲ್ಲೇಖಿಸಿದೆ. ಅದೇ ರೀತಿ ಕ್ರಿ.ಶ.೧೦೬೭ರ ಸಂಗಮದ ಶಾಸನವು[೧೭]. ಅಲ್ಲಿದ್ದ ಮೂರು ಕೋಣೆ ಸಂತತಿ ಹಾಗೂ ಲಾಕುಳಾಗಮ ಶಾಸ್ತ್ರ ವಿಧಾನಗಳ ಬಗೆಗೆ ವಿವರಿಸುತ್ತದೆ.

### ಜಿನಮುನಿಗಳು

ಜಿನಮುನಿಗಳು ಸಹ ಪ್ರಭುವರ್ಗಗಳಲ್ಲಿಯೇ ಪರಿಗಣಿಸಬಹುದಾದ ಸಮುದಾಯದವರಾಗಿದ್ದವರು ರಾಷ್ಟ್ರಕೂಟ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಜೈನಧರ್ಮ ಹಾಗೂ ಜೈನ ಯತಿಗಳು

ಶೈವಧರ್ಮವು ವೇಗವಾಗಿ ಬೆಳೆದ ಪರಿಣಾಮ ತನ್ನ ವ್ಯಾಪ್ತಿ ಹಾಗೂ ಜನಬೆಂಬಲವನ್ನು ಕಳೆದುಕೊಳ್ಳಬೇಕಾಯಿತು. ಇದಕ್ಕೆ ಹಲವಾರು ಕಾರಣಗಳನ್ನು ನೀಡಲಾಗುತ್ತದೆ. ಆ ಧರ್ಮದಲ್ಲಿನ ಕಟ್ಟುನಿಟ್ಟಾದ ನಿಯಮಗಳು ಹಾಗೂ ತಾಂತ್ರಿಕ ಆಚರಣೆಗಳು ಈ ಮತದ ಅವನತಿಗೆ ಮುಖ್ಯವಾದ ಅಂಶಗಳಾದವು. ಯಾದಗಿರಿ ಜಿಲ್ಲೆಯ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಜಿನ ಪಂಥಕ್ಕೆ ಸೇರಿದ ಕೆಲವೇ ಕೆಲವು ಅಂದರೆ ಬೆರಳೆಣಿಕೆಯ ಶಾಸನ ಮಾಹಿತಿಗಳು ಮಾತ್ರ ಲಭ್ಯವಾಗಿವೆ.

ಈ ಭಾಗದ ಸಾಂಸ್ಕೃತಿಕ ಇತಿಹಾಸಕ್ಕೆ ಬೇಕಾದ ಮುಖ್ಯ ಆಕಾರಗಳಾದ ಶಾಸನಗಳು ಹಾಗೂ ದೇವಾಲಯಗಳು ಈ ಪ್ರದೇಶದಲ್ಲಿ ನಿರ್ಮಾಣವಾಗುವ ಮೊದಲೇ ಜೈನ ಮತವು ಈ ಪ್ರದೇಶದಲ್ಲಿ ಅವನತಿ ಕಡೆಗೆ ಸಾಗಿತ್ತು. ಹಾಗಾಗಿ ಅದು ರಾಜಪ್ರಭುತ್ವ ಮತ್ತು ಜನಸಾಮನ್ಯರ ಬೆಂಬಲವನ್ನು ಕಳೆದುಕೊಂಡು ಸೊರಗಿದ್ದರಿಂದ ಆ ಮತಕ್ಕೆ ಸಂಬಂಧಿಸಿದ ಆಕರಗಳ ನಿರ್ಮಾಣವು ಈ ಪ್ರದೇಶದಲ್ಲಿ ಆಗಲೇ ತಳಮಟ್ಟಕ್ಕೆ ಮುಟ್ಟಿತ್ತೆಂದು ಅಭಿಪ್ರಾಯಿಸಬಹುದು.

ಜೈನ ಮತಪಂಥಕ್ಕೆ ಸಂಬಂಧಿಸಿದಂತೆ ಒಟ್ಟು ಮುರ್ನಾಲ್ಕು ಉಲ್ಲೇಖಗಳು ಮಾತ್ರ ಈ ಜಿಲ್ಲಾ ಪ್ರದೇಶದಲ್ಲಿ ಕಂಡುಬರುತ್ತವೆ. ಕೆಂಬಾವಿಯ ಕ್ರಿ.ಶ.೧೩೪೦ ಶಾಸನವು[೧೮] ಮೂಲಸಂಘ ಸರಸ್ವತೀಗಚ್ಚ ಬಲಾತ್ಕಾರಣ ಕೊಂಡಕುಂದಾನ್ವಯದ ರಾಜಗುರು ಮಂಡಲಾಚಾರ್ಯರಾದ ವಿಶಾಲಕೀರ್ತಿಯತಿ, ಅಮರಕೀರ್ತಿ ಭಟ್ಟಾರಕದೇವರ ಶಿಷ್ಯ ಮಾಘಣಂದಿಸಿದ್ಧಾಂತದೇವರ ಶಿಷ್ಯ ಚಂದ್ರಸೇನಂದಿಯರನ್ನು ಹೆಸರಿಸುತ್ತದೆ. ಕ್ರಿ>ಶ.೧೧೦೬ರ ಬೊಮ್ಮನಹಳ್ಳಿ ಶಾಸನದಲ್ಲಿ ಉಲ್ಲೇಖಿತ[೧೯] ಆರನೆಯ ವಿಕ್ರಮಾದಿತ್ಯನ ರಾಣಿ ಧಾರಲದೇವಿಯು ಸಂಬೋಧಿಸಿಕೊಂಡಿರುವ ಬಿರುದುಗಳು ಅವಳು ಜೈನ ಮತದವಳಾಗಿರಬಹುದೆಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ. ಹಗರಟಗಿಯ ಕ್ರಿ.ಶ.೧೨೨೪ರ ಶಾಸನದಲ್ಲಿ[೨೦]. ಜೈನ ಗುರು ದೇವಚಂದ್ರನ ಉಲ್ಲೇಖವಿದೆ.

ಜೈನಮತಕ್ಕೆ ನೀಡಿದ ದಾನದತ್ತಿ ಹಾಗೂ ಯಾಪನೀಯ ಸಂಘದ ಕುರಿತು ಕೆಲವು ವಿವರಗಳು ಇಲ್ಲಿನ ಕೆಲವು ಶಾಸನಗಳಲ್ಲಿ ವ್ಯಕ್ತವಾಗಿವೆ. ಅವುಗಳನ್ನು ಮುಂದಿನ ವಿವರಗಳಲ್ಲಿ ಚರ್ಚಿಸಲಾಗಿದೆ.

### ಶ್ರಮಿಕ ವರ್ಗ

ಶ್ರಮಿಕ ಅಥವಾ ದುಡಿಯುವ ವರ್ಗವು ಶಾಸನಗಳಲ್ಲಿ ಉಲ್ಲೇಖವಾಗಿರುವ ವಿವಿಧ ವೃತ್ತಿಗಳನ್ನಾಶ್ರಯಿಸಿದ ಕುಶಲಕರ್ಮಿಗಳು ಶ್ರಮಿಕ ವರ್ಗವನ್ನು ಪ್ರತಿನಿಧಿಸುತ್ತವೆ. ಪಟ್ಟಣ ಮತ್ತು ಹಳ್ಳಿಗಳಲ್ಲಿ ಕಡ್ಡಾಯವಾಗಿ ಇರುವಂತಹ ವರ್ಗವು ಇದಾಗಿತ್ತು. ಅಕ್ಕಸಾಲಿ, ಕಂಚಗಾರ, ಕಮ್ಮಾರ, ಕಲ್ಲುಕುಟಿಗ(ಶಿಲ್ಪಿ) ಹಾಗೂ ಬಡಗಿಯರ(ಕುಶಲಕರ್ಮಿಗಳ)ನ್ನು ಪಾಂಚಾಳರೆಂದು ಕರೆಯುತ್ತಿದ್ದರು. ಈಗಲೂ ಹಾಗೇ ಕರೆಯಲಾಗುತ್ತದೆ. ಕ್ರಿ.ಶ.೧೨ನೇ ಶತಮಾನದ ಹಗರಟಗಿ

ಶಾಸನವು[೨೧]. ಪಾಂಚಾಳರ ಅಥವಾ ವಿಶ್ವಕರ್ಮರನ್ನು ಸಕಲ ಕಲಾಕುಶಲತೆಯೊಂದಿಗೆ ವರ್ಣಿಸಿದೆ. ಗುಣಕಂರ್ಮ್ಮ, ರತ್ನಕಂರ್ಮ್ಮಪತ್ರ ಭೇರ ಚಿತ್ರಕಂಮ್ಮ, ಕಾಷ್ಠಕಮ್ಮಾಕ್ರಮುಂ ಮಡುಕಂಬಳ ಮುಖರಿಕಾ ಪತ್ರ ಎಂಬ ಉಲ್ಲೇಖ ಅವರು ಮಾಡುತ್ತಿದ್ದ ಶ್ರಮಗಳ ಕುರಿತು ತಿಳಿಸುತ್ತದೆ. ಅಲ್ಲದೇ ಇದೇ ಶಾಸನದಲ್ಲಿ ಉಲ್ಲೇಖವಾದ ನಂದಿಕೇಶ್ವರ ಲಾಕುಳಾಗಮ ಕುರಿತು ವಿವೇಚಿಸುತ್ತಾ ಬಹುಶಃ ಈ ನಂದಿಕೇಶ್ವರ ಲಾಕುಳಾಗಮದ ಅನುಯಾಯಿಗಳು ಶಾಸನದಲ್ಲಿ ಉಲ್ಲೇಖಿತ ಕುಶಲಕರ್ಮಿಯ(ವಿಶ್ವಕರ್ಮ)ರು ಆಗಿರಬಹುದೆಂದು ಅಭಿಪ್ರಾಯಿಸುತ್ತಾರೆ[೨೨].

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ಪಾಂಚಾಳ ಕುಶಲ ಕರ್ಮಿಗಳ ಕುರಿತಂತೆ ಮಹತ್ವದ ಮಾಹಿತಿ ನೀಡುವ ಕ್ರಿ.ಶ. ೧೧೧೦ರ ತೇದಿಯ ಏವೂರ ಶಾಸನವು ಸ್ಥಳೀಯವಾಗಿದ್ದ ಕಮ್ಮಟೇಶ್ವರ ದೇವರಿಗೆ ಏನೆಲ್ಲಾ ದಾನ-ದತ್ತಿಗಳನ್ನು ಈ ಸಮುದಾಯಗಳು ನೀಡಿದವು ಎಂಬ ವಿವರ ದಾಖಲಾಗಿದೆ. ಕಲ್ಕುಟಿಗ(ಶಿಲ್ಪಿ)ಗೊತ್ತಳಿ ಹೊಂಗೆ, ಹಾಗ, ಕಂಚಗಾರಗೊತ್ತಾಳಿ, ಕಡಹರದ ಸುಣ್ಣ, ಬಡಗಿ ಕಂಮ್ಮಾರಕ್ಕ ಸಾಲೆಯರು ಬೆರಟ್ಟುಂ ಬರಾದಿಯಾಗಿ ನೀಡಿದರೆಂದು ಉಲ್ಲೇಖಿಸುತ್ತದೆ.

ಪಾಂಚಾಳರ ಸಮೂಹದಲ್ಲಿದ್ದ ಕಲ್ಕುಟಿಗರ(ಶಿಲ್ಪಿಗಳ) ಕುರಿತು ಹೆಚ್ಚಿನ ವಿವರಗಳು ಶಾಸನಗಳಲ್ಲಿರುವುದನ್ನು ಗುರುತಿಸಬಹುದು. ಅಲ್ಲದೇ ಅವರು ಬ್ರಾಹ್ಮಣ ವರ್ಗದವರಷ್ಟೇ ದಾನ-ದತ್ತಿಗಳನ್ನು ಪಡೆಯುತ್ತಿದ್ದರೆಂಬ ಅಭಿಪ್ರಾಯಗಳುಂಟು. ಕ್ರಿ.ಶ.೧೦೭೭ರ ತೇದಿಯ ಏವೂರು ಶಾಸನವು[೨೩]. ದೇವರ ತಳವೃತ್ತಿಯಂ ಮೂಡಕಲ್ಕುಟಿಕ ಗೋಳ ಮತ್ತರ್ಪ್ಪನ್ನೆರಡು ಎಂಬ ಮಾಹಿತಿ ನೀಡುತ್ತದೆ. ಈ ಶಾಸನವು ಸವೆದಿದ್ದರಿಂದ ಹೆಚ್ಚಿನ ವಿವರಗಳು ಲಭ್ಯವಾಗುವುದಿಲ್ಲ.

ಸಮಾಜದಲ್ಲಿ ಅವರಿಗೆ ಎಷ್ಟೊಂದು ಮಹತ್ವದ ಸ್ಥಾನ ನೀಡಿದ್ದರೆಂದು ತಿಳಿಯಬೇಕಾದರೆ ಕ್ರಿ.ಶ.೧೦೭೪ರ ತೇದಿಯ ಬೈಚಬಾಳದ ಶಾಸನವನ್ನು ಗಮನಿಸಬಹುದು[೨೪]. ತನ್ನ ದಂಡನಾಯಕನ ಆದೇಶದ ಮೇರೆಗೆ ದೇವಾಲಯ ನಿರ್ಮಾಣಕಾರ್ಯ ಹಾಗೂ ಶಾಸನ ರಚನೆಯನ್ನು ಮಾಡಿದ ಕಲ್ಕುಟಿಗ ಮಾರೋಜನು ತನ್ನ ಸುಸ್ಪುಷೆಗೆ ಹೊಲ ಮತ್ತು ನಿವೇಶನವನ್ನು ದಾನವಾಗಿ ಪಡೆಯುತ್ತಾನೆ. ಕ್ರಿ.ಶ.೧೦೪೧ರ ಹಿರಿಯ ಹೆಬ್ಬಾಳದ ಶಾಸನವು[೨೫]. ಹಡಪದ(ರಾಜನ ತಾಂಬೂಲ ಹಿಡಿಯುವ ಮುಖ್ಯಾಧಿಕಾರಿ) ಮಾದಿರಾಜ ಹಿರಿಯ ಹೆಬ್ಬಾಳದಲ್ಲಿ ಕಟ್ಟಿಸಿದ ನಾರಾಯಣ ದೇವಾಲಯದ ರೂವಾರಿ(ರಚನಾಕಾರ) ಕಲ್ಕುಟಿಕ ಮಾರೋಜನಿಗೆ ಭೂಮಿ ಮತ್ತು ನಿವೇಶನ ದಾನ ನೀಡುತ್ತಾನೆ. ಪ್ರಾಯಶಃ ಏವೂರಿನ ದೇವಾಲಯ ಹಾಗೂ ಹಿರಿಯ ಹೆಬ್ಬಾಳದಲ್ಲಿ ಕಟ್ಟಿದ ದೇವಾಲಯದ ನಿರ್ಮಾಣಕಾರ ಈ ಶಾಸನಗಳ ಉಲ್ಲೇಖಿತ ಮಾರೋಜನೇ ಆಗಿರಬಹುದು.

ಯಾದಗಿರಿ ತಾಲೂಕಿನ ಹೆಡಗಿಮುದ್ರಿ ಗ್ರಾಮದ ಕ್ರಿ.ಶ.೧೦೩೩ರ ತೇದಿಯ ಶಾಸನವು[೨೬] ಕಲ್ಕುಟಿಗ ಜಣ್ಣೋಜನನ್ನು ಉಲ್ಲೇಖಿಸುತ್ತದೆ. ಆರನೆಯ ವಿಕ್ರಮಾದಿತ್ಯನ ಮಗನಾದ ಯುವರಾಜ

ಮಲ್ಲಿಕಾರ್ಜುನ ದೇವರನ್ನು ಬಿನ್ನಯಿಸಿಕೊಂಡು ಸ್ಥಳೀಯ ಮುಜೆಯ ನಾಯಕ ಮಲ್ಲಿಕಾರ್ಜುನ ದೇವಾಲಯ ಕಟ್ಟಿಸುತ್ತಾನೆ. ಇದರ ರೂವಾರಿ ಕಲ್ಕುಟಿಗ(ಶಿಲ್ಪಿ) ಚಂದೋಜನಾಗಿದ್ದನು. ಅವನಿಗೆ ಭೂಮಿ ಮತ್ತು ಮನೆ ನಿವೇಶನವನ್ನು ನೀಡಿರುವ ಉಲ್ಲೇಖ ಈ ಶಾಸನದಲ್ಲಿ ವ್ಯಕ್ತವಾಗಿದೆ.

ಕ್ರಿ.ಶ.೧೧೨೯ರ ಮುದನೂರಿನ ಶಾಸನವು[೨೭] ಸಗರ ೫೦೦ರ ಬಾಡದ ಚು(ಕೇ)ಣಿ ಕಾರಕ್ಕು(ಚೌಕಿದಾರ) ಕೋಲ್ಕಾರದಕ್ಕು ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೧೪ರ ರಾಜನಕೋಳೂರಿನ ಶಾಸನವು[೨೮]. ತುಂಬಲಿಗ ಜೋಗಿಸೆಟ್ಟಿ ಹಾಗೂ ಕ್ರಿ.ಶ.೧೨೨೯ರ ಹಗರಟಗಿ ಶಾಸನವು ೯೨ ಜೇಡಹಟಗಾರರ[೨೯] ಶ್ರಮಿಕ ವರ್ಗಗಳ ಕುರಿತು ಇಲ್ಲಿರುವ ಶಾಸನಗಳು ವಿವರ ನೀಡುತ್ತವೆ. ಹಗರಟಗಿ ಹಾಗೂ ಮುದನೂರು ಪರಿಸರದಲ್ಲಿ ಜೇಡಹಟಗಾರರು ಅಥವಾ ಜಾಡರು ಅಥವಾ ನೇಕಾರ ಸಮುದಾಯ ಆ ಸಂದರ್ಭದಲ್ಲಿ ಈ ಭಾಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರಬಹುದು. ಆದ್ಯವರ್ತನಕಾರನೆಂದು ಹೇಳುತ್ತಿರುವ ಜೇಡರ ದಾಸಿಮಯ್ಯ ಇದೇ ವೃತ್ತಿ ಸಮುದಾಯಕ್ಕೆ ಸೇರಿದವನೆಂದು ತಿಳಿದುಬರುತ್ತದೆ. ಆ ಕುರಿತು ಅಧ್ಯಾಯ ಮೂರರಲ್ಲಿ ಕೆಲವು ವಿಚಾರಗಳನ್ನು ಈಗಾಗಲೇ ಚರ್ಚಿಸಲಾಗಿದೆ.

ಶ್ರಮಿಕ ವೃತ್ತಿ ಸಮುದಾಯಗಳು ಕೆಲವೊಂದು ವೃತ್ತಿಸಂಘಗಳನ್ನು ಸಹ ಕಟ್ಟಿಕೊಂಡಿದ್ದವು. ದಾನ-ದತ್ತಿಗಳನ್ನು ಅಂಥ ಸಂಘಸಂಸ್ಥೆಗಳ ಮೂಲಕ ಕೊಟ್ಟಿರುವ ಉಲ್ಲೇಖಗಳಿವೆ. ಕ್ರಿ.ಶ.೧೧೧೦ ತೇದಿಯ ಐವೂರಿನ ಶಾಸನವು ೧೨೦ ಕೊತ್ತಳಿಗಳಿದ್ದವು ಎಂದು ಉಲ್ಲೇಖಿಸುತ್ತದೆ[೩೦]. ಕಲ್ಕುಟಿಗ ಗೊತ್ತಳಿ ಹಾಗೂ ಕಂಚಗಾರ ಗೊತ್ತಾಳಿಗಳ ಕುರಿತು ಇದೇ ಶಾಸನದಲ್ಲಿ ಉಲ್ಲೇಖಗಳಿವೆ.

ಶ್ರಮಿಕ ವರ್ಗದಲ್ಲಿದ್ದ, ತಂಬುಲಿಗ, ಗಾಣಿಗ, ಅಗಸ, ನಾವಿಂದ ಅಥವಾ ನಾವಿದರು ಕುರಿತು ಈ ಪ್ರದೇಶದ ಶಾಸನಗಳಲ್ಲಿ ವಿವರಗಳು ಪ್ರಕಟವಾಗಿರುವ ಮಾಹಿತಿಗಳಿವೆಯೆಂದು ಅಭಿಪ್ರಾಯಿಸಲಾಗಿದೆ[೩೧]. ಶ್ರಮಿಕ ವರ್ಗಗಳಲ್ಲಿಯೇ ಪರಿಗಣಿಸಲ್ಪಟ್ಟ ಇನ್ನೊಂದು ವೃತ್ತಿ ಸಮುದಾಯವಾದ ವಡ್ಡರ(ಒಡ್ಡರ) ಕುರಿತು ಈ ಪ್ರದೇಶದ ಕೆಲವು ಶಾಸನಗಳು ಉಲ್ಲೇಖ ನೀಡುತ್ತವೆ. ಕ್ರಿ.ಶ.೧೨ನೇ ಶತಮಾನದ ಐವೂರಿನ ಶಾಸನವು[೩೨]. ಒಡ್ಡರ ಕೋಟಬೋವಂಗೆ ದೇವರ ತಳವ್ರಿತ್ತಿಯಂ ಪಡವಲು ಮತ್ತರಾಲು ಅಂಕದೊಳ ಮತ್ತ ೬ ಮನೆಗೆ ಎಂದು ಉಲ್ಲೇಖಿಸಿದೆ. ಈತನೊಬ್ಬ ಪ್ರಸಿದ್ಧಿಪಡೆದ ಕೆಲಸಗಾರನೇ ಆಗಿರಬಹುದು. ಹಾಗೂ ಐವೂರಿನಲ್ಲಿರುವ ಕೋಟಿತೀರ್ಥ(ಬಾವಿ)ದ ನಿರ್ಮಾಣಕಾರ ಈತನೇ ಇರಬಹುದೆಂದು ಊಹಿಸಲಾಗಿದೆ. ತುಂಬಾ ಅಪರೂಪ ಎಂಬಂತ ಇನ್ನೊಂದು ಉಲ್ಲೇಖವು ಕ್ರಿ.ಶ.೧೧೨೩ರ ಚೆನ್ನೂರಿನ ಶಾಸನದಲ್ಲಿ ದಾಖಲಾಗಿದೆ. ತ್ರಿಭುವನಮಲ್ಲದೇವರ(ಆರನೆಯ ವಿಕ್ರಮಾದಿತ್ಯ) ಬೋಬಾಣಸಿಗನಾದ ಮಲ್ಲದೇವರಸರು ತಮ್ಮಾಳ್ವಿಯ ಚಣ್ಡವುರದ ಲಕ್ಷಣ್ಣೇಶ್ವರ ದೇವರ ದೀಪ, ಧೂಪ, ಭೋಗಕ್ಕೆ ದತ್ತಿ ಬಿಟ್ಟಿರುವುದನ್ನು ಉಲ್ಲೇಖಿಸಿದೆ. ಬೋಬಾಣಸಿಗದ ಅರ್ಥ ಅಡುಗೆಯ ಮನೆಯ ಮೇಲ್ವಿಚಾರಕನೆಂದು. ಬಹುಶಃ ಈತನು ರಾಜಪರಿವಾರ ಊಟೋಪಚಾರಗಳನ್ನು ಮಾಡುವ ವೃತ್ತಿಸಮುದಾಯಗಳಲ್ಲಿ ಇದ್ದ ಪ್ರಸಿದ್ಧ ವ್ಯಕ್ತಿ ಆಗಿರಬಹುದು. ಇದೇ ಗ್ರಾಮದ ಇನ್ನೊಂದು

ಶಾಸನದಲ್ಲಿ[೩೩]. ಅದೇ ಮಲ್ಲರಸ ಹಾಗೂ ಇನ್ನೊಬ್ಬ ದಾಸಿಯರಸನ ಉಲ್ಲೇಖವಿದೆ. ಬಹುಶಃ ಇವನು (ದಾಸಿಯರಸ) ಸಹ ಅದೇ ವೃತ್ತಿಗೆ ಸಂಬಂಧಿಸಿದವನಿರಬಹುದೆಂದು ಊಹಿಸಬಹುದು.

ವೃತ್ತಿ ಸಮುದಾಯಗಳಲ್ಲದೇ ಎಂಟು ಹಿಟ್ಟು ಎಂಬ ಪ್ರಯೋಗವು ಈ ಪ್ರದೇಶದ ಕೆಲವು ಶಾಸನಗಳಲ್ಲಿ ವ್ಯಕ್ತವಾಗಿದೆ. ಈ ಕುರಿತು ಹಲವಾರು ವಿದ್ವಾಂಸರು ಗಂಭೀರವಾದ ಚರ್ಚೆಗಳನ್ನು ಮಾಡಿದ್ದಾರೆ. ಎಂಟು ಹಿಟ್ಟು ಅನ್ನುವುದು ಸಂಸ್ಥೆಗಳೋ, ಸ್ಥಾನಿಕ ಆಡಳಿತ ಅಂಗಗಳೋ, ಆಯಾಗಾರ ಪದ್ಧತಿಯ ಪ್ರತೀಕವೋ, ಕಸಬುಗಳೋ ಅಥವಾ ಇದು ಆಡಳಿತ ನಿರ್ವಹಿಸುವ ಎಂಟು ವೃತ್ತಿ ಜನರಿರುವ ಸಮಿತಿ ಎಂಬ ಅಭಿಪ್ರಾಯಗಳು ದಾಖಲಾಗಿವೆ[೩೪]. ಕ್ರಿ.ಶ.೧೨೦೬ರ ಎಡೆಯಾಪುರ ಶಾಸನವು[೩೫]. ಎಂಟು ಹಿಟ್ಟು ಪಂಚಮರ ಘಟಿಕಾಸ್ಥಾನ ಮುಖ್ಯಯರ ಕಯ್ಯಲು ಎಂದು ಉಲ್ಲೇಖಿಸಿದೆ. ಶಹಾಪುರ ತಾಲೂಕಿನ ಇಂಗಳಗಿಯ ಕ್ರಿ.ಶ.೧೨ನೆಯ ಶತಮಾನದ ಶಾಸನದಲ್ಲಿ[೩೬] ವೆಂಟು ಹಿಟ್ಟು ಯಿಂತೀ ಧರ್ಮ್ಮವ ಪಾಳಿನದರ್ಗೆ ಎಂಬ ಉಲ್ಲೇಖವಿದೆ. ಅಲ್ಲದೇ ಮುದನೂರು ಹಗರಟಗಿ ಹಾಗೂ ಏವೂರಿನ ಶಾಸನಗಳಲ್ಲಿ ಆ ಕುರಿತು ಉಲ್ಲೇಖಗಳಿರುವ ಶಾಸನ ವಿವರಗಳು ಲಭ್ಯವಾಗಿವೆ. ಎಂಟು ಹಿಟ್ಟಿನ ಕುರಿತು ಅಭಿಪ್ರಾಯಗಳ ಭೇದವಿದ್ದರೂ ಅದು ಗೌಡ, ಸೇನಭೋವ, ತಳವಾರ ಈ ಮೂರು ಗ್ರಾಮಾಧಿಕಾರಿಗಳು ಮತ್ತು ಬಡಗಿ, ಕಮ್ಮಾರ, ಅಗಸ, ಕುಂಬಾರ, ಅಕ್ಕಸಾಲಿ ಈ ಐವರು ಪಂಚಕಾರರು ಹೀಗೆ ಎಂಟು ಜನರ ಸಮಿತಿ ಇದಾಗಿತ್ತೆಂಬ ಅಭಿಪ್ರಾಯವೇ ಹೆಚ್ಚು ಸೂಕ್ತವಾಗಿದೆ ಎಂದು ಅಭಿಪ್ರಾಯಿಸಲಾಗಿದೆ[೩೭]. ಒಂದು ಗ್ರಾಮದಲ್ಲಿ ಇವರೆಲ್ಲರ ಜೊತೆಯಾಗಿ ಕಾರ್ಯ ಮಾಡುವುದು ಸಾಂಘಿಕ ಸ್ವರೂಪವನ್ನು ಸೂಚಿಸುತ್ತದೆ ಎಂದು ಅಭಿಪ್ರಾಯಿಸಲಾಗಿದೆ.

ಸಮಾಜದ ಅತ್ಯಂತ ಕೆಳಹಂತದಲ್ಲಿದ್ದ ಶೂದ್ರರ ಹಾಗೂ ಅಸ್ಪೃಶ್ಯರ ಕುರಿತು ಶಾಸನಗಳು ಹೆಚ್ಚಿನಾಂಶ ಮೌನತಾಳಿವೆ. ಅದಕ್ಕೆ ಸ್ಪಷ್ಟವಾದ ಕಾರಣಗಳು ತಿಳಿಯದಾದ ಸಂಗತಿಗಳಾಗಿವೆ. ತಳಾರರ ಅಥವಾ ತಳವಾರ, ಕೋಲ್ಕಾರ ಹಾಗೂ ಕೇಣಿಕಾರರ ವೃತ್ತಿ ಸಮುದಾಯಗಳೇ ಈ ಪ್ರದೇಶದ ಶಾಸನಗಳಲ್ಲಿ ಉಲ್ಲೇಖಗೊಂಡ ಕಟ್ಟಕಡೆಯ ವೃತ್ತಿ ಸಮುದಾಯಗಳಾಗಿವೆ. ಆದರೆ ಹೊಲೆಯ, ಮಾದಿಗ, ಸಮಗಾರ, ಡೋರ್ ಹಾಗೂ ಡಕ್ಕಲಿಗ ಸಮುದಾಯಗಳನ್ನು ಒಳಗೊಂಡಿರುವ ತೀರ ಅಸ್ಪೃಶ್ಯ(ಪಂಚಮ) ಜಾತಿಯ ಜನಾಂಗಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಭಾಗದಲ್ಲಿದ್ದವು. ಆ ಸಂದರ್ಭದ ಇಂಥ ಜಾತಿ–ಜನಾಂಗಗಳ ಕುರಿತು ವಚನಕಾರರು ಹಾಗೂ ಸಾಹಿತ್ಯ ಗ್ರಂಥಗಳು ಕೆಲವಾರು ವಿವರಗಳನ್ನು ನೀಡಿರುವ ವಿವರಗಳನ್ನು ಗಮನಿಸಬಹುದು. ಅಲ್ಲದೇ ಈ ಪ್ರದೇಶವು ವಚನ ಚಳುವಳಿಯ ಬಹುಮುಖ್ಯ ಕೇಂದ್ರವೇ ಆಗಿತ್ತು. ಹಾಗಾಗಿ ಹತ್ತು ಹದಿನೆಂಟು ಸಮುದಾಯಗಳು ಈ ಭಾಗದಲ್ಲಿದ್ದವು ಎಂದೇ ಖಚಿತವಾಗಿ ಅಭಿಪ್ರಾಯಿಸಬಹುದು. ಆದರೆ ಶಾಸನಗಳಲ್ಲಿ ಮಾತ್ರ ಖಚಿತವಾಗಿ ಆ ಸಮುದಾಯಗಳ ಕುರಿತು ಉಲ್ಲೇಖಗಳಿಲ್ಲ. ಕ್ರಿ.ಶ.೧೨ನೆಯ ಶತಮಾನದ ಕಚಕನೂರಿನ ಶಾಸನವು[೩೮]. ಶ್ರೀಮದ್ದಕ್ಷಿಣ ವಾರಣಸಿ ಮುದನೀರ ಸ್ಥಾನದ ರಾಮನಾಥ ದೇವರ್ಗ್ಗೆ ಶ್ರೀ ಮಹಾದೇವ

ರಾಯನು(ಯಾದವ ಅರಸ ಮಹಾದೇವರಾಯ ಇರಬಹುದೆಂದು ಅಭಿಪ್ರಾಯಿಸಿದ್ದಾರೆ) ಕಜ್ಜಿಗನೂರ ಧಾರಾಪೂರ್ಜ್ವಿಕಂ ಮಾಡಿ ಸರ್ವ್ವನಮಸ್ಯವಾಗಿ ಕೊಟ್ಟರು ಸಗರದೊಳು ಸಲ್ವಂತಾಗಿ ಹದಿನೆಂಟು ಸಂತತಿ ಧಾರಾಪೂವ್ವರ್ಕಂ ಮಾಡಿ ಕೊಟ್ಟರು "ಮಂಗಳ ಮಹಾಶ್ರೀ ಶ್ರೀ ಎಂಬ ಉಲ್ಲೇಖವಿದೆ. ಇದರಲ್ಲಿ ಉಲ್ಲೇಖವಾದ ಹದಿನೆಂಟು ಸಂತತಿಗಳಲ್ಲಿ ಪಂಚಮರು ಅಥವಾ ಅಸ್ಪೃಶ್ಯರು ಸೇರಿದಿದ್ದಿರಬಹುದೇ?

## ಸ್ತ್ರೀ ಸ್ಥಾನಮಾನ

ಸಾಮಾನ್ಯವಾಗಿ ಅಂದಿನ ಸಮಾಜ-ಸಮುದಾಯಗಳಲ್ಲಿ ಸಾಮಾನ್ಯ ಸ್ತ್ರೀಯರು ಹೊಂದಿದ್ದ ಸ್ಥಾನಮಾನ ಹೇಗಿದ್ದವು ಎಂಬ ಸ್ಪಷ್ಟ ಉಲ್ಲೇಖಗಳೇನು ಈ ಪ್ರದೇಶದ ಲಭ್ಯವಿರುವ ಶಾಸನಗಳಲ್ಲಿ ದಾಖಲಾಗಿಲ್ಲವೆಂದೇ ಅಭಿಪ್ರಾಯಿಸಬಹುದು. ಆದರೆ ಪ್ರಭುವರ್ಗಗಳ ಸ್ತ್ರೀಯರ ಕುರಿತು ಹತ್ತಾರು ವಿಷಯಗಳು ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಪ್ರಮುಖವಾಗಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ರಾಣಿಯರು ದಾನ-ದತ್ತಿಗಳನ್ನು ನೀಡಿ ಸಮಾಜದಲ್ಲಿ ತಾವು ಗುರುತಿಸಿಕೊಂಡಿದ್ದ ವ್ಯಕ್ತಿತ್ವಗಳ ಬಗೆಗೆ ಶಾಸನಗಳಲ್ಲಿ ವಿವರವಾಗಿಯೇ ಬರೆದುಕೊಂಡಿದ್ದಾರೆ. ಅವರ ಕುರಿತು ಈಗಾಗಲೇ ಅಧ್ಯಾಯ ಮೂರರಲ್ಲಿ ಸಂದರ್ಭೋಚಿತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಆಗೀನ ಗಣ್ಯ ಸಮಾಜದಲ್ಲಿದ್ದ ಉನ್ನತ ಸ್ಥಾನದಲ್ಲಿದ್ದ ಮಹಿಳೆಯರಲ್ಲದೇ ಮಹಾಮಂಡಳೇಶ್ವರಾಗಿದ್ದವರ ಪತ್ನಿಯರು, ದಂಡನಾಯಕರ ಹಾಗೂ ಇತರೆ ಅಧಿಕಾರ ವರ್ಗಗಳಿಗೆ ಸಂಬಂಧಿಸಿದ ಮಹಿಳೆಯರ ಕುರಿತು ಇಲ್ಲಿರುವ ಶಾಸನಗಳು ಕೆಲವೊಂದು ಮಾಹಿತಿ ನೀಡುತ್ತವೆ.

ಕ್ರಿ.ಶ. ೧೧೫೦ರ ಕೆಂಬಾವಿ ಶಾಸನವು[೮೯] ಹೈಹಯ ಮಹಾಮಂಡಳೇಶ್ವರ ರೇವರಸನ ಮಡದಿ ಮಾಳಿಯಬ್ಬರಸಿಯು ತನ್ನ ಹೆಸರಿನಲ್ಲಿಯೇ ಮಾಳಿಬೇಶ್ವರ ದೇವಾಲಯ ನಿರ್ಮಿಸಿ ಅದರ ಅಂಗಭೋಗ-ರಂಗಭೋಗ, ತಪೋಧನರು ಹಾಗೂ ಅಲ್ಲಿದ್ದ ವಿದ್ಯಾರ್ಥಿಗಳ ಆಹಾರದಾನಕ್ಕಾಗಿ ಸಾವಿರ ಮತ್ತರು ಭೂಮಿಯನ್ನು ದಾನ ನೀಡುತ್ತಾಳೆ. ಅವಳ ರೂಪಲಾವಣ್ಯ ಹಾಗೂ ಹಾವಭಾವಗಳ ಕುರಿತು ವರ್ಣಿಸುತ್ತಾ ಅವಳು ಸರಸ್ವತಿ ಗೋತ್ರದವಳೆಂದು ಉಲ್ಲೇಖಿಸಲಾಗಿದೆ. ಅವಳು ಸಹ ಚಕ್ರವರ್ತಿಯ ರಾಣಿಯರಿಗಿಂತ ಕಡಿಮೆಯವಳಲ್ಲ ಎಂಬ ವಿಚಾರ ಶಾಸನಗಳಲ್ಲಿ ವ್ಯಕ್ತವಾದ ವಿಚಾರಗಳಿಂದ ಈ ತಿಳಿದುಬರುವುದು.

ಮುದನೂರಿನ ಕ್ರಿ.ಶ.೧೧೧೦೫ರ ತೇದಿಯ ಶಾಸನದಲ್ಲಿ ಮಹಾಮಂಡಳೇಶ್ವರ ಜೋಗಮರಸನ ಹೆಂಡತಿ ತಾರಾದೇವಿಯ ಬಗೆಗೆ ಉಲ್ಲೇಖಿಸಲಾಗಿದೆ[೯೦]. ಅವಳು ತನ್ನನ್ನು ಶ್ರೀರಾಮೇಶ್ವರ ದೇವರ ಲಬ್ಧವರಪ್ರಸಾದೆ ದಾನವಿನೋದೆ ಎಂದು ಕರೆದುಕೊಂಡಿದ್ದಾಳೆ. ಹೆಚ್ಚಿನ ಪ್ರಸಿದ್ಧಿ ಪಡೆದ ಕ್ರಿ.ಶ.೧೧೦೭೭ರ ಏವೂರಿನ ಶಾಸನದಲ್ಲಿ[೯೧] ಮನ್ಮಹಾಪ್ರಧಾನ ಹೇರಿಲಾಳಸನ್ಧಿವಿಗ್ರಹಿ ದಂಡನಾಯಕ ರವಿಯಣಭಟ್ಟನ ತಾಯಿ ಪಂಪಕಬ್ಬೆ ಹಾಗೂ ಮಡದಿ ದೇವಲಬ್ಬೆಯರ ಬಗೆಗೆ ವಿವರಗಳು ದಾಖಲಾಗಿವೆ. ಇದೇ ಶಾಸನದಲ್ಲಿ ಉಲ್ಲೇಖವಾದ ದಂಡನಾಯಕನ

ಮಗಳು ಮುದ್ದಲದೇವಿಯಕ್ಕ ಶಿವಪುರದ(ಬ್ರಹ್ಮಪುರಿ) ಅಗ್ಗಿಷ್ಟಿಕೆಗಾಗಿ ಮಹಾಜನರಿಗೆ ದಾನ ನೀಡಿರುವ ಉಲ್ಲೇಖವುಂಟು. ಗಂಗರ ಮಲ್ಲಿಶೆಟ್ಟಿಯ ಹೆಂಡತಿ ಚಾರಲದೇವಿ[೪೨] ಸೇನಬೋವ ಸುಜನಾಗ್ರಣಿ ತಪ್ಪರಸಂ ಮನೋವಲ್ಲಭೆ ಚೌಮಿಕಬ್ಬೆ[೪೩] ಹುಣಸಗಿಯ ದೇವಕಬ್ಬೆ[೪೪]ಯರ ಕುರಿತಿರುವ ಕೆಂಬಾವಿ ಕಾಸಕ್ಕಬ್ಬೆ[೪೫] ವಿವರಗಳಲ್ಲವು ಶಾಸನಗಳಲ್ಲಿ ದಾಖಲಾಗಿವೆ. ಚಂದಿರಾಜನ ಗುಣಾಂನ್ವಿತಸತಿ ಚಾಮಿಕವ್ವೆ, ನಾಗವರ್ಮನ ಪತ್ನಿ ದೇಕವ್ವೆ, ಮಲ್ಲಿದೇವನ ಪತ್ನಿ ಬಾಚಿಕವ್ವೆ, ವಿಭುಭಾವರಸನ ಚಂದಲದೇವಿ, ಪಂದಿರಾಜನ ಕಾಮಿಯವ್ವೆ ಹಾಗೂ ಸೌಧೂರೆ ಎರಡನೆಯ ಭಾವರಸನ ಹೆಂಡತಿ-ಚಾಮಲದೇವಿಯರ ಬಗೆಗೆ ಕ್ರಿ.ಶ.೧೧೮೨ರ ತೇದಿಯ ಹೆಮ್ಮಡಿಗೆ ಶಾಸನವು ವಿವರಿಸುತ್ತದೆ[೪೬] ಶಾಸನಗಳಲ್ಲಿ ಇಷ್ಟೆಲ್ಲ ಗುಣಾವಗುಣಗಳನ್ನು ಹೊಗಳಿಸಿಕೊಂಡ ಈ ಸ್ತ್ರೀಯರೆಲ್ಲರೂ ಬಹುಶಃ ಎಷ್ಟರಮಟ್ಟಿಗೆ ಅಭಿವ್ಯಕ್ತಿ ಸ್ವಾತಂತ್ರ್ಯ ಹೊಂದಿದ್ದರೂ ಹಾಗೂ ಅವರು ಅದನ್ನು ಅವನು ಅನುಭವಿಸುತ್ತಿದ್ದರೆಂದು ಹೇಳುವುದು ಕಷ್ಟ. ಅವರು ನೀಡಿರುವ ದಾನ-ದತ್ತಿಗಳು ಅವರ ಇಚ್ಛೆಗನುಗುಣವಾಗಿ ನಡೆಯುತ್ತಿದ್ದವೋ ಅಥವಾ ಅವು ತೋರಿಕೆಗೆ ಮಾತ್ರ ನೀಡಲ್ಪಡುತ್ತಿವುಗಳೆಂದು ತಿಳಿಯುವುದು ಕೂಡಾ ತುಂಬಾ ಕಷ್ಟ.

ಸಾಮಾನ್ಯ ಸ್ತ್ರೀಸಮಾಜ ಕುರಿತು ಸ್ಪಷ್ಟವಾದ ಉಲ್ಲೇಖಗಳು ಇಲ್ಲದಿದ್ದರು ಸೂಳೆ ಸಜ್ಜನೆ ಎಂಬ ಉಲ್ಲೇಖವು ಗಮನಿಸಬಹುದಾದ ವಿಷಯವಾಗಿ ತೋರುತ್ತದೆ. ಕ್ರಿ.ಶ.೧೨ನೇ ಶತಮಾನದ ಹಗರಟಗಿ ಶಾಸನವು[೪೭] ವಿಶ್ವಕರ್ಮರನ್ನು(ಪಾಂಚಾಳ ಕುಲ) ಸಕಲ ಕಲಾಕುಶಲಯೊಂದಿಗೆ ವರ್ಣಿಸುತ್ತಾ ಅಲ್ಲಿರುವ ಭೋಗಾರ ನಖರರು ಹಾಗೂ ನೂರೆಪ್ಪತ್ತು ಒಕ್ಕಲದವರು ಸೇರಿ ಶಿವಾಲಯ ಮಾಡಿಸುತ್ತಾರೆ. ಅಲ್ಲದೇ ರತ್ನಶಿವನ ಕಾಲ್ತೊಳೆದು ಹಲವರು ದಾನ-ದತ್ತಿಗಳನ್ನು ನೀಡುತ್ತಾರೆ. ಆ ಸಂದರ್ಭದಲ್ಲಿ ಎರಡು ಬಾಡ ಮಳಿಗೆಯಲ್ಲಿ ಮತ್ತ ಎರಡು ಸೂಳೆ ಸಜ್ಜನ ಕೊಟ್ಟಲ್ಲಿ ಎಂಬ ಉಲ್ಲೇಖವಿದೆ. ಈ ಕುರಿತು ಕೆಲವು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ. ಸಜ್ಜನ ಎಂಬುದು ಹೆಣ್ಣುಮಕ್ಕಳಿಗೆ ಗೌರವ ರೂಪದ ಪದಪ್ರಯೋಗ ಎಂಬುದು[೪೮]. ಆದರೆ ಇಂಥ ಅಭಿಪ್ರಾಯಗಳ ಉದ್ದೇಶ ಸದುದ್ದೇಶದಿಂದ ಕೂಡಿದ್ದರು ಅಲ್ಲಿ ಉಲ್ಲೇಖವಾದ ಸೂಳೆ ಎಂಬ ಪದ ಪ್ರಯೋಗ ಮಾತ್ರ ಈ ಜಿಲ್ಲೆಯಲ್ಲಿ ಸಿಗುವ ಏಕೈಕ ಶಾಸನ ಉದಾಹರಣೆ ಇದಾಗಿದೆ ಎಂಬುದು ಮುಖ್ಯ. ಸೂಳೆಗಾರಿಕೆಯಂತಹ ಮತ್ತೊಂದು ಅನಿಷ್ಟ ಸಂಪ್ರದಾಯ ತೊತ್ತಗಳ ಕುರಿತು ಉಲ್ಲೇಖಗಳು ಈ ಪ್ರದೇಶದಲ್ಲಿ ಲಬ್ಯವಿರುವ ಶಾಸನಗಳಲ್ಲಿ ದಾಖಲಾಗಿಲ್ಲ.

**ಸಂಪ್ರದಾಯ-ನಂಬಿಕೆಗಳು**

ದಿನನಿತ್ಯದ ಚಟುವಟಿಕೆಗಳು ಹೆಚ್ಚಾಗಿ ಸಂಪ್ರದಾಯ ಮತ್ತು ನಂಬಿಕೆಗಳ ಮೇಲೆ ನಡೆಯುವಂತವು. ಅವು ಎಲ್ಲ ಕಾಲಕ್ಕೂ ಅನೂಚಾನವಾಗಿ ನಡೆದು ಬಂದಿವೆ. ರಾಜ-ರಾಣಿಯರನ್ನೊಳಗೊಂಡ ಸಕಲ ಪ್ರಭುವರ್ಗವು ದಾನ-ದತ್ತಿಗಳನ್ನು ನೀಡುವಾಗ ಸೂರ್ಯಗ್ರಹಣ ಚಂದ್ರಗ್ರಹಣ ಹಬ್ಬ-ಹರಿದಿನಗಳನ್ನು ಕಡ್ಡಾಯವಾಗಿ ಪರಿಗಣಿಸುತ್ತಿದ್ದರು. ಕ್ರಿ.ಶ.೧೦೧೭ರ

ದೋರನಹಳ್ಳಿ ಶಾಸನವು[೨೯]. ಜಗದೇಕಮಲ್ಲ ಎರಡನೆಯ ಜಯಸಿಂಹ ಶ್ರೀಮನ್ನೀಲಶಿವ ಭಟ್ಟಾರಕಗ್ಗೆ ಆದಿತ್ಯವಾರ ಸೋಮಗ್ರಹಣದಂದು ಧಾರಾಪೂರ್ವ್ವಕಂ ಮಾಡಿ ಬಿಟ್ಟ ಮತ್ತರ ಎಂಬ ಉಲ್ಲೇಖವಿದೆ. ಅದೇ ರೀತಿ ಪಟ್ಟಬಂಧೋತ್ಸವದಂತಹ ಕಾರ್ಯಗಳನ್ನು ಸಹ ನಿರ್ದಿಷ್ಟಪಡಿಸಿದ ದಿನಗಳಲ್ಲಿಯೇ ನೆರವೇರಿಸಲಾಗುತ್ತಿತ್ತು ಎಂಬುದನ್ನು ವ್ಯಕ್ತವಾದ ವಿವರಗಳಿಂದ ತಿಳಿಯಬಹುದು. ಕ್ರಿ.ಶ.೧೦೭೭ರ ತೇದಿಯ ವಡಗೇರಿ ಶಾಸನವು[೩೦] ವಿಕ್ರಮವರ್ಷದ ಪ್ರಥಮ ನಳಸಂವತ್ಸರದ ಫಾಲ್ಗುನ ಶುದ್ಧ ಪಂಚಮಿ ಬೃಹಸ್ಪತಿ(ಗುರುವಾರ)ವಾರದಂದು ಪಟ್ಟಬಂದೋತ್ಸವ ನಿಮಿತ್ತದಿಂದ ಹಲವು ಮಹಾದಾನಗಳನ್ನು ಮಾಡಿದನೆಂಬ ವಿವರಣೆಗಳು ದಾಖಲಾಗಿವೆ. ಇಂಥ ಹತ್ತು ಹಲವು ಉದಾಹರಣೆಗಳನ್ನು ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು.

ನದಿ ಸ್ನಾನವು ಸಂಪ್ರದಾಯಗಳಲ್ಲಿ ಬಹಳ ಮುಖ್ಯವಾದ ಸಂಗತಿಯಾಗಿದೆ. ನೀರನ್ನು ಎಂದಿಗೂ ಮಲೀನವಾಗದ ಉದಕವೆಂಬ ನಂಬಿಕೆಗಳಿವೆ. ದೈನಂದಿನ ಪ್ರತಿ ಚಟುವಟಿಕೆಗಳು ನೀರಿನಿಂದಲೇ  ಪ್ರಾರಂಭವಾಗುವುದು ಎಂದರೆ ತಪ್ಪಾಗಲಾರದು. ಈ ಪ್ರದೇಶದಲ್ಲಿ ತುಂಬಾ ಪವಿತ್ರವಾದವುಗಳೆಂದು ಭಾವಿಸಿರುವ ಎರಡು ಮಹಾನದಿಗಳು ಹರಿದಿವೆ. ಕೃಷ್ಣೆ ಮತ್ತು ಭೀಮೆಯರ(ಭೀಮಾನದಿ) ಉಲ್ಲೇಖವು ಹೆಚ್ಚಿನ ಶಾಸನಗಳಲ್ಲಿ ಉಲ್ಲೇಖವಾಗಿದೆ. ಕೃಷ್ಣೆಯನ್ನು ಪೆದ್ದೊರೆ ಅಥವಾ ಮಹಾತೊರೆ ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಭೀಮಾ ನದಿಯನ್ನು ಭೀಮರಥಿ ಎಂಬ ಹೆಸರಿನಿಂದ ಹೆಚ್ಚಾಗಿ ಕರೆಯಲಾಗಿದೆ. ಕ್ರಿ.ಶ.೧೦೧೭ರ ತೇದಿಯ ತಿಂಥಣಿ ಶಾಸನವು[೩೧] ಸಗರತ್ರಿಶತಮಧ್ಯವರ್ತ್ತಿನಿ ಕೃಷ್ಣವೆಣ್ಣಾನದ್ಯುತಕ ತಿನ್ತಿಣಿಸಿರಿವರದಲ್ಲಿ ತ್ರೈಪುರುಷ ಪಾಠಶಾಲೆ ಪ್ರಾರಂಭಿಸಿದ್ದರ ಬಗೆಗೆ ಉಲ್ಲೇಖಿಸುತ್ತದೆ. ಕ್ರಿ.ಶ.೧೦೭೭ರ ಏವೂರು ಶಾಸನವು[೩೨] ಕಿರುದೊರೆ ದಡಿಯೊಳ್ ಮುಕ್ಕುನ್ದೆಯೆಂಬ ವಿಪ್ರಗ್ರಾಮಂ॥ ಎಂದು ಉಲ್ಲೇಖಿಸಿದೆ. ಕಿರುದೊರೆ ಎಂದರೆ ತುಂಗಭದ್ರಾನದಿ ಪೆದ್ದೊರೆ ಅಥವಾ ಹಿರಿಯ ತೊರೆಯೆಂದು ಕೃಷ್ಣನದಿಯನ್ನು ಶಾಸನಗಳಲ್ಲಿ  ಉಲ್ಲೇಖಿಸಲಾಗಿದೆ.

ದಾನ-ದತ್ತಿಯ ಚಟುವಟಿಕೆಗಳನ್ನು ನೆರವೇರಿಸುವ ಸಂದರ್ಭದಲ್ಲಿ ಪವಿತ್ರ ನದಿಯ ಸ್ನಾನಮಾಡಿಕೊಳ್ಳುವುದು ಕಡ್ಡಾಯ ಎಂಬಂತೆ ಇತ್ತು. ಶಹಾಪುರ ತಾಲೂಕಿನ ಸಂಗಮದಲ್ಲಿರುವ ಕ್ರಿ.ಶ.೧೦೬೭ ಮತ್ತು ೧೧೪೩ರ ತೇದಿಯ ಎರಡೂ ಶಾಸನಗಳಲ್ಲಿ[೩೩] ಶ್ರೀಮದ್ರುದ್ರಶಕ್ತಿ(ರುದ್ರಶಕ್ತಿ) ಪಂಡಿತರ ಕಾಲ್ತೊಳೆದು ಮಾಘದಮಾವಾಸ್ಯೆ ಬುಧವಾರಂ ಸೂರ್ಯಗ್ರಹಣದಂದು ಪೊರ್ದ್ದೊರೆಯ(ಪೆದ್ದೊರೆ ಕೃಷ್ಣಾ) ಭೀಮರಥಿಯ ಕೂಡಲಸಂಗಮೇಶ್ವರ ದೇವರ ಸ್ನಾನನಿವೇದ್ಯ ನೃತ್ಯಗೀತಾಮಾನ್ಯ ಜೀರ್ಣೋದ್ಧಾರಕಾರ್ಯ ಮಾಡಲಾಯಿತೆಂಬ ಅಭಿಪ್ರಾಯವಿದೆ.

ಸಂಗಮದ ಇನ್ನೊಂದು ಶಾಸನದಲ್ಲಿ ಈ ಭಾಗದ ಸಕಲ ಪ್ರಭುಪವರ್ಗಗಳು ಸೇರಿ ಶ್ರೀಮನ್ಮಾಪ್ರಧಾನ ಸೇನಾಪತಿ ಹಿರಿಯ ದಂಡನಾಯಕ ಚಿನ್ದರಸರು ಸೇರಿದಂತೆ ಸಕಲ ಗಣ್ಯರು ಮಹಾನದಿ ದಕ್ಷಿಣಪ್ರಯಾಗೆ ಶ್ರೀಕೃಷ್ಣವೆಣ್ಣಾ ಭೀಮರಥ್ಯಾದೇವಿ ಸಂಗಮದಲು

ಸ್ನಾನದಾನಗಳಂ ಮಾಡಲು ಎಂಬ ಉಲ್ಲೇಖವು ತುಂಬಾ ಮುಖ್ಯವಾಗಿ ಕಾಣುವುದು. ದಾನದತ್ತಿ ಹಾಗೂ ಧಾರ್ಮಿಕ ಚಟುವಟಿಕೆಗಳಂತ ಕಾರ್ಯಗಳನ್ನಲ್ಲದೇ ಗ್ರಾಮ ಮತ್ತು ನಗರ ನಿರ್ಮಾಣಗಳಂತಹ ಮಹತ್ವದ ಚಟುವಟಿಕೆಗಳನ್ನು ಕೂಡಾ ನದಿದಂಡೆಯ ಮೇಲೆ ಕೈಗೊಂಡ ಉದಾಹರಣೆಗಳು ಸಾಕಷ್ಟು ಸಂಖ್ಯೆಯಲ್ಲಿರುವುದನ್ನು ಗಮನಿಸಬಹುದು.

**ಸಾರ್ವಜನಿಕ ಚಟುವಟಿಕೆಗಳು**

ಎಲ್ಲ ಚಟುವಟಿಕೆಗಳ ಮೂಲ ಪ್ರೇರಣೆ ಧರ್ಮವೇ ಆಗಿದ್ದರೂ ಅದರಾಚೆಯ ಸಂಗತಿಗಳ ಬಗೆಗೂ ಸಮಾಜ ಗಮನ ಹರಿಸಿತೆಂದು ಅಭಿಪ್ರಾಯಿಸಬಹುದು. ಹಾಗಾಗಿ ಅಲೌಕಿಕ ಕಾರ್ಯಗಳ ಜೊತೆ ಜೊತೆಗೆ ಲೌಕಿಕವಾದ ಅವಶ್ಯಕತೆಗಳ ಬಗೆಗೆ ಹೆಚ್ಚಿನ ಪ್ರೋತ್ಸಾಹವನ್ನು ಪ್ರಾಚೀನ ಸಮಾಜವು ಸಹ ನೀಡಿತು. ದೇವಾಲಯಗಳು ಧಾರ್ಮಿಕ ಚೌಕಟ್ಟಿನ ಪರಿಧಿಯೊಳಗಿದ್ದರೂ ಅದರ ಸುತ್ತ ಮಾತ್ರ ಭೋಗಿಕವಾದ ಚಟುವಟಿಕೆಗಳಿಗೂ ನಿರ್ಮಾಣವಾಗಿರುವ ಸಂಗತಿಗಳನ್ನು ಶಾಸನಗಳಲ್ಲಿಯೇ ಉಲ್ಲೇಖಿಸಲಾಗಿದೆ. ಹಾಗಾಗಿ ಕೆಲವೊಮ್ಮೆ ಧರ್ಮ ಅಥವಾ ಧಾರ್ಮಿಕ ಚಟುವಟಿಕೆಗಳು ಕೇವಲ ನೆಪ ಮಾತ್ರವೆಂಬಂತೆ ತೋರಿದವು. ಪ್ರಧಾನವಾಗಿ ದೇವಾಲಯಗಳನ್ನು ಮುಂದಿಟ್ಟುಕೊಂಡು ಕೆರೆ–ಬಾವಿ, ಶಾಲೆ–ಸತ್ರ ಮತ್ತು ಮಠ–ಮಾನ್ಯಗಳು ಬೆಳೆದು ಬಂದವು. ಅವು ಹೆಚ್ಚಾಗಿ ಧಾರ್ಮಿಕೇತರ ಚಟುವಟಿಕೆಯ ಕೇಂದ್ರಗಳಾದವು. ಇಂಥ ಕಾರ್ಯಗಳು ಸಾರ್ಜಜನಿಕ ಚಟುವಟಿಕೆಗಳ ಮುಖ್ಯ ಆಕರ್ಷಣೆಗಳಾಗಿದ್ದವು. ಇದರಲ್ಲಿ ಸಹ ನಿರ್ಮಾಣಕಾರ ಹಾಗೂ ನಿರ್ವಾಹಕರು ಸರಿ ಸಮಾನವಾಗಿ ಜವಾಬ್ದಾರಿಗಳನ್ನು ನಿರ್ವಹಿಸಿದರು.

ಈ ಜಿಲ್ಲಾ ಪ್ರದೇಶದ ಶಹಾಪುರ ತಾಲೂಕಿನ ಬಹು ಭಾಗಗಳು ಶಾತವಾಹನರ ಕಾಲದಲ್ಲಿಯೇ ಇಂಥ ಚಟುವಟಿಕೆಗಳ ಕೇಂದ್ರಗಳಾಗಿದ್ದವು ಎಂಬುದರಲ್ಲಿ ಅನುಮಾನಗಳಿಲ್ಲ. ಆದರೆ ಅಂಥ ಕಾರ್ಯಗಳನ್ನು ಪುಷ್ಠಿಕರಿಸುವ ಆಧಾರಗಳ ಕೊರತೆ ಇದೆ. ಬೌದ್ಧ ಧರ್ಮದ ಪ್ರಭಾವಿತ ಈ ಕ್ಷೇತ್ರವು ಬಹುಶಃ ಸಾರ್ವಜನಿಕ ಚಟುವಟಿಕೆಗಳ ಸ್ಥಾನಗಳನ್ನು ಹೊಂದಿರಬಹುದು. ಅರವಟ್ಟಿಗೆ, ಗಿಡನೆಡುವುದು ಮತ್ತು ಸಂಘರಾಮಗಳನ್ನು ಈ ಪ್ರದೇಶದಲ್ಲಿ ಸ್ಥಾಪಿಸಿರಬಹುದು. ಅಲ್ಲದೇ ಅದಕ್ಕಿಂತಲೂ ಅಂದರೆ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗದಲ್ಲಿಯೇ ಗರಿಗದರಿಕೊಂಡಿದ್ದ ನೀರಾವರಿ ಚಟುವಟಿಕೆಗಳು ಶಾತವಾಹನರ ಕಾಲದಲ್ಲಿಯೂ ಮುಂದುವರೆದಿರಬಹುದು. ಆದರೆ ಎಲ್ಲದಕ್ಕೂ ಆಧಾರಗಳ ಅಲಭ್ಯತೆ ಕಾಡುತ್ತದೆ. ಇತಿಹಾಸ ಪೂರ್ವಕಾಲದಲ್ಲಿಯೇ ಈ ಪ್ರದೇಶಗಳಲ್ಲಿ ಕೆರೆ ಮತ್ತು ಬಾವಿ ನಿರ್ಮಾಣದಂತಹ ಚಟುವಟಿಕೆಗಳು ಸಾಕಷ್ಟು ಸಂಖ್ಯೆಯಲ್ಲಿ ನಡೆದಿರುವ ಸ್ಪಷ್ಟ ಕುರುಹುಗಳಿವೆ. ಆ ಕುರಿತು ಎರಡನೆಯ ಅಧ್ಯಾಯದಲ್ಲಿ ಸವಿಸ್ತಾರವಾಗಿ ಚರ್ಚಿಸಲಾಗಿದೆ. ಆ ಮೂಲ ಪ್ರೇರಣೆಯಿಂದಲೋ ಅಥವಾ ಭೌಗೋಳಿಕ ಸನ್ನಿವೇಶಗಳ ಅನುಕೂಲತೆಯಿಂದಾಗಿ ಈ ಪ್ರದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬಾವಿಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ಶಿರವಾಳ, ಮದ್ರಕಿ, ಏವೂರು, ಮುದನೂರು

ಹಾಗೂ ಹಗರಟಿಗೆ ಸ್ಥಳಗಳಲ್ಲಿ ಪ್ರಾಚೀನ ಕಾಲದಲ್ಲಿಯೇ ಕಟ್ಟಿದ ಹೆಚ್ಚಿನ ಸಂಖ್ಯೆಯಲ್ಲಿರುವ ಬಾವಿಗಳನ್ನು ಇಂದಿಗೂ ನೋಡುತ್ತೇವೆ. ಈ ಊರುಗಳಿಗೆ ಸಂಬಂಧಿಸಿದ ಐತಿಹ್ಯಗಳು ಪ್ರತಿ ಊರಿನಲ್ಲಿಯೂ ನೂರು ಬಾವಿಗಳಿದ್ದವು ಎಂದು ಹೇಳುತ್ತವೆ. ಸಾಮಾನ್ಯವಾಗಿ ಶಾಸನಗಳಲ್ಲಿ ಅವುಗಳನ್ನು ತೀರ್ಥಗಳೆಂದು ಉಲ್ಲೇಖಿಸಲಾಗಿದೆ. ಉದಾಹರಣೆಗೆ ಮುದನೀರು ತೀರ್ಥ ಹಾಗೂ ಎಳರಾಮೆ ತೀರ್ಥಗಳ[೫೪] ಉಲ್ಲೇಖವನ್ನು ಗಮನಿಸಬಹುದು. ಕ್ರಿ.ಶ.೧೦೭೭ರ ಐಪೂರಿನ ಶಾಸನದಲ್ಲಿ[೫೫] ಕೋಟಿ ತೀರ್ಥದ ಬಗೆಗೆ ಉಲ್ಲೇಖವಿದೆ. ಅದನ್ನು ವಡ್ಡರ ಕೋಟಿಬೋವ ಕಟ್ಟಿರಬೇಕೆಂಬ ಅಭಿಪ್ರಾಯಗಳು ಸಹ ಉಂಟು.

ಕ್ರಿ.ಶ.೧೦೯೯ರ ಮುದನೂರಿನ ಶಾಸನವು[೫೬] ಜಂನದ(ಜನ್ನ)ದ ಬಾವಿಯಂ ತೆಂಕ ತೋಂಟ ಮತ್ತರೇಯ ಎಂದು ಉಲ್ಲೇಖಿಸಿದೆ. ಪ್ರಾಯಶಃ ಇಲ್ಲಿ ಉಲ್ಲೇಖವಾದ ಜನ್ನ ಎಂಬುದು ದಾನಕೊಟ್ಟ ಭೂಮಿ ಎಂಬ ಅರ್ಥದಲ್ಲಿ ಬಂದಿರಬಹುದು. ಆ (ದಾನಬಿಟ್ಟ) ಜಾಗದಲ್ಲಿ ಈ ಬಾವಿ ಇರಬಹುದು. ಇದೇ ರೀತಿಯ ಉಲ್ಲೇಖ ಯಡ್ರಾಮಿ ಅಥವಾ ಎಳರಾಮೆಯ ಶಾಸನಗಳಲ್ಲಿಯೂ ಉಲ್ಲೇಖವಾಗಿರುವುದನ್ನು ಗಮನಿಸಬಹುದು.

ಕ್ರಿ.ಶ. ೧೨೨೯ರ ತೇದಿಯ ಹಗರಟಗಿ ಶಾಸನದಲ್ಲಿ[೫೭]. ಹಗರಟಗಿಯಲ್ಲಿದ್ದ ಸಮಸ್ತ ವರ್ತಕರ ಮಹಾಸಭೆಗಳು ಸಿಡಿಲಬಾವಿಯ ಶ್ರೀರಾಮನಾಥ ದೇವರಿಗೆಲ್ಲ ಪ್ರಾರ್ಥಿಸಿ ದಾನ ಬಿಟ್ಟಿರುವ ವಿವರವಿದೆ. ಕ್ರಿ.ಶ.೧೭೪೯ರ ತೇದಿಯ ಸಗರ ಶಾಸನವು ಶ್ರೀಮತು ಮಹಾಪಟ್ಟಣ(ಾಯಹರ ಗಾಣಿಗರ ಮಠದಲ್ಲಿ ಲಿಂಗಾಸೆಟ್ಟಿಯರ ಸುಪುತ್ರ ಯೆಲಸೆಟ್ಟಿ ಅಥವಾ ಕುಲಕೆ ಸೆಟರ ಲೆಂಕ ಕಟ್ಟಿಸಿದ ಬಾವಿಯ ಉಲ್ಲೇಖವಿದೆ[೫೮].

ಮಹಾಅಗ್ರಹಾರ ಮೇಲ್ದರಿಕೆ(ಮದ್ರಿಕಿ)ಯಲ್ಲಿ ಸ್ಥಳೀಯ ನಾಮಗಾವುಂಡನು ಧರ್ಮಕ್ಕಾಗಿಯೇ ಬಾವಿಯೊಂದನ್ನು ಕಟ್ಟಿಸಿರುವ ಉಲ್ಲೇಖ ಎಲ್ಲ ಕಾಲಕ್ಕೂ ಶ್ಲಾಘನೀಯವಾಗುವಂತಹದು. ಸುಂದರವಾದ ಆ ಪ್ರಾಚೀನ ಬಾವಿ ಇಂದಿಗೂ ಮೈತುಂಬಿಕೊಂಡು ತಿಳಿನೀರಿನಿಂದ ಕೂಡಿರುವುದನ್ನು ಗಮನಿಸಬಹುದು. ಕ್ರಿ.ಶ.೧೦೨೮ರ ಈ ಶಾಸನವು ಸಹ[೫೯] ಧರ್ಮೇತಿ ತೋಟದಲ್ಲಿರುವ ಈ ಧರ್ಮದ ಬಾವಿಯ ಕಲ್ಲೇಶ್ವರನ ಗುಡಿಯ ಮುಂಭಾಗದಲ್ಲಿಯೇ ಅನಾಥವಾಗಿ ಬಿದ್ದಿದೆ. ಸಗರನಾಡು ಇಂದಿಗೂ ಕೆರೆ–ಬಾವಿಗಳಿಂದ ಕೂಡಿದ ಸಮೃದ್ಧ ಪ್ರದೇಶ ಅದು ಸಮೃದ್ಧತೆಯಿಂದ ಕೂಡಿದ್ದಕ್ಕಾಗಿಯೇ ಬಹು ಪ್ರಾಚೀನ ಕಾಲದಿಂದಲೂ ಉತ್ತರ ಭಾರತದಿಂದ ಜನರು ಅಗಣಿತ ಸಂಖ್ಯೆಯಲ್ಲಿ ಈ ಪ್ರದೇಶಕ್ಕೆ ವಲಸೆ ಬಂದಿರಬಹುದು. ಹಾಗೂ ಪುಣ್ಯಸ್ರಾವ ಎಂಬ ಕಾವ್ಯವನ್ನು ಬರೆಯಲು ಗೊಂಕನಾಡಿನಿಂದ ಕವಿಯೊಬ್ಬ ಬಂದಿರುವ ವಿವರಗಳು ಈ ಭಾಗವು ಸಮೃದ್ಧತೆಯಿಂದ ಕೂಡಿದ ಪ್ರತೀಕಗಳಂತೆ ತೋರುತ್ತವೆ.

ವಿದ್ಯಾರ್ಥಿಗಳ ಸತ್ರಕ್ಕಾಗಿ ದಾನ ಬಿಟ್ಟ ಉಲ್ಲೇಖಗಳು ಈ ಪ್ರದೇಶದ ಶಾಸನಗಳಲ್ಲಿ ದಾಖಲಾಗಿವೆ. ಕ್ರಿ.ಶ. ೧೦೭೭ರ ಐಪೂರಿನ ಶಾಸನವು[೬೦] ಹಾಗೂ ತಿಂಥಣಿಯ ಕ್ರಿ.ಶ.೧೦೧೭ರ[೬೧]

ಹಾಗೂ ಮುದನೂರಿನ ಕ್ರಿ.ಶ.೧೧೪೨ ಮತ್ತು ೧೧೫೪ರ ತೇದಿಯ ಶಾಸನಗಳು[೬೨] ವಿದ್ಯಾಸತ್ರಕ್ಕಾಗಿ ನೀಡಿದ ದಾನಗಳ ಕುರಿತು ವಿವರಿಸುತ್ತವೆ.

**ವಿದ್ಯಾಭ್ಯಾಸ**

ವಿದ್ಯಾಭ್ಯಾಸ ಅಥವಾ ಕಲಿಯುವುದು ಅವರವರ ಸ್ಥಾನಮಾನ ಮತ್ತು ಬುದ್ಧಿಮತ್ತೆಯನ್ನು ಹೆಚ್ಚಿಸುವ ಸಂಗತಿಯಾಗಿತ್ತು. ವಿದ್ಯೆ ಪಡೆದವನ ಬಗೆಗೆ ಎಲ್ಲ ಕಾಲಕ್ಕೂ ಅಪಾರ ಗೌರವವನ್ನು ಈ ಸಮಾಜ ಇಟ್ಟುಕೊಂಡಿದೆ. ಉಳಿದೆಲ್ಲ ಚಟುವಟಿಕೆಗಳನ್ನು ನಿಯಂತ್ರಿಸುವಂತೆ ಧರ್ಮ ಈ ವಿಚಾರ ವಿಷಯಗಳನ್ನು ಸಹ ನಿಯಂತ್ರಿಸದೇ ಬಿಡಲಿಲ್ಲ. ಆದರೂ ನಮ್ಮವರು ಲೌಕಿಕತೆಗಿಂತ ಪಾರಮಾರ್ಥಿಕಕ್ಕೆ ಹೆಚ್ಚು ಒತ್ತುಕೊಟ್ಟು ದೇವಾಲಯಗಳಿಗೆ ನೀಡಿದ ದಾನ-ದತ್ತಿಗಳೊಂದಿಗೆ ಅಲ್ಲಿದ್ದ ವಿದ್ಯಾಭ್ಯಾಸಕ್ಕೂ ಹೇರಳವಾದ ದಾನಗಳನ್ನೇ ನೀಡಿದ್ದಾರೆ[೬೩]. ಹಾಗಾಗಿಯೇ ದೇವಾಲಯಗಳು ಸಹ ವಿದ್ಯಾಕೇಂದ್ರಗಳಾಗಿದ್ದವು ಎಂದರೇ ತಪ್ಪಾಗಲಾರದು. ಮುಖ್ಯವಾಗಿ ಈ ಕೇಂದ್ರದಲ್ಲಿ ಸ್ಥಾನಪತಿಗಳು, ತಪೋಧನರು ಹಾಗೂ ವಿದ್ಯಾರ್ಥಿಗಳು ನೆಲೆಗೊಂಡಿದ್ದರು. ಇಲ್ಲಿದ್ದ ತಪೋಧನರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು ವಿದ್ಯಾಭ್ಯಾಸದ ನಂತರ ಮಠ-ದೇವಾಲಯಗಳಲ್ಲಿ ಸ್ಥಾಪತಿಗಳಾಗುತ್ತಿದ್ದರು. ಛಾತ್ರರು(ವಿದ್ಯಾರ್ಥಿಗಳು) ವಿದ್ಯಾಭ್ಯಾಸ ಮುಗಿದ ನಂತರ ಗೃಹಸ್ಥಾಶ್ರಮಕ್ಕೆ ಮರಳುತ್ತಿದ್ದರು.

ತಪೋಧನರು ಯಮನಿಯಮಾಸನ ಪ್ರಾಣಾಯಾಮ ಪತ್ರವ್ಯವಹಾರ ಧ್ಯಾನ, ಧಾರಣ ಜಪಸಮಾಧಿ ಸಂಪನ್ನರಾಗಲು ದಿನ ನಿತ್ಯ ಪ್ರಾರ್ಥನೆ ಮಾಡುತ್ತಿದ್ದರಲ್ಲದೇ ಹಿರಿಯ ಪಂಡಿತರಿಂದ ಉಪದೇಶಗಳನ್ನು ಕೇಳುತ್ತಿದ್ದರೆಂದು ಅಭಿಪ್ರಾಯಿಸಲಾಗಿದೆ[೬೪]. ಹಾಗಾಗಿಯೇ ತಪೋಧನರು ಛಾತ್ರದಂದದಲ್ಲಿದ್ದು ಓದುವ ವಿದ್ಯಾರ್ಥಿಗಳಲ್ಲ. ಕೇಳುವ ವಿದ್ಯಾರ್ಥಿಗಳೆಂಬುದನ್ನು ಪುಷ್ಠೀಕರಿಸುತ್ತವೆ ಎಂದು ಅಭಿಪ್ರಾಯಿಸಲಾಗಿದೆ. ಇಲ್ಲಿದ್ದ ಸ್ಥಾನಾಚಾರ್ಯರು ಅಥವಾ ಸ್ಥಾನಪತಿಗಳು ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದದ್ದು ಕಡ್ಡಾಯವಾಗಿತ್ತಲ್ಲದೇ ದೇವಸ್ಥಾನ ಮತ್ತು ಮಠಗಳ ಸಮಸ್ತ ಹೊಣೆ ಅವರದಾಗಿತ್ತು.

ಯಾದಗಿರಿ ಜಿಲ್ಲೆಯ ಏವೂರು, ಮುದನೂರು, ತಿಂಥಣಿ, ಹಗರಟಗಿ, ಸಗರ, ಸಂಗಮ ಮತ್ತು ಶಿರವಾಳ(ಸಿರಿವಾಳ) ಇವು ಆ ಸಂದರ್ಭದ ಮುಖ್ಯ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು. ಕ್ರಿ.ಶ.೧೦೭೭ರ ತೇದಿಯ ಏವೂರಿನ ಶಾಸನವು[೬೫] ದಂಡನಾಯಕ ರವಿಯಣ್ಣ ಭಿನ್ನಪರಿಂದ ಬಿಟ್ಟ ದತ್ತಿಯ ಸಂದರ್ಭದಲ್ಲಿ ಅಲ್ಲಿದ್ದ ಪಾವುಳವಗ್ಗಕ್ಕಾಂ ಓದುವ ಕೇಳ್ವ ವಿದ್ಯಾರ್ಥಿ ತಪೋಧನಂ ಛಾತ್ರರಶವಾಚ್ಛಾದನಕ್ಕ, ವಕ್ಖಾಣಿಸುಮಭಟ್ಟಗ್ಗರ್ಂ ದತ್ತಿಗಳನ್ನೆಲ್ಲ ಇದರಲ್ಲಿ ಹೆಸರಿಸಲಾಗಿದೆ. ಏವೂರಿನ ಸ್ವಯಂ ಸೋಮೇಶ್ವರ ದೇವಾಲಯದ ಆವರಣದಲ್ಲಿ ಕೋಷ್ಠಗ್ರಹವೆಂದು ಕರೆಯಲ್ಪಡುತ್ತಿರುವ ಕಟ್ಟಡವಿದ್ದು ಅದುವೇ ಅಲ್ಲಿದ್ದ ಪ್ರಾಚೀನ ಶಾಲೆ ಆಗಿತ್ತು ಎಂಬ ಅಭಿಪ್ರಾಯವು ಒಪ್ಪತಕ್ಕಂತಹ ವಿಚಾರವಾಗಿದೆ. ಇದೇ ಶಾಸನದಲ್ಲಿ ನೈಷ್ಠಿಕ ಬ್ರಹ್ಮಚಾರಿಗಳಲ್ಲದ ಅಥವಾ ಪಾಲಿಸದ ತಪೋಧನರನ್ನು ಮಠದಿಂದ ಓಡಿಸಬಹುದೆಂಬ ಪ್ರಸ್ತಾಪವೂ ದಾಖಲಾಗಿದೆ.

ಕ್ರಿ.ಶ.೧೦೧೭ರ ತೇದಿಯ ತಿಂಥಣಿ ಶಾಸನವು[೬೬] ದುಗ್ಗಣಾರ್ಯಭಟ್ಟ ಕಟ್ಟಿಸಿದ ತ್ರೈಪುರುಷ ಶಾಲೆಯ ಜುಶ್ಯಾಖೆಯನ್ನು ಅಭ್ಯಸಿಸುವ ವಿದ್ಯಾರ್ಥಿಗಳ ಅಶನಾಚ್ಛಾದನಕ್ಕಾಗಿ ಮುನ್ನೂರು ನಿವರ್ತನ ಭೂಮಿಯನ್ನು ಚಕ್ರವರ್ತಿ ನೀಡಿರುವ ಉಲ್ಲೇಖ ಹಲವಾರು ವಿಚಾರಗಳನ್ನು ತೆರೆದಿಡುತ್ತದೆ. ಇಲ್ಲಿ ಒಂದುನೂರು(ಏಕಶತಕ ಸಂಖ್ಯಾ) ವಿದ್ಯಾರ್ಥಿಗಳಿದ್ದು ಅವರ ಭೋಜನಾರ್ಥಕ್ಕಾಗಿ ಈ ಭೂಮಿಯನ್ನು ನೀಡಿರುವ ಸ್ಪಷ್ಟ ವಿವರಗಳಿವೆ.

ಕ್ರಿ.ಶ.೧೦೭೧ರ ಸಗರ ಶಾಸನವು[೬೭] ಶ್ರೀಮನ್ನಕರೇಶ್ವರ ದೇವರ ಮಠದ ತಪೋಧನರಿಗೆ ಮತ್ತು ವಿದ್ಯಾದಾನಕ್ಕೆಂದು ವಿವರ ನೀಡುತ್ತಲ್ಲದೇ ಬ್ರಹ್ಮಚರ್ಯರ ಶಾಸ್ತ್ರಾಗಮ ಕುಶಳ ಶಿಷ್ಯ ಸನ್ತಾನಮಿಳಾನ್ಯತ್ರ ಛಾತ್ರರಪ್ಪ ಮತ್ತು ನೈಷ್ಠಿಸ್ಥಾನವಾರಿಗಳೆಂಬ ವಿವರಗಳನ್ನು ನೀಡುತ್ತದೆ. ಕ್ರಿ.ಶ. ೧೦೪೦ರ ತೇದಿಯ ಬೆಳಗುಂದಿ[೬೮] ಶಾಸನವು ಸಹ ಬ್ರಹ್ಮೇಶ್ವರ ದೇವಾಲಯದಲ್ಲಿದ್ದ ಶಾಲೆಯ ತಪೋಧನರಿಗೆ ಹಾಗೂ ವಿದ್ಯಾರ್ಥಿಗಳಿಗೆ ೫೦ ಮತ್ತರ ಭೂಮಿ ನೀಡಿರುವ ಉಲ್ಲೇಖ ನೀಡುತ್ತದೆ.

**ವಿದ್ಯಾಭ್ಯಾಸದ ಕ್ರಮ**

ವಿದ್ಯೆ ಹಾಗೂ ಶಾಸ್ತ್ರಗಳು ತುಂಬಾ ವಿಶಾಲ ವ್ಯಾಪ್ತಿಯನ್ನು ಹೊಂದಿದ್ದವು. ಹಾಗಾಗಿ ಐಚ್ಛಿಕ ವಿಷಯ ಅಥವಾ ನಿರ್ದಿಷ್ಟ ವಿಷಯಗಳ ಕುರಿತು ಪಾಠ ಪ್ರವಚನಗಳು ಸಂಬಂಧಿಸಿದ ವಿದ್ಯಾಲಯಗಳಲ್ಲಿ ನಡೆಯುತ್ತಿದ್ದವು. ಈ ಕ್ರಮವು ಶಾಸ್ತ್ರ ಪ್ರಾವೀಣ್ಯತೆ ಪಡೆಯಲು ತುಂಬಾ ಉಪಯುಕ್ತವಾಗಿದ್ದವು. ವೇದ ಮತ್ತು ಆಗಮಗಳ ಕುರಿತೇ ಹೆಚ್ಚಿನ ವಿದ್ಯಾಭ್ಯಾಸದ ಕ್ರಮಗಳು ಈ ಪ್ರಾಚೀನ ನಾಡಿನಲ್ಲಿದ್ದವು. ಅಂಥ ಒಂದೆರಡು ಉದಾಹರಣೆಗಳು ಇಲ್ಲಿರುವ ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು.

ಕ್ರಿ.ಶ.೧೦೧೭ರ ತಿಂಥಣಿ ಶಾಸನವು[೬೯] ಯಜುಶ್ಯಾಖೆಯನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳು ಮಾತ್ರ ಇಲ್ಲಿದ್ದರೆಂದು ತಿಳಿಸುತ್ತದೆ. ಮುಖ್ಯವಾದ ಹಾಗೂ ಹೊಸದಾದ ವಿಷಯವೊಂದು ಈ ವಿಷಯಕ್ಕೆ ಸಂಬಂಧಿಸಿದಂತೆ ಕ್ರಿ.ಶ.೧೨ನೇ ಶತಮಾನದ ಹಗರಟಗಿ ಶಾಸನದಲ್ಲಿ ಕಂಡುಬರುತ್ತದೆ[೭೦]. ಇಲ್ಲಿದ್ದ ವಿಶ್ವಕರ್ಮ ಅಥವಾ ಪಾಂಚಾಳರು ನಂದಿಕೇಶ್ವರ ಲಾಕುಳಾಗಮದ ಅನುಯಾಯಿಗಳಾಗಿದ್ದರೆಂಬುದು ಕ್ರಿ.ಶ.೧೧೪೩ರ ಸಂಗಮ ಶಾಸನವು[೭೧] ಬ್ರಾಹ್ಮಣರ ವಿದ್ಯಾರ್ಥಿಗಳ ಭೋಜನಕ್ಕೆ ತೈತ್ರಿಯ ವೇದ ಖಂಡಿಕೆ ವಿದ್ಯಾರ್ಥಿಗಳಿಗೆ ಹೇಳುವ ಬ್ರಾಹ್ಮಣರಿಗೆ ಎಂದು ನಿರ್ದಿಷ್ಟವಾಗಿಯೇ ಸೂಚಿಸಿದೆ. ಅಲ್ಲದೇ ಇದೇ ಸ್ಥಳದ ಇನ್ನೊಂದು ಶಾಸನವು(ಕ್ರಿ.ಶ.೧೦೬೭ರ)[೭೨] ಅಲ್ಲಿದ್ದ ಸ್ಥಾನಪತಿಯನ್ನು ಲಾಕುಳಾಗಮ ಪಂಡಿತನೆಂದು ಹೆಸರಿಸಿದೆ.

**ಸಾಹಿತ್ಯಿಕ**

ಒಂದು ಪ್ರದೇಶ ಒಟ್ಟು ಚಟುವಟಿಕೆಗಳು ಪರಿಪೂರ್ಣಗೊಳ್ಳಬೇಕಾದರೆ ಅಲ್ಲಿ ಸಾಹಿತ್ಯಿಕ ಅಂಶವು ಮುಖ್ಯವಾಗುತ್ತದೆ. ಸಾಹಿತ್ಯ ಉಳಿದೆಲ್ಲ ಚಟುವಟಿಕೆಗಳನ್ನು ವಿಮರ್ಶಿಸುವ ಹಾಗೂ

ಹೊಸ ವಿಚಾರಗಳನ್ನು ಕಟ್ಟಿಕೊಡುವ ಭೂಮಿಕೆಯಾಗಿ ಕಾರ್ಯನಿರ್ವಹಿಸುತ್ತಿರುತ್ತದೆ. ಹಾಗಾಗಿ ಅದು ಯಾವಾಗಲೂ ಸೃಜನಶೀಲ ರೂಪದಲ್ಲಿಯೇ ಪುನರ್ ರೂಪಗೊಳ್ಳುತ್ತಾ ಹೋಗುತ್ತಲ್ಲದೇ ಎಲ್ಲರಿಗೂ ರುಚಿಸುವ ಮುಖ್ಯ ಜ್ಞಾನಶಾಖೆಯಾಗಿ ತೋರುತ್ತದೆ. ಇತಿಹಾಸ ರಚನೆಯ ಮುಖ್ಯ ಸಾಕ್ಷಿಗಳಾದ ದೇವಾಲಯ, ಶಿಲ್ಪ ಹಾಗೂ ಶಾಸನಗಳು ವಸ್ತುಸ್ಥಿತಿಯನ್ನು ಕಟ್ಟಿಕೊಡುವಲ್ಲಿ ವಿಫಲಗೊಂಡಾಗ ಸಾಹಿತ್ಯವು ದಾರಿ ತೋರುತ್ತದೆ. ಅದು ಮೌಖಿಕ ಹಾಗೂ ಬರವಣಿಗೆಯ ರೂಪದಲ್ಲಿ ರೂಪಗೊಳ್ಳುತ್ತಾ ಬೇರೆ ಬೇರೆ ಸಂದರ್ಭಗಳನ್ನು ಅಗೋಚರ ರೂಪದಲ್ಲಿ ಕಟ್ಟುತ್ತಿರುತ್ತದೆ. ಯಾವ ನಾಡಿನಲ್ಲಿ ಸಾಹಿತ್ಯ ಮತ್ತು ರಚನಾಕಾರರು ಹೆಚ್ಚು ಹೆಚ್ಚಾಗಿ ಬೆಳೆದು ಬರುತ್ತಾರೋ ಅದು ಇನ್ನಷ್ಟು ಹೆಚ್ಚಾಗಿ ಪ್ರಕಾಶಿಸುತ್ತಿರುತ್ತದೆಯೆಂದು ಅಭಿಪ್ರಾಯಿಸಲಾಗುತ್ತದೆ. ದೇವಾಲಯ, ಶಾಸನ ಹಾಗೂ ಮೂರ್ತಿಶಿಲ್ಪಗಳು ಯಾದಗಿರಿ ಜಿಲ್ಲೆಯ ಪ್ರಾಚೀನ ಸಾಂಸ್ಕೃತಿಕ ಸಮಗ್ರತೆಯನ್ನು ಕಟ್ಟಿಕೊಡುವಲ್ಲಿ ಹೇಗೆ ಮುಖ್ಯವಾಗಿಯೋ ಅದೇ ರೀತಿ ಆ ಕಾಲದ ಸಾಹಿತ್ಯವು ತನ್ನ ಮಹತ್ವದ ಪಾತ್ರವನ್ನು ವಹಿಸುತ್ತಾ ಬಂದಿದೆ. ಆ ಕುರಿತು ಕೆಲವು ಸ್ಥೂಲ ವಿವರಗಳನ್ನು ಗಮನಿಸಲಾಗಿದೆ.

ಇಲ್ಲಿಯ ಶಾಸನಗಳು ಬಂಧುರವಾದ ಗದ್ಯ, ಗದ್ಯ ಪ್ರಶಸ್ತಿ, ಪದ್ಯಗಳನ್ನು ಒಳಗೊಂಡಿದೆ. ಅವು ವ್ಯಕ್ತಿಗಳ ಸೌಂದರ್ಯ ವ್ಯಕ್ತಿತ್ವ, ಶೌರ್ಯ ಪರಾಕ್ರಮ ದಾನ ಗುಣಗಲ ವರ್ಣನೆಗಳನ್ನು ಖ್ಯಾತ ಕರ್ನಾಟಕ ವೃತ್ತಗಳು, ಕಂಬಗಳಲ್ಲಿ ವ್ಯಕ್ತಪಡಿಸಲಾಗಿದೆಯೆಂದು ಅಭಿಪ್ರಾಯಿಸಲಾಗಿದೆ[೭೩]. ಕಾವ್ಯಮಯವಾದ ಸಾಹಿತ್ಯವನ್ನು ಹೊಂದಿರುವ ಕ್ರಿ.ಶ.೧೦೭೭ ಏವೂರ[೭೪], ಕ್ರಿ.ಶ.೧೦೧೮ರ ಹೆಮ್ಮಡಗಿ[೭೫] ಕ್ರಿ.ಶ.೧೧೨೦ರ ಹುಣಸಗಿ[೭೬] ಮತ್ತು ಕ್ರಿ.ಶ.೧೧೦೭ರ ದೇವರಗೋನಾಲ[೭೭]ದ ಶಾಸನಗಳಲ್ಲಿರುವ ವಿವರಗಳನ್ನು ಗಮನಿಸಬಹುದು.

**ಕವಿಗಳು**

ಸುರಪುರ ತಾಲೂಕಿನ ಸುಮಾರು ಒಂದನೂರು ಶಾಸನಗಳಲ್ಲಿ ಕೇವಲ ಎರಡು ಶಾಸನಗಳಲ್ಲಿ ಮಾತ್ರ ಕವಿಯ ಹೆಸರು ಹಾಗೂ ನಾಲ್ಕು ಶಾಸನಗಳಲ್ಲಿ ರೂವಾರಿಗಳ ಹೆಸರು ಹೇಳಿದೆ ಎಂಬ ಅಭಿಪ್ರಾಯಗಳಿವೆ[೭೮]. ಕ್ರಿ.ಶ.೧೦೫೪ರ ಕೆಂಬಾವಿ[೭೯] ಹಾಗೂ ಕ್ರಿ.ಶ.೧೧೯೦ರ ಹಾವಿನಾಳ ಶಾಸನದಲ್ಲಿ[೮೦] ಮಾತ್ರ ಬರೆದವರ ಹೆಸರುಗಳು ಪ್ರಕಟವಾಗಿರುವುದನ್ನು ಗಮನಿಸಬಹುದು. ಕೆಂಬಾವಿ ಶಾಸನವು ಶ್ರೀಮತ್ ಬರೆವರ ರುದ್ರಂ ಚಂದದೇವಯ್ಯಂ ಬರೆದಂ ಎಂದು ಉಲ್ಲೇಖಿಸಿದರೆ ಹಾವಿನಾಳ ಶಾಸನದಲ್ಲಿ ಶ್ರೀಮಲೆಯ ಮಲ್ಲಿಕಾರ್ಜುನ ವರದಾಸಿಯಂಭಲಿಪಿ ಲಿಖಿತ ದಕ್ಷಪಾಳಕ ಪುರಾಗ್ರಹಾರ ಗಣಕಂ ಪಂಡಿತಮಲ್ಲಯ್ಯನ ಬರಪಂ ಎಂಬ ವಿವರವು ದಾಖಲಾಗಿದೆ. ಇದರಲ್ಲಿ ಉಲ್ಲೇಖವಾದ ಬರೆದಂ ಮತ್ತು ಬರಪಂ ಎಂಬ ಶಬ್ದಗಳು ಅವರು ಕವಿಗಳೂ ಹಾಗೂ ಲಿಪಿಕಾರರು ಆಗಿರುವಂತೆ ತೋರುತ್ತದೆ ಎಂದು ಅಭಿಪ್ರಾಯಿಸಲಾಗಿದೆ.

ತಾನೆ ನೆಟ್ಟನೆ ಬಲ್ಲಂ ಬರೆಯಲ್ಕನೇ ಕಲಿಪಿಯಂ ಎಂದು ಹೊಗಳಿಸಿಕೊಂಡಿರುವ ರವಿಗಚಮೂಪನ ಬಹುಮುಖ ಪ್ರತಿಭೆಯನ್ನು ಗಮನಿಸಿದಾಗ ಐವೂರ ಶಾಸನದ ಕವಿ ಅವನೇ ಆಗಿರಬಹುದೇ ಎಂಬ ಸಂದೇಹ ಮೂಡುತ್ತದೆ ಎಂಬ ಅಭಿಪ್ರಾಯವು ಸಮಂಜಸವಾಗಿದೆಯೆಂದು ತೋರುತ್ತದೆ[೬೯]. ಚತುರ ಕವೀಶ್ವರ ಲಲಾಟಪಟ್ಟಂ ಭಟ್ಟಂ ಎಂದು ಕರೆದುಕೊಂಡ ಆದಿಭಟ್ಟನು[೭೦] ಕವಿ ವಾರಿ ಹಾಗೂ ವಾಗ್ಮಿಯಾಗಿದ್ದನೆಂಬ ಅಭಿಪ್ರಾಯವಿದೆ. ಅಲ್ಲದೇ ಮುಂದಿನ ಸಾಲಿನಲ್ಲಿ ಆದಿ ಭಟ್ಟನೆಂದು ಕರೆದುಕೊಂಡ ಆತನೇ ಈ ಶಾಸನದಲ್ಲಿ ಉಲ್ಲೇಖಿತ ಕವಿಯಾಗಿದ್ದಾನೆಂದು ವಿವರಿಸಲಾಗಿದೆ.

**ರೂವಾರಿಗಳು**

ಪಾಂಚಾಳ(ವಿಶ್ವಕರ್ಮ) ಕುಲದಲ್ಲಿ ಬರುವ ಕಲ್ಕುಟಿಗರು ಅಥವಾ ಕಲುಕುಟಿಗ(ಶಿಲ್ಪಿ) ಉಲ್ಲೇಖಿತ ಸಮುದಾಯವು ಶಾಸನ ಕಂಡರಣೆ, ದೇವಾಲಯ ಹಾಗೂ ಮೂರ್ತಿಶಿಲ್ಪಗಳಂತಹ ವೈವಿಧ್ಯ ಆಕರಗಳನ್ನು ನಿರ್ಮಿಸುತ್ತಿದ್ದರು. ಕ್ರಿ.ಶ.೧೦೭೪ರ ತೇದಿಯ ಬೈಚಬಾಳ ಶಾಸನದಲ್ಲಿ[೭೧] ಕಲುಕುಟಿಗ ಮಾರೋಜನ ಉಲ್ಲೇಖವಿದೆ. ಪ್ರಾಯಶಃ ಅವನೇ ಈ ಶಾಸನದ ಕೆತ್ತನೆಕಾರನಾಗಿದ್ದನೆಂಬ ಅಭಿಪ್ರಾಯವು ಒಪ್ಪುವಂತವುದ್ದಾಗಿದೆ. ಹಿರೇಹೆಬ್ಬಾಳದ ಶಾಸನದಲ್ಲಿಯೂ[೭೨] ಸಹ ಈ ಮಾರೋಜನ ಉಲ್ಲೇಖವಿದೆ.

ಕ್ರಿ.ಶ.೧೦೫೪ರ ಕೆಂಬಾವಿ ಶಾಸನದಲ್ಲಿ ಆಜಮೋಜಂಗಂ ಮತ್ತು ಕಾಳೋಜಂ, ಅವರ ಹೆಸರುಗಳು ದಾಖಲಾಗಿವೆ. ಇವರು ಕೇವಲ ಶಾಸನ ಕೆತ್ತನೆಕಾರರು ಮಾತ್ರವಾಗಿರದೆ ಭವ್ಯವಾದ ಮಾಳಿಬ್ಬೇಶ್ವರ ದೇವಾಲಯವನ್ನು ಸಹ ನಿರ್ಮಿಸಿದ್ದವರೆಂದು ಅಭಿಪ್ರಾಯಿಸಲಾಗಿದೆ[೭೩]. ಕೆಂಬಾವಿಯಲ್ಲಿರುವ ಪ್ರಸ್ತುತ ರೇವಣ ಸಿದ್ದೇಶ್ವರ ದೇವಾಲಯವೇ ಹಿಂದಿನ ಮಾಳಿಬ್ಬೇಶ್ವರ ದೇವಾಲಯವಾಗಿರಬಹುದು.

ಬಹುಶಃ ಶಾಸನ, ದೇವಾಲಯ ಮತ್ತು ಮೂರ್ತಿಶಿಲ್ಪಗಳನ್ನು ಹೊರತುಪಡಿಸಿದಂತೆ ಕೆರೆ-ಕಟ್ಟೆ, ಒಡ್ಡು-ಬಾವಿ ಹಾಗೂ ಮನೆ-ಮಠಗಳನ್ನು ಬೇರೆ ಬೇರೆ ಸಮುದಾಯದವರು ಕಟ್ಟುತ್ತಿರಬಹುದು. ಅಂತಹದೊಂದು ಉದಾಹರಣೆ ಐವೂರಿನ ಶಾಸನದಲ್ಲಿ ದಾಖಲಾಗಿದೆ[೭೪] ಇಲ್ಲಿನ ಪ್ರಸಿದ್ಧ ಸ್ವಯಂಭು ಸೋಮೇಶ್ವರ, ಮಲ್ಲಿಕಾರ್ಜುನ ದೇವಾಲಯಗಳನ್ನು ಪಾಂಚಾಳ ಕುಲದ ಕಲ್ಕುಟಿಗರು ಕಟ್ಟಿದರೆ ದೇವಾಲಯದ ಮುಂಭಾಗದಲ್ಲಿರುವ ಶಿವಕೋಟಿ ತೀರ್ಥ ಅಥವಾ ಕೊಳ(ಪುಷ್ಕರಣಿ)ವನ್ನು ಒಡ್ಡರ ಕೋಟಿಬೋವ ಕಟ್ಟಿದನೆಂದು ಗುರುತಿಸಲಾಗಿದೆ. ಕ್ರಿ.ಶ.೧೦೭೭ರ ತೇದಿಯ ಐವೂರಿನ ಶಾಸನ[೭೫]. ದೇವರ ತಳಪ್ರತ್ತಿಯಂ ಮೂಡ ಕಲ್ಕುಟಿಗಗೇಯಿ ಮತ್ತರ್ಪ್ಪನ್ನೆರಡು ಎಂಬ ವಿವರ ನೀಡುತ್ತದೆ.

ಇದೇ ಗ್ರಾಮದ ಕ್ರಿ.ಶ.೧೧೧೦ರ ಶಾಸನವು[೭೬] ಐಹೂರಿನ ಕಂಮಟೇಶ್ವರ ದೇವರ್ಗ್ಗೆ ೧೨೦ ಕೊತ್ತಳಿ(ಗೊತ್ತಳಿ(ಸಂಘ-ಸಂಸ್ಥೆ) ಜೊತೆಗೆ ಕಲ್ಕುಟಿಗ ಗೊತ್ತಳಿ(ಶಿಲ್ಪಗಾರರು) ದಾನ ನೀಡಿದ ಉಲ್ಲೇಖವಿದೆ. ಪಾಂಚಾಳ ವೃತ್ತಿಯ ಕುಶಲ ಕರ್ಮಿಗಳು ವಾಸಿಸುವ ಸ್ಥಳ ಹಾಗೂ

ದೇವಸ್ಥಾನಗಳಲ್ಲಿ ಕಂಮಟೇಶ್ವರ ದೇವಾಲಯ ಇರುವುದು ಸಹಜವಾದ ಸಂಗತಿಯಾಗಿತ್ತು. ಉದಾಹರಣೆಗೆ ಸವದತ್ತಿ ತಾಲೂಕಿನ ಶಿರಸಂಗಿ ಗ್ರಾಮದಲ್ಲಿಯ ಕಾಳಮ್ಮನ ದೇವಾಲಯದ ಆವರಣದಲ್ಲಿ ಕಮ್ಮ(ಕಂ)ಳೇಶ್ವರ ದೇವಾಲಯ ಇರುವುದನ್ನು ಗಮನಿಸಬಹುದು. ಅಲ್ಲದೇ ಈ ಹೆಸರಿನ ಗುಡಿಯಿದ್ದ ಆಸುಪಾಸಿನಲ್ಲಿಯೇ ನಾಣ್ಯಗಳನ್ನು ಟಂಕಿಸುವ ಶಾಲೆ ಇರುತ್ತಿತ್ತು. ಅಥವಾ ಆ ದೇವಾಲಯವೇ ಟಂಕಸಾಲೆ ಆಗಿರುತ್ತಿತ್ತು ಎಂಬ ಅಭಿಪ್ರಾಯಗಳು ಸಹ ಉಂಟು.

### ಧಾರ್ಮಿಕ ಸ್ಥಿತಿಗತಿ

ಈ ಪ್ರದೇಶದ ಸಮಗ್ರ ಸಾಂಸ್ಕೃತಿಕ ಮಾಹಿತಿಗಳನ್ನು ಕಟ್ಟಿಕೊಡುವಲ್ಲಿ ಧಾರ್ಮಿಕ ಸ್ಥಿತಿಗತಿಗಳು ಮುಖ್ಯವಾಗುತ್ತವೆ. ಈ ವಿವರಗಳಲ್ಲಿ ಪ್ರಮುಖವಾಗಿ ಚತುಸ್ಸಮಯಗಳಾದ(ಮತಗಳನ್ನು ಸಮಯವೆಂತಲೂ ಕರೆಯುವ ವಾಡಿಕೆ ಇದೆ). ಬೌದ್ಧ, ಜೈನ, ವೈಷ್ಣವ ಹಾಗೂ ಶೈವ ಮತಗಳು ಮುಖ್ಯವಾಗುತ್ತವೆ. ಸ್ವಲ್ಪಮಟ್ಟಿನ ಭಿನ್ನ ಬಗೆಯ ಆಚರಣೆಗಳಿದ್ದರೂ ಅವುಗಳೆಲ್ಲವುಗಳು ಈ ಛತ್ರದಡಿಯಲ್ಲಿ ಬರುವಂಥವುಗಳು. ವೈದಿಕ ಸಂಸ್ಕೃತಿಯ ಚರ್ವಿತಚರ್ವಣ ಪದ್ಧತಿಯಿಂದ ಕ್ರಮೇಣ ಜಾತಿಗಳು ಹೆಚ್ಚಾಗುತ್ತ ಶೋಷಣೆಯು ಹೆಚ್ಚಾಯಿತು. ಅನಿಷ್ಟಗಳು ಹೆಚ್ಚಿದಂತೆ ಬೌದ್ಧ ಮತ್ತು ಜೈನ ಧರ್ಮಗಳು ಜನ್ಮತಾಳಿ ತಮ್ಮ ಕ್ರಿಯಾಶೀಲತೆಯನ್ನು ಹೆಚ್ಚಿಸಿಕೊಂಡವು. ಆದರೆ ಮತಗಳಲ್ಲಿ ಯಾವುದು ಮೊದಲು ಯಾವುದು ಅನಂತರ ಎಂದು ಖಚಿತವಾಗಿ ಹೇಳುವುದು ಕಷ್ಟ ಎಂದು ಅಭಿಪ್ರಾಯಿಸಲಾಗಿದೆ[6].

ಈ ನಾಡಿನಲ್ಲಿ ನಾಲ್ಕೂ ಮತಪಂಥಗಳಿಂದ ಬೇಸತ್ತ ಜನತೆ, ಹನ್ನೆರಡನೆಯ ಶತಮಾನದ ಶಿವಶರಣರು ಮುಂದಿಟ್ಟ ಹೊಸ ಸಿದ್ಧಾಂತವಾದ ವೀರಶೈವದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗಿಯಾಯಾದರು. ಇದನ್ನೆ ವಚನ ಚಳವಳಿ ಎಂತಲೂ ಕರೆಯಲಾಗುತ್ತದೆ. ಇಂಥ ಹೊಸ ಸಿದ್ಧಾಂತದ ಚಟುವಟಿಕೆಯ ಕ್ರಿಯಾಶೀಲ ಭೂಮಿಯು ಸಹ ಸಗರನಾಡು ಹಾಗೂ ಹಗರಟಗಿ ನಾಡು ಪ್ರದೇಶಗಳಾಗಿದ್ದವೆಂದರೆ ತಪ್ಪಾಗಲಾರದು. ಆದ್ಯ ವಚನಕಾರ ಜೇಡರ ದಾಸಿಮಯ್ಯ, ಹಾವಿನಾಳ ಕಲ್ಲಯ್ಯ, ಕೆಂಬಾವಿ ಭೋಗಣ್ಣ, ಏಕಾಂತದ ರಾಮಯ್ಯ, ಕೊಂಡಗುಳಿ ಕೇಶಿರಾಜ, ಸಗರ ಬೊಮ್ಮಯ್ಯ, ಅಗ್ನಿ ಹೊನ್ನಯ್ಯ, ಅಣ್ಣುರದ ಶರಣ ಹಾಗೂ ಕಲಿಯುಗದ ಕಡೆಯ ಶರಣನೆಂದೇ ಪ್ರಖ್ಯಾತಿ ಹೊಂದಿದ್ದ ಬಲಿಚಕ್ರದ ಬಸಲಿಂಗಯ್ಯ ಎಲ್ಲರೂ ಪ್ರಸ್ತುತ ಯಾದಗಿರಿ ಜಿಲ್ಲೆಯ ಪ್ರಾಚೀನ ಪ್ರದೇಶದಲ್ಲಿದ್ದವರು. ಅವರ ಸುಧಾರಣಾವಾದ ಮತ ವಿಚಾರಗಳು ಈ ನಾಡಿನ ಜನತೆಯನ್ನು ಭಾರೀ ಪ್ರಮಾಣದಲ್ಲಿಯೇ ಪ್ರಭಾವಿಸಿರಬಹುದು. ಆದರೆ ಆ ಕುರಿತು ಆ ಕಾಲದಲ್ಲಿ ನಿರ್ಮಾಣವಾದ ಲಿಖಿತ ದಾಖಲೆಗಳಾವುವು ಸಿಗದಿರುವುದು ವಾಸ್ತವ ಚರಿತ್ರೆ ರಚನೆಗೆ ಮುಖ್ಯ ಅಡಚಣೆಗಳಾಗಿವೆಯೆಂದು ಅಭಿಪ್ರಾಯಿಸಬಹುದು.

### ಬೌದ್ಧ ಧರ್ಮ

ಬೌದ್ಧಧರ್ಮ ಅಥವಾ ಮತದ ಕುರಿತು ಹಲವು ಸ್ಪಷ್ಟ ಸಾಕ್ಷಿಗಳು ಯಾದಗಿರಿ ಪ್ರದೇಶದ

ಈ ಶಾಸನಗಳಲ್ಲಿ ಕಂಡುಬಂದಿರುವುದಿಲ್ಲ. ಆದರೆ ಇತರೆ ಪ್ರಾಚ್ಯಕುರುಹುಗಳು ಮಾತ್ರ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ದುರದೃಷ್ಟವಶಾತ್ ಅವುಗಳ ಕುರಿತು ವ್ಯವಸ್ಥಿತ ಅಧ್ಯಯನ ಆಗಿರುವುದಿಲ್ಲ. ಶಹಾಪುರ ತಾಲೂಕಿನ ಅಣಬಿ, ಶಿರವಾಳ, ಹಾರಣಗೇರಿ, ಹುರುಸಗುಂಡಗಿ, ಯಾದಗಿರಿ ತಾಲೂಕಿನ ಗುರುಸುಣಗಿ ಹಾಗೂ ಸುರಪುರ ತಾಲೂಕಿನ ವಜ್ಜಲ ಹಾಗೂ ಹುಣಸಗಿ ಪರಿಸರದಲ್ಲಿ ಈ ಧರ್ಮಕ್ಕೆ ಸಂಬಂಧಿಸಿದಂತೆ ಹಲವಾರು ಕುರುಹುಗಳು ಕಂಡುಬಂದಿರುವ ವಿವರಗಳನ್ನು ಪ್ರಕಟಿಸಲಾಗಿದೆ. ಹಾಗಾಗಿ ಈ ಪಂಥವು ಈ ಪ್ರದೇಶದಲ್ಲಿತ್ತೆಂಬುದಕ್ಕೆ ಇವು ಪ್ರಬಲ ಸಾಕ್ಷಿಗಳಾಗಿ ಕಂಡುಬರುತ್ತವೆ. ಆ ಕುರಿತ ಕುರುಹುಗಳ ಬಗೆಗೆ ಈಗಾಗಲೇ ಅಧ್ಯಾಯ ಎರಡರಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಭೀಮಾ ತಟದಲ್ಲಿ ನೆಲೆಗೊಂಡ ಮೌರ್ಯ ಮತ್ತು ಶಾತವಾಹನ ಕಾಲಕ್ಕಾಗಲೇ ಈ ಪ್ರದೇಶದಲ್ಲಿ ಬೌದ್ಧಮತ ಪಂಥವು ನೆಲೆಗೊಂಡಿರುವ ಸೂಚನೆಗಳು ಸ್ಪಷ್ಟವಾಗಿ ದೊರಕುತ್ತವೆ. ಅಲ್ಲದೇ ನಮ್ಮ ದೇಶದಲ್ಲಿ ಅತಿ ಪ್ರಸಿದ್ಧಿ ಪಡೆದ ಸನ್ನತಿ ಹಾಗೂ ಕಣಗಿನಹಾಳ ನೆಲೆಗಳು ಈ ಪ್ರದೇಶಕ್ಕೆ ಹೊಂದಿಕೊಂಡಂತೆ ಇವೆ. ಕೇವಲ ನದಿಯೊಂದು ಮಾತ್ರ ಈ ಭಾಗವನ್ನು ಬೇರ್ಪಡಿಸಿದ್ದನ್ನು ಬಿಟ್ಟರೆ ಇವೆಲ್ಲವು ಒಂದೇ ಪ್ರದೇಶದ ಹೊಕ್ಕಳಬಳ್ಳಿಯ ಸಂಬಂಧದ ನೆಲೆಗಳಾಗಿವೆ.

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿಯೇ ಅತೀ ಪ್ರಾಚೀನ ಮತ್ತು ಮೊದಲದೆಂದು ಕರೆಯಲ್ಪಡುತ್ತಿರುವ ಕ್ರಿ.ಶ. ೯೩೯ರ ತೇದಿಯ ಸಿರವಾಳ ಶಾಸನದಲ್ಲಿ ಎಡದೊರೆ ನಾಡಿನ ಮಹಾಮಂಡಳೇಶ್ವರನಾಗಿದ್ದ ಬುದ್ಧ ದೊರೆಯ ಉಲ್ಲೇಖವಿದೆ[೦]. ರಾಯಚೂರು ಪ್ರದೇಶವಾಗಿತ್ತು. ಅದನ್ನೇ ಎಡದೊರೆ ಪ್ರದೇಶವೆಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಈತನ ಅಧೀನ ಅಧಿಕಾರಿ ಸಗರ ನಾಳಗಾವುಂಡ ಚಂದಯ್ಯನಾಗಿದ್ದ. ಬಹುಶ ಬುದ್ಧ ಅನ್ನುವ ಉಲ್ಲೇಖವುಳ್ಳ ಮಹಾಮಂಡಳೇಶ್ವರನು ಈತನೊಬ್ಬನೆ ಆಗಿರಬಹುದು. ಈ ಉಲ್ಲೇಖವನ್ನು ಹೊರತು ಪಡಿಸಿದರೆ ಇನ್ನಾವುದೇ ಮಾಹಿತಿ ಈ ಪ್ರದೇಶದಲ್ಲಿ ದಾಖಲಾದಂತಿಲ್ಲ. ಆದರೆ ಬೌದ್ಧ ಮತಕ್ಕೆ ಸಂಬಂಧಿಸಿದ ಶಾತವಾಹನ ಕಾಲದ ಹಲವಾರು ಪ್ರಾಚ್ಯಕುರುಗಳು ಈ ಜಿಲ್ಲಾ ಪ್ರದೇಶದಲ್ಲಿ ಕಂಡುಬಂದಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಗುರುಸುಣಗಿ(ಶಹಾಪುರ ತಾಲೂಕು) ಗ್ರಾಮದಿಂದ ಸ್ವಲ್ಪ ದೂರದಲ್ಲಿರುವ ಗುಡ್ಡ(ಸಿದ್ದೇಶ್ವರ ಗುಡಿ ಹತ್ತಿರ)ದಲ್ಲಿ ಬೌದ್ಧಾವಶೇಷಗಳು ಪತ್ತೆಯಾಗಿರುವುದು ವರದಿಯಾಗಿವೆ. ಬಹುಶಃ ಪ್ರಾಚೀನ ಕನ್ನಡ ನಾಡಿನಲ್ಲಿ ಬೌದ್ಧಧರ್ಮಕ್ಕೆ ಸಂಬಂಧಿಸಿದ ಹೆಚ್ಚಿನ ಕುರುಹುಗಳನ್ನು ಹೊಂದಿರುವ ಪ್ರದೇಶವೆಂದರೆ ಸಗರನಾಡು ಎಂದರೆ ತಪ್ಪಾಗಲಾರದು.

ಪ್ರಾಚೀನ ಹಗರಟಗಿ ನಾಡಿನಲ್ಲಿದ್ದ ಸಾಲವಾಡಿಗಿ ಗ್ರಾಮದ ಶಾಸನದಲ್ಲಿ ಅಲ್ಲಿನ ಪ್ರಭುಗಳು ಚತುಸ್ಸಮಯ ಸಮುದ್ಧರಣರಾಗಿದ್ದರೆಂದಿದೆ ವಿವರಿಸುತ್ತದೆ[೧]. ಈ ಚತುಸ್ಸಮಯಗಳಲ್ಲಿ ಬೌದ್ಧವು ಒಂದಾಗಿತ್ತು. ಅಲ್ಲದೇ ಶಾಸನ ಇರುವ ಸಾಲವಾಡಗಿ ಗ್ರಾಮವು ಸಹ ಪ್ರಾಚೀನ ಹಗರಟಗೆ ನಾಡಿನಲ್ಲಿತ್ತು.

### ಜೈನ ಧರ್ಮ

ಶಹಾಪುರ ತಾಲೂಕಿನ ಶಿರವಾಳ, ಗೋಗಿ, ಅಣಬಿ, ಕೋಡಾಲ, ಸುರಪುರ ತಾಲೂಕಿನ ಏವೂರು, ಮುದನೂರು, ಅಗ್ನಿ, ಮಾಲಗತ್ತಿ, ಹಗರಟಗಿ ಹಾಗೂ ಯಾದಗಿರಿ ತಾಲೂಕಿನ ಯಾದಗಿರಿ ಪಟ್ಟಣದಲ್ಲಿ ಈ ಮತಪಂಥಕ್ಕೆ ಸಂಬಂಧಿಸಿದ ಪ್ರಚ್ಯಕುರುಹುಗಳು ಕಂಡುಬಂದಿರುವುದನ್ನು ಗಮನಿಸಬಹುದು.

ಶೈವ ಮತ್ತು ವೈಷ್ಣವ ಮತಪಂಥಗಳಿಗೆ ಹೋಲಿಸಿದಾಗ ಜೈನಧರ್ಮಕ್ಕೆ ಸಂಬಂಧಪಟ್ಟ ಸಂಗತಿಗಳು ಈ ಪ್ರದೇಶದಲ್ಲಿ ತುಂಬಾನೆ ವಿರಳ. ಕೆಂಬಾವಿ, ಏವೂರು, ಹಗರಟಗಿ, ಗೋಗಿ ಹಾಗೂ ಬೊಮ್ಮನಹಳ್ಳಿ ಶಾಸನಗಳನ್ನು ಹೊರತುಪಡಿಸಿದರೆ ಈ ಕುರಿತು ಸಿಗುವ ವಿವರಗಳು ಇಲ್ಲವೇ ಇಲ್ಲವೆನ್ನುವಷ್ಟು ಎಂದು ತೋರುತ್ತದೆ. ಪ್ರಾಯಶಃ ಈ ಪ್ರದೇಶದಲ್ಲಿ ತುಂಬಾ ವಿಶಾಲವಾಗಿ ಹಾಗೂ ವ್ಯಾಪಕವಾಗಿ ಬೆಳೆದ ಶೈವ ಮತಪಂಥದ ಕಾಳಾಮುಖ ಹಾಗೂ ಪಾಶುಪತ ಅನುಯಾಯಿಗಳು ಇಂಥ ಹಿನ್ನೆಡೆಗೆ ಕಾರಣವಾಗಿರಬಹುದು. ಅಲ್ಲದೇ ಸಗರನಾಡು, ಹಗರಟಗಿ ನಾಡು ಹಾಗೂ ಕಲ್ಲಕೆಳಗು ನಾಡುಗಳ ಪ್ರಾಚೀನ ಕಾಲದ ಸಾಂಸ್ಕೃತಿಕ ಚಟುವಟಿಕೆಗಳು ತೀವ್ರವಾಗಿ ಗರಗಟ್ಟುವ ಸಂದರ್ಭದಲ್ಲಿಯೇ ಈ ಭಾಗದ ಜೈನ ಮತಪಂಥವು ಅವನತಿ ಹಾದಿ ತುಳಿದು ನಿಂತಿತ್ತು. ಹಾಗಾಗಿ ಅದಕ್ಕೆ ಜನ ಬೆಂಬಲ ಹಾಗೂ ಪ್ರಭು ಬೆಂಬಲ ಸಿಗದೇ ತನ್ನ ಮಹತ್ವ ಕಳೆದುಕೊಂಡಿತು. ಈ ಪರಿಣಾಮದಿಂದಾಗಿಯೇ ಈ ಭಾಗದಲ್ಲಿ ಈ ಧರ್ಮಕ್ಕೆ ಸಂಬಂಧಿಸಿದ ಕುರುಹುಗಳು ವಿರಳವಾಗಿ ಮೂಡಿಬಂದವು ಎಂದು ಅಭಿಪ್ರಾಯಿಸಿದರೆ ತಪ್ಪಾಗಲಾರದು.

ಕ್ರಿ.ಶ.೧೧೦೬ರ ಬೊಮ್ಮನಹಳ್ಳಿ[೨] ಶಾಸನವು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ರಾಣಿ ಧಾರಲದೇವಿ ವ್ರತನೊಂಪಿ ನಿಮಿತ್ತವಾಗಿ ಬಿಟ್ಟ ಭೂದತ್ತಿಯ ಕುರಿತು ವಿವರಿಸುತ್ತದೆ. ಅಲ್ಲದೇ ದಾನ ಚಿಂತಾಮಣಿ ಅತ್ತಿಮಬ್ಬೆಯ ಬಿರುದು ಮಹಾಸತಿತಿಳಕೆ ಗುಣದಂಕಕಾರ್ತಿ ಎಂದು ಇವಳನ್ನು ಹೊಗಳಲಾಗಿದೆ. ಕೆಂಬಾವಿಯ ಕ್ರಿ.ಶ.೧೩೪೦ರ[೩] ಹಗರಟಗಿಯ ಕ್ರಿ.ಶ.೧೨೨೪ರ[೪] ಏವೂರಿನ ಕ್ರಿ.ಶ. ೧೨ನೆಯ ಶತಮಾನದ[೫] ಮತ್ತು ಗೋಗಿಯ ಕ್ರಿ.ಶ.೧೨ನೆಯ ಶತಮಾನ[೬] ಶಾಸನಗಳಲ್ಲಿ ಈ ಮತಕ್ಕೆ ಸಂಬಂಧಿಸಿದ ವಿಚಾರಗಳು ಉಲ್ಲೇಖವಾಗಿವೆ.

ಜೈನ ಮತಪಂಥಕ್ಕೆ ಸೇರಿದ ಬಸದಿಯ ಕುರಿತು ಒಂದೇ ಒಂದು ಶಾಸನ ಮಾತ್ರ ಲಭ್ಯವಾಗಿದೆ. ಕ್ರಿ.ಶ.೧೨ನೆಯ ಶತಮಾನದ ಏವೂರಿನ ಶಾಸನವು[೭] ಏಹೂರ ನಾಗವರ್ಮ್ಮನ ಸೆಟ್ಟಿಯ ಬಸದಿಯ ಶಾನ್ತಿನಾಥದೇವರಿಗೆ ಬಿಟ್ಟ ಭೂದತ್ತಿಯನ್ನು ತಿಳಿಸುತ್ತದೆ. ಈ ಒಂದು ಶಾಸನ ಉಲ್ಲೇಖ ಹೊರತುಪಡಿಸಿ ಇನ್ನುಳಿದ ಯಾವ ಗ್ರಾಮಗಳಲ್ಲಿಯೂ ಬಸದಿ ನಿರ್ಮಾಣ ಹಾಗೂ ದತ್ತಿ ಬಗೆಗೆ ನೀಡಿರುವ ಮಾಹಿತಿ ದೊರೆಯುವುದಿಲ್ಲ. ಯಾದಗಿರಿ ಜಿಲ್ಲೆಯ ಅಗ್ನಿ, ಏವೂರು, ಹಗರಟಗಿ, ಮುದನೂರು, ಗೋಗಿ, ಯಾದಗಿರಿ ಪಟ್ಟಣ ಹಾಗೂ ಕೆಂಬಾವಿ ಗ್ರಾಮದಲ್ಲಿ ಬಸದಿಗಳು ಕಂಡುಬಂದಿವೆ. ಆದರೆ ಅವುಗಳ ಕುರಿತು ಶಾಸನ ಉಲ್ಲೇಖಗಳು

ಮಾತ್ರ ಕಂಡುಬಂದಿಲ್ಲ. ಅಲ್ಲದೇ ಏವೂರು, ಮದ್ರಕಿ, ಮಾಲಗತ್ತಿ, ಗೋಗಿ ಹಾಗೂ ಯಾದಗಿರಿ ಪಟ್ಟಣಕ್ಕೆ ಹೊಂದಿಕೊಂಡ ಬೆಟ್ಟ ಹಾಗೂ ಇನ್ನು ಕೆಲವು ಸ್ಥಳಗಳಲ್ಲಿ ಇರುವ ಕೆಲವು ಬಿಡಿ ಶಿಲ್ಪಗಳನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಅವುಗಳ ಕುರಿತು ಐದನೆಯ ಅಧ್ಯಾಯದಲ್ಲಿ ದಾಖಲಿಸಲಾಗಿದೆ.

### ಸಮಾಧಿ ಮರಣ ಮತ್ತು ನಿಶಿಧಿ

ಜೀವನವನ್ನು ಇನ್ನು ಮುಂದುವರೆಸಲಾಗದೆನ್ನುವ ಪ್ರಸಂಗಗಳಲ್ಲಿ ಆಮರಣ ಪರ್ಯಂತ ಉಪವಾಸವಿದ್ದು ಸ್ವಯಂ ಮರಣ ಹೊಂದುವ ಸಂಪ್ರದಾಯ ಜೈನರಲ್ಲಿ ಪ್ರಾಚೀನಕಾಲದಿಂದಲೂ ಬೆಳೆದು ಬಂದ ಪದ್ಧತಿಯಾಗಿದೆ. ಈ ಸಂದರ್ಭದಲ್ಲಿ ಮಾಡುವ ವ್ರತ ಸಲ್ಲೇಖ, ಅಪ್ಪಿದ ಮರಣ ಹಾಗೂ ಸಮಾದಿ ಸ್ಮರಣೆಗಾಗಿ ನಿಲ್ಲಿಸಿದ ಶಿಲೆಯೇ ನಿಶಿಧಿ. ಜೈನರು ತೆಗೆದುಕೊಳ್ಳುವ ಇಂಥ ಮರಣವನ್ನು ಸಮಾಧಿ ಸಲ್ಲೇಖನ ಸನ್ಯಸನ, ಪಂಡಿತ ಇಂಗಿಣಿ ಪಾವುಗ್ಗಮಣ, ಪಂಚಪದ, ಆರಾಧನಾ ಎಂಬ ಪರಿಭಾಷಿತಗಳಿಂದ ತುಂಬ ಸಡಿಲಾಗಿ ಈ ವಿವರಗಳನ್ನು ಶಾಸನಗಳಲ್ಲಿ ಗುರುತಿಸಲಾಗಿದೆ ಎಂಬ ಅಭಿಪ್ರಾಯಗಳಿವೆ[೯೮] ಅಲ್ಲದೇ ಈ ಎಲ್ಲ ಮರಣಗಳ ವಿಧಿ-ವಿಧಾನಗಳು ಮೇಲ್ನೋಟಕ್ಕೆ ಬಂದೊದಗಿ ಕಂಡರೂ ಪ್ರತಿಯೊಂದು ಮರಣ ತನ್ನದೇ ಆದ ಪ್ರತ್ಯೇಕ ಅರ್ಥವ್ಯಾಪ್ತಿಯನ್ನು ಪಡೆದಿದೆ. ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಇಂಥ ಕೆಲವು ಉಲ್ಲೇಖಗಳು ಕಂಡುಬಂದಿವೆ.

ಕ್ರಿ.ಶ.೧೩೪೦ರ ಕೆಂಬಾವಿ ಶಾಸನವು[೯೯] ಚಂದ್ರನಂದಿಯ ನಿಷಿದ್ಧಿಕಾ ಸ್ತಂಭವನ್ನು ಹೊನಗುಂದದ ಮಹಾಪ್ರಭು ಬಿಸಣಿ ಹನುಮಂತ, ಚೌಧೊರೆ(ಸೌಧೊರೆ) ನಾಚಯ್ಯ ಇನ್ನಿತರರು ಸೇರಿ ಪ್ರತಿಷ್ಠಾಪಿಸಿದ್ದನ್ನು ವಿವರಿಸುತ್ತದೆ. ಆದರೆ ಈ ಮುನಿಯು ಯಾವ ಮರಣ ಹೊಂದಿದ್ದರು ಎಂಬುದರ ಬಗೆಗೆ ವಿವರಣೆ ಇಲ್ಲ. ಆದರೆ ಕ್ರಿ.ಶ. ೧೨೨೪ರ ತೇದಿಯ ಹಗರಟಗಿ ಶಾಸನವು[೧೦೦] ದೇವಚಂದ್ರನೆಂಬ ಜೈನ ಗುರುವು ಸನ್ಯಸನ ವಿಧಿಯಿಂದ ಮರಣ ಹೊಂದಿದ್ದನ್ನು ಹಾಗೂ ಅವರ ಪ್ರತಿಮೆಯನ್ನು ಬಬ್ಬರ ಕಾಳಿಸೆಟ್ಟಿ ಮಾಡಿಸಿದ್ದನ್ನು ಶಾಸನವು ಉಲ್ಲೇಖಿಸುತ್ತದೆ. ಸಮಾಧಿ, ಸಲ್ಲೇಖ ಮತ್ತು ಸನ್ಯಸನ ಮರಣಗಳು ಸಾಮಾನ್ಯವಾಗಿ ಹೆಚ್ಚಿನ ಜೈನ ಮುನಿಗಳು ಆಯ್ಕೆಮಾಡಿಕೊಂಡ ಮರಣ ವಿಧಾನಗಳಾಗಿದ್ದವು.

ಜೈನಮತ ಪಂಥದಲ್ಲಿದ್ದ ಮೂಲಸಂಘವನ್ನು ಸೇನನಂದಿ, ದೇವ ಮತ್ತು ಸಿಂಹ ಎಂದು ನಾಲ್ಕು ಶಾಖೆ ಮಾಡಿದೆನ್ನಲಾಗಿದೆ. ಇವುಗಳನ್ನು ನಾಲ್ಕು ಸಂಘಗಳೆಂದು ಸಹ ಕರೆಯಲಾಗುತ್ತದೆ. ಈ ಸಂಘಗಳಲ್ಲಿರುವ ಒಳಪಂಡಗಳೇ ಗಣ-ಗಚ್ಚ-ಅನ್ವಯ-ಬಳಿ ಎಂಬ ಮುಂತಾದ ಹೆಸರನ್ನು ಪಡೆದು ಚಾಲ್ತಿಯಲ್ಲಿದ್ದವು. ಅಲ್ಲದೇ ಕನ್ನಡ ದಿಗಂಬರ ಪಂಥದಲ್ಲಿ ಹೆಚ್ಚು ಪ್ರಚಲಿತವಿರುವ ಯಾಪನೀಯ ಸಂಘವು ಈ ಧರ್ಮದ ಮತಾಚರಣೆಗೆ ಹಲವು ಬಗೆಯ ಸಹಾಯ ಸಹಕಾರ ನೀಡಿರುವ ವಿವರಗಳು ತುಂಬಾ ಗ್ರಂಥಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಉಲ್ಲೇಖವಾಗಿವೆ.

ಅಂಥ ಕೆಲವು ವಿವರಗಳು ಸಹ ಈ ಪ್ರದೇಶದ ಶಾಸನಗಳಲ್ಲಿ ಉಲ್ಲೇಖವಾದದ್ದನ್ನು ಗಮನಿಸಬಹುದು.

ಕ್ರಿ.ಶ.೧೩೪೦ರ ಕೆಂಬಾವಿ ಶಾಸನವು[೧೦೧] ಮೂಲಸಂಘ ಸರಸ್ವತೀಗಚ್ಛ ಬಲಾತ್ಕಾರಗಣ ಕೊಂಡಕುಂದಾನ್ವಯದ ರಾಜಗುರು ಮಂಡಲಾಚಾರ್ಯರಾದ ವಾದೀಂದ್ರ ವಿಶಾಲಕೀರ್ತಿಯತಿ, ಅಮರಕೀರ್ತಿ ಭಟ್ಟಾರಕದೇವ ಶಿಷ್ಯ ಮಾಘಣನಂದಿ ಸಿದ್ಧಾಂತದೇವರ ಶಿಷ್ಯ ಚಂದ್ರದೇವನಂದಿ ಎಂಬ ಉಲ್ಲೇಖಗಳು ಆ ಮುನಿವರ್ಯರು ಯಾವ ಒಳ ಪಂಗಡಗಳಿಗೆ ಸೇರಿದ ಯತಿ ಶ್ರೇಷ್ಠರಾಗಿದ್ದರೆಂದು ವಿವರಿಸುತ್ತವೆ. ಅವರು ಮೂಲಸಂಘ, ಸರಸ್ವತಿ ಗಚ್ಛ, ಬಲಾತ್ಕಾರಗಣ, ಕೊಂಡಕುಂದ ಅನ್ವಯಕ್ಕೆ ಸೇರಿದ ಯತಿವರ್ಯ್ಯರು ಅವರಾಗಿದ್ದರೆಂದು ಸ್ಪಷ್ಟಪಡಿಸುತ್ತದೆ. ಅಲ್ಲದೇ ಕ್ರಿ.ಶ. ೧೨೨೪ರ ತೇದಿಯ ಹಗರಟಗಿ ಶಾಸನವು[೧೦೨] ಮೂಲಸಂಘ ಪುಸ್ತಕಗಚ್ಛ ದೇಸಿಯಗಣ ಗೋಮಿನಿ ಅನ್ವಯಕ್ಕೆ ಸಂಬಂಧಿಸಿದ ಕೊಂಡ ಕುಂದಯಾದ್ರಿಯ ದೇವಚಂದ್ರನೆಂದು ಉಲ್ಲೇಖಿಸುತ್ತದೆ. ಬಹುಶಃ ಈ ಮುನಿಗಳು ಇಂಗಳೇಶ್ವರ ಬಳಿಗೆ ಸಂಬಂಧಿಸಿದ್ದವರಾಗಿರಬಹುದು. ಶಾಸನವು ಸ್ವಲ್ಪ ತೃಟಿತಗೊಂಡಿದ್ದರಿಂದ ಓದು ಸ್ವಲ್ಪ ಅಸ್ಪಷ್ಟವಾಗುತ್ತದೆ.

ಜೈನಧರ್ಮದ ಪ್ರಚಾರಕ ಹಾಗೂ ಪ್ರೋತ್ಸಾಹಕ ಬಹುಮುಖ್ಯ ಸಂಘವಾದ ಯಾಪನೀಯ ಕುರಿತಂತೆ ಈ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಒಂದೇ ಒಂದು ಶಾಸನವು ಮಾತ್ರ ಈ ಕುರಿತು ಉಲ್ಲೆಖ ನೀಡುತ್ತದೆ. ಕ್ರಿ.ಶ.೧೨ನೆಯ ಶತಮಾನದ ತೇದಿಯ ಗೋಗಿಯ ಶಾಸನವು[೧೦೩]. ಯಾಪನೀಯ ಸಂಘದ ಪರ್ಯೋಗ್ಗಣದ ಧರ್ಮ್ಮಕೀರ್ತ್ತಿದೇವರ ಪ್ರಿಯ ಗುರುಗಳು ಸಿರಿಸಸೆಟ್ಟಿಯ ತನುಜ ರಾಮಿಸೆಟ್ಟಿ ಮಾಡಿಸಿದ ಚಂದ್ರನಾಥ ಎಂಬ ಉಲ್ಲೇಖ ಹೊಂದಿದೆ. ಈ ಶಾಸನವು ಅಪೂರ್ಣವಾಗಿದ್ದರಿಂದ ಸ್ಪಷ್ಟವಾದ ಮಾಹಿತಿಗಳು ತಿಳಿದು ಬರುವುದಿಲ್ಲ. ಬಹುಶಃ ಚಂದ್ರನಾಥ ತೀರ್ಥಂಕರ ಬಸದಿ ಅಥವಾ ಶಿಲ್ಪವನ್ನು ಈ ಸೆಟ್ಟಿಯು ಮಾಡಿಸುವ ಕಾರ್ಯ ಮಾಡಿರುವುದು.

ಜೈನಧರ್ಮದಲ್ಲಿರುವ ತಾಂತ್ರಿಕ ಪಂಥವೆಂದೇ ಗುರುತಿಸುವ ಯಕ್ಷ-ಯಕ್ಷಿಯರ ಕುರಿತಾಗಲಿ ಅಥವಾ ಜೈನ ಸಾಹಿತ್ಯದ ಬಗೆಗೆ ಆಗಲೇ ಈ ಪ್ರದೇಶದಲ್ಲಿ ಮಾಹಿತಿಗಳು ಇಲ್ಲವೇ ಇಲ್ಲವೆಂದು ಅಭಿಪ್ರಾಯಿಸಬಹುದು. ಬಹುಶಃ ಈ ಪ್ರದೇಶದಲ್ಲಿ ತೀವ್ರವಾಗಿ ಬೆಳೆದ ಕಾಳಾಮುಖ ಮತ್ತು ಪಾಶುಪತ ಶೈವ ಪಂಥವು ಜೈನ ಧರ್ಮದ ಅವನತಿಗೆ ಮುಖ್ಯ ಕಾರಣವಾಗಿರಬಹುದು. ಆದರೆ ಕೆಲವು ಬಿಡಿಶಿಲ್ಪಗಳು ಮಾತ್ರ ಮದ್ರಕಿ, ಏವೂರ, ಅಗ್ನಿ, ಯಾದಗಿರಿ, ಮಾಲಗತ್ತಿ ಹಾಗೂ ಮುದನೂರು ಮುಂತಾದ ಊರುಗಳಲ್ಲಿ ಕಂಡುಬರುತ್ತವೆ. ಆ ಕುರಿತು ಐದನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ವೈಷ್ಣವ ಧರ್ಮ

ವೈದಿಕ ಧರ್ಮದ ಪ್ರಮುಖ ಶಾಖೆಗಳಲ್ಲಿ ಒಂದೆಂದು ಗುರುತಿಸಿಕೊಳ್ಳುವ ವೈಷ್ಣವ

ಧರ್ಮವು ಕ್ರಿ.ಶ.ಪೂರ್ವದಲ್ಲಿಯೇ ದಕ್ಷಿಣ ಭಾರತವನ್ನು ಪ್ರವೇಶಿಸಿದೆ. ವೈಷ್ಣವ ಧರ್ಮ ಕ್ರಿ.ಶ.ನಾಲ್ಕನೆಯ ಶತಮಾನದ ವೇಳೆಗಾಗಲೇ ಕರ್ನಾಟಕದಲ್ಲಿ ಜನಪ್ರಿಯವಾಗಿದ್ದಿತು ಎಂಬ ಅಭಿಪ್ರಾಯಗಳಿವೆ[೧೦೪]. ವಿಶಾಲ ಕರ್ನಾಟಕಕ್ಕೆ ಮುನ್ನುಡಿ ಬರೆದ ಬಾದಾಮಿ ಚಾಲುಕ್ಯರು ಕಟ್ಟಿದ ಬಾದಾಮಿ ಹಾಗೂ ಐಹೊಳೆಯ ಪ್ರಾಚೀನ ಪಟ್ಟಣಗಳ ಪರಿಸರದಲ್ಲಿ ಆ ಧರ್ಮಕ್ಕೆ ಸಂಬಂಧಿಸಿದ ಪುರಾತತ್ವೀಯ ಕುರುಹುಗಳು ಕಂಡುಬರುತ್ತವೆ. ವಿಷ್ಣುವನ್ನೇ ಪ್ರಧಾನವಾಗಿಟ್ಟುಕೊಂಡು ಪೂಜಾಚರಣೆಗಳನ್ನು ಮಾಡುವ ಭಾಗವತ ಪಂಥ, ಶ್ರೀವೈಷ್ಣವ ಪಂಥ ಹಾಗೂ ದ್ವೈತ ಪಂಥ ಎಂಬ ಮೂರು ಶಾಖೆಗಳಲ್ಲಿ ವೈಷ್ಣವ ಧರ್ಮವು ಸಮ್ಮಿಳಗೊಂಡಿದ್ದರು[೧೦೫]. ನಮ್ಮ ನಾಡಿನಲ್ಲಿ ದ್ವೈತ ಮತ್ತು ಶ್ರೀವೈಷ್ಣವ ಅನುಯಾಯಿಗಳು ವೈಷ್ಣವ ಧರ್ಮವನ್ನು ಹೆಚ್ಚು ಪ್ರಚಾರಗೊಳಿಸಿದರು ಎಂಬ ಅಭಿಪ್ರಾಯಗಳಿವೆ. ಆದರೂ ವೈಷ್ಣವ ಧರ್ಮದಲ್ಲಿದ್ದ ಭಾಗವತವು ಅಷ್ಟೊಂದು ಆಕರ್ಷಣೀಯ ಪಂಥವಾಗಿ ನಮ್ಮ ನೆಲದಲ್ಲಿ ಬೆಳೆಯಲಿಲ್ಲ.

ದ್ವೈತ ಮತ್ತು ಶ್ರೀವೈಷ್ಣವ ಪಂಥಗಳು ಹುಟ್ಟುವುದಕ್ಕಿಂತ ಮೊದಲೇ ಈ ಪರಿಸರದಲ್ಲಿ ವೈಷ್ಣವಾರಾಧಕರು ಇದ್ದರು. ಅವರು ಹೆಚ್ಚಾಗಿ ಅಗ್ರಹಾರದಲ್ಲಿ ವಾಸಿಸುವ ಮಹಾಜನರೇ ಆಗಿದ್ದರು. ಆದರೆ ಗೆರೆ ಹೊಡೆದು ನಿಖರವಾಗಿ ಹೇಳುವಷ್ಟು ಶೈವ ಮತ್ತು ವೈಷ್ಣವ ಅನುಯಾಯಿಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಅಗ್ರಹಾರದ ಮಹಾಜನರು ಸ್ತುತಿಸಿದ ದೇವರು, ಕಟ್ಟಿದ ದೇವಾಲಯ ಕೊಟ್ಟ ದಾನ-ದತ್ತಿಯ ಬಗೆಗೆ ದಾಖಲಾಗಿರುವ ವಿವರಗಳ ಹಿನ್ನೆಲೆಯಲ್ಲಿಯೇ ವೈಷ್ಣವ ಧರ್ಮದ ವ್ಯಾಪ್ತಿಯನ್ನು ಮನಗಾಣಬಹುದು. ಅಲ್ಲದೇ ಹೈದ್ರಾಬಾದ-ಕರ್ನಾಟಕ(ತರ್ದವಾಡಿ ನಾಡು ಒಳಗೊಂಡು) ಪ್ರದೇಶವೆಂದು ಗುರುತಿಸಿಕೊಳ್ಳುವ ಈ ಭಾಗದಲ್ಲಿರುವ ಶಾಸನಗಳಲ್ಲಿ ಶಿವ ಮತ್ತು ವಿಷ್ಣು ಪರವಾದ ಸ್ತೋತ್ರಗಳಿವೆ. ಈ ಅಂಶ ಎರಡೂ ಧರ್ಮಗಳು ಒಂದನ್ನೊಂದು ಹೊಂದಿಕೊಂಡು ಬೆಳೆಯುತ್ತಿರುವ ವಿವರ ನೀಡುತ್ತದೆ ಎಂದು ಅಭಿಪ್ರಾಯಿಸಲಾಗಿದೆ. ಇಂಥದ್ದೇ ಉದಾಹರಣೆಯೊಂದನ್ನು ಐವೂರಿನ ಕ್ರಿ.ಶ.೧೦೭೭ರ ಶಾಸನದಲ್ಲಿ[೧೦೬] ಕಾಣುತ್ತೇವೆ. ಸಗರ ಮುನ್ನೂರರಬಳಿಯ ಪಿರಿಯ ಬೆಳುಂಬಟ್ಟೆಯಿಂ ಪಡವಲು ದೇವರ ಪೂಲನಂ ಫಲಮ್ಮಾಳ್ಕೆ ಪ್ರಜೆ ಪರಿಗ್ರಹಕ್ಕಿರಲ್ ಶಿವಪುರವೆಂದ್ದು ಪಸರನಿತ್ತು ಮನೆಗಟ್ಟವಾ ಎಂಬ ಉಲ್ಲೇಖವಿದೆ. ಈಗಲೂ ಒಳಬಟ್ಟೆಯ ಹತ್ತಿರ ಶಿವಪುರ ಹೆಸರಿನ ಗ್ರಾಮವಿರುವುದು. ಕೆಲವೊಂದು ಸ್ಥಳಗಳಲ್ಲಿ ಬ್ರಹ್ಮಪುರಿ ಹಾಗೂ ಶಿವಪುರಿ ಎರಡೂ ಇದ್ದಲ್ಲಿ ಅದನ್ನು ಉಭಯಪುರಿ ಯೆಂದಿರುವುದನ್ನು ಯಡ್ರಾಮಿ ಶಾಸನದಲ್ಲಿ ಕಾಣುತ್ತೇವೆ[೧೦೭].

ವೈಷ್ಣವ ಧರ್ಮದ ಬ್ರಾಹ್ಮಣರು ಅಗ್ರಹಾರದ ಮಹಾಜನರೆನಿಸಿದ್ದರು. ಅವರು ಅಧ್ಯಯನ ಮತ್ತು ಅಧ್ಯಾಪನದ ಜೊತೆಗೆ ಆಡಳಿತದ ಆಗು-ಹೋಗುಗಳನ್ನು ಚಾಚು ತಪ್ಪದೇ ನೋಡಿಕೊಳ್ಳುತ್ತಿದ್ದರು. ಷಟ್ಕರ್ಮಗಳು ಅವರಿಗೆ ಮುಖ್ಯವಾದ ಸಂಗತಿಗಳಾಗಿದ್ದವು. ಅವರು ವರ್ಣಾಶ್ರಮ ಧರ್ಮವನ್ನು ತಪ್ಪದೇ ಆಚರಿಸುತ್ತಿದ್ದರು. ತಮ್ಮ ಶ್ರೇಷ್ಠತೆಯನ್ನು ಹೇಳಿಕೊಳ್ಳಲು ಕುಲ-ಗೋತ್ರ ಹಾಗೂ ತಮ್ಮ ಪೂರ್ವಜರನ್ನು ಸೇರಿಸುತ್ತಿದ್ದರು. ಅಲ್ಲದೇ ಮುಖ್ಯವಾಗಿ

ಅವರು ಆಡಳಿತದ ಭಾಗವೇ ಆಗಿದ್ದರು. ದಂಡನಾಯಕ ರವಿದೇವನು ಕುರಿತು ತಾನು ವಿಪ್ರಕುಳ ವಿಪ್ರಗ್ರಾಮ ಮುಕ್ಕಂಬೆಯ ಮೂಲದವನೆಂದು ಏವೂರಿನ ಶಾಸನದಲ್ಲಿ ದಾಖಲಿಸಲಾಗಿದೆ. ಯಾದಗಿರಿ ಪ್ರದೇಶದಲ್ಲಿ ವೈಷ್ಣವ ಧರ್ಮದ ವಿಪ್ರಕುಳ ಇದ್ದಿರುವ ಬಗೆಗೆ ಈ ಭಾಗದಲ್ಲಿ ನಿರ್ಮಾಣವಾಗಿರುವ ಶಾಸನ ಹಾಗೂ ದೇವಾಲಯಗಳೇ ಸಾಕ್ಷಿಯಾಗಿ ನಿಂತಿವೆ.

ಮುದನೂರು, ಹಗರಟಗಿ, ಏವೂರು, ತಿಂಥಣಿ, ಯಾಳಗಿ, ಯರಗೋಳ, ಯಾದಗಿರಿ, ಇಡ್ಲೂರು, ಬೆಳಗುಂದಿ, ಹೆಮ್ಮಡಗಿ, ಶೆಳ್ಳಗಿ, ಹುಣಸಗಿ ಮತ್ತು ರಾಜನಕೋಳೂರು ಗ್ರಾಮಗಳಲ್ಲಿ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಕುರುಹುಗಳು ಹೆಚ್ಚಾಗಿ ಕಂಡುಬಂದಿವೆ. ಕ್ರಿ.ಶ. ೧೧೦೫ರ ಏವೂರಿನ ಶಾಸನವು[೧೦೮]. ಸತ್ಯ ಪ್ರಚಾರಂಭಟ್ಟಾರಕ ದೇವರು ಅಲ್ಲಿದ್ದ ಕೇಶವ ದೇವರಿಗೆ ನೀಡಿರುವ ದತ್ತಿ ಕುರಿತು ಉಲ್ಲೇಖಿಸುತ್ತದೆ. ಅವರನ್ನು ಸರಳ ಬ್ರಹ್ಮ ವಿದ್ಯಾ ತತ್ವಾಗತ ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪಸಮಾಧಿಶೀಳ ಸಂಪಂನ ದ್ವಿಜಗುರುಪೂಜಾತತ್ಪರ ಮಾರ್ತ್ತಂತೋಜ್ವಳ ಎಂದು ಉಲ್ಲೇಖಿಸುತ್ತದೆ. ಇದೇ ಗ್ರಾಮದ ಕ್ರಿ.ಶ. ೧೧೧೯ರ ಶಾಸನವು[೧೦೯] ತ್ರಿಭುವನಮಲ್ಲ ದೇವರ ಪರಮಾರಾಧ್ಯರಾದ ಬ್ರಹ್ಮಪ್ರಕಾಶಭಟ್ಟಾರಕ ದೇವರು ತಮ್ಮಾಳ್ಕೆಯ ಭತ್ತಗ್ರಾಮ ಏವೂರಿನ ಸ್ವಯಂಭು ಸೋಮೇಶ್ವರ ದೇವರ ಉತ್ತರದ ಚಟ್ಟೇಶ್ವರ ದೇವರ ಪರ್ವಖಂಡಸ್ಪುಟಿತ ಜೀರ್ಣೋದ್ಧಾರಕ್ಕೆ ತಪೋನನರಿಗೆ, ಓದುವ ಛಾತ್ರದ ಅಶನಾಚ್ಛಾ(ಆಹಾರ)ದನಕ್ಕೆ ದತ್ತಿ ಬಿಟ್ಟ ಉಲ್ಲೇಖವಿದೆ. ಈ ಎರಡು ಶಾಸನಗಳಲ್ಲಿ ವ್ಯಕ್ತವಾದ ಹೆಸರುಗಳ ಕುರಿತು ಗಮನಿಸಬಹುದಾದ ಸಂಗತಿ ಎಂದರೆ ಇವರಿಬ್ಬರೂ ಒಬ್ಬರೇ ಅಥವಾ ಬೇರೆ ಬೇರೆ ಎಂಬುದು ಬಹುಶಃ ಇವರಿಬ್ಬರೂ ಒಬ್ಬನೇ ಆಗಿರಬಹುದೆಂಬುದೇ ಹೆಚ್ಚು ಸಮಂಜಸವಾದುದು. ಕಾರಣ ಹೆಚ್ಚು ಕಡಿಮೆ ಒಂದೇ ದಶಕಾವಧಿಯಲ್ಲಿ ರಚನೆಯಾದಂತ ಶಾಸನಗಳಿವು. ಸತ್ಯ, ಬ್ರಹ್ಮ ಎಂಬ ಪದಗಳು ಬೆಳಕು ಅಥವಾ ಜ್ಞಾನ ಎಂಬ ಅರ್ಥದಲ್ಲಿ ಒಂದೇ ಆಗಿವೆ. ಹಾಗಾಗಿ ಒಂದು ಶಾಸನದಲ್ಲಿ ಅವರನ್ನು ಸತ್ಯಪ್ರಚಾರಕ ಎಂದು ಕರೆದಿದ್ದರೆ ಇನ್ನೊಂದರಲ್ಲಿ ಬ್ರಹ್ಮ ಪ್ರಕಾಶನೆಂದು ಕರೆಯಲಾಗಿರುವ ಸಾಧ್ಯತೆಗಳಿವೆ.

ಕ್ರಿ.ಶ.೧೧೧೯ರ ತೇದಿಯ ಏವೂರಿನ ಶಾಸನವು[೧೧೦] ಪರಿವ್ರಾಜಕ ಮಹಾವೈಷ್ಣವಚಾರ್ಯನೆಂದು ಬ್ರಹ್ಮಪ್ರಕಾಶ ಭಟ್ಟಾರಕ ದೇವರನ್ನು ಉಲ್ಲೇಖಿಸಿದೆ. ಅಲ್ಲದೇ ಈತನೊಬ್ಬ ವಿಷ್ಣುಭಕ್ತನಾಗಿದ್ದರೂ ಅಲ್ಲಿದ್ದ ಚಟ್ಟೇಶ್ವರ(ಶೈವ) ದೈವಾಲಯಕ್ಕೆ ದಾನ ನೀಡಿದ ಉಲ್ಲೇಖವು ಇವೆರಡು ಧರ್ಮಗಳ ನಡುವಿನ ಸಮನ್ವಯತೆಯನ್ನು ಪ್ರತಿಪಾದಿಸುತ್ತದೆ ಎಂದು ಪರಿಭಾವಿಸಬಹುದು. ಕ್ರಿ.ಶ.೧೨೨೦ರ ಹಗರಟಗಿ ಶಾಸನದಲ್ಲಿ[೧೧೧] ಉಮಭವ ಕೇಶವದೇವರು, ಕ್ರಿ.ಶ.೧೧೨೦ರ ಹುಣಸಗಿ ಶಾಸನವು[೧೧೨] ಕೇಶವದೇವರಿಗೆ ಅಗ್ರಹಾರ ವಿಕ್ರಮಪುರದ ವಾಸುದೇವ ಭಟ್ಟೋಪಾಧ್ಯಾಯರ ಹೊಲದಲ್ಲಿ ದತ್ತಿ ಬಿಟ್ಟಿರುವ ಉಲ್ಲೇಖವಿದೆ. ಕ್ರಿ.ಶ.೧೨೬೫ರ ಯಾಳಗಿ ಶಾಸನದಲ್ಲಿ[೧೧೩] ಗೋಪಾಳ ದೇವರ ಕೇರಿಯಿಂದ ತೆಂಕಲು ನಿವೇಶನ ಸಂಜೆವೇಳೆಯ ಬಾವಿಯಿಂದ ಪಡುವಲು ತೋಟವನ್ನು ಇಲ್ಲಿನ ಚನ್ನಕೇಶ ದೇವರಿಗೆ ಬಿಟ್ಟ ಉಲ್ಲೇಖವನ್ನು ನೀಡುತ್ತದೆ. ಇದರಲ್ಲಿ ಉಲ್ಲೇಖವಾದ

ಸಂಜೆಬಾವಿ ಎಂಬ ಸಂಗತಿಯು ಸ್ವಲ್ಪ ವಿಶೇಷವೆನಿಸುತ್ತದೆ. ಬಹುಶಃ ಸಂಜೆಮಠ, ಸಂಜೆವಂದನೆ ಅಥವಾ ಸಂಧ್ಯಾ ವಂದನೆಯ ಹಾಗೇ ಈ ಬಾವಿಯ ನೀರನ್ನು ಸಂಜೆಯ ಸಮಯದಲ್ಲಿ ದೇವರಿಗಾಗಿ ಉಪಯೋಗಿಸುತ್ತಿರಬಹುದೆಂದು ಅಭಿಪ್ರಾಯಿಸಿಬಹುದು.

ಕ್ರಿ.ಶ.೧೦೮೧ರ ಹಿರಿಯ ಹೆಬ್ಬಾಳ ಶಾಸನವು[೧೧೪] ಮಾಧವರಾಜ(ಮಾದಿರಾಜ) ತಾನು ಮಾಡಿಸಿದ ಶ್ರೀ ನಾರಾಯಣ ದೇವರಿಗೆ ದತ್ತಿ ನೀಡಿರುವ ಉಲ್ಲೇಖವಿದೆ. ಈತನು ಬಹುಶಃ ಆಂದೋಲ ಶಾಸನದಲ್ಲಿ ಉಲ್ಲೇಖಿತ ದಂಡನಾಯಕ ಮಲ್ಲಿನಾಥ(ಮಲ್ಲರಸ)ನ ಸಹೋದರನಾಗಿರಬಹುದೆಂದು ಊಹಿಸಲಾಗಿದೆ[೧೧೫]. ಅಲ್ಲದೇ ಈ ಶಾಸನದಲ್ಲಿ ದೇವಾಲಯವನ್ನು ಕಟ್ಟಿದ ಕಲ್ಕುಟಿಗ(ಶಿಲ್ಪಿ)ಮಾರೋಜನಿಗು ದಾನ ನೀಡಿದ ಉಲ್ಲೇಖವು ಸಹ ಉಂಟು.

ಕ್ರಿ.ಶ.೧೦೯೭ ಹಾಗೂ ಕ್ರಿ.ಶ.೧೨೧೪ರ ರಾಜನಕೋಳೂರಿನ ಎರಡೂ ಶಾಸನಗಳಲ್ಲಿ[೧೧೬] ಶಂಕರನಾರಾಯಣ ದೇವರ ಉಲ್ಲೇಖ ಬರುತ್ತದೆ. ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿಯು ಭತ್ತಗ್ರಾಮವಾದ ರಾಜನಕೋಳೂರಿನಲ್ಲಿ ನಿರ್ಮಾಣವಾದ ಈ ದೇವಾಲಯಕ್ಕೆ ದಾನ ನೀಡುತ್ತಾಳೆ. ಅಲ್ಲದೇ ಒಂದು ಶತಮಾನದ ನಂತರ ಅದೇ ದೇವಾಲಯಕ್ಕೆ ಅಲ್ಲಿದ್ದ ಮಹಾಪ್ರಭುಗಳು, ಸೆಟ್ಟಿಗುತ್ತಾರು, ತಂಬುಲಿಗರು, ಅರವತ್ತೊಕ್ಕಲು ಮುಮ್ಮರಿದಂಡರು, ವ್ಯಾಪಾರಿಗಳು ಹಾಗೂ ಹನ್ನವಣಿಗರು ಸೇರಿ ಈ ದೇವರಿಗೆ ದತ್ತಿ ಬಿಟ್ಟ ಉಲ್ಲೆಖವಿದೆ.

ಈ ಶಾಸನದಲ್ಲಿ ವ್ಯಕ್ತವಾದ ಸಂಗತಿಗಳಿಂದ ಎರಡು ವಿಚಾರ ತಿಳಿಯಬಹುದು. ರಾಜಸತ್ತೆಯೂ ಬದಲಾದರೂ ದೇವರಿಗೆ ನೀಡುವ ದಾನ–ಧರ್ಮದಲ್ಲಿ ವ್ಯತ್ಯಾಸವಾಗದಿರುವುದು. ಒಮ್ಮೆ ಚಕ್ರವರ್ತಿಯ ರಾಣಿ ಚಂದಲದೇವಿ ಮಾತ್ರ ಈ ದೇವರಿಗೆ ದತ್ತಿ ನೀಡಿದರೇ ಒಂದು ಶತಮಾನದ ನಂತರ ಗ್ರಾಮದ ಸಕಲ ಜನಸಮುದಾಯಗಳೆಲ್ಲರೂ ಸೇರಿ ಈ ದೇವರಿಗೆ ದತ್ತಿ ನೀಡಿರುವುದು. ಅಂದರೆ ಭತ್ತಗ್ರಾಮ ರಾಜನಕೋಳೂರದಲ್ಲಿದ್ದ ಶಂಕರ ನಾರಾಯಣ ದೇವಾಲಯವು ಕಾಲಕ್ರಮೇಣ ಸಮಸ್ತ ಜನತೆಯ ಆರಾಧ್ಯ ದೈವವಾಗಿ ಪರಿವರ್ತಿತವಾಗಿರುವಂಥದ್ದು. ಅಲ್ಲದೇ ಇದು ಶೈವ(ಶಂಕರ) ವೈಷ್ಣವ(ನಾರಾಯಣ) ಎರಡು ಧರ್ಮಗಳ ಸಮ್ಮಿಳಿತವಾಗಿ ಹುಟ್ಟಿಕೊಂಡಿರುವಂಥದ್ದು.

ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಹಾಗೂ ಯಜುಶ್ಯಾಖೆಯ ತ್ರೈಪುರುಷ ಶಾಲೆ ಕುರಿತು ತಿಂಥಣಿ ಸಿರವರ ಶಾಸನವು ದಾಖಲಿಸಿದೆ[೧೧೭]. ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಲ್ಲಿಯೇ ದುಗ್ಗಣಾರ್ಯಭಟ್ಟ ಇದನ್ನು ಸ್ಥಾಪಿಸಿದ್ದರ ಕುರಿತು ವಿವರಗಳಿವೆ. ಪ್ರಾಯಶಃ ಈ ಶಾಸನದಲ್ಲಿ ಉಲ್ಲೇಖವಾದ ಮಾಹಿತಿಗಳೇ ಈ ಪ್ರದೇಶದ(ಯಾದಗಿರಿ ಜಿಲ್ಲಾ ಪ್ರದೇಶದ)ಲ್ಲಿ ದಾಖಲಾಗಿರುವ ಮೊಟ್ಟಮೊದಲ ಕುರುಹುಗಳು ಆಗಿವೆ. ಈ ಶಾಸನವು ಜಯತ್ಯಾವಿಷ್ಕೃತಂ ವಿಷ್ಣೋರ್ವಾರ್ಹಾಹಂ ಎಂಬ ಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ. ಈ ಜಿಲ್ಲೆಯಲ್ಲಿ ತ್ರೈಪ್ರುರುಷ

ಶಾಲೆಗೆ ಸಂಬಂಧಿಸಿದಂತೆ ಸಿಗುವ ಏಕೈಕ ಉದಾಹರಣೆಯು ಸಹ ಇದೇ ಆಗಿದೆ. ಅಲ್ಲಿ ಬ್ರಹ್ಮ ವಿಷ್ಣು ಮತ್ತು ಮಹೇಶ್ವರರಿಗೆ ಸರಿಸಮಾನವಾದ ಆದ್ಯತೆ ಹಿನ್ನೆಲೆಯಲ್ಲಿ ಅಲ್ಲಿನ ಪಾಠ ಪ್ರವಚನಗಳು ನಡೆಯುತ್ತವೆ ಎಂಬುದು ಮುಖ್ಯವಾದ ಸಂಗತಿ.

**ಕಾಳಾಮುಖ-ಪಾಶುಪತ ಶೈವ**

ಬಹುಶಃ ಈ ಸಂಗತಿಯ ಕುರಿತಷ್ಟು ಚರ್ಚೆ ಇನ್ನಾವುದೇ ಧಾರ್ಮಿಕ ವಿಚಾರಗಳ ಬಗೆಗೆ ನಡೆದಿಲ್ಲವೆಂದು ಅಭಿಪ್ರಾಯಿಸುತ್ತಾ ಈ ಕುರಿತು ಕೆಲವು ವಿಷಯಗಳನ್ನು ಇನ್ನಷ್ಟು ಚರ್ಚೆಗೆ ಒಳಪಡಿಸುವ ಮುಖ್ಯ ಉದ್ದೇಶದಿಂದಾಗಿ ಸ್ವಲ್ಪ ದೀರ್ಘವಾಗಿ ವಿಷಯ ಪ್ರಸ್ತಾಪಿಸಲಾಗಿದೆ. ನದಿಮೂಲ ಮತ್ತು ಋಷಿಮೂಲ ಹುಡುಕುವುದೆಷ್ಟು ಜಟಿಲವಾಗಿದೆಯೋ ಅದಕ್ಕಿಂತಲೂ ಹೆಚ್ಚಿನಂಶ ಧರ್ಮದ ಮೂಲ ಸ್ಪಷ್ಟವಾಗಿ ಕಂಡುಕೊಳ್ಳುವುದು ಅಸಾಧ್ಯವೆಂಬಂತಾಗಿದೆ. ಪ್ರಸ್ತುತ ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ ಪ್ರಕಟಗೊಂಡಿರುವ ಶಾಸನಗಳಲ್ಲಿ ಕಾಳಮುಖ, ಪಾಶುಪತ, ಮಹಾವ್ರತ, ಶಿವಸಮಯ, ಅಭಿನವ ಪಾಶುಪತ, ನಕಲೀಶ ಪಾಶುಪತ, ಲಕುಲೀಶ ಪಾಶುಪತ ಹಾಗೂ ಅವುಗಳಲ್ಲಿರುವ ಒಳಪಂಗಡಗಳಾದ ಸಂತಾನ ಅಥವಾ ಸಂತತಿ ಅಥವಾ ಕೋಣೆಯೆಂಬ ಹೆಸರಿನ ಹಲವು ಮಹತ್ವ ವಿಷಯಗಳು ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಬಹುಶಃ ಈ ಕುರಿತಂತೆಯೇ ಒಂದು ಪ್ರತ್ಯೇಕ ಅಧ್ಯಯನದ ಜರೂರತೆಯು ಸಹ ಇದ್ದೇ ಇದೆ.

ಶೈವ ಧರ್ಮವು ಬಹು ಪುರಾತನ ಮತವಾಗಿದ್ದು, ದಕ್ಷಿಣ ಭಾರತದಲ್ಲಿ ಅದು ಇತಿಹಾಸದ ಪೂರ್ವಕಾಲದಿಂದ ಪ್ರಚಾರದಲ್ಲಿತ್ತು. ಅಲ್ಲದೇ ಅದರಲ್ಲಿ ಹಲವು ಭೇದಗಳಿರುವುದನ್ನು ದರ್ಶನಶಾಸ್ತ್ರಜ್ಞರು ಗುರುತಿಸಿದ್ದಾರೆ. ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಹತ್ವದ ಪಾತ್ರವಹಿಸಿರುವ ಶೈವ ಸಂಪ್ರದಾಯದಲ್ಲಿದ್ದ ಕಾಳಾಮುಖರು ಹಾಗೂ ಪಾಶುಪತರು ಎಲ್ಲಿಯವರು ಹಾಗೂ ಕರ್ನಾಟಕಕ್ಕೆ ಅವರ ಪ್ರವೇಶ ಕುರಿತು ಇನ್ನಷ್ಟು ವಿವರಗಳು ಸ್ಪಷ್ಟಗೊಳ್ಳಬೇಕಾಗಿದೆ ಎಂದು ಅಭಿಪ್ರಾಯಪಡಲಾಗಿದೆ[೧೧೮].

ಗುಜರಾತ ಪ್ರದೇಶದ ಕಾಯಾರೋಹಣದಲ್ಲಿ ಹುಟ್ಟಿದ ಲಕುಲೀಶನು ಪಾಶುಪತ ಶಾಖೆಯ ಸ್ಥಾಪಕನೆಂದು ಸಾಕ್ಷಾತ-ರುದ್ರನ ಅವತಾರವೆಂದು ಪುರಾಣಗಳು ಉಲ್ಲೇಖಿಸುತ್ತವೆ. ಲಕುಲೀಶನಿಗೆ ಸಂಬಂಧಿಸಿದಂತೆ ಮಹಾಕೂಟ(ಬಾದಾಮಿ ತಾಲೂಕು) ಹಾಗೂ ಬಾದಾಮಿ ಪಟ್ಟಣದಲ್ಲಿ ಅಂತಹ ಪ್ರಾಚ್ಯಕುರುಹುಗಳು ಕಂಡುಬಂದಿರುವುದನ್ನು ವಿದ್ವಾಂಸರು ಪತ್ತೆಹಚ್ಚಿ ಪ್ರಕಟಿಸಿದ್ದಾರೆ. ಅಲ್ಲದೇ ಕೆಲವರು ಕಾಳಾಮುಖ-ಪಾಶುಪತ ಎಂಬುದು ಒಂದೇ ಅನ್ನುವ ರೀತಿಯಲ್ಲಿ ವಾದಗಳನ್ನು ಮಂಡಿಸಿದ್ದಾರೆ. ಆದರೆ ಕೆಲವು ವಿದ್ವಾಂಸರು ಅವೆರಡು ಒಂದೇ ಎನ್ನುವ ಬಗೆಗೆ ಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದಾರೆ. ದೇವಸಿಂಗಿ ಪಂಡಿತನಿಗೆ ಸಂಬಂಧಿಸಿದ ಅಸುಂಡಿ ಶಾಸನವನ್ನು ಪರಿಗಣಿಸಿ ಉತ್ತರ ಭಾರತದ ನಕುಳೀಶ ಪಾಶುಪತ ಮತ್ತು ಕರ್ನಾಟಕದ ಲಕುಳೀಶ ಪಾಶುಪತಗಳು ಪರಸ್ಪರ ಭಿನ್ನವೆಂಬ ವಾದ ಈಗ ಅಂಕುರಿಸುತ್ತಲಿದೆ

ಎಂದು ಅಭಿಪ್ರಾಯಿಸಿದ್ದಾರೆ[೧೧೯]. ಬಹುಶಃ ನಕುಲ, ನಕುಲಗಳೆಂಬ ಭಿನ್ನ ಅರ್ಥದ ಬೇರೆ ಬೇರೆ ಪದಗಳಿಂದ ಹುಟ್ಟಿದ ನಕುಲೀಶ, ಲಕುಳೇಶ ಎಂಬ ಶಬ್ದಗಳು ಧ್ವನಿ ಸಾಮ್ಯದಿಂದಾಗಿ ಮಿಶ್ರಗೊಂಡು ಇವೆರಡೂ ಪಂಥಗಳನ್ನು ಒಂದೇ ಎಂಬ ಭ್ರಮೆಹುಟ್ಟಿರಬಹುದು. ಅಂದರೆ ಗುಜರಾತಿನ ಬರೋಡಾ ಪ್ರಾಂತದಲ್ಲಿರುವ ಕಾಯಾವರೋಹಣದ ನಕುಲೇಶನಿಂದ ಕರ್ನಾಟಕದ ಲಕುಳೀಶನು ಭಿನ್ನವ್ಯಕ್ತಿಯಾಗಿದ್ದು ಈತನೇ ಕರ್ನಾಟಕದಲ್ಲಿ ಹೊಸದೊಂದು ಪಾಶುಪತ ಮತವನ್ನು ಪ್ರಾರಂಭಿಸಿರಬಹುದು. ಕರ್ನಾಟಕದಲ್ಲಿ ಈ ಧರ್ಮಕ್ಕೆ ವಿಶೇಷವಾಗಿ ಕೇಳಿಬರುವ ಲಕುಳೀಶ ಎಂಬ ಪ್ರಾಚೀನ ಹೆಸರು ಈ ಮಲೆಯಳ ಪಂಡಿತ ಗುರುವಿನದೇ ಆಗಿದೆ ಎಂಬ ತರ್ಕವನ್ನು ಮಂಡಿಸಿದ್ದಾರೆ[೧೨೦]. ಪ್ರಾಯಶಃ ಇದು ಒಪ್ಪಬಹುದಾದ ವಿಚಾರವೇ ಆಗಿದೆ.

ಪಾಶುತ-ಕಾಳಾಮುಖ, ಕಾಪಾಲಿಕರಲ್ಲಿ ಪಾಶುಪತ ಕಾಳಾಮುಖರು ತಮ್ಮ ಸಾತ್ವಿಕ ಆಚರಣೆಗಳಿಂದ ಒಂದೇ ಗುಂಪಿಗೆ ಸೇರುತ್ತಾರೆ. ಮುಖದ ಮೇಲೆ ಕಪ್ಪುಗೆರೆಗಳನ್ನು(ಭಸ್ಮವನ್ನು)ಹಚ್ಚಿಕೊಳ್ಳುವ ಮೂಲಕ ಕಾಳಾಮುಖರೆನ್ನಿಸಿಕೊಂಡಿರಬಹುದಾದ ಇವರಿಗೂ ದಿನದಲ್ಲಿ ಮೂರು ವೇಳೆ ಭಸ್ಮಸ್ನಾನ ಮಾಡಬೇಕೆನ್ನುವ ಪಾಶುಪತರಿಗೂ ಯಾವುದೇ ವ್ಯತ್ಯಾಸ ಇದ್ದಂತಿಲ್ಲ ಎಂದು ಡಾ.ಎಂ.ಚಿದಾನಂದಮೂರ್ತಿ ಅವರು ಅಭಿಪ್ರಾಯಿಸಿದರೆ ಡಾ.ಎಂ.ಎಂ.ಕಲಬುರ್ಗಿ ಅವರು ಮಹಾಶ್ರೋತಿಯ ಎಂಬ ಇನ್ನೊಂದು ಭೇದವನ್ನು ಗುರುತಿಸುತ್ತಾರೆ. ಆದರೆ ಈ ವಿಷಯ ಕುರಿತಂತೆ(ಡೇವಿಡ್ ಎನ್.ಲಾರೆಂಜನ್, ಕಾಪಾಲಿಕ ಮತ್ತು ಕಾಳಾಮುಖ ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು) ವಿಶೇಷ ಮತ್ತು ಆಳವಾದ ಅಧ್ಯಯನ ಕೈಗೊಂಡಿರುವ ಡೆವಿಡ್ ಎನ್.ಲಾರೆಂಜನ್ ಅವರು ಶೈವ, ಪಾಶುಪತ ಕಾಪಾಲ ಮತ್ತು ಕಾಳಾಮುಖ[೧೨೧] ಎಂದು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಪ್ರಸ್ತುತ ಅಧ್ಯಯನ ಕೈಗೊಂಡಿರುವ ಶಹಾಪುರ ತಾಲೂಕಿನಲ್ಲಿರುವ ಕ್ರಿ.ಶ.೧೦೭೧ರ ತೇದಿಯ ಸಗರ ಶಾಸನವು ಈ ಕುರಿತು ಸ್ಪಷ್ಟವಾದ ಉಲ್ಲೇಖವೊಂದನ್ನು ನೀಡುತ್ತದೆ[೧೨೨].

ಲಾಕುಳ ಸಿದ್ಧಾನ್ತ ಶಾಸ್ತ್ರಾರ್ಥ ಸಮುದ್ಧರಣ
ಶೀಲರ್। ಕಾಳಾಮುಖ ಮಹಾವ್ರತ ಪಾಶುಪತ ಶಿವ ಸಮಯ
ಸಮಾನ ಪಕ್ಷಪಾತರ್। ಎಂದು ಅಲ್ಲಿನ ಸ್ಥಾನಾಚಾರ್ಯರಾದ

ಅನಂತಶಕ್ತಿ ಸಿದ್ಧಾಂತಿಗಳನ್ನು ಈ ಶಾಸನದಲ್ಲಿ ಹೊಗಳಲಾಗಿದೆ. ಅಂದರೆ ಆ ಕಾಲದಲ್ಲಿ ಕನ್ನಡ ನಾಡಿನ ಅದರಲ್ಲೂ ಹೈದ್ರಾಬಾದ-ಕರ್ನಾಟಕ ಪ್ರದೇಶದಲ್ಲಿದ್ದ ಶೈವ ಸಂಪ್ರದಾಯಗಳ ಕುರಿತು ಸ್ಪಷ್ಟ ಉಲ್ಲೇಖ ನೀಡುವ ಶಾಸನ ಬಹುಶಃ ಇದೇ ಆಗಿದೆ. ಅಲ್ಲೇ ಅವುಗಳು ಬೇರೆ ಬೇರೆ ಆಗಿದ್ದರೂ ತಾನು ಸಾಮನಾಂತರ ಪಕ್ಷಪಾತಿ(ಎಲ್ಲವನ್ನು ಗೌರವಿಸುವ)ಯೆಂದು ಅದೇ ಪಂಡಿತರು ಸಂಬೋಧಿಸಿಕೊಂಡಿದ್ದಾರೆ. ಆದರೆ ಇವೆಲ್ಲವುಗಳು ಒಂದೇ ಮೂಲದ ಅಂದರೆ ಶೈವ ಶಾಖೆಗೆ ಸಂಬಂಧಿಸಿದವುಗಳೆಂದು ಡಾ.ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯಿಸಿದ್ದಾರೆ[೧೨೩].

ಈ ಬಗೆಯ ವಿವರವನ್ನಿಟ್ಟುಕೊಂಡ ಶ್ರೀಯುತ ಕಲಬುರ್ಗಿ ಅವರು ಕಾಳಾಮುಖ ಎಂಬ ಭೇದದ ಕುರಿತೆ ಹೊಸ ಬಗೆಯ ಆಲೋಚನೆಗಳನ್ನು ಪ್ರಕಟಿಸುವ ಪ್ರಯತ್ನ ಮಾಡಿದ್ದಾರೆ. ಕಾಳಾಮುಖ ಅನ್ನುವುದು ಕೇವಲ ಮುಖಕ್ಕೆ ಕಪ್ಪುಗೆರೆ ಬಳಿದುಕೊಳ್ಳುವ ಸಂಪ್ರದಾಯವಲ್ಲ. ಅದು ಶಿವನ ಕಲೆಯ ಮುಖಗಳು ಕುರಿತು ಇರುವಂಥದ್ದು. ಶಿವನಿಗೆ ಶಾಂತ್ಯತೀತಕಲೆ, ಶಾಂತಿಕಲೆ, ವಿದ್ಯಾಕಲೆ ಪ್ರತಿಷ್ಠಾಕಲೆ ಹಾಗೂ ನಿವೃತ್ತಿಕಲೆ ಎಂದು ಐದು ಕಲೆಗಳಿವೆ. ಅವುಗಳನ್ನು ಆರಾಧಿಸಿ ಪಾಲಿಸುವ ವ್ಯಕ್ತಿ ಸಂಪ್ರದಾಯವೇ ಕಾಳಾಮುಖರು ಎಂಬುದು ಅವರ ವಾದದ ತಿರುಳಾಗಿದೆ. ಈ ಹೆಸರನ್ನೇ ಬಳಸಿ ಈಶಾನ್ಯ ಪಂಡಿತ ವಾಮಶಕ್ತಿ, ಸದ್ಯೋಜಾತ ಪಂಡಿತ, ಅಘೋರ ಶಕ್ತಿ ಮತ್ತು ತತ್ಪುರುಷಪಂಡಿತ ಇತ್ಯಾದಿ ಹೆಸರು ಇಟ್ಟುಕೊಳ್ಳುತ್ತಿದ್ದಕ್ಕೆ ಶಾಸನಗಳಲ್ಲಿ ವಿಪುಲ ಉದಾಹರಣೆಗಳಿವೆ ಎಂದು ಹೇಳಿದ್ದಾರೆ. ಈ ವಿವರಗಳನ್ನು ಪುಷ್ಟಿಕರೀಸುವ ಉದಾಹರಣೆಯೊಂದು ಪ್ರಸ್ತುತ ಅಧ್ಯಯನದ ಭಾಗವಾಗಿರುವ ಶಿರವಾಳ(ಸಿರವಾಳ)ದಲ್ಲಿನ ಸಿದ್ದೇಶ್ವರ ದೇವಾಲಯದಲ್ಲಿ ಕಾಣುತ್ತೇವೆ. ಪಂಚಕೂಟ ತಲವಿನ್ಯಾಸ ಹೊಂದಿರುವ ಒಂದಕ್ಕೊಂದು ಕೂಡಿಕೊಂಡಿರುವ ಈ ಐದು ದೇವಾಲಯಗಳನ್ನು ಸ್ಥಳೀಯರು ಮೇಲೆ ಉಲ್ಲೇಖಿಸಿದ ಹೆಸರುಗಳಿಂದಲೇ ಕರೆಯುತ್ತಾರೆ. ಹಾಗಾದರೆ ಈ ದೇವಾಲಯಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿ ಉಲ್ಲೇಖವಾಗಿರುವ ಸಿದ್ಧಶಾಂತಯ್ಯ ಯೋಗಿ, ರೇವಣಸಿದ್ದ ಇವರೆಲ್ಲರು ಕಾಳಮುಖ ಪರಂಪರೆಗೆ ಸಂಬಂಧಿಸಿದವರೇ? ಎಂಬ ಜಿಜ್ಞಾಸೆಗಳು ಹುಟ್ಟಿಕೊಳ್ಳುತ್ತವೆ. ಈ ವಿಷಯ ಕುರಿತ ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ಮತ್ತೆ ಮತ್ತೆ ಉಲ್ಲೇಖವಾಗುವ ಪ್ರಮುಖ ಸಂಗತಿ ಎಂದರೆ ಎಳಮೇಲ ಸಿಂಹಪರ್ಷನ್ಮಂಡಲಿಯ ಮಲೆಯಾಳ ಪಂಡಿತ ದೇವನ ಬಗೆಗೆ. ಈ ಪಂಥದ ಉದ್ಬೋಧಕ ಕೇಂದ್ರ ಮುದನೂರು ಹಾಗೂ ಯಡ್ರಾಮಿ(ಎಳರಾಮೆ)ಗಳಾಗಿದ್ದವು ಎಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.

ಕಾಳಾಮುಖ ಪರಂಪರೆಯಲ್ಲಿದ್ದ ಇನ್ನೊಂದು ಕವಲು ಈ ಸಿಂಹಪರಿಷತ್ತು ಅಥವಾ ಸಿಂಹಪರಿಷನ್ಮಂಡಲಿ ಅಥವಾ ಸಿಂಹಪರ್ಷೆ(ಸಿಂಹಪರಿಷೆ)ಆಗಿದೆ ಎಂಬ ಅಭಿಪ್ರಾಯವಿದೆ. ಕಾಳಾಮುಖ ಪರಂಪರೆಯಲ್ಲಿ ಪ್ರಮುಖವಾಗಿ ಶಕ್ತಿ ಪರಿಷತ್ತು ಮತ್ತು ಸಿಂಹ ಪರಿಷತ್ತು ಎಂದು ವಿಭಾಗ ಕ್ರಮಮಾಡಲಾಗಿದೆ[೧೨೪]. ಮಧ್ಯ ಕರ್ನಾಟಕದ ಶಿವಮೊಗ್ಗ ಮತ್ತು ಧಾರವಾಡ ಪ್ರದೇಶದಲ್ಲಿ ಶಕ್ತಿಪರಿಷತ್ತು ತುಂಬಾ ಪ್ರಭಾವ ಮತ್ತು ಮಹತ್ವ ಹೊಂದಿದ್ದರೆ ಸಿಂಹ ಪರಿಷತ್ತು ಆಂಧ್ರ ಹಾಗೂ ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ತನ್ನ ಮೂಲ ಅಸ್ತಿತ್ವವನ್ನು ಹೊಂದಿತೆಂಬ ಅಭಿಪ್ರಾಯಗಳಿವೆ. ಅಲ್ಲದೇ ಇವರು ಸಹ ತಮ್ಮ ಮೂಲವನ್ನು ಲಕುಳನಿಗೆ ತಲುಪಿಸುತ್ತಾರೆ. ಆದರೆ ಕಾಯಾವರೊಹಣದ ನಕಲೀಶ ಹಾಗೂ ಕರ್ನಾಟಕದಲ್ಲಿ ಪಾಶುಪತಕ್ಕೆ ಸಂಬಂಧಿಸಿದ ಸಿಂಹ ಪರಿಷನ್ಮಂಡಳಿ ಸ್ಥಾಪಕ ಲಕುಲೀಶ ಬೇರೆ ಬೇರೆಯಾಗಿದ್ದು ಹಾಗಾಗಿ ಸಿಂಪರಿಷತ್ತು ಪಾಶುಪತಕ್ಕೆ ಸಂಬಂಧಿಸಿದ್ದಾಗಿತ್ತೇ ಹೊರತು ಕಾಳಾಮುಖ ಸಂಪ್ರದಾಯಕ್ಕೆ ಸಂಬಂಧಿಸಿದ್ದಲ್ಲವೆಂದು

ಊಹಾತ್ಮಕ ತರ್ಕವನ್ನು ಡಾ.ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ. ಅಲ್ಲದೇ ಇನ್ನೊಂದು ಹೆಜ್ಜೆ ಮುಂದಿಟ್ಟು ಅಭಿಪ್ರಾಯಿಸುವ ಈ ವಿದ್ವಾಂಸರು ಮುದನೂರು(ಮುದಿನೀರು) ಹಾಗೂ ಯಡ್ರಾಮೆ(ಎಳರಾಮೆ)ಯಲ್ಲಿ ಉಪ್ರಬಲವಾಗಿದ್ದ ಈ ಪಾಶುಪತ ಸಿಂಹಪರಿಷನ್ಮಂಡಳಿಯಲ್ಲಿದ್ದ ಅನುಯಾಯಿಗಳೇ ಅಭಿನವ ಪಾಶುಪತ ಸಮುದಾಯದವರೆಂದು ಸುಧಾರಣೆಗೊಂಡು ಮುಂದಿನ ದಿನಗಳಲ್ಲಿ ವೀರಶೈವ ಅಥವಾ ವಚನ ಚಳುವಳಿಗೆ ಮುಖ್ಯ ವೇದಿಕೆಯನ್ನು ಸೃಷ್ಟಿಸಿದರೆಂದು ಅಭಿಪ್ರಾಯಿಸುತ್ತಾರೆ. ಆದರೆ ಕೆಲವಾರು ವರ್ಷಗಳ ನಂತರ ತಮ್ಮ ಅಭಿಪ್ರಾಯಗಳನ್ನು ಬದಲಾಯಿಸಿಕೊಂಡಿರುವ ಈ ವಿದ್ವಾಂಸರು ಸೊನ್ನಲಿಗೆಯ ಸಿದ್ಧರಾಮನನ್ನು ಕುರಿತು ತಮ್ಮ ಹೊಸ ಅಭಿಪ್ರಾಯ ಮಂಡಿಸುವಾಗ 'ಕೆರೆ ದೇವಾಲಯ ಕಟ್ಟಿಸುವ ಸ್ಥಾವರಲಿಂಗ ಸ್ಥಾಪಿಸುವ ಚಟುವಟಿಕೆಗಳನ್ನು ಮತ್ತು ಬಳಸುತ್ತಲಿದ್ದ ಲಾಕುಳ ಇತ್ಯಾದಿಗಳನ್ನು ಗಮನಿಸಿ ಅವನು ಲಾಕುಳ ಶೈವನಾಗಿರಬಹುದೆಂಬ ಅನುಮಾನವನ್ನು ಈ ಮೊದಲು ವ್ಯಕ್ತಪಡಿಸಿದ್ದೆನು. ಈಗ ಸಿದ್ಧ ಅದರಲ್ಲಿಯೂ ನಾಥಸಿದ್ಧನಾಗಿರಬಹುದೇ ಎಂಬ ಪ್ರಶ್ನೆ ಕಾಡುತ್ತಲಿದ್ದು, ಅವನನ್ನು ಚತುರ್ಥ, ಶೂದ್ರ ಸಿದ್ಧರಾಮ ಕಟ್ಟಿಸಿದ ಕೆರೆಯೆಂದು ನಿಂದಿಸಿದ ವಿಷಯ ಸಿದ್ಧರಾಮಚರಿತೆಯಲ್ಲಿದೆ. ಹೀಗೆ ಕೆಳಜಾತಿಯವನಾದ ಆತನನ್ನು ನಕುಲೀಶನಲ್ಲವೆಂದು ಹೇಳಬೇಕಾಗುತ್ತದೆ ಎಂದು ಅಭಿಪ್ರಾಯಿಸಿದ್ದಾರೆ[೧೨೫]. ವಚನ ಚಳವಳಿಯ ಕಾರಣಕರ್ತರಾದ ಜೇಡರ ದಾಸಿಮಯ್ಯ, ಸಿದ್ಧರಾಮ ಹಾಗೂ ಸಿದ್ಧರಾಮನಿಗೆ ಆಶೀರ್ವದಿಸಿದ ರೇವಣಸಿದ್ಧರೆಲ್ಲರೂ ನಾಥ ಪಂಥೀಯರೆಂಬ ಅನುಮಾನಗಳನ್ನು ವ್ಯಕ್ತಪಡಿಸಿದ್ದಾರೆ. ನಾಥವನ್ನು ಯಾರಾದರೂ ಸ್ವೀಕರಿಸಬಹುದಿತ್ತೆಂಬುದು ಅವರ ಅಭಿಪ್ರಾಯವಾಗಿದೆ.

ಇಂಥ ಚರ್ವಿತಚರ್ವಣ ವಿಷಯಗಳು ಏನೇ ಆಗಿರಲಿ ಇವರೆಲ್ಲ ಶೈವ ಪಂಥೀಯ ಪ್ರಬಲ ಪ್ರತಿಪಾದಕರಾಗಿದ್ದರೆಂಬುದು ಮಾತ್ರ ನಮಗೆ ಈ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಅಲ್ಲದೇ ಇಂಥ ಜಟಿಲತೆಯನ್ನು ತಕ್ಕಮಟ್ಟಿಗಾದರೂ ಪರಹರಿಸಿಕೊಳ್ಳಲು ಕೆಲವು ಅನುಸಂಧಾನದ ಕ್ರಮಗಳನ್ನು ಅನುಸರಿಸಬೇಕಾದ ಅನಿವಾರ್ಯತೆ ಇರುತ್ತದೆ. ಹಾಗಾಗಿ ಸದ್ಯ ಈ ವಿಷಯದಲ್ಲಿ ವಿದ್ವಾಂಸರಾದ ಡೇವಿಡ್ ಲಾರೆಂಜನ ಅರ್ಥೈಸಿದ ಅಧ್ಯಯನ ಕ್ರಮಗಳೇ ಸೂಕ್ತವೆಂದೆನಿಸುತ್ತವೆ ಎಂದು ಅಭಿಪ್ರಾಯಪಡಬಹುದು. ಅವರ ಅಧ್ಯಯನ ಫಲಿತಗಳಲ್ಲಿ ಕರ್ನಾಟಕದಲ್ಲಿದ್ದಿರುವುದು ಕಾಳಾಮುಖ ಪರಂಪರೆ ಮಾತ್ರ. ಅದು ಶಕ್ತಿ ಪರಿಷತ್ತು ಮತ್ತು ಸಿಂಹಪರಿಷತ್ತು ಅಥವಾ ಸಿಂಹ ಪರಿಷನ್ಮಂಡಲಿ ಎಂದು ವಿಭಾಗಗೊಂಡಿತ್ತು. ಆದರೆ ಕಾಳಾಮುಖ ಪರಂಪರೆ ಅಥವಾ ಪಂಥದ ಆಧ್ಯಾತ್ಮಿಕ ತಂದೆ-ತಾಯಿ ಪಾಶುಪತವೇ ಆಗಿತ್ತು. ಈ ಎರಡು ಪಂಥಗಳ ಬಗೆಗೆ ವಿವರಿಸುವ ಶಾಸನಗಳ ವಿಷಯಗಳಲ್ಲಿ ಹಲವು ಬಗೆಯ ಸಮಾನತೆಗಳಿವೆ. ಇವೆರಡು ಲಕುಲೀಶನನ್ನೇ ಪೂಜ್ಯಭಾವನೆಯಿಂದ ಕಾಣುತ್ತವೆ. ಎರಡೂ ಸಂಪ್ರದಾಯಗಳ ಯತಿಗಳು ಕೂಡಾ ಒಂದೇ ಬಗೆಯ ಹೆಸರನ್ನು ಹೊಂದಿರುತ್ತಾರೆ[೧೨೬] ಎಂದು ಅಭಿಪ್ರಾಯಿಸಿದ್ದಾರೆ. ಹಾಗಾದರೆ ಹೂವಿನಹಡಗಲಿ ತಾಲೂಕಿನ ಜೆಣ್ಣೆಕಲ್ಲು ಶಾಸನ(೧೨೬)ದಲ್ಲಿ ಉಲ್ಲೇಖವಾದ

ಅಭಿನವ ಪಾಶುಪತ ಸಮಯ ವಾರ್ಧಿವರ್ಧನ ಸುಧಾಕರರುಂ" ಹಾಗೂ ಜೇವಗಿರಿ ತಾಲೂಕಿನ ಜಾಡಕೊಂಡುಗುಳಿಯ ಅಪ್ರಕಟಿತ ಶಾಸನ(೧೧೧೬) ಸಿಂಹಪರ್ಷನ್ಮಂಡಲಿಯ ಪಾಶುಪತ ಸುಬ್ರತಾಭರಣರ್ ಎಂಬ ಉಲ್ಲೇಖಗಳು ಪಾಶುಪತ ಕುರಿತಂತೆ ಸ್ಪಷ್ಟಪಡಿಸಿವೆ[೨೨]. ಮೊದಮೊದಲು ಇದನ್ನು ಪರಿಶೀಲನಾರ್ಹ ಸ್ವರೂಪದ ಹಿನ್ನೆಲೆಯಲ್ಲಿ ಚರ್ಚೆಗೆ ಈ ವಿಷಯವನ್ನಿಟ್ಟು, ಕರ್ನಾಟಕದಲ್ಲಿಯೇ ಒಂದು ಪಾಶುಪತ ಹುಟ್ಟಿಕೊಂಡಿತು. ಅದರ ಕರ್ತೃ ಮಲೆಯಾಳ ಪಂಡಿತನೆಂದು ಹೇಳುವ ಮೂಲಕ ಹೊಸ ಬಗೆಯ ಆಲೋಚನೆಗೆ ಶ್ರೀಯುತ ಕಲಬುರ್ಗಿ ಅವರು ವೇದಿಕೆ ಸಿದ್ಧಮಾಡಿದಂತಾಯಿತು. ಆದರೆ

ಈ ವಿಷಯದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಾವು ಪ್ರಾಯಶಃ ಹೀಗೆ ಊಹಿಸಬಹುದೇ? ಸಿಂಹಪರಿಷತ್ತು ಅಥವಾ ಸಿಂಹಪರಿಷನ್ಮಂಡಲಿಯು ಕಾಳಾಮುಖ ಪರಂಪರೆಯಲ್ಲಿ ಹೆಚ್ಚು ವ್ಯಾಪಕತೆ ಹಾಗೂ ವಿಸ್ತಾರ ಪಡೆದಿದ್ದರೂ ಅದರ ಮೂಲ ಮಾತ್ರ ಪಾಶುಪತದಲ್ಲಿ ಹುದುಗಿತ್ತು. ಹಾಗಾಗಿ ಅವರು ಕಾಳಾಮುಖ ಅನುಯಾಯಿಗಳಾದರೂ ಪಾಶುಪತದ ಬೇರುಗಳನ್ನಿಟ್ಟುಕೊಂಡು ವಿಚಾರ ಸರಣಿಗಳನ್ನು ಕಟ್ಟಿಕೊಳ್ಳುತ್ತಿದ್ದಿರಬಹುದೆಂದು ಊಹಿಸಬಹುದು. ಯಾದಗಿರಿ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿ ಸಿಂಹಪರಿಷನ್ಮಂಡಲಿಯೆಂದು ಉಲ್ಲೇಖಿತವಾಗಿದೆ ಹೊರತು ತಾವು ಪಾಶುಪತದಲ್ಲಾಗಲಿ ಅಥವಾ ಕಾಳಾಮುಖದಲ್ಲಿರುವವರೆಂದಾಗಲಿ ಉಲ್ಲೇಖಿಸುವ ಒಂದು ಸಣ್ಣ ಅಂಶವು ಸಹ ಈ ಜಿಲ್ಲೆಯಲ್ಲಿರುವ ಶಾಸನಗಳಲ್ಲಿ ಪ್ರಸ್ತಾಪವಾದಂತಿಲ್ಲ. ಆದರೂ ತುಂಬಾ ಖಚಿತವಲ್ಲದಿದ್ದರೂ ಸ್ವಲ್ಪಮಟ್ಟಿಗಾದರು ಕಾಳಾಮುಖದಲ್ಲಿದ್ದ ವಿಭಾಗವೇ ಈ ಸಿಂಹಪರಿಷತ್ತು ಆಗಿತ್ತು ಎಂಬುದನ್ನು ಸ್ವಲ್ಪಮಟ್ಟಿಗಾದರು ಒಪ್ಪಬಹುದಾಗಿದೆ.

**ಸಿಂಹಪರಿಷತ್ತು–ಮಲೆಯಾಳ ಪಂಡಿತ**

ಈ ಪರಂಪರೆಯ ಆದ್ಯ ಪ್ರವರ್ತಕನನ್ನು ಹೂವಿನ ಹಡಗಲಿಯ ಬೆಣ್ಣೆಕಲ್ಲು ಶಾಸನ ಮುದಿನಿತ ಮಲೆಯಾಳ ಪಂಡಿತನೆಂದು ಹೂವಿನ ಹಡಗಲಿ ಶಾಸನ ಮುದೀನಿರ ಮಲೆಯಾಳ ಪಂಡಿತನೆಂದು[೨೮]. ಈ ಸಿಂಹ ಪರಿಷತ್ತಿನ ಕರ್ನಾಟಕ ಈ ಸಿಂಹಪರಿಷತ್ತಿನ ಕರ್ನಾಟಕ ಶಾಖೆಯ ಶಾಸನಗಳು ತಮ್ಮ ಯತಿ ಪರಂಪರೆಯನ್ನು ಹೀಗೆ ಒದಗಿಸಿವೆ[೨೯].

| | |
|---|---|
| ಮಲೆಯಾಳ | |
| ↓ | |
| ಜ್ಞಾನೇಶ್ವರ | ಚಿಕ್ಕದೇವ ಅಥವಾ ಮಿರಂಜೆಯ ಚಿಕ್ಕದೇವರ |
| ↓ | ↓ |
| ಸೋಮೇಶ್ವರ | ಹೆಸರಿಲ್ಲ |
| (೧೦೪೫ ಮೋರಿಗೇರಿ) | ↓ |

↓

ಶಾಂತರಾಣಿ ಲಕುಲೇಶ್ವರ ಈಶಾಸನರಾಸಿ(೧೦೭೭ ಏವೂರ)

↓ (೧೦೭೧ ಹೂವಿನ ಹಡಗಲಿ ↓

ಕಳೇಶ್ವರ(೧೧೯೩ ಜ್ಞಾನರಾಸಿ(೧೧೭೮ ಏವೂರ

ಹೊಳಗುಂದಿ ↓ ೧೧೭೬, ಇಂಗಳೇಶ್ವರ)

↓ ಗೌಳದೇವ

↓

ಮಲೆಯಾಳ

↓

ಜ್ಞಾನರಾಶಿ

↓

ಧರ್ಮರಾಸಿ(ಇಸವಿ ೧೧೯೫–ಮನಗೂಳಿ)

ಈ ಹಿನ್ನೆಲೆಯಲ್ಲಿ ವಿವರಿಸುವುದಾದರೆ ಕ್ರಿ.ಶ.೧೦೭೭ರ ಏವೂರಿನ ಶಾಸನವು[೧೩೦] ಎಳಮೇಲ ಸಿಂಹಪರ್ಷನ್ಮಂಡಲಿಯ ಮಲೆಯಾಳ ಪಣ್ಡಿತದೇವರ ಶಿಷ್ಯ ಮಿರಂಜೆಯ ಚಿಕ್ಕದೇವರ ಪ್ರಶಿಷ್ಯರಪ್ಪ ಶ್ರೀಮದೀಶಾನರಾಶಿಪಣ್ಡಿತ" ಸ್ವಯಂಭು ಸೋಮೇಶ್ವರ ದೇವಾಲಯದ ಆಚಾರ್ಯನಾಗಿದ್ದನೆಂದು ಅವನಿಗೆ ದತ್ತಿ ಬಿಟ್ಟ ವಿಷಯ ತಿಳಿಸುತ್ತದೆ. ಇದೇ ಗ್ರಾಮದ ಕ್ರಿ.ಶ.೧೧೭೮ರ ತೇದಿಯ ಇನ್ನೊಂದು ಶಾಸನವು[೧೩೧] ಶ್ರೀಮದೆಳೆಮೇಲ ಶ್ರೀಸಿಂಹಪರ್ಷೆಮಂಡಲಿ ಮಲೆಯಾಳದೇವರ ಶಿಷ್ಯರಪ್ಪ ಮಿರಿಂಜೆಯ ಚಿಕ್ಕದೇವರ ಸಂತಾನಂ ಏಹೂರ ಶ್ರೀ ಸ್ವಯಂಭು ಸೋಮನಾಥದೇವರ ಸ್ಥಾನಾಚಾರ್ಯರು ಶ್ರೀಮತು ಜ್ಞನರಾಸಿ ಪಂಡಿತದೇವರ್ಗ್ಗೆ ಭಿಕ್ಷೆ ನಿಮಿತ್ತವಾಗಿ ಬಿಟ್ಟ ಭೂದತ್ತಿಯನ್ನು ವಿವರಿಸುತ್ತದೆ. ಈ ಶಾಸನದಲ್ಲಿ ಉಲ್ಲೇಖಿತ ಜ್ಞಾನರಾಸಿ ಪಂಡಿತನು ಬಹುಶಃ ಇಂಗಳೇಶ್ವರ(ಬಸವನಬಾಗೇವಾಡಿ ತಾಲೂಕು) ಶಾಸನದಲ್ಲಿ ಉಲ್ಲೇಖಿತ ಜ್ಞಾನರಾಸಿ ಇಬ್ಬರು ಒಬ್ಬರೇ ಎಂಬ ಅಭಿಪ್ರಾಯಗಳಿವೆ.

ಕ್ರಿ.ಶ.೧೦೭೪ರ ತೇದಿಯ ಬೈಚಬಾಳ ಶಾಸನದಲ್ಲಿ[೧೩೨] ಶ್ರೀಮದೆಳೆಮೇಲ ಸಿಂಹಪರ್ಷ ಮಂಡಲಿಯ ಮಲೆಯಾಳದೇವರ ಪ್ರಶಿಷ್ಯ ಶಿಷ್ಯರಪ್ಪ ಶ್ರೀಮತ್ತೇಜೋರಾಶಿ ಪಂಡಿತದೇವರ ಕಾಲ್ತೊಳೆದು ಬಿಟ್ಟ ದತ್ತಿಯನ್ನು ವಿವರಿಸುತ್ತದೆ. ಇವರು ಬಹುಶಃ ಚಿಕ್ಕದೇವರ ಅಥವಾ ಜ್ಞಾನರಾಸಿ ಪಂಡಿತರ ಶಿಷ್ಯರಾಗಿದ್ದಿರಬಹುದು. ಈ ಮೇಲಿನ ಉಲ್ಲೇಖಿತ ಶಾಸನಗಳಿಂದ ತಿಳಿಯಬಹುದಾದ ವಿವರಗಳೆಂದರೆ ಸಿಂಹಪರಿಷತ್ತಿಗೆ ಮುದನೂರು ಹುಟ್ಟಿನ ಕೇಂದ್ರಸ್ಥಾನವಾದರೂ ಏವೂರು ಬದುಕಿನ ಕೇಂದ್ರವಾಗಿತ್ತೆಂದು ಅಭಿಪ್ರಾಯಿಸಬಹುದು. ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಮಹತ್ವ ಸ್ಥಾನ–ಮಾನ ಹೊಂದಿದ್ದ ಸಿಂಹಪರಿಷನ್ಮಂಡಲಿಯ ಯತಿವರ್ಯರ ಚಟುವಟಿಕೆಗಳ ಮುಖ್ಯ ಕೇಂದ್ರ ಮಾತ್ರ ಏವೂರು ಗ್ರಾಮವೇ ಆಗಿತ್ತು. ಕಾರಣ ಸಮರ್ಥ

ಹಾಗೂ ಮಹಾದಾನಿ ದಂಡನಾಯಕ ರವಿಗಣದೇವ ಅಥವಾ ರವಿದೇವ ಚಮೂಪ ಹಾಗೂ ಆತನ ಪೆರ್ಗ್ಗಡೆ ನಾಗವರ್ಮನ ಸಹಾಯ ಸಹಕಾರ ಈ ಊರಿನ ದೇವಾಲಯಗಳು ಹೆಚ್ಚೆನ್ನುವ ಪ್ರಮಾಣದಲ್ಲಿ ಪಡೆಯುತ್ತಿದ್ದವು. ಅಧ್ಯಯನ, ಅಧ್ಯಾಪನ, ಕರಕುಶಲ ಕರ್ಮಿಗಳು ಮಹಾಜನರು ಹಾಗೂ ವ್ಯಾಪಾರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಹೊಂದಿದ್ದ ಪ್ರಾಚೀನ ಏವೂರ ಗ್ರಾಮ ಸಹಜವಾಗಿ ಈ ಪಂಥದ ಮುಖ್ಯ ಆಶ್ರಯತಾಣವಾಗಿತ್ತೆಂದರೆ ತಪ್ಪಾಗಲಾರದು.

ಕ್ರಿ.ಶ.೧೦೭೬ರ ಕನ್ನೆಳ್ಳಿ[೧೩೩] ಕ್ರಿ.ಶ.೧೦೮೫ರ ಹಾವಿನಾಳ[೧೩೪] ಮುದನೂರಿನಲ್ಲಿರುವ[೧೩೫] ಹಗರಟಗಿಯಲ್ಲಿರುವ ನಾಲ್ಕು[೧೩೬] ಹೆಮ್ಮಡಗಿಯ ಕ್ರಿ.ಶ.೧೧೮೨ರ ಶಾಸನ[೧೩೭] ಹಾಗೂ ಶಹಾಪುರ ತಾಲೂಕಿನ ಹೋತಗಲ್ ಗ್ರಾಮದಿಂದ ಉಲ್ಲೇಖಿತವಾದ ಕ್ರಿ.ಶ.೧೨೮೮ ಶಾಸನ[೧೩೮] ಮುಖ್ಯವಾಗಿ ಕಾಳಾಮುಖ ಪಂಡಿತರ ಬಗೆಗೆ ಅವರ ಹೆಸರನ್ನು ವಿವರಿಸುತ್ತವೆ. ಆದರೆ ಅವರ ಹೆಸರುಗಳು ಮತ್ತು ದಾನದತ್ತಿ ಪಡೆದ ವಿವರಗಳು ಮಾತ್ರ ದಾಖಲಾಗಿವೆ ಹೊರತು ಅವರು ಯಾವ ಶಾಖೆಗೆ ಸಂಬಂಧಿಸಿದವರೆಂಬ ವಿಷಯಗಳು ಪ್ರಕಟವಾಗಿಲ್ಲ. ಕ್ರಿ.ಶ.೧೦೭೧ರ ಸಗರ ಶಾಸನದಲ್ಲಿ ಮಾತ್ರ ಸ್ಪಷ್ಟವಾಗಿ ಅಲ್ಲಿಯ ಆಚಾರ್ಯರರಾದ ಅನಂತಶಕ್ತಿ ಸಿದ್ಧಾಂತಿ ಯತಿಗಳು ನಾವು ನಾಲ್ಕು ಪರಂಪರೆ ಅಥವಾ ಭೇದಗಳನ್ನು ಸರಿಸಮಾನವಾಗಿ ಕಂಡವರೆಂದು ತಮ್ಮನ್ನು ವಿವರಿಸಿಕೊಂಡಿದ್ದಾರೆ[೧೩೯].

ದೇವಾಲಯಗಳಿಗೆ ಸಂಬಂಧಿಸಿದ ಶೈವ ಆರಾಧಕರಾಗಿರುವ ಈ ಸಿದ್ಧಾಂತಿಗಳಿಗೆ ನೀಡಿದ ದಾನದತ್ತಿಗಳನ್ನು ಕಡ್ಡಾಯವಾಗಿ ಅವರ ಕಾಲ್ತೊಳೆದು(ಕಾಲ್ಕಂರ್ಚಿ). ನೀಡಲಾಗುತ್ತಿತ್ತು. ಅಂದರೆ ಅವರ ಒಪ್ಪಿಗೆಯ ಮೇರೆಗೆ ದೇವಾಲಯ, ಚಟುವಟಿಕೆಗಳು ನಡೆಯುತ್ತಿದ್ದವು ಎಂಬುದು ಮುಖ್ಯ. ಕೆಲವು ಯತಿಗಳು ಒಂದಕ್ಕಿಂತ ಹೆಚ್ಚಿನ ಸಂಖ್ಯೆಯ ದೇವಾಲಯಗಳು ಸ್ಥಾನಪತಿಗಳಾಗಿದ್ದರೆಂಬುದನ್ನು ಶಾಸನಗಳಲ್ಲಿರುವ ವಿವರಗಳಿಂದ ತಿಳಿಯಬಹುದು.

ದೇವಾಲಯಗಳಿಗೆ ಸ್ಥಾನಾಚಾರ್ಯರು ಆಗುವ ಈ ಸ್ಥಾನಪತಿಗಳು ಆ ಮೊದಲು ದೇವಾಲಯ ಅಥವಾ ಮಠಗಳಲ್ಲಿ ವಿದ್ಯಾರ್ಥಿಗಳಾಗಿ ಹಾಗೂ ತಪೋಧನರಾಗಿ ವಿದ್ಯಾಭ್ಯಾಸ ಮಾಡಿ ಅನಂತರ ಸ್ಥಾನಪತಿ ಅಥವಾ ಸ್ಥಾನಾಚಾರ್ಯರಾಗುತ್ತಿದ್ದಿರಬಹುದು. ಬಹುಶಃ ಈ ಸಂಪ್ರದಾಯ ವಂಶಪಾರಂಪರ್ಯದಿಂದ ಮುಂದುವರೆದಿರುವಂಥದ್ದೇ ಎಂಬುದು ಸ್ಪಷ್ಟವಾಗಿ ತಿಳಿಯಲಾಗದ ಸಂಗತಿಯಾಗಿದೆ. ಕಾರಣ ಅವರು ತಮ್ಮನ್ನು ಪರಿಚಯಿಸಿಕೊಳ್ಳುವಾಗ ಶಿಷ್ಯ, ಪ್ರಶಿಷ್ಯ, ಶಿಷ್ಯರ ಪ್ರಶಿಷ್ಯ ಎಂದು ಸಂಬೋಧಿಸಿಕೊಂಡಿದ್ದಾರೆ. ಹೊರತು ತಾನು ಅವನ ಮಗ ಅಥವಾ ಸಂಬಂಧಿಯೆಂದು ಹೇಳಿಕೊಂಡಿರುವ ವಿವರಗಳು ಬಹುಶಃ ದೊರಕಿದಂತಿಲ್ಲ. ಹಾಗಾಗಿ ಈ ಸ್ಥಾನವು ಅವರವರ ಕಠಿಣವಾದ ದಾರ್ಶನಿಕ ದುಡಿಮೆಯಿಂದ ಪಡೆಯುವಂತಾಗಿದ್ದೇ ಹೊರತು ಸಹಜವಾಗಿ ಸಿಕ್ಕಿರುವಂತಹದ್ದಲ್ಲ ಅಭಿಪ್ರಾಯಿಸಬಹುದು.

ಚರ್ಚಿಸಬಹುದಾದ ಇನ್ನೊಂದು ಸಂಗತಿಯೆಂದರೆ ದೇವಾಲಯದ ಸ್ಥಾನಪತಿಗಳು ಯಾವ ಪಂಥ ಅಥವಾ ವರ್ಗ ಅಥವಾ ವರ್ಣದ ಮೂಲಕ ಮಾತ್ರ ಬರುತ್ತಿದ್ದರೆಂಬ ವಿಷಯವನ್ನು

ಈವರೆಗೂ ಸ್ಪಷ್ಟವಾಗಿ ಜಿಡಿಸಲಾಗದ ಸಂಗತಿಯಾಗಿದೆ. ಆದರೆ ಅಂದಿನ ಸಮಾಜದಲ್ಲಿದ್ದ ಶೂದ್ರ ಹಾಗೂ ಅಸ್ಪೃಶ್ಯರನ್ನು ಹೊರತುಪಡಿಸಿ ವೃತ್ತಿ ಸಮುದಾಯಗಳು ಹಾಗೂ ಪೂಜೆ-ಪುನಸ್ಕಾರಗಳನ್ನು ಹೊಂದಿದ್ದ ಅಗ್ರಹಾರದ ಬ್ರಾಹ್ಮಣರೆಲ್ಲರು ಇಂಥ ಹುದ್ದೆಗಳಿಗೆ ಅರ್ಹರಾಗಿದ್ದಿರಬಹುದೆಂದು ಊಹಿಸಬಹುದು. ಕಾರಣ ಕೆಲವು ಶಾಸನಗಳಲ್ಲಿ ಗೊರವರು ಜೀಯರು ಮತ್ತು ಕುಶಲವೃತ್ತಿ ಸಮುದಾಯಗಳಿಗೆ ಸಂಬಂಧಿಸಿದವರ ಹೆಸರುಗಳು ಸಹ ಉಲ್ಲೇಖಗೊಂಡಿರುವುದನ್ನು ಗಮನಿಸಬಹುದು. ಕೆಲವು ಶಾಸನಗಳು ಸ್ಥಾನಪತಿ ಅಥವಾ ಸ್ಥಾನಾಚಾರ್ಯರ ಹುದ್ದೆಗಳು ಕೇವಲ ಬ್ರಾಹ್ಮಣ ಪುರೋಹಿತರಿಗೆ ಮಾತ್ರ ಸಲ್ಲುವಂತವುದಲ್ಲವೆಂದು ವಾದ-ವಿವಾದಗಳ ಮೂಲಕ ಸ್ಪಷ್ಟಪಡಿಸುವ ಪ್ರಯತ್ನ ಮಾಡಿದ್ದುಂಟು. ಗೊರವ ಮತ್ತು ಜೀಯರು ಎಂಬ ಪ್ರಯೋಗಗಳು ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಲಭ್ಯವಿರುವ ಕೆಲವು ಶಾಸನಗಳಲ್ಲಿ ದಾಖಲಾಗಿವೆ[೧೪೦].

**ಆಡಳಿತಾಧಿಕಾರಿಗಳು ಮತ್ತು ಶೈವ ಪರಂಪರೆ**

ಮಹಾಮಂಡಳೇಶ್ವರರು ಹಾಗೂ ಅಧಿಕಾರ ವರ್ಗದವರಲ್ಲಿ ಅನೇಕರು ತಾವು ಪ್ರಬಲ ಶೈವ ಆರಾಧಕರಾಗಿ ಗುರುತಿಸಿಕೊಂಡಿರುವುದು ಶಾಸನಗಳಲ್ಲಿಯೇ ದಾಖಲಾಗಿದೆ. ಕ್ರಿ.ಶ.೧೧೦೮ರ ಏವೂರು ಶಾಸನದಲ್ಲಿ ದಂಡನಾಯಕ ಮುದ್ದರಸನು ತನ್ನನ್ನು ಶಿವಪಾದ ಸೇಖರನೆಂದು ಕರೆದುಕೊಂಡಿದ್ದಾನೆ[೧೪೧] ಕಚಕನೂರಿನ ಕ್ರಿ.ಶ.೧೦೫೫ರ ತೇದಿಯ ಶಾಸನವು ಶ್ರೀಮತ್ಪ್ರಥಮ "ಶಿವರಾಜಗಂ" ಎಂದು ಉಲ್ಲೇಖಿಸುತ್ತದೆ. ಆದರೆ ಶಾಸನವು ತೃಟಿತವಾಗಿದ್ದರಿಂದ ಈ ಶಿವರಾಜಗಂ ಯಾರು ಎಂಬುದು ತಿಳಿಯದಾಗಿದೆ.

ಕ್ರಿ.ಶ.೧೦೭೬ರ ಕನ್ನೆಳ್ಳಿ ಶಾಸನವು[೧೪೨] ಮಹಾಮಂಡಳೇಶ್ವರನೊಬ್ಬನನ್ನು ಶಿವಪಾದಸೇಖರನೆಂದು ಸಂಬೋಧಿಸಲಾಗಿದೆ. ಈ ಮಹಾಮಂಡಳೇಶ್ವರ ಬಹುಶಃ ಹೈಹಯ ರೇವರಸನಿರಬಹುದೆಂದು ಅಂದಾಜಿಸಲಾಗಿದೆ[೧೪೩]. ಇದಲ್ಲದೇ ಪ್ರಾಯಶಃ ಈತನೇ ಮಹಾಮಂಡಳೇಶ್ವರ ಮಲ್ಲಿರೇವಸನಿರಬಹುದೆಂದು ಸಹ ಊಹಿಸಬಹುದಾಗಿದೆ. ಜಗದೇಕಮಲ್ಲ ಜಯಸಿಂಹ ಮತ್ತು ಒಂದನೆಯ ಸೋಮೇಶ್ವರನ ಆಳ್ವಿಕೆಯಲ್ಲಿದ್ದ ಮಹಾಮಂಡಳೇಶ್ವರ ರೇವರಸನು ಬಹುಶಃ ಕಾಳಾಮುಖ ಶಕ್ತಿಪರಿಷೆಗೆ ಸಂಬಂಧಿಸಿದ ಉಲ್ಲೇಖಗಳಿರುವ ಶಾಸನಗಳಲ್ಲಿ ಉಲ್ಲೇಖಿತಗೊಂಡ ರೇವರಸನಾಗಿರಬಹುದು.

ಕ್ರಿ.ಶ.೧೦೭೪ರ ಬೈಚಬಾಳದ ಶಾಸನವಂತೂ[೧೪೪] ದಂಡನಾಯಕ ಸಿಂಗರಸನನ್ನು ಶಿವಪಾದಾಂಬುಜ ಭ್ರಿಂಗನೆಂದು ಉಲ್ಲೇಖಿಸಿರುವುದು. ಅವನೊಬ್ಬ ಕಟ್ಟಾ ಶೈವನಾಗಿದ್ದು ಅದರಲ್ಲೂ ಕಾಳಾಮುಖ ಪರಂಪರೆಯ ಸಿಂಹಪರಿಷೆಯ ಪ್ರಬಲ ಬೆಂಬಲಗನಾಗಿದ್ದನೆಂದು ಅಭಿಪ್ರಾಯಿಸಬಹುದು. ಕ್ರಿ.ಶ. ೧೧೮೨ರ ಹೆಮ್ಮಡಿಗೆ ಶಾಸನದಲ್ಲಿ ಉಲ್ಲೇಖಿತನಾದ ದಂಡನಾಯಕ ಬಂಮ್ಮಿದೇವ ಅಥವಾ ಬಮ್ಮಿದೇವರಸನು ತಾನೊಬ್ಬ ಪರಮ ಮಾಹೇಶ್ವರನೆಂದು

ಕರೆದುಕೊಂಡಿದ್ದಾನೆ[೧೪೫] ದಂಡನಾಯಕ ಬಮ್ಮಿದೇವನ ಸಂದರ್ಭವು ತುಂಬಾ ಸಂದಿಗ್ಧತೆಯಿಂದ ಕೂಡಿರುವಂಥ ಕಾಲವಾಗಿತ್ತು. ಕಾರಣ ಕಲ್ಯಾಣದ ಚಾಲುಕ್ಯರನ್ನು ಬದಿಗೊತ್ತಿ ಜೈನಮತ ಪ್ರತಿಪಾದಕರಾದ ಕಲಚೂರ್ಯರರು ಅಧಿಕಾರಕ್ಕೆ ಬಂದಿದ್ದರು. ಅವರ ಕಾಲದಲ್ಲಿ ಕಾಳಾಮುಖ ಹಾಗೂ ಪಾಶುಪತ ಶೈವ ಪರಂಪರೆಯು ಬಹುಶಃ ರಾಜ್ಯಾಧಿಕಾರದಿಂದ ತಿರಸ್ಕಾರಕ್ಕೆ ಒಳಗಾಗುತ್ತಿರುವ ಸಮಯ ಕಾಳಾಮುಖ ಯತಿಯೊಬ್ಬನನ್ನು ಬಳ್ಳಿಗಾವಿಯಿಂದಲೇ ಎಳೆದು ಕಲ್ಯಾಣಕ್ಕೆ ತಂದ ಉದಾಹರಣೆಗಳು ಇತಿಹಾಸದಲ್ಲಿ ದಾಖಲಾಗಿವೆ. ಅಲ್ಲದೇ ಇಂಥ ಸಂದಿಗ್ಧ ಸಂದರ್ಭದಲ್ಲಿ ಮಹಾಮಂಡಳೇಶ್ವರರು ಹಾಗೂ ಬೆಂಬಲಿಗರು ಯಾರ ಪರ,(ಕಲ್ಯಾಣದ ಚಾಲುಕ್ಯ ಮತ್ತು ಕಲಚೂರಿಗಳು) ವಹಿಸಬೇಕು ಎಂಬ ಗೊಂದಲದಲ್ಲಿದ್ದರು. ಆದರೂ ಕೊನೆಗೆ ಕಲ್ಯಾಣದ ಚಾಲುಕ್ಯರೇ ಮೇಲುಗೈ ಸಾಧಿಸಿ ಅಧಿಕಾರಕ್ಕೆ ಬಂದರು. ಹಾಗಾಗಿ ಅವರ ಬೆಂಬಲಿಗ ಅಧಿಕಾರಗಳೆಲ್ಲರೂ ಹೆಚ್ಚಿನ ಸಂಖ್ಯೆಯಲ್ಲಿ ಶೈವ ಪ್ರತಿಪಾದಕರಾಗಿಯೇ ತಮ್ಮನ್ನು ಪೋಷಿಸಿಕೊಂಡಿದ್ದಾರೆ. ಆದ್ದರಿಂದ ಅವರು ಸ್ವಲ್ಪ ಎದೆಸೆಟೆಸಿಯೇ ಹೀಗೆ ಕರೆದುಕೊಂಡಿಬಹುದೆಂದು ಊಹೆಮಾಡಲು ಅವಕಾಶಗಳಿವೆ.

## ಸಿದ್ಧರೇವಣ ಪರಂಪರೆ

ಈ ಭಾಗದ ಶಾಸನಗಳಲ್ಲಿ ಉಲ್ಲೇಖವಾಗುವ ಸಿದ್ಧರೇವಣ ಎಂಬ ಉಲ್ಲೇಖವು ಹೆಚ್ಚಿನ ಜನರ ಕುತೂಹಲ ಕೆರಳಿಸಿದಂತಿದೆ. ಪಂಚಾಚಾರ್ಯರಲ್ಲಿ ಒಬ್ಬರಾದ ರೇಣುಕಾಚಾರ್ಯರೂ[೧೪೬] ಅಥವಾ ನಾಥಪಂಥದ ರೇವಣಸಿದ್ಧನಿಗೂ ಹಾಗೂ ಕುರುಬ ಸಮುದಾಯವು ಪೂಜ್ಯರೆಂದು ಭಾವಿಸಿರುವ ರೇವಣಸಿದ್ಧನಿಗೂ ಏನಾದರೂ ಐತಿಹಾಸಿಕ ಸಂಬಂಧಗಳಿಯೇ ಎಂಬುದನ್ನು ಹೆಚ್ಚಿನವರ ಆಲೋಚನೆ ಮಾಡಿದ್ದಾರೆ.

ಕ್ರಿ.ಶ.೧೧೨೭ರ ತೇದಿಯ ಕಕ್ಕೇರಿ ಶಾಸನ[೧೪೭]ದಲ್ಲಿ ಹಗರಿಟ್ಟಗೆಯ ಶ್ರೀಸ್ವಯಂಭುಯುಗ್ರಭೀಮೇಶ್ವರ ದೇವರ ಮುನೀರ ಕುವಾರೇಸ್ವರ ದೇವರ ಕಕ್ಕೇಶ್ವರ ದೇವರ ಯಿಂತಪ್ಪ ಮಹಾಸ್ಥಾನಂಗಳಾಚಾರ್ಯ ಸಿದ್ಧರೇವಣದೇವನ ಶಿಷ್ಯ ಬ್ರಹ್ಮರಾಸಿ ಪಂಡಿತರ ಕಾಲಂ ಕರ್ಚ್ಚಿ ಬಿಟ್ಟ ದತ್ತಿ ಎಂಬ ಉಲ್ಲೇಖವಿದೆ. ಹಾಗಾದರೆ ಈ ಶಾಸನದಲ್ಲಿ ಉಲ್ಲೇಖಿತ ಸಿದ್ಧರೇವಣ ಯಾರು ಎಂಬುದು ಮುಖ್ಯ ಪ್ರಶ್ನೆ. ಪ್ರಖ್ಯಾತವಾದ ಶೈವ ಸಿಂಹಪರ್ಷೆಯ ಮಲೆಯಾಳ ಪಂಡಿತನ ಶಿಷ್ಯಪರಂಪರೆಯಲ್ಲಿ ಬರುವ ಬ್ರಹ್ಮರಾಶಿ ಪಂಡಿತನ ಉಲ್ಲೇಖ ಈ ಭಾಗದ ಅನೇಕ ಶಾಸನಗಳಲ್ಲಿ ಬರುತ್ತಿದ್ದು ತುಂಬ ಮಹತ್ವದ ಆಕರವಾಗಿದೆ ಎಂದು ಅಭಿಪ್ರಾಯಿಸಲಾಗಿದೆ[೧೪೮]. ಅಲ್ಲದೇ ಶಾಸನದಲ್ಲಿ ಉಲ್ಲೇಖಿತ ಬ್ರಹ್ಮರಾಶಿ ಪಂಡಿತನನ್ನು ಒಂದೇ ಏಟಿಗೆ ಸಿಂಹಪರ್ಷೆಯ ಅಂಗಳದಲ್ಲಿ ತಂದು ಇಟ್ಟಿದ್ದಾರೆ. ಆದರೆ ಬ್ರಹ್ಮರಾಶಿ ಬಹುಶಃ ಸಿಂಹಪರಿಷನ್ಮಂಡಲಿಯ ಪರಂಪರೆಯವನ್ನಲ್ಲವೆಂದಣಿಸುತ್ತದೆ. ಕಾರಣ ಈತನು ಶೈವ ಪರಂಪರೆಯಲ್ಲಿದ್ದುಪಿಸಿದ ಸಿದ್ಧರೇವಣ ಅಥವಾ ರೇವಣಸಿದ್ಧ ಪರಂಪರೆಗೆ ಸಂಬಂಧಿಸಿದನೆಂದು ತಿಳಿಯಬಹುದು.

ಡಾ.ಎಂ.ಎಂ.ಕಲಬುರ್ಗಿಯವರು ಅಭಿಮತದಂತೆ ಹೇಳುವುದಾದರೆ ಈ ಪರಂಪರೆಯವರು ನಾಥಪಂಥಕ್ಕೆ ಸಂಬಂಧಿಸಿದ ಅನುಯಾಯಿಗಳು. ಹಾಗಾಗಿ ಸಿದ್ಧರೇವಣ ಪರಂಪರೆ ಕಾಳಾಮುಖ ಪರಂಪರೆಗೆ ಸಂಬಂಧಿಸಿದಲ್ಲ ಎಂದು ಭಾವಿಸಬೇಕಾಗುತ್ತದೆ. ಪ್ರಾಯಶಃ ಮೇಲಿನ ಅಭಿಪ್ರಾಯಗಳು ಪೂರ್ಣವಾಗಿ ಅಲ್ಲದಿದ್ದರೂ ಅವರ ಹೇಳಿಕೆಯಲ್ಲಿರುವ ತಥ್ಯವನ್ನು ಮಾತ್ರ ಅಲ್ಲಗಳೆಯಲಾಗದು. ಅವರ ಅಭಿಪ್ರಾಯಗಳು ಸ್ವಲ್ಪಮಟ್ಟಿಗಾದರು ಒಪ್ಪುವಂತಹ ವಿಚಾರಗಳಾಗಿವೆ. ಹಾಗಾಗಿದರೆ ಈ ಹಿನ್ನೆಲೆಯಲ್ಲಿ ಕೆಲವು ಸಾಧ್ಯತಾ ಊಹೆಗಳನ್ನು ಈ ಪ್ರದೇಶದಲ್ಲಿದ್ದ ಕಾಳಾಮುಖ ಮತ್ತು ಪಾಶುಪತ ಪಂಥಗಳಿಗೆ ಸಂಬಂಧಿಸಿದಂತೆ ಮಾಡಬಹುದು. ಅವುಗಳೆಂದರೆ,

ಈ ಹಿಂದೆ ಕೆಲವು ವಿದ್ವಾಂಸರು ಅಭಿಪ್ರಾಯಿಸಿರುವ(ಡಾ.ಎಂ.ಚಿದಾನಂದಮೂರ್ತಿ) ಕಾಳಾಮುಖ ಮತ್ತು ಪಾಶುಪತ ಅಬೇಧ್ಯವಾದವುಗಳು ಎಂಬ ವಿಚಾರವನ್ನು ಪುನರ್‌ಪರಿಶೀಲಿಸಬಹುದು. ಇದರ ಪರಿಣಾಮಕಾಳಾಮುಖ ಮತ್ತು ಪಾಶುಪತ ಪಂಥಗಳು ಅಥವಾ ಆಚರಣೆಗಳು ನಿಚ್ಚಳವಾಗಿ ಬೇರೆ ಬೇರೆದವುಗಳು ಎಂಬುದು ತಿಳಿದುಬರುವುದು.

ಮಧ್ಯಕಾಲೀನ ಕರ್ನಾಟಕದಲ್ಲಿ ಲಕುಲೀಶ(ಕಾಳಾಮುಖ) ಪಾಶುಪತವೆಂಬ ಶಿವಪರ ಪಂಥಗಳು ಪ್ರತ್ಯೇಕಿಸಿ ತೋರಿಸಲಾರದಷ್ಟು, ಪರಸ್ಪರ ಸಾದೃಶ್ಯ ಹೊಂದಿದ್ದವೆಂದು ಶಾಸನಗಳಿಂದ ವಿವರಗಳು ತಿಳಿದುಬರುವುದರಿಂದ ವಿದ್ವಾಂಸರು ಇವೆರಡೂ ಪಂಥಗಳಿಗೆ ಲಾಕುಳ ಶೈವರೆಂದು ಕರೆಯುತ್ತಿದ್ದಾರೆ. ಆ ಕಾಲದಲ್ಲಿದ್ದ ಇನ್ನೊಂದು ಶೈವ ಸಂಪ್ರದಾಯವೆಂದರೆ ರೇವಣಸಿದ್ಧ ಸಿದ್ಧರಾಮರನನಾಥ(ಸಿದ್ಧ)ಪಂಥ ಎನ್ನುವುದರ ಮೂಲಕ ರೇಣಸಿದ್ಧ ಅಥವಾ ಸಿದ್ಧರೇವಣನನ್ನು ನಾಥಪಂಥಕ್ಕೆ ಸಂಬಂಧಿಸಿದವನೆಂದು ಹೇಳುವ ಪ್ರಯತ್ನ ಮಾಡಿದ್ದಾರೆ[೧೪೯].

ಸಿರಿವಾಳ(೧೧೭೦) ಹೋತಗಲ್ಲ(೧೧೭೫) ಸಿರಿವಾಳ(೧೧೭೮) ಶಾಸನಗಳು ಸಿದ್ಧಶಿವಯೋಗಿ ಸಿದ್ದಸಾತೇಶ್ವರ, ಸಿದ್ಧರೇವಣ ಪ್ರಯೋಗಗಳು ಲಾಕುಳಶೈವರಿಂದ ತುಂಬ ಭಿನ್ನವಾದ(ಸಿದ್ಧ) ಪಂಥವನ್ನು ಸೂಚಿಸುತ್ತವೆ ಎಂಬ ಸ್ಪಷ್ಟ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ[೧೫೦]. ಈ ಹಿನ್ನೆಲೆಯಲ್ಲಿ ಈ ಭಾಗದ ಕೆಲವು ಶಾಸನಗಳನ್ನು ಗಮನಿಸಬಹುದು.

ಎರಡನೆಯ ವಿಚಾರವೆಂದರೆ ಯಾದಗಿರಿ ಜಿಲ್ಲಾ ಪ್ರದೇಶದಲ್ಲಿದ್ದುದು ಕಾಳಾಮುಖ ಪರಂಪರೆಗೆ ಸಂಬಂಧಿಸಿದ್ದೇ. ಇನ್ನೊಂದು ಕವಲಾದ ಸಿಂಹಪರಿಷತ್ತು ಅಥವಾ ಸಿಂಹಪರಿಷನ್ಮಂಡಲಿ ಅದು ಮುದನೂರು ಯಡ್ರಾಮಿ ಹಾಗೂ ಏವೂರು ಸುತ್ತಮುತ್ತಲ ಪರಿಸರದಲ್ಲಿ ತುಂಬಾ ದಟ್ಟವಾಗಿತ್ತು. ಅದು ಹೆಚ್ಚುಕಡಿಮೆ ಕ್ರಿ.ಶ.ಸುಮಾರು ೧೨ನೇ ಶತಮಾನದ ಮಧ್ಯಾವಧಿಯವರೆಗೂ ತನ್ನ ಪ್ರಾಬಲ್ಯವನ್ನು ಹೊಂದಿತ್ತೆಂಬುದು. ಇದೇ ಪರಂಪರೆಯಲ್ಲಿದ್ದ ಸ್ಥಾನಾಚಾರ್ಯರರು ಬಹುಶಃ ಪಾಶುಪತದಲ್ಲಿದ್ದ ನಾಥದ ಪಂಥದ ಕಡೆಗೆ ವಾಲಿರಬಹುದು. ಅದು ಬಹುಶಃ ೧೧ನೇ ಶತಮಾನದ ಪೂರ್ವಪಾದದಲ್ಲಿ ಘಟಿಸಿರಬಹುದು. ಈ ಪಂಥದ ಜನಕ(ಕರ್ನಾಟಕದಲ್ಲಿರುವ ಹಾಗೂ ಈ ಭಾಗದಲ್ಲಿ ಅಭಿವೃದ್ಧಿಗೊಂಡ ನಾಥ ಸಂಪ್ರದಾಯ

ಮಾತ್ರ) ಬಹುಶಃ ರೇಣಸಿದ್ಧ ಅಥವಾ ಸಿದ್ಧರೇವಣನಾಗಿರಬಹುದು. ಅವನು ಬೋಧಿಸಿದ ಸುಧಾರಣಾ ವಿಚಾರಗಳು ತನ್ನ ಸಮಕಾಲೀನ ಕಾಳಾಮುಖ ಶಕ್ತಿಪರಿಷೆ ಹಾಗೂ ಸಿಂಹಪರಿಷತ್ತಿನ ವಿಚಾರಗಳಿಗಿಂತ ಮುಖ್ಯವಾಗಿರಬೇಕು. ಹಾಗಾಗಿ ನಂತರ ಹೆಚ್ಚಿನ ಅನುಯಾಯಿಗಳು ರೇವಣಸಿದ್ಧ ಪ್ರಚುರಪಡಿಸಿದ ನಾಥದ ಕಡೆಗೆ ವಾಲಿರುವಂತೆ ಕಂಡುಬರುತ್ತದೆ.

ಶೈವಪಂಥದ ಪ್ರಚಾರಕನಾಗಿದ್ದ ರೇವಣಸಿದ್ಧನಿಗೆ ಆ ಕಾಲದ ಶೂದ್ರ ಹಾಗೂ ವೃತ್ತಿ ಸಮುದಾಯಗಳು ಮನಸೋತು ಅವನ ಅನುಯಾಯಿಗಳಾಗಿಬಹುದು. ಸೊನ್ನಲಿಗೆ ಸಿದ್ಧರಾಮನು ರೇವಣಸಿದ್ಧರನ್ನು ತುಂಬಾ ಪೂಜ್ಯನೀಯವಾಗಿ ಕಂಡದ್ದು ಈ ಹಿನ್ನೆಲೆಯಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಸಗರ ಹಾಗೂ ಹಗರಟಗಿ ನಾಡುಗಳಲ್ಲಿ ಈ ಪರಂಪರೆಯು ಆ ಸಂದರ್ಭದಿಂದಲೇ ಹೆಚ್ಚಿನ ಮಹತ್ವ ಪಡೆಯುತ್ತಾ ಬಂದಿದೆ. ಈ ಭಾಗದಲ್ಲಿ ರೇವಣಸಿದ್ಧರು ಬೋಧಿಸಿದ ನಾಥದ ಮೂಲಕ ಪಾಶುಪತವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಬಹುಶಃ ಕಾಳಾಮುಖದ ಸಿಂಹಪರಿಷತ್ತು ಹಾಗೂ ಪಾಶುಪತದಿಂದ ಕವಲೊಡೆದ ನಾಥ ಪಂಥಗಳೆರಡೂ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಷಿಸುತ್ತಿದ್ದರಿಂದಲೇ ಕ್ರಿ.ಶ.೧೦೭೮ರ ತೇದಿಯ ಸಗರ ಶಾಸನದಲ್ಲಿ[೧೫೧] ನಾನು ಲಾಕುಳ ಸಿದ್ಧಾಂತ ಶಾಸ್ತ್ರರ್ಥ ಸಮುದ್ಧರಣ ಶೀಲರ್, ಕಾಳಾಮುಖ, ಮಹಾವ್ರತ, ಪಾಶುಪತ ಹಾಗು ಶಿವಸಮಯ ಸಮಾನ ಪಕ್ಷಪಾತರ್ ಎಂದು ಅನಂತ ಶಕ್ತಿಸಿದ್ಧಾಂತಿ ಹೇಳಿಕೊಂಡಿರುವಂತಿದೆ.

ಕಾಳಾಮುಖ ಪಂಥದದ್ದೇ ಆದ ಸಿಂಹಪರಿ,ತ್ತು ಹಾಗೂ ಪಾಶುಪತದಿಂದ ಬಂದ ನಾಥಪಂಥಗಳು ೧೨ನೇ ಶತಮಾನದ ಹೊತ್ತಿಗೆ ಈ ಭಾಗದಲ್ಲಿ ಪ್ರಬಲವಾಗಿ ಬೆಳೆದಿವೆ. ಅಲ್ಲದೇ ಪ್ರಾಯಶಃ ಅವುಗಳೆರಡರ ಮಧ್ಯೆ ವಿಚಾರ ಸಂಘರ್ಷಗಳು ನಡೆದಿರಬಹುದು. ಆದರೆ ರಾಜಕೀಯವಾಗಿ ಮತ್ತು ಧಾರ್ಮಿಕವಾಗಿ ಮಲೆಯಾಳ ಪಂಡಿತನಿಂದ ಆರಂಭವಾದ ಸಿಂಹಪಷರ್ಯು ಎರಡನ್ನು ಮನ್ನಣೆ ಪಡೆದು ಹೆಚ್ಚಿನ ಪ್ರಮಾಣದಲ್ಲಿ ಶಿಷ್ಟಗೊಳ್ಳುತ್ತಾ ಮುನ್ನಡೆದರೆ ಅದೇ ವೇಳೆಗೆ ಸುಧಾರಣೆಗಳನ್ನು ಪ್ರಚುರಪಡಿಸಿದ ಪಾಶುಪತದಿಂದ ಬಂದ ನಾಥವು ಜನಮನ್ನಣೆ ಗಳಿಸಿಕೊಳ್ಳುತ್ತಾ ಹೆಚ್ಚು ಪರಿಶಿಷ್ಟಗೊಳ್ಳುತ್ತಾ ಹೋಗಿರಬಹುದು. ಹಾಗಾಗಿ ನೇಕಾರ ವೃತ್ತಿ ಕುಲದ ಜೇಡರದಾಸಿಮಯ್ಯ, ವಡ್ಡ ವೃತ್ತಿಯ ಸಿದ್ಧರಾಮ ಹಾಗೂ ಕಾಷ್ಠವೃತ್ತಿಯ ಹಾವಿನಾಳ ಕಲ್ಲಯ್ಯನಂತಹ ಸುಧಾರಣಾವಾದಿಗಳು ರೇವಣಸಿದ್ಧ ಪ್ರತಿಪಾದಿಸಿದ ನಾಥದ ಕಡೆಗೆ ಹೆಚ್ಚು ವಾಲಿದಂತೆ ಕಾಣುತ್ತದೆ. ಈ ವಿಚಾರಗಳು ಮುಂದೆ ಒಟ್ಟಾರೆ ಶೈವ ಪರಂಪರೆಯಲ್ಲಿ ವಚನ ಧರ್ಮದ ಮೂಲಕ ಸುಧಾರಿತ ಶೈವ ಅಥವಾ ವೀರಶೈವ ಚಳುವಳಿಗೆ ಪ್ರೇರಣೆಯಾಗಿರಬಹುದೆಂದು ಅಭಿಪ್ರಾಯಿಸಬಹುದು. ಇಂಥದೊಂದು ಧಾರ್ಮಿಕ ಮಹಾ ಬದಲಾವಣೆಗೆ ಕ್ರಿಯಾಶಕ್ತಿ ಭೂಮಿಯಾಗಿ ಕಾರ್ಯಮಾಡಿದ್ದು ಮಾತ್ರ ಸಗರ ಮತ್ತು ಹಗರಟಗಿ ನಾಡುಗಳೆಂದು ಹೇಳಬಹುದು. ಈ ಭಾಗದಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ವ್ಯಕ್ತವಾದ ವಿಷಯಗಳ ಹಿನ್ನೆಲೆಯಲ್ಲಿ ರೇವಣಸಿದ್ಧ ಪರಂಪರೆಯನ್ನು ಹೀಗೆ ಗುರುತಿಸಬಹುದು.

ಶಾಂತಿಮಯ್ಯ

↓

ಸಿದ್ಧರೇಣ ಅಥವಾ ರೇವಣದೇವ ಅಥವಾ ರೇಣಸಿದ್ಧ

↓

ಬ್ರಹ್ಮರಾಶಿ ಪಂಡಿತ

ಈ ಮೂರು ವ್ಯಕ್ತಿಗಳ ಬಗೆಗೆ ಮಾತ್ರ ಇಲ್ಲಿನ ಶಾಸನಗಳಲ್ಲಿ ಉಲ್ಲೇಖ ಕಂಡುಬರುತ್ತವೆ. ಕ್ರಿ.ಶ.೧೮೯ರ ಮುದನೂರು[೧೫೨] ಹಾಗೂ ಕ್ರಿ.ಶ.೧೦೨೭ರ ಕಕ್ಕೇರಿ ಶಾಸನಗಳು[೧೫೩] ಬ್ರಹ್ಮರಾಶಿ ಪಂಡಿತನ ಕುರಿತು ಉಲ್ಲೇಖಿಸಿದರೆ ಕ್ರಿ.ಶ.೧೧೩೭ರ ತೇದಿಯ ಸಿರಿವಾಳ[೧೫೪] ಕ್ರಿ.ಶ.೧೧೭೫ರ ಹೋತಗಲ್ಲು(ಅದೇ ಶಾ.ಸಂ.೪೧. ಹೋತಗಲ್ಲ[೧೫೫] ಶಾಸನಗಳಲ್ಲಿ ಶಾಂತಿಮಯ್ಯ ಅಥವಾ ಶಾನ್ತಿಮಯ್ಯ ಹಾಗೂ ಸಿದ್ಧರೇವಣರ ಉಲ್ಲೇಖಗಳು ದಾಖಲಾಗಿವೆ. ಈ ವಿವರಗಳನ್ನು ಗಮನಿಸಿದಾಗ ತಿಳಿದುಬರುವ ಸಂಗತಿ ಏನೆಂದರೆ ರೇವಣಸಿದ್ಧ ಅಥವಾ ಸಿದಧರೇಣರ ಕರ್ಮಭೂಮಿ ಸಿರಿವಾಳ ಆಗಿತ್ತೆಂಬುದು. ಅವರ ತಂದೆಗಾಗಿಯೇ ಸಿದ್ಧಶಾಂತೇಶ್ವರ ದೇವಾಲಯ ಕಟ್ಟಿರುವ ಉಲ್ಲೇಖಗಳುಂಟು.

**ಕಾಳಾಮುಖದ ಶಕ್ತಿಪರ್ಷೆ**

ಯಾದಗಿರಿ ಜಿಲ್ಲಾ ಪ್ರದೇಶದ ಗ್ರಾಮಗಳಲ್ಲಿ ಕಾಳಾಮುಖದ ಸಿಂಹಪರಿಷತ್ತಿನ ಪ್ರಭಾವ ಮತ್ತು ವಿಸ್ತಾರ ತುಂಬಾ ವ್ಯಾಪಕ ಪ್ರಮಾಣದಲ್ಲಿದ್ದಿರುವ ಬಗೆಗೆ ಅಲ್ಲಿನ ಶಾಸನಗಳಲ್ಲಿರುವ ವಿಷಯಗಳೇ ದೃಢಪಡಿಸುತ್ತವೆ. ಆದರೆ ಕಾಳಾಮುಖದ ಇನ್ನೊಂದು ಕವಲಾದ ಶಕ್ತಿಪರಿಷತ್ತು ಅಥವಾ ಪ್ರಭಾವಳಿ ಅಥವಾ ಸಂತತಿ ಅಥವಾ ಸಂತಾನಗಳ ಬಗೆಗೆ ಅಷ್ಟೊಂದು ಸಾಕಷ್ಟು ಸಂಖ್ಯೆಯಲ್ಲಿ ವಿವರಗಳು ದೊರೆಯುವುದಿಲ್ಲ. ಆದರೂ ಒಂದೆರಡು ಉದಾಹರಣೆಗಳು ಶಕ್ತಿಪರಿಷತ್ತಗೆ ಸಂಬಂಧಪಟ್ಟ ಇತರ ಕವಲುಗಳಾದ ಮೂರುಕೋಣೆ ಹಾಗೂ ಕಿಟ್ಟಗಾವೆ ಸಂತತಿ ಕುರಿತು ಒಂದೆರಡು ಉದಾಹರಣೆಗಳು ಇಲ್ಲಿರುವ ಶಾಸನಗಳಲ್ಲಿ ಕಂಡುಬರುತ್ತವೆ.

ಕ್ರಿ.ಶ.೧೦೭೬ರ ಸಂಗಮ ಶಾಸನದಲ್ಲಿ[೧೫೬] ಮೂರು ಕೋಣೆಯ (ಮೂವರ ಕೇಣಿಯ ಮಠಕ್ಕೆ) ಬಗೆಗೆ ಉಲ್ಲೇಖವಿರುವುದನ್ನು ಗಮನಿಸಬಹುದು. ಮೂರುಕೋಣೆ ಸಂತತಿ ಶಕ್ತಿ ಪರಿಷತ್ತಿನ ಪರ್ವತಾವಳಿಯಲ್ಲಿ ಬರುವ ಸಂತತಿ. ಇದರ ಮೂಲ ಬಳ್ಳಿಗಾವೆ(ಶಿವಮೊಗ್ಗ ಜಿಲ್ಲೆ)ಯಾಗಿದ್ದರೂ ಅದರ ಪ್ರಭಾವ ಹೆಚ್ಚಾಗಿ ಅಬ್ಬಲೂರು(ಹಿರೇಕೆರೂರ ತಾಲೂಕು) ಸೂಡಿ(ರೋಣತಾಲೂಕು) ಗದಗ(ಗದಗ ತಾಲೂಕು) ಹಾಗೂ ಕಪ್ಪಟೂರು (ಸೊರಬ ತಾಲೂಕು)ಗಳಲ್ಲಿ ಅಥವಾ ಆ ದೇವಾಲಯಗಳಲ್ಲಿದ್ದ ಹಳೇನೀಡ ನೇಗಿಲು (ಗದಗ ಜಿಲ್ಲೆ) ಗ್ರಾಮಗಳ ದೇವಾಲಯಗಳಲ್ಲಿ ಈ ಸಂತತಿಗೆ ಸಂಬಂಧಪಟ್ಟ ಸ್ಥಾನಾಚಾರ್ಯರಿದ್ದರೆಂದು ಅಭಿಪ್ರಾಯಗಳು ದಾಖಲಾಗಿವೆ[೧೫೭]. ಆದರೆ ಇದೇ ಸಂಪ್ರದಾಯಕ್ಕೆ ಸಂಬಂಧಪಟ್ಟ ಇನ್ನೊಂದು ಕೇಂದ್ರವು ಶಹಾಪುರ ತಾಲೂಕಿನ ಸಂಗಮದಲ್ಲಿತ್ತೆಂದು ಅಭಿಪ್ರಾಯಿಸಬಹುದು. ಅದು ಸಹ ಅವುಗಳಷ್ಟೇ ಖ್ಯಾತಿ ಪಡೆದಿದ್ದಿರಬಹುದು.

ಕ್ರಿ.ಶ.೧೧೭೬ರ ಶಾಸನದಲ್ಲಿ ಉಲ್ಲೇಖಿಸಿದ ಲಾಕುಳ ತಂತ್ರಮದಲ್ಲಿ ಸಚ್ಚಾರಿತ್ರ ಹೊಂದಿದ ಸಂಗವಳಿ ಮುನೀಶ್ವರ ಅವನ ಶಿಷ್ಯ ವಾಮದೇವಮುನೀಶ ಅವನ ಶಿಷ್ಯ ರುದ್ರೇಶ ಮುನೀಶ ಹಾಗೂ ಅವನ ಶಿಶ್ಯನಾದ ಶ್ರೀ ರುದ್ರಶಕ್ತಿ ಪಂಡಿತರ ಕುರಿತು ಅವರ ವಿವರಗಳನ್ನು ಈ ಶಾಸನದಲ್ಲಿ ದಾಖಲಿಸಲಾಗಿದೆ. ಅಲ್ಲದೇ ಅವರನ್ನು ವಿಶೇಷಣಗಳಿಂದ ಹೊಗಳಲಾಗಿದೆ. ಇದರಲ್ಲಿ ಉಲ್ಲೇಖವಾದ ವಾಮದೇವನಧಿಪತಿ ಅಥವಾ ವಾಮದೇವ ಮುನೀಶನಿಗೆ ಸಂಬಂಧಿಸಿದಂತೆ ಮೂವರ(ಮೂರು)ಕೇಣಿ(ಕೋಣೆ) ಮಠಕ್ಕೆ ಕಿಸುವೊಳಲಿನ(ಪಟ್ಟದಕಲ್ಲು) ಸಂಭಾವನೆಯ ಜಾರಿ(ಡಿ)ನಿಂದನೆಲ್ತಿವಾಸಿಗಳವರ್ಗ್ಗೇ ಎಂಬ ಉಲ್ಲೇಖವು ಬಹುಶಃ ಆತನು ಈ ಸಂಪ್ರದಾಯಕ್ಕೆ ಹಾಗೂ ಉಲ್ಲೇಖವಾದ ಮುನಿಪರಂಪರೆ ಈ ಸಂತತಿಗೆ ಸಂಬಂಧಪಟ್ಟವನೆಂದು ತಿಳಿಯುವುದಕ್ಕೆ ಯಾವ ಅನುಮಾನಗಳಿಲ್ಲ. ಅಲ್ಲದೇ ಶ್ರೀಯುತ ಡೇವಿಡ್ ಲಾರೆಂಜನ್ ವ್ಯಕ್ತಪಡಿಸಿದಂತೆ ಮೇಲಿನ ನಾಲ್ಕು ಕೇಂದ್ರಗಳು ಮಾತ್ರ ಕಾಳಾಮುಖ ಶಕ್ತಿ ಪರಿಷೆಗೆ ಸಂಬಂಧಿಸಿದ ಮುಖ್ಯ ನಿಯಂತ್ರಣ ಕೇಂದ್ರಗಳಾಗಿದ್ದವು ಎಂಬ ಅಭಿಪ್ರಾಯವನ್ನು ಸಂಶಯಿಯಿಸುತ್ತ ಅದರ ಜೊತೆಗೆ ಸಂಗಮದಲ್ಲಿರುವ ಸಂಗಮೇಶ್ವರ ದೇವಾಲಯವು ಸಹ ಅಂಥದ್ದೇ ಪ್ರಮುಖ ಕೇಂದ್ರವಾಗಿತ್ತೆಂಬುದು ತುಂಬಾ ಮುಖ್ಯ ಸಂಗತಿಯಾಗುತ್ತದೆ. ಈ ಕೇಂದ್ರವು ಶಹಾಪುರ ತಾಲೂಕಿನ ಸಂಗಮ ಅಥವಾ ಸಂಗವಳ್ಳಿಯು ಆಗಿತ್ತು ಎಂಬುದು ನಾವು ಪಡಬಹುದಾದ ಅಭಿಪ್ರಾಯವಾಗಿದೆ.

**ಕಿಟ್ಟಗಾವಿ ಅಥವಾ ಕಿಟ್ಟಗಾಮೆ ಸಂತತಿ**

ಕಿಟ್ಟಗಾವಿ ಗ್ರಾಮ ಪ್ರಸ್ತುತ ಹಿರೇಕೆರೂರು(ಹಾವೇರಿ ಜಿಲ್ಲೆ) ತಾಲೂಕಿನಲ್ಲಿರುವ ಒಂದು ಚಿಕ್ಕಗ್ರಾಮ. ಕರ್ನಾಟಕದ ಪ್ರಾಚೀನ ಧಾರ್ಮಿಕ ಪರಂಪರೆಗಳ ಇತಿಹಾಸದಲ್ಲಿ ಅದು ಹೆಚ್ಚಿನ ಮಹತ್ವ ಪಡೆದಿತ್ತು. ಇದು ಸಹ ಕಾಳಾಮುಖ ಪರಂಪರೆಯ ಶಕ್ತಿಪರಿಷತ್ತಿನ ಪರ್ವತಾವಳಿಯಲ್ಲಿ ಬರುವ ಸಂತತಿಯೇ ಆಗಿದೆ. ಈ ಕುರಿತು ಕ್ರಿ.ಶ.೧೧೫೬ರ ಕೆಂಬಾವಿ ಶಾಸನದಲ್ಲಿ ಇದರ ಉಲ್ಲೇಖವಿದೆ[೧೫೮].

ಸ್ಥಳೀಯವಾಗಿದ್ದ ಚೌವುಂಡೇಶ್ವರ ದೇವಾಲಯಕ್ಕೆ ಕಾಸಕಬ್ಬೆ ಎನ್ನುವಳು ಕಳೇಶ್ವರ ಪಂಡಿತರ ಕಾಲ್ತೊಳೆದು ದತ್ತಿ ಬಿಟ್ಟ ಉಲ್ಲೇಖವಿದೆ. ಕಿಟ್ಟಗಾವೆಯ ಭಟ್ಟಸಮಗ್ರರಪ್ಪ ಶಿವಲಿಂಗಿ ಭಟ್ಟಾರಕರಗ್ರಶಿಷ್ಯರ್ ಶ್ರೀಮತ್ಕಳೇಸ್ವರ(ಕಳೇಶ್ವರ) ಪಂಡಿತರಿಗೆ ಕಾಸರ್ಕಬ್ಬೆಯು ಧಾರಾಪೂರ್ವಕ ದಾನ ನೀಡುತ್ತಾಳೆ. ಅವರು ತಮ್ಮನ್ನು ಸ್ಪಷ್ಟವಾಗಿ ಕಿಟ್ಟಗಾವೆಗೆ ಸಂಬಂಧಿಸಿದವರೆಂದು ಹೇಳಿಕೊಂಡಿದ್ದಾರೆ. ಇದಕ್ಕೆ ಸಂಬಂಧಪಟ್ಟಂತೆ ಇದೊಂದು ಉದಾಹರಣೆ ಮಾತ್ರ ಈ ಪ್ರದೇಶಗಳಲ್ಲಿ ಲಭ್ಯವಿರುವ ಶಾಸನಗಳಲ್ಲಿ ವ್ಯಕ್ತವಾಗಿದೆ ಎಂಬುದನ್ನು ಪರಿಗಣಿಸಬಹುದು.

**ವಿದ್ಯಾಭ್ಯಾಸದ ಕ್ರಮಗಳು**

ದೇವಾಲಯದ ಪ್ರಮುಖ ಸ್ಥಾನಾಚಾರ್ಯರಾದ ಕಾಳಾಮುಖರಲ್ಲಿನ ಶಕ್ತಿ ಪರ್ಷೆಯ

ಅನುಯಾಯಿಗಳಾದ ಇವರು ತಾವು ಲಾಕುಳಾಗಮ ಪರಿಗಣಿತರೆಂದೇ ತಮ್ಮನ್ನು ಸಂಬೋಧಿಸಿಕೊಂಡಿದ್ದಾರೆ. ಕ್ರಿ.ಶ.೧೦೫೬ರ ಕೆಂಬಾವಿ ಶಾಸನದಲ್ಲಿ ಕಿಟ್ಟಗಾವೆಯ ಭಟ್ಟಸಮಗ್ರರಪ್ಪ ಶಿವಲಿಂಗಿ ಭಟ್ಟಾರಕರಗ್ರ ಶಿಷ್ಯರಾದ ಇವರು ತಮ್ಮನ್ನು ತರ್ಕನಾಡಿಶಾಸ್ತ್ರ ಪಾರವಾರ ಪಾರಗರವಾದತಕೀರ್ತಿಧ್ವಜರಮಳಿನ ಚರಿತ್ರರಪ್ಪರೆಂದು ಸಂಬೋಧಿಸಿಕೊಂಡಿದ್ದಾರೆ. ಅಲ್ಲದೇ ಕ್ರಿ.ಶ.೧೦೬೭ರ ಸಂಗಮದ ಶಾಸನದಲ್ಲಿ ಉಲ್ಲೇಖಿತ ಮೂರು ಕೋಣೆಯ ಸಂತತಿಗೆ ಸಂಬಂಧಿಸಿದ ಆಚಾರ್ಯರಾದ ಮುನೀಶದೇವರು ತಮ್ಮನ್ನು ಸಕಳ ಲಾಕುಳ ತಂತ್ರಮದಲ್ಲಿ ಸಚ್ಚರಿತ್ರ ವಿನುತರೆಂದು ಹೇಳಿಕೊಂಡಿದ್ದಾರಲ್ಲದೇ ಅವರ ಪರಂಪರೆಯಲ್ಲಿ ಬರುವ ಶಿಷ್ಯರಾದ ಶ್ರೀರುದ್ರಶಕ್ತಿ ಪಂಡಿತರು ಸಹ ತಮ್ಮನ್ನು ಲಾಕುಳಾಗಮ ಪ್ರವರ್ತಕರೆಂದು ಕರೆದುಕೊಂಡಿದ್ದಾರೆ. ಆದರೆ ಹಗರಟಗಿ ಕ್ರಿ.ಶ.೧೨ನೆಯ ಶತಮಾನದ[೧೫] ಶಾಸನದಲ್ಲಿ ಭೋಗಾರ ನಖರರು ಹಾಗೂ ಅರವತ್ತೈದು ಒಕ್ಕಲುಗಳ ಸೇರಿ ಮಾಡಿಸಿದ ಶಿವಾಲಯದ ನಿರ್ಮಾಣಕಾರರಾದ ಪಾಂಚಾಳ ವೃತ್ತಿಯರು ತಾವು ನಂದಿಕೇಸ್ವರ(ಶ್ವ)ರ ಲಾಕುಳಾಗಮದ ಅನುಯಾಯಿಗಳೆಂದು ಹೇಳಿಕೊಂಡಿದ್ದಾರೆ. ಹಾಗಾದರೆ ಈ ನಂದಿಕೇಶ್ವರ ಲಾಕುಳಾಗಮವು ಯಾವುದಿರಬಹುದು. ಬಹುಶಃ ಬಾದಾಮಿ ತಾಲೂಕಿನಲ್ಲಿರುವ ಮಹಾಕೂಟ ಸ್ಥಳಕ್ಕೆ ಸಮೀಪದಲ್ಲಿರುವ ನಂದಿಕೇಶ್ವರದಲ್ಲಿದ್ದ ವಿಶೇಷ ಲಾಕುಳಾಗಮ ಇದಾಗಿದ್ದಿರಬಹುದೇ. ಕಾರಣ ಕಾಳಾಮುಖ ಹಾಗೂ ಪಾಶುಪತ ಪರಂಪರೆಯ ಶೈವಾಗಮದ ಅನುಯಾಯಿಗಳ ಉದ್ಬೋದಕ ಕೇಂದ್ರ ಮಹಾಕೂಟವಾಗಿತ್ತೆಂಬ ಸೂಚನೆಗಳನ್ನು ಕೆಲವರು ಅಭಿವ್ಯಕ್ತಪಡಿಸಿದ್ದಾರೆ. ಬಹುಶಃ ಆ ಭಾಗದಿಂದ ಹಗರಟಗಿ ನಾಡಿಗೆ ಈ ಆಗಮ ವಿಶೇಷ ಅನುಯಾಯಿಗಳು ಇವರಾಗಿರಬಹುದೇ ಎಂಬುದು ನಮ್ಮ ಅಭಿಪ್ರಾಯವಾಗಿದೆ.

ಈ ಪ್ರದೇಶದಲ್ಲಿ ಬೆಳೆದು ಬಂದ ಕಾಳಾಮುಖ ಪರಂಪರೆಯ ಎರಡು ಭೇದಗಳಾದ ಶಕ್ತಿಪರಿಷೆ ಮತ್ತು ಸಿಂಹಪರಿಷೆಗೆ ಸಂಬಂಧಿಸಿದಂತೆ ಪ್ರಕಟಗೊಂಡಿರುವ ಶಾಸನಗಳ ಕಾಲಮಾನವನ್ನು ಸೂಕ್ಷ್ಮವಾಗಿ ಗಮನಿಸಿದರೆ ತಿಳಿಯಬಹುದಾದ ಸಂಗತಿಯೆಂದರೆ ಮೊದ ಮೊದಲು ಕಾಳಾಮುಖ ಪರಂಪರೆಯಲ್ಲಿದ್ದ ಪ್ರಭಾವಶಾಲಿ ಶಕ್ತಿಪರಿಷೆಯೇ ಈ ಭಾಗದಲ್ಲಿಯೂ ಕೂಡಾ ಪ್ರವೇಶ ಪಡೆದಿದೆ. ಆ ವಿವರಗಳನ್ನು ಪ್ರಕಟಪಡಿಸಿರುವ ಎರಡು ಶಾಸನಗಳು ವ್ಯಕ್ತಪಡಿಸಿವೆ. ಅವು ಎರಡನೆಯ ಸೋಮೇಶ್ವರನ ಆಳ್ವಿಕೆಯ ಮೊದಲೇ(ಕ್ರಿ.ಶ.೧೦೫೦) ಅಥವಾ ಆ ಕಾಲದಲ್ಲಿ ಆಜುಬಾಜಿನಲ್ಲಿ ಪ್ರಕಟಗೊಂಡಿರುವಂಥವು. ಹಾಗಾಗಿ ಕಾಳಾಮುಖರಲ್ಲಿದ್ದ ಶಕ್ತಿಪರಿಷೆಯ ಪ್ರಭಾವ ಕಲ್ಯಾಣ ಚಾಲುಕ್ಯ ಎರಡನೆಯ ಸೋಮೇಶ್ವರನ ಆಳ್ವಿಕೆಯ ಅಂತ್ಯಕಾಲದಲ್ಲಿ ಅಥವಾ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯ(ಕ್ರಿ.ಶ.೧೦೭೬)ನ ಆಳ್ವಿಕೆಯ ಪ್ರಾರಂಭದಲ್ಲಿಯೇ ತನ್ನ ನೆಲೆಯನ್ನು ಈ ಪ್ರದೇಶದಲ್ಲಿ ಅದು ಕಳೆದುಕೊಂಡಿರಬಹುದೆಂದು ಭಾಸವಾಗುತ್ತದೆ. ಈ ಪ್ರದೇಶದ ಆಳ್ವಿಕೆಯ ಮುಖ್ಯ ಭೂಮಿಕೆಯಲ್ಲಿದ್ದ ಹೈಹಯ ಮಹಾಮಂಡಳೇಶ್ವರರು ಮಾತ್ರ ಯಾವ ಭೇದಭಾವಗಳಿಲ್ಲದೇ ಎರಡು ಪರಂಪರೆ(ಪದ್ಧತಿ)ಗಳಿಗೆ ಬೆಂಬಲ ನೀಡಿ

ಪ್ರೋತ್ಸಾಹಹಿಸಿದ್ದಾರೆ. ಅಲ್ಲದೇ ಈ ಆಚಾರ್ಯರರು ಸಹ ಮಹಾಮಂಡಳೇಶ್ವರರ ಮೂಲಕವೇ ಸಮಾಜದಲ್ಲಿ ಪ್ರವೇಶ ಪಡೆದಿದ್ದರೆಂಬುದು ಮುಖ್ಯ.

ಕಾಳಾಮುಖ ಪರಂಪರೆಗೆ ಬಹುಪ್ರಾಚೀನ ಇತಿಹಾಸ ಇದ್ದರು ಅದು ಹತ್ತು ಮತ್ತು ಹನ್ನೊಂದನೆಯ ಶತಮಾನಾವಧಿಯಲ್ಲಿ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿ ಕೇಂದ್ರದಿಂದ ವಿಶೇಷ ಹುಟ್ಟು ಪಡೆದು ಅತ್ಯಂತ ತೀವ್ರವಾಗಿ ಹಾಗೂ ವ್ಯಾಪಕವಾಗಿಯೇ ಕನ್ನಡ ನಾಡಿನಲ್ಲಿ ಆವರಿಸಿದೆ. ಅದೇ ರೀತಿ ಹೈದ್ರಾಬಾದ ಕರ್ನಾಟಕದಲ್ಲಿಯೂ ವಿಸ್ತರಿಸಿದೆ. ಆದರೆ ಎಳಮೇಲಿನ(ಆಲಮೇಲು-ಸಿಂದಗಿ ತಾಲೂಕು) ಮಲೆಯಾಳ ಪಂಡಿತನಿಂದ ಕಾಳಾಮುಖ ಪರಂಪರೆಯಲ್ಲಿದ್ದುಕೊಂಡೆ ಪ್ರಾರಂಭವಾದ ಮತ್ತೊಂದು ಶಾಖೆಯಾದ ಸಿಂಹಪರಿಷತ್ತು ಅಥವಾ ಸಿಂಹಪರಿಷನ್ಮಂಡಲಿ ಈ ಭಾಗದಲ್ಲಿ(ಯಾದಗಿರಿ ಜಿಲ್ಲೆ) ಶಕ್ತಿಪರಿಷೆಯ ಪ್ರಭಾವ ಕುಗ್ಗಿಸಿ ತಾನು ಅದರ ಜಾಗದಲ್ಲಿ ಗಟ್ಟಿಯಾಗಿ ನಿಲ್ಲಲು ಪ್ರಯತ್ನ ಮಾಡಿದಂತಿದೆ. ಇದು ಬಹುಶಃ ೧೧ನೇ ಶತಮಾನದ ಮಧ್ಯಾವಧಿಯಿಂದಲೇ ಆಗಿರುವಂಥದ್ದು. ಅಲ್ಲದೇ ಹೊಸದಾಗಿ ಹುಟ್ಟಿದ ಈ ಶೈವ ಪಂಥಕ್ಕೆ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯ ಹಾಗೂ ಅವನ ನಂತರ ಅಧಿಕಾರಕ್ಕೆ ಬಂದ ಅರಸರೆಲ್ಲರೂ ಈ ಸ್ಥಾನಾಚಾರ್ಯರ ಸೇವೆಗಳಿಗೆ ಟೊಂಕುಕಟ್ಟಿ ನಿಂತಂತೆ ಕಾಣುತ್ತದೆ. ರಾಜ್ಯಾಧಿಕಾರದ ಬೆಂಬಲದಿಂದ ಮುದನೂರು, ಯಡ್ರಾಮಿ, ಏವೂರು ಮತ್ತು ಹಗರಟಗಿ ಸ್ಥಳಗಳನ್ನು ತನ್ನ ಮುಖ್ಯ ಪ್ರಧಾನ ಕೇಂದ್ರವನ್ನಾಗಿ ಮಾಡಿಕೊಂಡು ಬೆಳೆದ ಮಲಯಾಳ ದೇವನಿಂದ ಪ್ರಾರಂಭಗೊಂಡ ಸಿಂಹಪರಿಷತ್ತು ಅಥವಾ ಸಿಂಹಪರಿಷನ್ಮಂಡಳಿಯು ಕಾಳಾಮುಖದ ಶಕ್ತಿಪರಿಷೆಯ ಅನುಯಾಯಿಗಳನ್ನು ಈ ಭಾಗದಲ್ಲಿ ತಲೆ ಎತ್ತದಂತೆ ಮಾಡಿರಬಹುದು.

ಆದರೆ ಅದರಿಂದಲೇ ಸಿಡಿದು ಬಂದ ಸಿದ್ಧರೇವಣ ಅಥವಾ ರೇವಣಸಿದ್ಧ ಶೈವ ಪರಂಪರೆಯ ಇನ್ನೊಂದು ಶಾಖೆಯಾದ ಪಾಶುಪತದಿಂದ ಪ್ರಭಾವಿತಗೊಂಡ ನಾಥಪಂಥವನ್ನು ಮುಂಚೂಣಿಗೆ ತರುವ ಪ್ರಯತ್ನ ಮಾಡಿದ್ದಾರೆ. ಅದರ ಕೇಂದ್ರ ಸಿರಿವಾಳವಾಗಿತ್ತು. ಅವರಿಗೆ ಸಂಬಂಧಪಟ್ಟ ಎಲ್ಲ ಮಾಹಿತಿಗಳು ೧೨ನೇ ಶತಮಾನ ಪ್ರಾರಂಭದಿಂದಲೇ ಪ್ರಾರಂಭವಾಗುತ್ತವೆ.

ಪ್ರಾಯಶಃ ಈ ರೀತಿ ಅಭಿಪ್ರಾಯ ಪಡಬಹುದೇನೋ ಕ್ರಿ.ಶ.೧೦-೧೧ನೇ ಶತಮಾನದಲ್ಲಿ ಕಾಳಾಮುಖ ಪರಂಪರೆಯು ಶಕ್ತಿ ಪರಿಷೆಯ ಕ್ರಿ.ಶ.೧೨ನೇ ಶತಮಾನದಲ್ಲಿ ಕಾಳಾಮುಖ ಪರಂಪರೆಯ ಸಿಂಹಪರಿಷತ್ತು ಹಾಗೂ ಕ್ರಿ.ಶ.೧೩ನೇ ಶತಮಾನದ ಪ್ರಾರಂಭದಿಂದ ಪಾಶುಪತ ಪರಂಪರೆಯಿಂದ ಪ್ರಭಾವಿತಗೊಂಡು ಬೆಳೆದ ನಾಥ ಸಂಪ್ರದಾಯಗಳು ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಹೆಚ್ಚು ಪ್ರಭಾವ ಬೀರಿದವು ಎಂದು ಅಭಿಪ್ರಾಯಿಸಬಹುದು. ವಚನ ಸಿದ್ಧಾಂತದ ಪ್ರಭಾವದ ಮೇಲೆ ಬದಲಾವಣೆಗೊಂಡ ಅಂದಿನ ಸಮಾಜ ಮುಖ್ಯವಾಗಿ ವಚನಕಾರರ ಬೆಂಬಲದಿಂದ ಹಾಗೂ ಅಣ್ಣ ಬಸವಣ್ಣನವರ ನೇತೃತ್ವದಿಂದ ಎಲ್ಲವೂ ಕರಗಿ ನಿಂತು ಹೋಯಿತು. ಆ ಮೇಲೆ ಹೊಸಧರ್ಮ ಅಥವಾ ಲಿಂಗಾಯತವು ಈ ಪ್ರದೇಶದಲ್ಲಿಯೂ ವ್ಯಾಪಿಸಿತೆಂದು ಅಭಿಪ್ರಾಯಿಸಬಹುದು.

ಆ ಸಂದರ್ಭದಲ್ಲಿ ರಾಜರು, ಮಹಾಮಂಡಳೇಶ್ವರರು, ಆಡಳಿತಾಧಿಕಾರಿಗಳು ಈ ಪರಂಪರೆಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ಚಟುವಟಿಕೆಗಳಲ್ಲಿಯೂ ತೊಡಗಿಕೊಂಡಿದ್ದರು. ಹಲವಾರು ದೇವಾಲಯಗಳನ್ನು ಕಾಳಾಮುಖ ಯತಿಗಳ ಅಭಿಲಾಷೆಯ ಮೇಲೆ ಕಟ್ಟಿರುವ ಉದಾಹರಣೆಗಳಿವೆ(ಆ ಕುರಿತು ಅಧ್ಯಾಯ ಐದರಲ್ಲಿರುವ ವಿವರಗಳಲ್ಲಿ ಬಿಡಿ ಬಿಡಿಯಾಗಿ ದಾಖಲಾಗಿವೆ. ಅಲ್ಲದೇ ಅವುಗಳನ್ನು ಭವ್ಯವಾಗಿ ಪ್ರಾರಂಭಿಸಿ ಅದರ ನಿರ್ವಹಣೆಗಳಿಗಾಗಿ ಅಲ್ಲಿರುವ ಸ್ಥಾನಾಚಾರ್ಯರಿಗೆ ಹೇರಳವಾದ ದಾನ–ದತ್ತಿಗಳನ್ನು ಬಿಟ್ಟುಕೊಟ್ಟ ವಿವರಗಳು ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು. ಈ ದೇವಾಲಯಗಳು ಕೇವಲ ಪೂಜಾಪದ್ಧತಿಯನ್ನು ಅನುಸರಿಸಿಕೊಂಡು ಹೋಗುವ ದೇವರ ಗುಡಿಗಳು ಮಾತ್ರವಾಗಿರಲಿಲ್ಲ. ಅವು ರಾಜಕೀಯ ಅಧಿಕಾರವನ್ನು ನಿಯಂತ್ರಿಸುವ ಬಹುದೊಡ್ಡ ಸಂಸ್ಥೆಗಳಾಗಿ ಮಾರ್ಪಟ್ಟವು. ಉದಾಹರಣೆಗೆ ಬಳ್ಳಿಗಾವಿಯಲ್ಲಿದ್ದ ಪರಂಪರೆಯ ಸ್ಥಾನಾಚಾರ್ಯರು ಕಲಚೂರಿಗಳ, ಅಧಿಕಾರವನ್ನೇ ಪ್ರಶ್ನೆ ಮಾಡಿರುವ ವಿಷಯ ಇತಿಹಾಸದಲ್ಲಿ ದಾಖಲಾಗಿದೆ. ಬಹುಶಃ ಮುದನೂರು, ಏವೂರು, ಯಡ್ರಾಮಿ ಹಾಗೂ ಹಗರಟಗಿಯ ಸ್ಥಾನಾಚಾರ್ಯರರು ಈ ಪ್ರದೇಶದ ರಾಜಕೀಯ ದಿಕ್ಕನ್ನೆ ಬದಲಾಯಿಸುವ ಶಕ್ತಿ ಪಡೆದಿದ್ದವರೆಂದು ತಿಳಿಯಲು ಇಲ್ಲಿರುವ ಶಾಸನಗಳಲ್ಲಿರುವ ವಿಷಯಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ತಿಳಿಯುವುದು. ದೇವಾಲಯಗಳ ರಕ್ಷಕರಾಗಿ, ವಿದ್ಯೆಯ ಪ್ರಸಾರಕರಾಗಿ ಸಮಾಜ ಚಟುವಟಿಕೆಗಳ ನಿಯಂತ್ರಕರಾಗಿ ಕಾರ್ಯ ನಿರ್ವಹಿಸಿದ ಕಾಳಾಮುಖ ಪರಂಪರೆಯ ಯತಿಗಳು ಅವರದೇ ಪರಂಪರೆಯಲ್ಲಿ ಹುಟ್ಟಿಕೊಂಡ ತಿರಸ್ಕಾರ ಹಾಗೂ ಭೇದಗಳಿಂದ ಹಾಗೂ ಕಾಲಾನಂತರ ಅಸ್ಥಿರಗೊಂಡ ಅಂದಿನ ರಾಜಕೀಯ ಶಕ್ತೀಕರಣ ಅಲ್ಲದೇ ವಚನಕಾರರ ಹಾಗೂ ನಾಥದ ಅನುಯಾಯಿಗಳಿಂದ ಕಾಳಾಮುಖ ಪರಂಪರೆಗೆ ಬಲವಾದ ಏಟು ನೀಡಲಾಯಿತು. ಹಾಗಾಗಿ ಅದು ಕರಗದೇ ಇರಲು ಸಾಧ್ಯವಾಗಲೇ ಇಲ್ಲವೆಂದು ಅಭಿಪ್ರಾಯಿಸಬಹುದು.

## ವಚನ ಧರ್ಮ ಅಥವಾ ವೀರಶೈವ ಧರ್ಮ

ಈ ಧರ್ಮದ ಕುರಿತು ನಿಲುಕಲಾರದಷ್ಟು ಚರ್ಚೆಗಳು ವಿದ್ವಾಂಸ ವಲಯದಲ್ಲಿ ನಡೆದಿವೆ. ಆ ಬಗೆಯ ವಿವರಗಳನ್ನು ಚರ್ಚಿಸುವ ಹಾಗೂ ಅರ್ಥೈಸುವ ಉದ್ದೇಶ ನಮ್ಮದಾಗಿಲ್ಲ. ಈಗಾಗಲೇ ವಿವರಿಸಿರುವ ಶೈವ ಪರಂಪರೆಯ ಅಡಿಯಲ್ಲಿಯೇ ಸುಧಾರಣಾವಾದಿ ಹಾಗೂ ಎಲ್ಲರನ್ನು ಒಳಗೊಂಡು ಬೆಳೆದಂತ ಪಂಥವೆಂದರೆ ವೀರಶೈವ ಧರ್ಮ. ಅದನ್ನು ಲಿಂಗಾಯತವೆಂದು ಹಾಗೂ ಕೆಲವರು ವಚನಧರ್ಮವೆಂದು ಸಹ ಪ್ರತಿಪಾದಿಸುತ್ತಾರೆ. ಕ್ರಾಂತಿಕಾರಿ ಬಸವಣ್ಣನವರಿಂದ ಈ ಧರ್ಮವು ಪ್ರಾರಂಭವಾಯಿತೆಂಬ ಅಭಿಪ್ರಾಯಗಳೇ ಹೆಚ್ಚು ಚಾಲ್ತಿಯಲ್ಲಿವೆ. ಅವರು ಪ್ರತಿಪಾದಿಸಿದ ಸುಧಾರಣೆಗಳನ್ನು ಸಾಮಾಜಿಕ ಕ್ರಾಂತಿಯೆಂದೇ ಹೇಳಲಾಗುತ್ತದೆ. ಕೆಲವು ವಿದ್ವಾಂಸರು ಇದು ವೃತ್ತಿ ಸಮುದಾಯಗಳು ತೋರಿದ ಸಮಾಜೋ–ಧಾರ್ಮಿಕ ಹಾಗೂ ಆರ್ಥಿಕ ವಿಷಯಕ್ಕಾಗಿ ಮಾಡಿದ ಪ್ರತಿಭಟನೆಗಳೆಂದು ಸಹ ಅಭಿಪ್ರಾಯಿಸಿದ್ದಾರೆ.

ಈ ಕುರಿತು ಪ್ರಕಟಗೊಂಡಿರುವ ಮಂಥನಗಳು ಏನೇ ಇರಲಿ ಇಂಥದೊಂದು ಹೊಸಬದಲಾವಣೆಗೆ ೧೨ನೇ ಶತಮಾನದಲ್ಲಿ ಯಾದಗಿರಿ ಜಿಲ್ಲೆಯ ಸಗರನಾಡು ಹಾಗೂ ಹಗರಟಗಿ ನಾಡುಗಳು ಮುಖ್ಯ ವೇದಿಕೆಯನ್ನು ಒದಗಿಸಿಕೊಟ್ಟಿವೆ. ವೀರಶೈವ ಧರ್ಮದ ಹುಟ್ಟಿಗೆ ಪ್ರೇರಕ ಮುಂಗೋಳಿಗಳಾಗಿ ನಿಂತ ಬಹುತೇಕ ವಚನಕಾರರು ಪ್ರಸ್ತುತ ಪ್ರದೇಶದಿಂದಲೇ ಬೆಳೆದು ಬಂದಂತವರು. ಹಾಗಾಗಿ ಸಗರನಾಡು ಶರಣರ ಭೂಮಿಯಾಗಿತ್ತೆಂದು ಅಭಿಪ್ರಾಯಿಸಲಾಗುತ್ತದೆ. ಈ ಚಳುವಳಿಯ ಅಂತಃಶಕ್ತಿಯಾಗಿದ್ದ ಬಸವಣ್ಣನವರು ಸಹ ಹಗರಟಗಿ ನಾಡಿಗೆ ಹೊಂದಿಕೊಡಿರುವ ತರ್ದವಾಡಿನಾಡಿನ ಮಹೀಮರೇ ಆಗಿದ್ದರು. ಈ ಮೂರು ಪ್ರಾಚೀನ ನಾಡು(ತರ್ದವಾಡಿ, ಸಗರ ಹಾಗೂ ಹಗರಟಗಿನಾಡು)ಗಳು ಪ್ರಸ್ತುತ ಸಂದರ್ಭದಲ್ಲಿ ಭೌಗೋಳಿಕವಾಗಿ ಬೇರೆ ಬೇರೆ ಜಿಲ್ಲೆಗಳಲ್ಲಿದ್ದರೂ ಅವು ಎಂದೆಂದಿಗೂ ಸಾಂಸ್ಕೃತಿಕವಾಗಿ ಕಳಚಿಕೊಳ್ಳಲಾರದ ಸಂಬಂಧಗಳನ್ನು ಇಟ್ಟುಕೊಂಡಿರುವಂಥವು. ಅವುಗಳ ಗಡಿಗಳೆಂದರೆ ಕೃಷ್ಣಾ ಮತ್ತು ಭೀಮಾನದಿಗಳಾಗಿವೆ ಹೊರತು ಇಂದಿನ ಜಿಲ್ಲಾಗಡಿಗಳಲ್ಲ.

ಕ್ರಿ.ಶ.೧೨ನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಹುಟ್ಟಿಕೊಂಡ ಸುಧಾರಣಾವಾದಿ ಈ ಶೈವ ಪಂಥ(ವೀರಶೈವ) ಈವರೆಗೂ ಹಲವಾರು ಶರಣ ಶರಣೆಯರಿಂದ ಪುನರ್‌ರೂಪು ಪಡೆಯುತ್ತಲೇ ಇದೆ. ಆದ್ಯವಚನಕಾರ ಜೇಡರ ದಾಸಿಮಯ್ಯನಿಂದ ಹಿಡಿದು ಕೊಡೇಕಲ್ಲು, ತಿಂಥಣಿ ಹಾಗೂ ಯಾದಗಿರಿ ಜಿಲ್ಲೆಯ ಬಳಿಚಕ್ರದ ಸಿದ್ಧರ ಬೆಟ್ಟದಲ್ಲಿರುವ ಕಲಿಯುಗದ ಕಡೆಯ ಶರಣ ಬಸವಲಿಂಗಯ್ಯನವರವರೆಗೆ ಹೊಸರೂಪ ಪಡೆಯುತ್ತಲೇ ಬಂದಿದೆ. ಈ ಭಾಗದಲ್ಲಿದ್ದ ವಚನಕಾರರ ಕುರಿತೇ ಅಧ್ಯಯನಗಳು ಆಗಿವೆ. ಆದರೆ ಅವುಗಳನ್ನು ಚಾರಿತ್ರಿಕ ನೆಲೆಯಲ್ಲಿ ಕಟ್ಟುವ ಪ್ರಯತ್ನಗಳಾಗಬೇಕು. ಆವಾಗಲೇ ವಾಸ್ತವ ಎಂಬುದು ತೆರೆದುಕೊಳ್ಳುವುದು. ಪ್ರಸ್ತುತ ಅಧ್ಯಯನದಲ್ಲಿ ಅಧ್ಯಾಯ ಆರರಲ್ಲಿ ಅಂಥ ಸುಧಾರಣಾವಾದಿಗಳ ಕುರಿತು ನಿರ್ಮಾಣವಾಗಿರುವ ದೇವಾಲಯ ಸಂಸ್ಕೃತಿಯ ಕುರಿತು ಆಚರಣೆಗಳ ನೆಲೆಗಳು ಎಂಬ ವಿವರದಡಿಯಲ್ಲಿ ಕೆಲವು ವಿವರಗಳನ್ನು ಚರ್ಚಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಅಧ್ಯಾಯ ಆರರಲ್ಲಿ ಕೆಲವು ವಿಚಾರಗಳನ್ನು ಚರ್ಚಿಸಲಾಗಿದೆ.

### ಆರ್ಥಿಕ ಸ್ಥಿತಿ-ಗತಿ

ರಾಜ್ಯಾಡಳಿತ ಮುನ್ನಡೆಗೆ ಆರ್ಥಿಕ ಸ್ಥಿತಿಗತಿಗಳು ಮುಖ್ಯ ಪಾತ್ರವಹಿಸುತ್ತವೆ. ಆರ್ಥಿಕವಾಗಿ ಸದೃಢತೆಯೆಡೆಗೂ ಆಡಳಿತಗಾರರು ಸಹ ಹೆಚ್ಚಿನ ಕಾಳಜಿಯನ್ನು ವಹಿಸುತ್ತಿದ್ದರು. ರಾಜ್ಯದ ವಿಸ್ತರಣೆ ಅಥವಾ ಅಭಿವೃದ್ಧಿಯ ಅರ್ಥವೆಂದರೆ ಒಂದು ರೀತಿಯಲ್ಲಿ ಆರ್ಥಿಕ ವಿಚಾರಗಳಿಗೆ ಮಹತ್ವ ಕೊಡುವ ಉದ್ದೇಶಗಳೆಂದೇ ತಿಳಿಯಬಹುದಾಗಿದೆ. ಗ್ರೀಕ್-ರೋಮನ್ ಸಾಮ್ರಾಜ್ಯಗಳು ಆರ್ಥಿಕ ಬಲಕ್ಕಾಗಿಯೇ ಜಗತ್ತೇ ಬೆರಗಾಗುವಂಥ ಯುದ್ಧಗಳನ್ನು ಮಾಡಿರುವ ರಕ್ತಸಿಕ್ತ ಪುಟಗಳು ಜಾಗತಿಕ ಇತಿಹಾಸದಲ್ಲಿ ದಾಖಲಾಗಿವೆ. ಅದೇ ರೀತಿ ಈ ದೇಶದ ಪ್ರಾಚೀನ ಇತಿಹಾಸದಲ್ಲಿ ದಾಖಲಾದ ಆಡಳಿತಗಾರರು

ಹೊರತಾಗಿಲ್ಲ. ಆರ್ಥಿಕ ಸಂಗತಿಗಳ ಬಲಾಬಲಾ ಹೆಚ್ಚಿಸುವ ಸಲುವಾಗಿ ಮೌರ್ಯ ಮತ್ತು ಶಾತವಾಹನರು ದಕ್ಷಿಣ ಭಾರತದ ಪ್ರದೇಶಗಳಿಗೆ ತಮ್ಮ ನೆಲೆಯನ್ನು ವಿಸ್ತರಿಸಿ ಭದ್ರಗೊಳಿಸಿದರೆಂಬ ವಿವರಗಳುಂಟು. ಭೂಮಿಯನ್ನು ಪಡೆದುಕೊಳ್ಳುವುದೇ ರಾಜ್ಯ ವಿಸ್ತರಣೆಯ ಮುಖ್ಯ ಉದ್ದೇಶವಾಗಿತ್ತು. ಭೂಮಿಗೆ ಸಂಬಂಧಿಸಿದ ಒಕ್ಕಲುತನ ಹಾಗೂ ವ್ಯಾಪಾರಕ್ಕೆ ಸಂಬಂಧಿಸಿದ ವಿತರಣಾ ಚಟುವಟಿಕೆಗಳಾದ ಉತ್ಪಾದನಾ, ಉತ್ಪಾದಕ ಹಾಗೂ ವಿತರಕ ವಿವರಗಳು ಮುಖ್ಯವಾಗುತ್ತವೆ. ಅವುಗಳಲ್ಲಿ ಅತ್ಯಂತ ಪ್ರಮುಖ ಸಂಗತಿಯೆಂದರೆ ಭೂಮಿ ಮತ್ತು ಒಕ್ಕಲುತನ. ಭೂಮಿಯ ಅಂತಿಮ ಒಡೆತನ ಸರಕಾರದ್ದೇ(ಚಕ್ರವರ್ತಿ) ಆಗಿದ್ದರೂ ಅದನ್ನು ನೀತಿ–ನಿಯಮ–ಕಾನೂನು ಚೌಕಟ್ಟುಗಳಲ್ಲಿ ಜನಸಾಮಾನ್ಯರು ಉಪಭೋಗಿಸುವ ಹಕ್ಕುದಾರಿಕೆ ಇತ್ತು.

### ಭೂ ಪ್ರಕಾರಗಳು

ಒಕ್ಕಲುತನ ಯೋಗ್ಯ ಭೂಮಿಯನ್ನು ಸಾಮಾನ್ಯವಾಗಿ 'ಕೆಯ್' ಎಂದು ಕರೆಯಲಾಗುತ್ತಿದ್ದರೂ ಮಳೆಯನ್ನವಲಂಬಿಸಿ ಸಾಗುವಳಿ ಮಾಡುವ ಭೂಮಿಯನ್ನು ದೇವ ಮಾತೃಕವೆಂದೂ ನದಿ, ಕೆರೆ, ಬಾವಿ ಮುಂತಾದವುಗಳನ್ನು ನದಿ ಮಾತೃಕೆವೆಂದೂ ಕರೆಯಲಾಗುತ್ತಿತ್ತು[೬೦]. ದೇವ ಮಾತೃಕದಲ್ಲಿ ಹೊಲ, ಗದ್ದೆಗಳನ್ನು ಸೇರಿಸಬಹುದು ಎಂದು ಅಭಿಪ್ರಾಯಿಸಲಾಗಿದೆ. ಮಳೆ ನೀರನ್ನು ತಡೆಹಿಡಿಯುವ ಅನುಕೂಲ ಹೊಂದಿದ್ದ ಭೂಮಿಯನ್ನು ಗದ್ದೆ ಎಂದು ಕರೆಯಲಾಗಿದೆ. ಆ ಅರ್ಥದಲ್ಲಿ ಗದ್ದೆ ಮತ್ತು ಹೊಲ ಪದದ ಅರ್ಥಗಳು ಬಳಕೆಯಲ್ಲಿವೆ ಎಂದು ಹೇಳಲಾಗಿದೆ. ತೋಟಗಳು ಹೆಚ್ಚಾಗಿ ಬಾವಿಯ ನೀರನ್ನು ಅವಲಂಬಿಸಿದ್ದವು.

ಇಂಥ ಹಲವು ವಿವರಗಳು ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿಯೂ ದಾಖಲಾಗಿವೆ. ಮಣ್ಣಿನ ಗುಣ ಸ್ವರೂಪ ಹಾಗೂ ಭೂ ಲಕ್ಷಣವನ್ನುವಲಂಬಿಸಿ ಕೃಷಿ ಭೂಮಿಯನ್ನು ಬೇರೆ ಬೇರೆ ಹೆಸರಿನಿಂದ ಕರೆದಿರುವ ಸಂಗತಿಗಳು ಇವೆ. ಕ್ರಿ.ಶ.೧೦೬೭ರ ಕಾಲದ ಮುಡಬಾಳ ಶಾಸನವು ಪೊಲ ಮತ್ತು ನೆಲಂ ಎಂಬ ವಿವರಗಳನ್ನು ನೀಡುತ್ತದೆ[೬೧].

ಕೆಯ್ ಎನ್ನುವ ಹಾಗೂ ಜೊತೆಗೆ ಅಳತೆಯನ್ನು ಅನ್ವಯಿಸಿಕೊಂಡ ವ್ಯಕ್ತವಾಗುವ ಉಲ್ಲೇಖಗಳು ಪ್ರತಿ ಶಾಸನದಲ್ಲಿಯೂ ಉಲ್ಲೇಖಿಸಲಾಗಿದೆ ಎಂದರೆ ತಪ್ಪಾಗಲಾರದು. ಕ್ರಿ.ಶ.೧೦೭೭ರ ತೇದಿಯ ಏವೂರಿನ ಶಾಸನದಲ್ಲಿ[೬೨] ಗದ್ದೆ ಅಥವಾ ಗರ್ದೆ ಹಾಗೂ ಅದೇ ಗ್ರಾಮದ ಕ್ರಿ.ಶ.೧೧೧೦೫ರ ಶಾಸನದಲ್ಲಿ ಗದ್ದೆಯು[೬೩] ಹಾಗೂ ತೋಟದ ಉಲ್ಲೇಖಗಳು ದಾಖಲಾಗಿವೆ. ಕ್ರಿ.ಶ.೧೧೯೩ರ ಮುದನೂರಿನ ಶಾಸನವು[೬೪] ಗದ್ದೆಯ ಕುರಿತು ಒಂದು ವಿಶೇಷವಾದ ಉಲ್ಲೇಖ ನೀಡುತ್ತದೆ. ವಾಂಘೆಯ ಗದ್ದೆಯೊಳಗೆ ರಾಮದೇವರ ಗದ್ದೆಯಿಂ ಬಡಗಲು ಪೂಜಾರಿ ಪೋಜರಸಂಗೆ ಧಾರಾಪೂರ್ವ್ವಕ ಮಾಡಿ ಪುಜ್ಜರಿಗದ್ದೆ ಹಾಗೂ ಆರೋರ್ವ್ವಕರು ನಡೆವರೊ ನಡೆವರ ಧರ್ಮ್ಮ ಎಂಬ ವಿವರವಿದೆ. ಬಹುಶಃ ಪುಜ್ಜರಿ ಎಂದರೆ ಮಸಾರಿ(ಕೆಂಪು ಮಿಶ್ರಿತ ಕಪ್ಪು) ನೆಲವನ್ನು ಹೊಂದಿದ ಅಥವಾ ಕೊನೆ(ಕಡೆ)ಯ ಭಾಗದಲ್ಲಿ

ಇದ್ದಿರುವಂತದ್ದು ಎಂಬ ಅರ್ಥಗಳು ಬರುತ್ತವೆ. ಊರೊಡೆಯರ ಮಧ್ಯದ ಗದ್ದೆಯ ಕುರಿತು ಕ್ರಿ.ಶ.೧೧೦೫ರ ಮುದನೂರಿನ ಶಾಸನವು[೧೧೫] ಪ್ರಸ್ತಾಪಿಸಿದೆ. ಕ್ರಿ.ಶ.೧೨ನೇ ಶತಮಾನದ ಬಾಚಲಾಪುರ ಶಾಸನವು[೧೧೬] ಶ್ರೀಮನ್ಮದಿನೀರ ರಾಮೇಶ್ವರದೇವರ ಗದ್ದೆ ಎಂದು ಉಲ್ಲೇಖಿಸಿದೆ. ಬಹುಶಃ ಅದು ದೇವರಿಗಾಗಿ ಅಂದರೆ ದೇವರ ಹೆಸರಿನಲ್ಲಿಯೇ ಇರುವ ಗದ್ದೆಯಾಗಿರಬಹುದು. ಅದೇ ರೀತಿ ಎಲೆ ತೋಟವನ್ನು ಬನದೇವರ ನಿವೇದ್ಯಕ್ಕೆ ಬಿಟ್ಟ ಉಲ್ಲೇಖವು ಕ್ರಿ.ಶ.೧೦೫೪ರ ಕೆಂಬಾವಿ ಶಾಸನದಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು[೧೧೭].

ಪ್ರಸ್ತುತ ಯಾದಗಿರಿ ಜಿಲ್ಲಾ ಪ್ರದೇಶವು ಪ್ರತಿಶತ ೮೦ರಷ್ಟು ಎರೆ ಅಥವಾ ಕಪ್ಪು ನೆಲವನ್ನೇ ಹೊಂದಿರುವ ಪ್ರದೇಶ. ಆದ್ದರಿಂದ ಸಹಜವಾಗಿ ಈ ಪ್ರದೇಶದ ಭೂಮಿ ಸ್ವರೂಪ ಹಾಗೂ ಲಕ್ಷಣಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಹೆಚ್ಚಿನ ಸಂಖ್ಯೆಯ ಶಾಸನಗಳಲ್ಲಿ ಕರಿನೆಲೆ ಹಾಗೂ ಎರೆ ನೆಲ ಎಂಬ ಅರ್ಥಬರುವ ಪದಗಳನ್ನೇ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೨ನೆಯ ಶತಮಾನದ ತೇದಿಯ ತೀರ್ಥ ಗ್ರಾಮದ ಶಾಸನವು ಕರಿನೆಲದ ಬಗೆಗೆ ಪ್ರಸ್ತಾಪಿಸಿದೆ[೧೧೮]. ಅಲ್ಲದೇ ೧೧೦೦ರ ಐವೂರಿನ ಶಾಸನದಲ್ಲಿಯು[೧೧೯] ಕರಿಯ ನೆಲದ ಕುರಿತು ಉಲ್ಲೇಖವಿದೆ. ಕ್ರಿ.ಶ.೧೧೮೦ರ ತೇದಿಯ ಮುದನೂರಿನ ಶಾಸನದಲ್ಲಿ ಹೊರನೆಲ ಎಂಬ ವಿವರವುಂಟು[೧೨೦]. ಇದು ಬಹುಶಃ ಎರೆಯ ಶಬ್ದವನ್ನ ಸೂಚಿಸುತ್ತಿರಬಹುದು. ಕ್ರಿ.ಶ.೧೨೦೬ರ ಎಡೆಯಾಪುರ ಶಾಸನದಲ್ಲಿ[೧೨೧] ದೇವಾಲಯದ ಜೀರ್ಣೋದ್ಧಾರಕ್ಕಾಗಿ ಗೋಚಾರ ಭೂಮಿಯಾಗಿ ದಾನ ನೀಡಿದ ಉಲ್ಲೇಖವಿದೆ. ಗೋಚಾರ ಅಂದರೆ ಪಶುಪಾಲನೆ ಅಥವಾ ಪಶುಮೇಯಲು ಬಿಟ್ಟ ಭೂಮಿಯೆಂದು ಅರ್ಥವಾಗುತ್ತದೆ. ಬಹುಶಃ ಇದು ಆಕಳು ಮೇಯುವ ಜಾಗವಾಗಿರಬಹುದು. ಕ್ರಿ.ಶ.೧೦೧೭ರ ತಿಂಥಣಿ ಶಾಸನದಲ್ಲಿ[೧೨೨] ಕೃಷ್ಣಭೂಮಿ ಕ್ಷೇತ್ರಂ ಎಂದು ಉಲ್ಲೇಖಿಸಲಾಗಿದೆ. ಇದು ಕಪ್ಪು ಭೂಮಿಯನ್ನು ಸೂಚಿಸುತ್ತದೆ. ಅದೇ ರೀತಿ ಬಳಗದ್ದೆ ಮತ್ತು ಮಾಳಿಯಗದ್ದೆ[೧೨೩]. ಮೊರಡಿ(ಅಂದರೆ ಮರಡಿ ಅಥವಾ ಮಡ್ಡಿ ಭೂಮಿ)[೧೨೪] ಹಾಗೂ ಕ್ರಿ.ಶ.೧೧೯೭ರ ರಾಜನಕೋಳೂರಿನ ಶಾಸನದಲ್ಲಿ ಮರಳ ಮತ್ತರ[೧೨೫], ಭೂ ಪ್ರದೇಶದ ಉಲ್ಲೇಖಗಳನ್ನು ಕಾಣುತ್ತೇವೆ. ಹಂಪಾದೇವಿಯ ಮಾನ್ಯ ಎಂಬ ಉಲ್ಲೇಖವು ಐವೂರಿನ ಶಾಸನದಲ್ಲಿ ವ್ಯಕ್ತವಾಗಿದೆ[೧೨೬]. ಕ್ರಿ.ಶ.೧೧೬೭ರ ಮುದನೂರಿನ ಶಾಸನವು ಮಾಣಿಕೇಶ್ವರ ಮತ್ತರ ಕುರಿತು ಉಲ್ಲೇಖ ನೀಡುತ್ತದೆ[೧೨೭].

### ವ್ಯವಸಾಯ

ಈ ಪ್ರದೇಶದಲ್ಲಿ ಬಹುಶಃ ಮಳೆ ಆಧಾರಿತ ಬೇಸಾಯ ಹೆಚ್ಚಿನ ಪ್ರಮಾಣದಲ್ಲಿ ಪ್ರಾಚೀನ ಕಾಲದಲ್ಲಿಯೂ ಇದ್ದಂತಿದೆ. ಆದರೂ ನೀರಾವರಿ ಅಥವಾ ತೋಟದ ಬೆಳೆಗಳ ಉಲ್ಲೇಖವು ಯಥೇಚ್ಛವಾಗಿ ದಾಖಲಾಗಿವೆ. ಕಾರಣ ಈ ಪ್ರದೇಶವು ನವಶಿಲಾಯುಗ ಕಾಲದಿಂದಲೂ ಉತ್ತಮವಾದ ಬಾವಿ ನೀರಾವರಿ ಸೌಕರ್ಯವನ್ನು ಪ್ರಾರಂಭದಲ್ಲಿಯೇ ಒಳಗೊಳ್ಳುತ್ತಾ ಬಂದಿದೆ. ಈ ಕುರಿತು ಎರಡನೆಯ ಅಧ್ಯಾಯದಲ್ಲಿ ಸ್ಥೂಲವಾಗಿ ಪ್ರಸ್ತಾಪಿಸಲಾಗಿದೆ. ಈ ಪ್ರದೇಶದಲ್ಲಿ ಕಂಡಷ್ಟು ಕೆರೆ-ಬಾವಿಗಳು ಬಹುಶಃ ಹೈದ್ರಾಬಾದ್ ಕರ್ನಾಟಕದ ಯಾವ ಭಾಗದಲ್ಲಿಯೂ ಕಂಡುಬರಲಾರವು. ಇಂಥ ಅನುಕೂಲಗಳಿಗೆ ಬಹುಮುಖ್ಯ ಕಾರಣಗಳೆಂದರೆ

ಭೂರಚನಾ ಕಾಲಾವಧಿಯಲ್ಲಿ ಸ್ಥರಭಂಗಗೊಂಡ ಭೂಮಿಯಲ್ಲಿ ನೀರು ಶೇಖರಣೆ ಆಗುವುದಕ್ಕೆ ತುಂಬಾ ವ್ಯವಸ್ಥಿತವಾಗಿ ಈ ಪ್ರದೇಶದ ಭೂಮಿ ರಚನೆ ಆಗಿದೆ ಎಂದು ಭೂಗರ್ಭಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಹಾಗಾಗಿ ಈ ಪ್ರದೇಶದ ಪ್ರತಿ-ಗ್ರಾಮದ ಸ್ಥಳೀಯ ಚರಿತ್ರೆಯ ದಾಖಲೆಗಳಲ್ಲಿ ನೂರಾರು ಬಾವಿಯ ಉಲ್ಲೇಖಗಳು ಶಾಸನದಲ್ಲಿಯೂ ಹಾಗೂ ಜನರ ಮೌಖಿಕ ಪರಂಪರೆಯಲ್ಲಿಯೂ ಉಳಿದುಕೊಂಡು ಬಂದಿವೆ. ಆದ್ದರಿಂದ ಈ ಪ್ರದೇಶವು ಒಣ(ಮಳೆ ಆಧಾರಿತ) ಬೇಸಾಯದಷ್ಟೇ ನದಿಮಾತೃಕ(ನೀರಾವರಿ) ವ್ಯವಸ್ಥೆಯನ್ನು ಹೊಂದಿದೆ ಎಂದು ಅಭಿಪ್ರಾಯಿಸಬಹುದು. ಬೇಸಾಯದಲ್ಲಿ ಮುಖ್ಯವಾಗಿ ಜೋಳದ ಧಾನ್ಯವನ್ನು ಬೆಳೆಯುತ್ತಿದ್ದರು. ಕ್ರಿ.ಶ.೧೦೯೯ರ ಶಾಸನವು ಸುಟ್ಟಗ ಜೋಳದ ವಿವರ ನೀಡುತ್ತದೆ[೧೭೮].

ಈ ಪ್ರದೇಶದ ಶಿರವಾಳ, ಅಣಬಿ, ಹುರಸಗುಂಡಗಿ, ಸಂಗಮ, ಹಯ್ಯಾಳ ಬಿ. ಶೆಳ್ಳಗಿ, ಹೆಮ್ಮಡಗಿ, ತಿಂಥಣಿ, ಬೆಳಗುಂದಿ ಮುಂತಾದ ಗ್ರಾಮಗಳು ನದಿಯ ಪರಿಸರದಲ್ಲಿಯೇ ಇರುವಂಥ ಗ್ರಾಮಗಳು. ಅವುಗಳ ಕುರಿತು ಈಗಾಗಲೇ ಸ್ಥೂಲವಾಗಿ ಎರಡನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಕೃಷ್ಣಾ ಮತ್ತು ಭೀಮರಥಿ ಅಥವಾ (ಭೀಮಾ)ನದಿಯ ನೀರಿನಿಂದ ಈ ಭಾಗದ ವ್ಯವಸಾಯವು ಹೆಚ್ಚಿನ ಸಮೃದ್ಧಿಯಿಂದ ಬೆಳೆಯಲು ಕಾರಣವಾಗಿದೆ. ಆ ಎರಡು ನದಿಗಳ ಕುರಿತು ಶಾಸನಗಳಲ್ಲಿಯೂ ಉಲ್ಲೇಖಗಳುಂಟು. ಶಹಾಪುರ ತಾಲೂಕಿನ ಶೇಕಡಾ ೯೦ರಷ್ಟು ಭಾಗವು ಭೀಮಾನದಿಯ ಜಲಾನಯನ ಪ್ರದೇಶದಲ್ಲಿ ಬರುವಂಥದ್ದು. ಸುರಪುರದ ಕೆಲವು ಭಾಗವು(ಹುಣಸಗಿ ಪರಿಸರ) ಮಾತ್ರ ಕೃಷ್ಣಾನದಿಯ ಪರಿಸರದ ಲಾಭ ಪಡೆದಿದೆ. ಆದರೆ ಯಾದಗಿರಿ ತಾಲೂಕಿನ ಬಹುತೇಕ ಪ್ರದೇಶವು ಕೆರೆ-ಕಟ್ಟೆ ಮತ್ತು ಚಿಕ್ಕ ಪುಟ್ಟ ತೊರೆಗಳು, ಋತುಮಾನದಲ್ಲಿ ಹರಿಯುವ ನೀರಿನಿಂದ ಮಾತ್ರ ಈ ಭಾಗದ ವ್ಯವಸಾಯ ಚಟುವಟಿಕೆಗಳು ಜರುಗುತ್ತದೆ. ಬಹುಶಃ ಇಂಥ ಲಕ್ಷಣಗಳು ಪ್ರಾಚೀನ ಸಂದರ್ಭದಲ್ಲಿಯೂ ಇದ್ದಿರುವಂತಹವು. ಕ್ರಿ.ಶ.೧೦೩೪ರ ಅಣಬಿ ಶಾಸನವು[೧೭೯]. ಶ್ರೀಮಲ್ಲಿಕಾರ್ಜುನ ದೇವರಿಗೆ ತೊರೆಯ ಬಡಗದಡಿಯಲ್ಲಿ ಬಿಟ್ಟ ಭೂಮಿಯ ಬಗೆಗೆ ಉಲ್ಲೇಖಿಸುತ್ತದೆ.

ಕ್ರಿ.ಶ.೧೦೭೭ರ ಐವೂರಿನ ಶಾಸನವು[೧೮೦]. ಅಣ್ಣಮಗಾವುಂಡನ ಕೆರೆಯ ಉಲ್ಲೇಖ ನೀಡಿದೆ. ಈ ಕೆರೆಯ ಕೆಳಭಾಗದಲ್ಲಿ ಈಶ್ವರ ದೇವರ ಗುಡಿಯ ಉಲ್ಲೇಖ ಹಾಗೂ ಗದ್ದೆಯ ಬಗೆಗೆ ಪ್ರಸ್ತಾಪಿಸಿರುವ ವಿವರವು ದಾಖಲಾಗಿದೆ. ಇದೇ ಗ್ರಾಮದ ಕ್ರಿ.ಶ.೧೧೭೯ರ ಶಾಸನವು[೧೮೧] ಅಣ್ಣಮಗೆರೆ(ಅಣ್ಣಮಕೆರೆ) ಎಂದು ಉಲ್ಲೇಖಿಸಿದರೆ ಅದೇ ಗ್ರಾಮದ ಕ್ರಿ.ಶ.೧೧೮೦ರ ತೇದಿಯ ಶಾಸನವು[೧೮೨] ಹೊಂಬಿಸೆಟ್ಟಿಯ ಕೆರೆಯುವಂದ ಕರೆಯನೆಲ ಎಂದು ನಮೂದಿಸಿದೆ. ಅಲ್ಲದೇ ಮುಖ್ಯವಾಗಿ ಇದೇ ಶಾಸನದಲ್ಲಿ ದಂಡನಾಯಕನ ಕೆರೆ ಎಂಬ ಉಲ್ಲೇಖ ತುಂಬಾ ಮಹತ್ವದ್ದಾಗಿ ತೋರುತ್ತದೆ. ಕ್ರಿ.ಶ.೧೧೨೭ರ ಕಕ್ಕೇರಿ ಶಾಸನವು ಪಡವಲ ಕೆರೆಯೊಳಗೆ ಕಕ್ಕೇಶ್ವರ ದೇವರ ಕೆಯ್ಯಾ(ಭೂಮಿ)[೧೮೩] ಎಂದು ಪ್ರಸ್ತಾಪಿಸಿದರೆ ಕ್ರಿ.ಶ.೧೨ನೆಯ ಶತಮಾನದ ತೇದಿಯ ಐವೂರು ಶಾಸನವು ಶ್ರೀಸ್ವಯಂಭುದೇವರ ಕೆರೆ ಎಂದು ಉಲ್ಲೇಖಿಸಿದೆ[೧೮೪] ಇವೆರಡು ವಿವರಗಳು ಬಹುಶಃ ದೇವರಿಗಾಗಿ ಸಂಬಂಧಿಸಿದ ಕೆರೆಗಳನ್ನು ಪ್ರಸ್ತಾಪಿಸಿದಂತೆ

ಕಂಡುಬರುತ್ತವೆ. ಮಂಗಿಯಕೆರೆ[೧೮೫] ಹಾಗೂ ಬಸವನಕೆರೆ[೧೮೬]. ಮೇಲೆ ಕಬ್ಬೇಶ್ವರದೇವರ ಗುಡಿಯನ್ನು ಕಟ್ಟಿರುವ ಉಲ್ಲೇಖಗಳು ದಾಖಲಾಗಿವೆ.

ಗ್ರಾಮಗಳ ಹೆಸರಿನಲ್ಲಿಯೇ ಕೆರೆ ಸೇರಿಕೊಂಡಿರುವ ಎರಡು ಗ್ರಾಮಗಳನ್ನು ಈ ಜಿಲ್ಲಾ ಪರಿಸರದಲ್ಲಿ ಕಾಣುತ್ತೇವೆ. ಅರಕೆರೆ ಎಂಬ ಹೆಸರಿನ ಗ್ರಾಮ ಸುರಪುರ ತಾಲೂಕಿನ ಜಾಗೀರ ಅರಕೆರೆ ಆಗಿದೆ. ಇದನ್ನು ಶಾಸನಗಳಲ್ಲಿ ತುಂಬಾ ಪವಿತ್ರಭಾವನೆಗಳಿಂದ ದಾಖಲಿಸಲಾಗಿದೆ. ಯಾದಗಿರಿ ತಾಲೂಕಿನಲ್ಲಿರುವ ಅರಕೆರೆ ಗ್ರಾಮವು ಬಹುಶಃ ಅಲ್ಲಿರುವ ಕೆರೆಯಿಂದಲೇ ಆ ಹೆಸರು ಬಂದಿರಬಹುದು. ಕೆಂಬಾವಿ, ಐವೂರು, ಯರಗೋಳ, ಅರಕೇರಿ, ಮುದನೂರು, ಸಗರ, ಕಡೇಚೂರು ಮುಂತಾದ ಗ್ರಾಮಗಳು ಹೊಂದಿರುವ ಕೆರೆಗಳು ತುಂಬಾ ವಿಶಾಲವಾಗಿ ನಿರ್ಮಾಣವಾಗಿವೆ. ಅವುಗಳನ್ನು ಈಗಲೂ ಕಾಣುತ್ತೇವೆ.

ಕ್ರಿ.ಶ.೧೧೪೪ರ ತೇದಿಯ ಹಗರಟಗಿ ಶಾಸನವು ಬೋವಕೆರೆ ಮತ್ತು ಬೋವಗೆರೆ, ಕ್ರಿ.ಶ.೧೨೨೯ರ ಕಾಲದ ಹಗರಟಗಿಯ ಇನ್ನೊಂದು ಶಾಸನವು ಸಗರ ಸಂಕನಕೆರೆ ಮೇರೆ ಎಂಬ ಉಲ್ಲೇಖವನ್ನು ನೀಡುತ್ತದೆ. ಬಹುಶಃ ಆ ವಿವರವು ಆ ಪ್ರದೇಶದ ವಿಸ್ತಾರವನ್ನು ಸೂಚಿಸುತ್ತದೆಂದು ತಿಳಿಯಬಹುದು. ಇದೇ ಶಾಸನದಲ್ಲಿ ಸಂಪಿಗೆಯ ಮಡು ಎಂಬ ಉಲ್ಲೇಖವುಂಟು. ಕ್ರಿ.ಶ.೧೧೦೫ರ ಧರಿಯಾಪುರ ಶಾಸನವು[೧೮೭]. ಶ್ರೀ ಕಾಳಾಮುಖ ತಪೋಧನಾಗ್ರಗಣ್ಯರಪ್ಪ ಕೆಸ್ಸಿಲೆಯ ಶಿಗತಗಿಸರ ದೇವರು ಕಟ್ಟಿಸಿದ ಕೆರೆಯ ಎಂಬ ಉಲ್ಲೇಖ ನೀಡುತ್ತದೆ. ಅಲ್ಲದೇ ಇದೇ ಶಾಸನದಲ್ಲಿ ಹಳ್ಳದಾ ಕೆರೆಯಾಳದವ್ವೆ ಮತ್ತು ಕಬ್ಬಿಲೆಯಾ ಹೊಲದ ಕೆರೆಗಳ ಕುರಿತು ವಿವರಗಳು ದಾಖಲಾಗಿವೆ. ಪ್ರಾಯಶಃ ಈ ಶಾಸನದ ವಿವರ ನಮಗೆ ತುಂಬಾ ಮುಖ್ಯವೆನಿಸುತ್ತದೆ. ಕಾರಣ ಕಾಳಮುಖ ಯತಿಗಳು ಸಹ ಕೆರೆಕಟ್ಟಿಸುವಂತಹ ಸಾಮಾಜಿಕ ಚಟುವಟಿಕೆಯಲ್ಲಿ ಭಾಗವಹಿಸುತ್ತಿದ್ದರು ಎಂದು ತಿಳಿಯಲು ಈ ಆಕರವು ತುಂಬಾ ಮುಖ್ಯವಾದುದು ಎಂದು ಕಂಡುಬರುತ್ತದೆ.

ನದಿ ಅಥವಾ ನೀರಿನ ಆಶ್ರಯದ ಬೇಸಾಯಕ್ಕೆ ಮುಖ್ಯ ಮಾಧ್ಯಮವಾಗಿರುವ ಬಾವಿಯ ನೀರಾವರಿ ಎಲ್ಲ ಕಾಲಕ್ಕೂ ಹೆಚ್ಚಿನ ಮಹತ್ವ ಪಡೆದಿದೆ. ಈ ಪ್ರದೇಶದಲ್ಲಿರುವ ಕೆಲವು ಮುಖ್ಯ ಗ್ರಾಮಗಳಿಗೆ ಬಾವಿಯ ಹೆಸರಿನ ಜೋಡಣೆಯಿದೆ. ಉದಾ: ಸುರಪುರ ತಾಲೂಕಿನ ಕೆಂಬಾವಿ ಮತ್ತು ಯಾದಗಿರಿ(ಏತಗಿರಿ) ಹೆಸರುಗಳಲ್ಲಿ ಬಾವಿಯ ಉಲ್ಲೇಖ ಸೇರಿಯೇ ಅವುಗಳ ಹೆಸರು ಅನಾವರಣಗೊಂಡಿವೆ.

ಕ್ರಿ.ಶ.ಸುಮಾರು ೧೦೪೦ರ ಐವೂರಿನ ಶಾಸನವು[೧೮೮]. ಅಲ್ಲಿನ ಸ್ವಯಂಭು ದೇವರ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಖಾಲಿ ಜಾಗೆ ಹಾಗೂ ಬಾವಿ ಬಿಟ್ಟ ಉಲ್ಲೇಖವನ್ನು ನೀಡುತ್ತದೆ. ಕ್ರಿ.ಶ.೧೨೬೫ರ ಯಾಳಗಿ ಶಾಸನದಲ್ಲಿ[೧೮೯]. ಸಂಜೆವೇಳೆಯ ಬಾವಿ ಮತ್ತು ಹೆಸರಬಾವಿ ಎಂಬ ಉಲ್ಲೇಖವಿದೆ. ಬಹುಶಃ ಈ ಬಾವಿಗಳಿಂದ ನೀರು ತಂದು ಪೂಜೆ ಮಾಡುವ ವೇಳೆ(ಕಾಲ) ಸಂಜೆಗೆ ಮಾತ್ರ ಸೀಮಿತವಾಗಿತ್ತೆ? ಹಾಗಾಗಿ ಹೀಗೆ ಕರೆದಿರಬಹುದೇ? ಕ್ರಿ.ಶ.೧೦೯೯ರ ಮುದನೂರು ಶಾಸನದಲ್ಲಿ[೧೯೦]. ಜಂಸವ(ಜನ್ನದ)

ಬಾವಿಯ ತೆಂಕ ತೋಂಟ(ತೋಟ) ಎಂಬ ಉಲ್ಲೇಖವು ಸ್ವಲ್ಪ ವಿಶೇಷವಾಗಿ ಕಂಡುಬರುತ್ತದೆ. ಇದೇ ರೀತಿಯ ಉಲ್ಲೇಖವು ಎಳರಾಮೆ(ಯಡ್ರಾಮಿ-ಜೇವರ್ಗಿ ತಾಲೂಕು) ಹಾಗೂ ಸಿರವಾಳದಲ್ಲಿರುವ ಶಾಸನಗಳಲ್ಲಿ ಉಲ್ಲೇಖಗಳು ಕಂಡು ಬಂದಿದೆ. ಪ್ರಾಯಶಃ ಈ ವಿಚಾರವನ್ನು ಹೀಗೆ ವಿವರಿಸಬಹುದೇ ಅಂದರೆ ಕಾಳಾಮುಖ ಪರಂಪರೆಯಲ್ಲಿದ್ದ ಸಿಂಹಪರ್ಷೆಯಿಂದ ಒಡೆದು ಇನ್ನೊಂದು ಪಂಗಡವಾದ ಪಾಶುಪತದಲ್ಲಿದ್ದ ನಾಥದ ಕಡೆಗೆ ವಾಲಿದ ಸಿದ್ಧರೇವಣ ಅಥವಾ ರೇಣಸಿದ್ಧರ ಶಿಷ್ಯ ಬ್ರಹ್ಮರಾಶಿ ಪಂಡಿತರು ಯಾವ ಊರಿನಲ್ಲಿ ದಾನ ಪಡೆದಿದ್ದಾರೆ ಅಥವಾ ಆ ಊರಿನಲ್ಲಿ ತಮ್ಮ ಕ್ಷೇತ್ರಕಾರ್ಯ ಇಟ್ಟುಕೊಂಡುವರಾಗಿದ್ದರೋ ಆಯಾ ಊರಿನಲ್ಲಿ ಮಾತ್ರ ಈ ಬಾವಿಯ ಉಲ್ಲೇಖ ಬರುತ್ತದೆ. ಉದಾ. ಮುದನೂರು, ಯಡ್ರಾಮಿ, ಸಿರವಾಳ ಹಾಗೂ ಹಗರಟಗಿ ಗ್ರಾಮಗಳ ವಿವರಗಳಲ್ಲಿ ಮಾತ್ರ ಜನ್ನದ ಬಾವಿಯ ಕುರಿತು ಉಲ್ಲೇಖಗಳು ಗಮನಾರ್ಹವೆನಿಸುತ್ತವೆ. ಆದರೂ ಈ ಕುರಿತು ಇನ್ನೂ ಸ್ಪಷ್ಟವಾದ ಅಧ್ಯಯನಗಳ ಜರೂರು ಇದ್ದೆ ಇದೆ.

ಕ್ರಿ.ಶ.೧೨೭೯ರ ಹಗರಟಗಿ ಶಾಸನದಲ್ಲಿ ಸಿಡಿಲಬಾವಿಯ ರಾಮನಾಥ ದೇವರಲ್ಲಿ ಭಿನ್ನಯಿಸಿಕೊಂಡು ದಾನ ನೀಡಿರುವ ಮಾಹಿತಿ ದಾಖಲಾಗಿದೆ[೧೧]. ಈ ಬಾವಿಯು ಹಗರಟಗಿ ಗ್ರಾಮದ ಪೂರ್ವದಿಕ್ಕಿನ ಹಳ್ಳದ ಸಮೀಪ ಈವರೆಗೂ ಕಂಡುಬರುತ್ತಿರುವುದನ್ನು ಗಮನಿಸಬಹುದು. ಕ್ರಿ.ಶ.೧೦೨೮ರ ಕಾಲದ ಮದ್ರಕಿ ಶಾಸನವಂತೂ ತುಂಬಾ ಅದ್ಭುತವಾದ ಮಾಹಿತಿ ನೀಡುತ್ತದೆ. ನಾಮಗಾವುಂಡನು ಕಟ್ಟಿದ ಈ ಬಾವಿಗೆ ರಾಜಾಧಿರಾಜ ಎರಡನೆಯ ಜಗದೇಕಮಲ್ಲನಿಂದ ಹಿಡಿದು ಮಹಾಮಂಡಳೇಶ್ವರ ರೇವರಸ್, ಮಹಾಗ್ರಹಾರದ ಮಹಾಜನರು, ಊರೊಡೆಯರು ಸೇರಿ ದಾನ ಬಿಟ್ಟ ಉಲ್ಲೇಖವಿದೆ. ಅದನ್ನು ಶಾಸನಗಳಲ್ಲಿ ಧರ್ಮದ ಬಾವಿಯೆಂದು ಹಾಗೂ ಅದಕ್ಕೆ ಸಂಬಂಧಿಸಿದ ತೋಟಕ್ಕೆ ಧರ್ಮ್ಮೇಂತಿ ತೋಟವೆಂದು ಉಲ್ಲೇಖಿಸಲಾಗಿದೆ. ಆ ಕಾಲದಲ್ಲಿ ನಿರ್ಮಾಣವಾದ ಕೆಲವೇ ಕೆಲವು ಬಹುಸುಂದರ ಬಾವಿಗಳಲ್ಲಿ ಈವರೆಗೂ ಉಳಿದುಕೊಂಡು ಬಂದಿರುವ ಬಾವಿಗಳಲ್ಲಿ ಇದು ಕೂಡಾ ಒಂದಾಗಿದೆ ಎಂದು ಗಮನಿಸಬಹುದು.

ಯಾದಗಿರಿ ಜಿಲ್ಲೆಯ ಶಿರವಾಳ, ಮದ್ರಕಿ, ಹಗರಟಗಿ, ಮುದನೂರು ಹಾಗೂ ಬೆಳಗುಂದಿ ಗ್ರಾಮಗಳು ಆ ಕಾಲದಲ್ಲಿಯೇ ನಿರ್ಮಾಣವಾಗಿರುವ ಬಾವಿಗಳನ್ನು ಇನ್ನು ಉಳಿಸಿಕೊಂಡು ಬಂದಿವೆ. ಏವೂರು ಸಿರಿವಾಳ ಹಾಗೂ ಹಗರಟಗಿಯಲ್ಲಿರುವ ಬಾವಿಗಳಂತೂ ದೃಶ್ಯಕಾವ್ಯವನ್ನೇ ಸೃಷ್ಟಿಸಿದಂತೆ ತೋರುತ್ತವೆ. ಏತಗಿರಿ(ಯಾದಗಿರಿ) ಬೆಟ್ಟದ ಮೇಲಿರುವ ಹಾಗೂ ಗುರುಸುಣಗಿಯ ಗುಡ್ಡದಲ್ಲಿರುವ ಬಾವಿಗಳಿಂದ ಸುರಪುರ ಪಾಳೆಯಗಾರರು ದಿನನಿತ್ಯದ ನೀರನ್ನು ಕುಡಿಯಲು ಮಾತ್ರ ತೆಗೆದುಕೊಂಡು ಹೋಗುತ್ತಿದ್ದರೆಂಬ ಪ್ರತೀತಿಗಳು ಇನ್ನು ಜನ ಮಾನಸದಲ್ಲಿ ಉಳಿದು ಬಂದಿವೆ. ಶಾಸನದಲ್ಲಿ ಉಲ್ಲೇಖವಾದ ಬಬುಲೆಯ ಕಟ್ಟೆ, ಉಬ್ಬುಲಕಟ್ಟೆ, ಬಬ್ಬುಲೆಗಟ್ಟೆ ಇವು ಏನನ್ನೂ ಸೂಚಿಸುತ್ತವೆ ಎಂಬ ಕುತೂಹಲವುಂಟಾಗುತ್ತದೆ. ಬಹುಶಃ ಇವು ನೀರಿನ ಆಶ್ರಯವನ್ನು ಇಟ್ಟುಕೊಂಡ ಕಟ್ಟೆ ಅಥವಾ ಗಟ್ಟೆಗಳಾಗಿರಬಹುದೇ ಎಂಬುದು ಯೋಚಿಸಬೇಕಾದ ವಿಷಯವಾಗಿದೆ.

ಭೂಮಿಯ ಒಡೆತನ ಅಥವಾ ಸ್ವಾಮ್ಯ ಬಹುಶಃ ಕೆಲವೊಬ್ಬರಿಗಾದರೂ ನೇರವಾಗಿ ಅವರಿಗೆ ಸಂಬಂಧಿಸಿದ್ದಾಗಿತ್ತೆಂದು ಹೇಳಬಹುದು. ಕಾರಣ ಈ ಭಾಗದ ಶಾಸನದಲ್ಲಿ ಊರೊಡೆಯರ ಮಾನ್ಯ, ದೇವರ ಮಾನ್ಯ, ಕೆರೆಯ ಮಾನ್ಯ, ದಂಡನಾಯಕ ಮಾನ್ಯ, ದೈವದ ಅಥವಾ ಆ ಜಾತಿಗೆ ಸಂಬಂಧಿಸಿದ ಪಟ್ಟ ಒಡೆತನದ ಕುರಿತು ಶಾಸನಗಳು ಉಲ್ಲೇಖಿಸುತ್ತವೆ. ಇದು ಪ್ರಾಯಶಃ ಅವರು ಆ ಭೂಮಿಯ ಮೇಲೆ ನೇರ ಒಡೆತನ ಹೊಂದಿದ್ದರಿಂದಲೇ ಈ ರೀತಿಯ ವಿವರವು ದಾಖಲಾಗಲು ಸಾಧ್ಯವಾಗಿದೆಯೆಂದು ಅಭಿಪ್ರಾಯಿಸಬಹುದು.

ಭೂಮಿಯನ್ನು ಕೊಂಡು ದಾನವಾಗಿ ಬಿಟ್ಟ ಉಲ್ಲೇಖಗಳು ಈ ಪ್ರದೇಶದ ಶಾಸನಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಉಲ್ಲೇಖವಾಗಿರುವುದನ್ನು ಕಾಣುತ್ತೇವೆ. ಕ್ರಿ.ಶ.೧೧೬೬ರ ತೇದಿಯ ಹಗರಟಗಿ ಶಾಸನದಲ್ಲಿ[೧೨] ಚಾಕಲದೇವಿಯು ಮಲ್ಲದೇವರಸನಿಂದ ಇಪ್ಪ್ತು ಮತ್ತಾರು ಭೂಮಿಯನ್ನು ಕೊಂಡು ತ್ರಿಕೂಟೇಶ್ವರ ದೇವರಿಗೆ, ಭೈರವದೇವರಿಗೆ ಹಾಗೂ ಗವರೇಶ್ವರ ದೇವರಿಗೆ ದತ್ತಿ ಬಿಟ್ಟ ಉಲ್ಲೇಖವಿದೆ. ಈ ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳಲ್ಲಿಯೇ ಸದ್ಯ ಅತ್ಯಂತ ಪ್ರಾಚೀನ ತೇದಿಯದೆಂದು ತಿಳಿಯಬಹುದಾದ ಸಿರಿವಾಳದ ಕ್ರಿ.ಶ.೯೩೯ರ ತೇದಿಯ ಶಾಸನದಲ್ಲಿದೆ. ಇದೇ ರೀತಿಯ ಉಲ್ಲೇಖವಿರುವುದನ್ನು ಗಮನಿಸಬಹುದು.

**ಪ್ರಾಣಿ ಸಂಪತ್ತು**

ವ್ಯವಸಾಯದ ಅವಿಭಾಜ್ಯ ಭಾಗದವೆಂದರೆ ಪ್ರಾಣಿ ಸಂಪತ್ತು ಎಂದು ತಿಳಿಯಬಹುದು. ಪ್ರಾಣಿಗಳು(ಎತ್ತು, ಎಮ್ಮೆ ಮತ್ತು ಕೋಣ) ಇವು ಕೆಲಸ ಕಾರ್ಯಗಳಲ್ಲೂ ಉಪಯೋಗವಾಗುತ್ತವೆ. ಅಲ್ಲದೇ ಇತರ ಉತ್ಪಾದಕ ಚಟುವಟಿಕೆಗಳಿಗೆ ಹಾಗೂ ಸಾರಿಗೆ ಸೌಕರ್ಯಕ್ಕೂ ಅನುಕೂಲವಾಗುತ್ತವೆ. ಗೋವುಗಳನ್ನು ಬೆಳೆಸುವುದು ಹಾಗೂ ಕಾಯ್ದುಕೊಳ್ಳುವುದು ರಾಜಧರ್ಮದಲ್ಲಿ ಒಂದಾದ ಪ್ರಮುಖ ಅಂಶವಾಗಿತ್ತು.

ಈ ಪ್ರದೇಶದಲ್ಲಿರುವ ಶಾಸನಗಳನ್ನು ಗಮನಿಸಿ ಅಭಿಪ್ರಾಯಪಡುವುದಾದರೆ ಪ್ರಾಣಿಗಳನ್ನು ಹೆಚ್ಚಾಗಿ ಒಕ್ಕಲುತನ ಹಾಗೂ ಸಾರಿಗೆ ಸಂಪರ್ಕಗಳಲ್ಲಿ ಹೆಚ್ಚಾಗಿ ಬಳಸಿಕೊಳ್ಳುತ್ತಿದ್ದರೆಂಬುದು ವಿಧಿತವಾಗುತ್ತದೆ. ಏವೂರು, ಹಗರಟಗೆ, ಮುದನೂರು ಹಾಗೂ ಹಗರಟಗಿ ಗ್ರಾಮದ ಶಾಸನಗಳಲ್ಲಿ ಕೋಣ, ಎತ್ತು ಹಾಗೂ ಕತ್ತೆಯ ಬಗೆಗೆ ಹಾಗೂ ಅವು ವ್ಯಾಪಾರ ಚಟುವಟಿಕೆಯಲ್ಲಿ ಭಾಗವಹಿಸಿದ್ದ ಸಲುವಾಗಿ ಅವುಗಳ ಉಲ್ಲೇಖಗಳನ್ನು ನೋಡುತ್ತೇವೆ[೧೩].

ಕ್ರಿ.ಶ.೧೧೨೫ರ ಏವೂರು ಶಾಸನವು ಗೋಸಹ ಪ್ರವದಃ ಎಂಬ ಉಲ್ಲೇಖ ಹೊಂದಿರುವುದನ್ನು ಕಾಣುತ್ತೇವೆ[೧೪]. ಕ್ರಿ.ಶ.೧೦೫೪ರ ಕೆಂಬಾವಿ ಶಾಸನವು ಸ್ವಾನಂಗಳ್ದೇಭಚಾಣ್ಡಾಗಳಂ ಎಂಬ ಉಲ್ಲೇಖ ನೀಡುತ್ತದೆ. ಸ್ವಾನಂ(ಶ್ವಾನ)ಗಳ್ದೇಭವ ಬಹುಶಃ ಸೀಳುನಾಯಿ ಕುರಿತು ಉಲ್ಲೇಖಿಸಿದೇ ಎಂಬ ವಿಚಾರವನ್ನು ಯೋಚಿಸಬೇಕಾಗಿದೆ. ಕ್ರಿ.ಶ.೧೦೭೧ರ ತೇದಿಯ ಸಗರ ಶಾಸನವು[೧೫] ಸಹ ಕೋಣ ಮತ್ತು ಕತ್ತೆಯ ಬಗೆಗೆ ವಿವರಗಳನ್ನು ನೀಡುವುದು. ಸುರಪುರ ತಾಲೂಕಿನಲ್ಲಿರುವ ಇತಿಹಾಸ ಪ್ರಸಿದ್ಧ ಹೆಮ್ಮಡಗಿಯನ್ನು

ಶಾಸನಗಳಲ್ಲಿ ಮೊದಲ ಮೊದಲ ಎಂಮ್ಮೆವಾಡಿಗೆ ಅಥವಾ ಎಮ್ಮವಾಡಿಗಿ ಹಾಗೂ ಹೆಮ್ಮಡಗಿ ಎಂಬ ಹೆಸರಿನಿಂದ ಉಲ್ಲೇಖಿಸಿರುವುದನ್ನು ಗಮನಿಸಬಹುದು[೧೯೬] ಅಲ್ಲದೇ ಪ್ರಾಣಿಗಳು ನಮ್ಮ ಬದುಕಿನಲ್ಲಿ ತುಂಬಾ ಪವಿತ್ರವಾದ ಸ್ಥಾನ ಪಡೆದಿದ್ದವು ಬ್ರಾಹ್ಮಣರಿಗೆ ಕೊಟ್ಟ ದಾನವನ್ನು ಪ್ರತಿಪಾಲಿಸದಿದ್ದರೆ ಸಾಸಿರ ಕವಿಲೆ(ಗೋವಿ) ಕೊಂದ ಹಾಗು ಕರಿಕರೇಣು(ಹೆಣ್ಣಾನೆ) ಹಾಗೂ ಗೋಸಹಪ್ರವಧಃ(ಕೊಂದ) ಪಾಪಕ್ಕೆ ಗುರಿಯಾಗುತ್ತಿರೆಂದು ಕ್ರಿ.ಶ.೧೧೨೫ರ ಏವೂರು ಶಾಸನದಲ್ಲಿ ದಾಖಲಾಗಿದೆ[೧೯೭].

**ಉತ್ಪಾದನೆಯ ಮಾಧ್ಯಮಗಳು**

ಅರ್ಥ ವ್ಯವಸ್ಥೆಯಲ್ಲಿ ಭೂಮಿಗಿರುವಷ್ಟು ಪ್ರಾಧಾನ್ಯ ಅಥವಾ ಮಹತ್ವ ಉತ್ಪಾದನಾ ವಲಯಕ್ಕೆ ಇರುತ್ತದೆ. ಕೃಷಿ ಭೂಮಿಯಿಂದ ಅಥವಾ ಕಚ್ಚಾ ಮೂಲವಸ್ತು ಸಿದ್ಧರೂಪ ಪಡೆಯಲು ಕೈಗಾರಿಕೆ ಅಥವಾ ತಯಾರಿಕಾ ಕೇಂದ್ರ ಬೇಕೆಬೇಕು. ಅವಾಗಲೇ ವಸ್ತುಗಳಿಗೂ ಮಹತ್ವ ಹಾಗೂ ಬೆಲೆ ಜಾಸ್ತಿಯಾಗುವುದು. ಹಾಗಾಗಿ ಉತ್ಪನ್ನ ಹಾಗೂ ಉತ್ಪಾದನೆಯ ಚಟುವಟಿಕೆಗಳು ಒಂದನ್ನು ಬಿಟ್ಟು ಇನ್ನೊಂದು ಇರಲಾರವೆಂದು ಅಭಿಪ್ರಾಯಿಸಬಹುದು. ಪ್ರಾಚೀನ ಕಾಲದಲ್ಲಿ ಮುಖ್ಯವಾಗಿ ಎಣ್ಣೆ ಉತ್ಪಾದನೆ, ಬಟ್ಟೆ ತಯಾರಿಕೆ, ದಿನನಿತ್ಯ ಉಪಯೋಗಿ ಉಪ್ಪು, ಸಕ್ಕರೆ ಹಾಗೂ ಬೆಲ್ಲಗಳ ತಯಾರಿಕೆ ವಿವರ ಕುರಿತು ಹೆಚ್ಚಿನ ಶಾಸನಗಳು ಉಲ್ಲೇಖಿಸುತ್ತವೆ.

**ಗಾಣ**

ವೃತ್ತಿ ಸಮುದಾಯಗಳಲ್ಲಿಯೇ ಆ ಕಾಲದಲ್ಲಿ ಹೆಚ್ಚು ಪ್ರಸಿದ್ಧಿ ಪಡೆದ ಜನಾಂಗವೆಂದರೆ ತೆಲ್ಲಿಗ ಅಥವಾ ಗಾಣಿಗರೆಂದರೆ ತಪ್ಪಾಗಲಾರದು. ಅವರನ್ನು ಉಲ್ಲೇಖಿಸಿದ ಶಾಸನಗಳೇ ಇಲ್ಲ ಎಂದರೆ ತಪ್ಪಾಗಲಾರದು. ದಿನನಿತ್ಯದ ಅಡುಗೆ ಹಾಗೂ ಆಹಾರೋತ್ಪನ್ನಕ್ಕಾಗಿ ಎಣ್ಣೆ ಬೇಕಾಗುತ್ತಿತ್ತು. ಅಲ್ಲದೇ ದೇವರು ನಂದಾದೀಪಕ್ಕಾಗಿ ದಾನಕೊಟ್ಟ ಉಲ್ಲೇಖಗಳೇ ಶಾಸನಗಳಲ್ಲಿ ಅಗಣಿತ ಸಂಖ್ಯೆಯಲ್ಲಿ ದಾಖಲಾಗಿವೆ. ಈ ವೃತ್ತಿಯ ಸಮುದಾಯದವರನ್ನು ಗಾಣಿಗ, ತೆಲ್ಲಿಗ ಎಂಬ ಹೆಸರುಗಳಿಂದ ಉಲ್ಲೇಖಿಸಲಾಗಿದೆ. ಕನ್ನೆಳ್ಳಿಯ ಕ್ರಿ.ಶ.೧೦೭೬ರ[೧೯೮] ಮುದನೂರಿನ ಕ್ರಿ.ಶ.೧೧೮೨ರ[೧೯೯] ಅದೇ ಗ್ರಾಮದ ಕ್ರಿ.ಶ.೧೧೨೯[೨೦೦] ತೇದಿಯ ಶಾಸನಗಳಲ್ಲಿ ಗಾಣದವರ ಕುರಿತು ಉಲ್ಲೇಖವಿದೆ.

ಈ ಸಮುದಾಯವು ಸಹ ಸಂಸ್ಥೆ ಅಥವಾ ವೃತ್ತಿ ಸಂಘಗಳನ್ನು ಕಟ್ಟಿಕೊಂಡಿರುವ ವಿವರಗಳು ದಾಖಲಾಗಿವೆ. ಕ್ರಿ.ಶ.೧೧೮೨ರ ಮುದನೂರು ಶಾಸನವು ತೆಲ್ಲಿಗ ಪೈಜೇಮೆ ಎಂಬ ಉಲ್ಲೇಖವನ್ನು ನೀಡುತ್ತದೆ[೨೦೧]. ಇದು ಬಹುಶಃ ಆ ಸಮುದಾಯಕ್ಕೆ ಸಂಬಂಧಿಸಿದ ಸಂಘದ ಕುರಿತು ತಿಳಿಸುತ್ತದೆ ಎಂಬ ಅಭಿಪ್ರಾಯಗಳಿವೆ. ಇದೇ ಶಾಸನದಲ್ಲಿ ಉಲ್ಲೇಖವಾದ ಕೆಂಬಾವಿಯ ಕೇಶಿಯಣ್ಣ ಎಂಬುವನು ಶ್ರೀರಾಮದತ್ತಿ ಸರ್ವನಮಸ್ಯಾದ ಮುದಿನೀರಿನ ಅಗ್ರಹಾರದಲ್ಲಿದ್ದ ಲಕ್ಷ್ಮಣೇಶ್ವರ ದೇವರ ನಂದಾದೀವಿಗೆಯ ಎಣ್ಣೆಗಾಗಿ ಶಿಲಾಗಾಣ ಮಾಡಿಕೊಟ್ಟನೆಂಬ ಉಲ್ಲೇಖವಿದೆ. ಈ ಶಾಸನವನ್ನು[೨೦೨] ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದುಬರುವ ಸಂಗತಿ ಏನೆಂದರೆ ಬಹುಶಃ ಮುದನೂರಿನ ಪ್ರತಿಯೊಂದು

ದೇವಾಲಯಕ್ಕೂ ಒಂದು ಶಿಲಾಗಾಣ ಇದ್ದವು ಎಂದು ಮನವರಿಕೆಯಾಗುತ್ತದೆ. ಶ್ರೀರಾಮನಾಥ ದೇವರ ಶಿಲಗಾಣದ ಕುರಿತು ಸಹ ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಮುದನೂರು, ಕೆಂಬಾವಿ, ಸಗರ, ಸಿರಿವಾಳದಲ್ಲಿರುವ ದೇವಾಲಯಗಳ ನಂದಾದೀಪಕ್ಕಾಗಿ ಎಣ್ಣೆ ದಾನ ನೀಡಿದ ಉಲ್ಲೇಖಗಳು ಸಾಕಷ್ಟು ಸಂಖ್ಯೆಯಲ್ಲಿ ನಮೂದುಗೊಂಡಿವೆ.

ಎಣ್ಣೆ ತೆಗೆಯುವ ಗಾಣದ ಸ್ಥಳ ವ್ಯಾಪಾರದ ಸ್ಥಳವೂ ಆಗಿರುತ್ತಿತ್ತು. ಅಂದರೆ ಉತ್ಪಾದನೆ, ವಿನಿಮಯ ಒಂದೇ ಕಡೆ ನಡೆಯುತ್ತಿದ್ದವು ಎಂಬ ವಿವರಗಳು ದಾಖಲಾಗಿವೆ[೨೦೩]. ಅದೇ ರೀತಿಯ ಕೆಲವು ಉಲ್ಲೇಖಗಳು ಈ ಪ್ರದೇಶದ ಶಾಸನಗಳಲ್ಲಿ ಲಭ್ಯವಾಗಿವೆ. ಕ್ರಿ.ಶ.೧೧೦೫ರ ಏವೂರಿನ ಶಾಸನವು[೨೦೪] ದೇವರ ನಂದಾದೀವಿಗೆಗೆ ನಡೆವ ಗಾಣದ ಮನೆ ಹಾಗೂ ಉಳಿದ ಮೂರು ಗಾಣದ ಮನೆ ಕುರಿತು ಉಲ್ಲೇಖಿಸಿವೆ.

ಕ್ರಿ.ಶ.೧೦೯೯ರ ಮುದನೂರಿನ ಶಾಸನವು[೨೦೫] ದೇವರ ಕೇರಿಯೊಳಗಣ ಗಾಣವೊಂದು ಅಂಗಡಿ ಎಂಬ ವಿಶೇಷ ಉಲ್ಲೇಖವನ್ನು ನೀಡುತ್ತದೆ. ಕ್ರಿ.ಶ.೧೨೦೮ರ ತೇದಿಯ ಹೋತಗಲ್ ಶಾಸನವು[೨೦೬] ಗಾಣದಲ್ಲಿ ಸೊಂಟಿಗೆ ಎಣ್ಣೆ ಬಿಟ್ಟ ಉಲ್ಲೇಖ ನೀಡಿದರೆ ಕ್ರಿ.ಶ.೧೭೮೯ರ ತೇದಿಯ ಸಗರ ಶಾಸನದಲ್ಲಿ ಇನ್ನೊಂದು ಅಪರೂಪದ ವಿಷಯ ಪ್ರಸ್ತಾಪವಾಗಿದೆ. ಶ್ರೀಮತು ಮಹಾಪಟ್ಟಣ ರಾಯಹರ ಗಾಣಿಗರ ಮಟದಲ್ಲಿ ಲಿಂಗಾ ಸೆಟಿಯರ ಸುಪುತ್ರ ಯೆಲಸೆಟಿ ಮರ ಕಲುಕೆ ಸೆಟರ ಲೆಂಕ ರಚಿಸಿದ ಬಾವಿಯನು ಎಂಬ ಉಲ್ಲೇಖವಿದೆ. ಬಹುಶಃ ೧೮ನೇ ಶತಮಾನದ ಹೊತ್ತಿಗೆ ಈ ಪ್ರದೇಶ(ಸಗರ)ದಲ್ಲಿದ್ದ ಗಾಣಿಗರು ಮಠ ಕೂಡಾ ಸ್ಥಾಪಿಸಿಕೊಂಡಿರುವುದು ಮುಖ್ಯ ಸಂಗತಿಯಾಗಿ ತೋರುತ್ತದೆ.

**ಸಿಹಿ ಪದಾರ್ಥಗಳ ಉತ್ಪಾದನೆ**

ದವಸ ಧಾನ್ಯ ಹಾಗೂ ಖಾದ್ಯ(ಎಣ್ಣೆ)ತೈಲಗಳಷ್ಟೇ ಸಿಹಿ ಪದಾರ್ಥಗಳಾದ ಬೆಲ್ಲ ಸಕ್ಕರೆಯು ಸಹ ನಿತ್ಯದ ಜೀವನಕ್ಕೆ ಅವಶ್ಯಕವಾದ ಪದಾರ್ಥವಾಗಿತ್ತು. ಆ ಕುರಿತು ಈ ಪ್ರದೇಶದ ಶಾಸನಗಳಲ್ಲಿ ಉಲ್ಲೇಖವಿರುವುದನ್ನು ಕಾಣುತ್ತೇವೆ. ಕ್ರಿ.ಶ.೧೩ನೆಯ ಶತಮಾನದ ಮುದನೂರಿನ[೨೦೭] ಹಾಗೂ ಕ್ರಿ.ಶ.೧೧೪೪ರ ಹಗರಟಗಿಯ ಶಾಸನಗಳಲ್ಲಿ[೨೦೮] ಬೆಲ್ಲ ಮತ್ತು ಸಕ್ಕರೆಗಳ ಉಲ್ಲೇಖಗಳು ದಾಖಲಾಗಿರುವುದನ್ನು ಗಮನಿಸಬಹುದು. ಮುದನೂರು, ಏವೂರು, ಹಗರಟಗಿ, ಮದ್ರಕಿ ಹಾಗೂ ಶಿರವಾಳ ಗ್ರಾಮಗಳು ಬಾವಿಯಿಂದ ಲಭ್ಯವಿರುವ ನೀರನ್ನು ಸದಾಕಾಲ ಹೊಂದಿದ್ದರಿಂದ ಕಬ್ಬು ಬೆಳೆಯನ್ನು ಮಾಡುತ್ತಿದ್ದಿರುವ ಕುರುಹುಗಳು ಶಾಸನಗಳಲ್ಲಿ ಕಂಡುಬಂದಿವೆ.

ದಿನನಿತ್ಯದ ಆಹಾರದಲ್ಲಿ ಉಪ್ಪು ಸಹ ತುಂಬಾನೇ ಬೇಕಾದ ಹಾಗೂ ಕಡ್ಡಾಯವಾದ ಪದಾರ್ಥವಾಗಿತ್ತು. ಆದರೆ ಈ ಪ್ರದೇಶದಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ನೇರವಾಗಿ ಉಪ್ಪು ತಯಾರಿಕೆ ಕುರಿತಂತೆ ವಿವರಗಳು ಕಂಡು ಬಂದಿರುವುದಿಲ್ಲ. ಕ್ರಿ.ಶ.೧೧೪೪ರ ಹಗರಟಗಿ ಶಾಸನದಲ್ಲಿ[೨೦೯] ಅರವತ್ತರು ಉಪ್ಪಿನಿಕಗುಡುಗಳು ಎಂಬ ಉಲ್ಲೇಖವಿದೆ. ಬಹುಶಃ ಇವರು ಉಪ್ಪು ತಯಾರಿಸುವ

ಉಪ್ಪಾರರಾಗಿರಬಹುದೇ ಎಂದು ಊಹಿಸಲು ಅವಕಾಶವಿದೆ. ಅಲ್ಲದೇ ಕ್ರಿ.ಶ.೧೧೨೬ರ ಅದೇ ಗ್ರಾಮದ ಶಾಸನದಲ್ಲಿ[೨೧೦] ಷಷ್ಟಿನಿಕರಸ ಮಗಳು ಚೆಬರಸಿಗೆ ಉಪಿನ ಕೆರೆಯ ಉಪ್ಪುಕೊಣ್ಡಲಿ(ಕೊಂಡಲಿ) ಎಂಬ ಉಲ್ಲೇಖವು ದಾಖಲಾಗಿರುವುದನ್ನು ಗಮನಿಸಬಹುದು.

**ನೇಕಾರಿಕೆ**

ನೇಯ್ಗೆ ಅಥವಾ ನೇಕಾರಿಕೆ ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ವೃತ್ತಿ. ನೂಲಿನಿಂದ ಬಟ್ಟೆ ಬರೆಗಳನ್ನು ತಯಾರಿಸುವ ಕೈಗಾರಿಕೆ. ಬಟ್ಟೆ ನೇಯುವುದು ಈ ಜನರ ಮುಖ್ಯ ಕೆಲಸವಾಗಿದೆ. ಇವರನ್ನು ಸಾಮಾನ್ಯವಾಗಿ ಜೇಡ, ಸಾಲಿಗ, ನೇಯುವ ಎಂಬ ಹೆಸರುಗಳಿಂದ ಉಲ್ಲೇಖಿಸಲಾಗುತ್ತದೆ. ಪಟ್ಟಸಾಲಿಗ(ರೇಶಿಮೆ ನೇಯ್ಗೆ)ಯವರು ತುಂಬಾ ಪ್ರಸಿದ್ಧ ರೇಶಿಮೆ ನೇಯ್ಗೆ ಕೆಲಸವನ್ನು ಮಾಡುವವರು. ಜೇಡರು ಅಥವಾ ನೇಯ್ಗೆ ಕುಲದವರು ದೇವಾಲಯಗಳಿಗೂ ದಾನ-ದತ್ತಿ ನೀಡಿರುವ ಉಲ್ಲೇಖಗಳುಂಟು. ಅಲ್ಲದೇ ಇವರು ಸಹ ಕೊತ್ತಳಿ ಅಥವಾ ಸಂಘವನ್ನು ಮಾಡಿಕೊಂಡಿದ್ದರು. ಅಂಥ ಒಂದೆರಡು ಉಲ್ಲೇಖಗಳು ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ.

ಕ್ರಿ.ಶ.೧೨೯ರ ತೇದಿಯ ಹಗರಟಗಿಯ ಶಾಸನವು[೨೧೧] ಅಲ್ಲಿನ ೬೨ ಜೇಡ ಹಟಗಾರರು ತಮ್ಮ ಲಾಭದಲ್ಲಿ ಬರುವ ಇಂತಿಷ್ಟು ಹಣವನ್ನು ದೇವರಿಗೆ ದಾನ ನೀಡಿದ ಉಲ್ಲೇಖ ಹೊಂದಿದೆ. ಬಹುಶಃ ಇಲ್ಲಿರುವ ಸಂಖ್ಯೆಯು ಈ ಪರಿಸರ ಅಥವಾ ಹಗರಟಗಿ ಪಟ್ಟಣದಲ್ಲಿರುವ ಕೊತ್ತಳಿ ಅಥವಾ ಸಂಘದ ಸದಸ್ಯರ ಸಂಖ್ಯೆಯನ್ನು ಸೂಚಿಸುತ್ತಿರಬಹುದು. ಪ್ರಾಚೀನ ಸಗರ ಮತ್ತು ಹಗರಟಗಿ ನಾಡುಗಳಲ್ಲಿ ಜೇಡ ಕುಲ ತುಂಬಾ ಪ್ರಸಿದ್ಧಿಯನ್ನು ಪಡೆದಿತ್ತು. ಹಗರಟಗಿ, ಮುದನೂರು ಹಾಗೂ ಕೆಂಬಾವಿ ಪ್ರದೇಶಗಳು ಹಾಗೂ ದೇವದುರ್ಗ ತಾಲೂಕಿನ ಗೊಬ್ಬೂರು ಹಾಗೂ ವಿಜಾಪುರ ಜಿಲ್ಲೆಯ ಕೆಲವು ಗ್ರಾಮಗಳಲ್ಲಿರುವ ಶಾಸನಗಳಲ್ಲಿ ಜೇಡ ಕುಲ ಅಥವಾ ಅವರಿಗೆ ಸಂಬಂಧಿಸಿದ ಕೆಲವು ವಿವರಗಳು ದಾಖಲಾಗಿರುವುದನ್ನು ಗಮನಿಸಬಹುದು.

ಆದ್ಯ ವಚನಕಾರ ಜೇಡರ ದಾಸಿಮಯ್ಯ ಮುದನೂರಿನವನು. ಅವನ ಆರಾಧ್ಯ ದೈವ ರಾಮನಾಥ. ಈ ದೇವರ ದೇವಾಲಯ ಆ ಕಾಲದಿಂದಲೂ ತುಂಬಾ ಪ್ರಸಿದ್ಧಿಯನ್ನು ಪಡೆದಿರುವಂಥದ್ದು. ತನ್ನ ಸಮುದಾಯವನ್ನು ಕುರಿತು ಜೇಡರ ದಾಸಿಮಯ್ಯ

ಉಂಕೆಯ ನಿಗುತಿ ಸರಿಗೆಯ ಸಮಗೊಳಿಸಿ

ಸಮಗಾಲನಿಕ್ಕಿ ಆಣಿಯೇಳು ಮೆಟ್ಟದೆ

ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು

ಈ ಸೀರೆಯ ನೈದವ ನಾನೋ ನೀನೋ ರಾಮನಾಥ ಎಂಬ ಅಂಕಿತದೊಂದಿಗೆ ವಚನದಲ್ಲಿ ವಿವರಿಸಿದ್ದಾನೆ.

ಈ ಸಮುದಾಯವು ತಮ್ಮನ್ನು ಸಾಲಿಗೆ ಸಮುದಾಯಗಳು ಎಂದು ಸಹ ಹೇಳಿಕೊಂಡಿದ್ದಾರೆ. ಸಾಲಿಗರು, ದೇಡರ ಕೊತ್ತಳಿಗಳು, ಸಾಲಿಗ ಮುನ್ನೂರ್ವರು ಎಂಬ ತಮ್ಮದೇ ವೃತ್ತಿ ಸಂಘಗಳನ್ನು

ಇವರು ಹೊಂದಿದ್ದರೆಂದು ತರ್ದವಾಡಿ ನಾಡಿನ ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ಗಮನಿಸಬಹುದು[೨೧೨]. ಪ್ರಾಚೀನ ತರ್ದವಾಡಿ ನಾಡು ಪ್ರಸ್ತುತ ಅಧ್ಯಯನದ ಬಹುಮುಖ್ಯ ಪ್ರದೇಶವಾದ ಪ್ರಾಚೀನ ಹಗರಟಗಿ ನಾಡಿಗೆ ಹೊಂದಿಕೊಂಡ ಅಕ್ಕ-ಪಕ್ಕದ ಸಾಂಸ್ಕೃತಿಕ ಕೊಡುಕೊಳ್ಳುವಿಕೆಗಳನ್ನು ಕಂಡುಕೊಂಡಿದ್ದ ಪ್ರಾಚೀನ ವಿಭಾಗಗಳಾಗಿದ್ದವು.

**ವಾಣಿಜ್ಯ-ವ್ಯವಹಾರ**

**ವಹಿವಾಟಿನ ಕೇಂದ್ರಗಳು**

ವೃತ್ತಿ-ಕೈಗಾರಿಕೆಗಳ ಉತ್ಪನ್ನಗಳನ್ನು ವಿತರಿಸುವ ವಹಿವಾಟಿನ ಕೇಂದ್ರಗಳಿದ್ದವು. ಆ ಸ್ಥಳಗಳಲ್ಲಿ ಹಣ ಅಥವಾ ವಸ್ತು ರೂಪಗಳ ಮಾಧ್ಯಮದ ಮೂಲಕ ಕೊಡುಕೊಳ್ಳುವಿಕೆಗಳು ನಿರಂತರವಾಗಿ ನಡೆಯುತ್ತಿದ್ದವು. ಅಂತಹ ವಾಣಿಜ್ಯ ವ್ಯವಹಾರಗಳು ರಾಜಧಾನಿ, ಪಟ್ಟಣ, ಕಂಪಣ ಕೇಂದ್ರಗಳು ಹಾಗೂ ಕೆಲವು ಮುಖ್ಯ ಸ್ಥಳಗಳಲ್ಲಿ ನಡೆಯುತ್ತಿದ್ದ ವಿವರಗಳು ಈ ನಾಡಿನ ಶಾಸನಗಳಲ್ಲಿ ದಾಖಲಾಗಿವೆ. ಇಂಥ ವಹಿವಾಟು ಹೆಚ್ಚಿನ ಪ್ರಮಾಣದಲ್ಲಿ ಹಾಗೂ ಹೆಚ್ಚು ವಸ್ತುಗಳು ಒಂದೇ ಕಡೆಯಲ್ಲಿ ಸಿಗುವಂತೆ ಮಾಡಿಕೊಂಡ ಸಂತೆಗಳು ಸಹ ಇದರಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು.

ಕ್ರಿ.ಶ.೧೧೮೮ರ ತೇದಿಯ ಮುದನೂರಿನ ಶಾಸನವು[೨೧೩] ಲಕ್ಷ್ಮಣೇಶ್ವರ ದೇವರ ಚೈತ್ರ-ಪವಿತ್ರ ಪರ್ವಗಳಿಗೆ ನೀಡಿದ ಸಂತಿಯ ಆಯ ಕುರಿತು ಉಲ್ಲೇಖ ನೀಡುತ್ತದೆ. ಇದನ್ನು ವೃತ್ತಿಸಂಘಗಳಾದ ಮುಮ್ಮರಿದಂಡರು ಉಭಯ ನಾನಾದೇಸಿಯವರು ಹಾಗೂ ಐನೂರ್ವರು ಪ್ರತಿಪಾಲಿಸಬೇಕಾದ ಧರ್ಮದ ಕುರಿತು ವಿವರಿಸಲಾಗಿದೆ. ಇದೇ ಗ್ರಾಮದ ಕ್ರಿ.ಶ.೧೨೧೮ರ ತೇದಿಯ ಶಾಸನದಲ್ಲಿ[೨೧೪] ಹೊಸಂತಿಲ ಹಾಗ ಎಂಬ ಉಲ್ಲೇಖವು ದಾಖಲಾಗಿದೆ. ಬಹುಶಃ ಇದು ತೆರಿಗೆಯ ಒಂದು ಪ್ರಕಾರವಾಗಿರಬಹುದೇ ಎಂದು ಯೋಚಿಸಲು ಅವಕಾಶವಿದೆ ಎಂದು ಅಭಿಪ್ರಾಯಿಸಲಾಗಿದೆ.

ಪ್ರಮುಖವಾಗಿ ಸಿರವಾಳ, ಯಾದಗಿರಿ(ಏತಗಿರಿ) ಮುದನೂರು, ಹಗರಟಗಿ, ಸಗರ ಹಾಗೂ ಏವೂರು ಪಟ್ಟಣಗಳು ಆ ಕಾಲದ ಮುಖ್ಯ ಪಟ್ಟಣಗಳಾಗಿರುವ ವಿವರಗಳು ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು. ಕ್ರಿ.ಶ. ೧೨೪೯ರ ಬಿಜಾಸಪುರ ಶಾಸನವು ಮೂಡಣ ನಿರ್ಮ್ಮಳ ಧರ್ಮ್ಮಾಂಬುಧಿ ಮಹಾಪಟ್ಟಣಂ ಸಗರ[೨೧೫] ಎಂದು ಉಲ್ಲೇಖಿಸಿದೆ. ಪ್ರಸಿದ್ಧ ಅಗ್ರಹಾರವಾಗಿದ್ದ ಮುದನೂರು ಸಹ ಆ ಕಾಲದಲ್ಲಿ ಬಹುಶಃ ದೊಡ್ಡ ವಾಣಿಜ್ಯ ಕೇಂದ್ರ ಆಗಿರುವುದರಲ್ಲಿ ಸಂಶಯಗಳಲ್ಲಿ. ಇಲ್ಲಿರುವ ಹೆಚ್ಚಿನ ಶಾಸನಗಳಲ್ಲಿ ವೃತ್ತಿ ವರ್ತಕರು ಹಾಗೂ ಅವರ ಸಂಸ್ಥೆಗಳು ಮಹಾನಾಡಾಗಿ ಸೇರಿ ದಾನದತ್ತಿ ನೀಡಿರುವ ಉಲ್ಲೇಖಗಳನ್ನು ಪ್ರಾಯಶಃ ಇದೊಂದು ಬಹು ಪಟ್ಟಣವಾಗಿತ್ತು ಎಂಬುದನ್ನು ಸೂಚಿಸುತ್ತವೆ.

ಕ್ರಿ.ಶ.೧೦೭೧ರ ಸಗರ ಶಾಸನವು ವೀರಬಳಂಜು ಧರ್ಮ್ಮ ಪ್ರತಿಫಳನ ಕುರಿತು ಉಲ್ಲೇಖಿಸುತ್ತದೆ[೨೧೬] ಸಿರಿವಾಳದ ಕ್ರಿ.ಶ.೧೧೩೭ರ ಶಾಸನವು[೨೧೭] ಸಿರಿವೊಳದ ಪ್ರಭು ನಾಲವ್ವರು ಸೆಟ್ಟಿಯರು ಮಹಾನಗರದ ತಳದ ಬಳಂಜಿಗಾರು ಸೇರಿ ದತ್ತಿ ಬಿಟ್ಟ ಉಲ್ಲೇಖವನ್ನು ನೀಡುತ್ತದೆ. ಶಿರವಾಳ ಗ್ರಾಮವು ಭಕ್ತ

ಸಿರಿಯಾಳನಿಂದ ಅವನದೇ ವೃತ್ತಿಯಾದ ಸೆಟ್ಟಿಗಳ ಪಟ್ಟಣವಾಗಿ ಮೆರೆದುದು ಇಲ್ಲಿ ಗಮನಾರ್ಹ. ಇದು ಒಂದು ಐತಿಹ್ಯ ಆಗಿರಬಹುದೆಂಬ ಅಭಿಪ್ರಾಯಗಳುಂಟು. ಆದರೆ ಶಾಸನದಲ್ಲಿ ಸಿರಿವಾಳದ ಸೆಟ್ಟಿರಿಯರು ಕುರಿತು ತಮ್ಮನ್ನು ಸಿಳಾರ ವಂಶೋದ್ಭವ ನರೇಂದ್ರ ವಿಭವಾಮಕೇಂದ್ರರೆಂದು ಕರೆದುಕೊಂಡಿದ್ದಾರೆ[೨೧೮].

ವಾಣಿಜ್ಯ ವಹಿವಾಟು ಮುಖ್ಯವಾಗಿ ಅಂಗಡಿ, ಸಂತೆಗಳ ಮೂಲಕ ನಡೆಯುತ್ತಿದ್ದವು. ತಲೆ ಮೇಲೆ ಹೊತ್ತು ಮಾರುವ ಪರಿಪಾಠವು ಇತ್ತು. ಮುಖ್ಯವಾಗಿ ಜೀವನಾವಶ್ಯಕ ವಸ್ತುಗಳಾದ ಜೋಳ, ಭತ್ತ, ಅಡುಗೆಗೆ ಬೇಕಾದ ಅರಿಶಿಣ, ಜೀರಿಗೆ, ಮೆಣಸು, ಬೆಲ್ಲ, ಸಕ್ಕರೆ ಅಲ್ಲದೇ ಹತ್ತಿ, ಅಲ್ಲ(ಶುಂಠಿ), ಅಡಿಕೆ, ದಸರಿ, ಎಲೆಗಳ ಕುರಿತು ಇಲ್ಲಿರುವ ಶಾಸನಗಳಲ್ಲಿ ವಿವರಗಳು ದಾಖಲಾಗಿವೆ. ಕ್ರಿ.ಶ.೧೧೪೪ರ ಹಗರಟಗಿ ಶಾಸನವು[೨೧೯]. ಮೇಲೆ ಉಲ್ಲೇಖಿಸಿದ ಎಲ್ಲ ಪದಾರ್ಥಗಳ ಕುರಿತು ದಾಖಲಿಸುತ್ತದೆ. ಅಲ್ಲದೇ ಹೆಚ್ಚಾಗಿ ಸಂತೆಯ ವ್ಯಾಪಾರ ಅಥವಾ ಹೊತ್ತು ಮಾರುವುದಕ್ಕೆ ಸಂಪರ್ಕ ಮಾದ್ಯಮ ಎತ್ತು, ಕೋಣ, ಕುದುರೆ ಹಾಗೂ ಕತ್ತೆಗಳು ಬಳಕೆಯಾಗುತ್ತಿದ್ದವು. ಇವುಗಳ ಬಗೆಗೆ ಸಹ ಶಾಸನಗಳಲ್ಲಿ ಸಾಕಷ್ಟು ಸಂಖ್ಯೆಯ ಉಲ್ಲೇಖಗಳು ಇರುವುದನ್ನು ಗುರುತಿಸಬಹುದು.

**ವರ್ತಕರು ಅಥವಾ ವ್ಯಾಪಾರಿಗಳು**

ವ್ಯಾಪಾರವನ್ನೇ ತಮ್ಮ ವೃತ್ತಿಯಾಗಿ ಮಾಡಿಕೊಂಡ ವಿವಿಧ ಸಮುದಾಯಗಳಿದ್ದವು. ಅವರಲ್ಲಿ ಮುಖ್ಯವಾಗಿ ಬಣಂಜಿಗ(ಬಣಜಿಗರು) ಸೆಟ್ಟಿ, ಸೆಟ್ಟಿಗುತ್ತ, ನಕರ, ಮುಮ್ಮರಿದಂಡ, ವಡ್ಡ ವ್ಯವಹಾರಿ, ಗವರೆ–ಗಾತ್ರಿಗ, ನಾನಾದೇಶಿ–ಉಭಯ ನಾನಾದೇಶಿ, ಗೌವುಡಗಳು, ಬೀರವಣಿಗರ, ಸೊಲ್ಲಿಗ ಸಮಯ, ಹನ್ನವಣಿಗರು ಹಾಗೂ ಒಕ್ಕಲು ಎಂಬ ವರ್ತಕರ ಕುರಿತು ಇಲ್ಲಿರುವ ಶಾಸನಗಳಲ್ಲಿ ವಿವರಗಳು ವ್ಯಕ್ತವಾಗಿರುವುದನ್ನು ಕಾಣುತ್ತೇವೆ.

ಸಂಸ್ಕೃತದ 'ವಣಿಜ' 'ಶ್ರೇಷ್ಠನ್' ಪದಗಳು ಕನ್ನಡ ರೂಪ 'ಬಣಂಜಿಗ, ಸೆಟ್ಟಿ ಮೂಲದಲ್ಲಿ ವಣಿಜ(ಬಣಂಜಿಗ) ವೃತ್ತಿ ಸೂಚಿ ಶ್ರೇಷ್ಠನ್(>ಸೆಟ್ಟಿ) ಪ್ರತಿಷ್ಠಾ ಸೂಚಿಯಾಗಿದ್ದು ಕ್ರಮೇಣ ಈ ಎರಡೂ ಪದಗಳು ವೃತ್ತಿವಾಚಿಯಾಗಿ ನಂತರ ಜಾತಿ ಸೂಚಕವಾಗಿ ಬೆಳೆದವು ಎಂಬ ಅಭಿಪ್ರಾಯಗಳಿವೆ[೨೨೦]. ಯಾದಗಿರಿ ಜಿಲ್ಲಾ ಪ್ರದೇಶದ ಶಾಸನಗಳಲ್ಲಿ ಈ ಕುರಿತ ಉಲ್ಲೇಖಗಳನ್ನು ಗುರುತಿಸಬಹುದು. ಕೆಲವರು ಸರಕುಗಳನ್ನು ಎತ್ತು ಕೋಣ, ಕತ್ತೆಗಳ ಮೇಲೆ ಹೇರಿಕೊಂಡು ವ್ಯಾಪಾರ ಮಾಡುತ್ತಿದ್ದರಿಂದ ಹೇರಿನ ಸೆಟ್ಟಿಯರೆಂದು ಕತ್ತೆಯ ಮೇಲೆ ಹೇರಿಕೊಂಡು ವ್ಯಾಪಾರ ಮಾಡುತ್ತಿರುವವರನ್ನು ಕತ್ತಿಶೆಟ್ಟಿಯರು ಎಂಬ ವಿವರಗಳು ಸಾಮಾನ್ಯವಾಗಿ ಉಲ್ಲೇಖವಾಗುತ್ತವೆ. ಆ ರೀತಿ ಕರೆದಿರುವ ವಿವರಗಳು ಈ ಪ್ರದೇಶದ ಶಾಸನಗಳಲ್ಲಿ ದಾಖಲಾಗಿವೆ. ಬಣಂಜಿಗರು–ಸೆಟ್ಟಿಯರು ಸ್ವಗ್ರಾಮದಲ್ಲಿ ವ್ಯಾಪಾರ ವೃತ್ತಿ ಕೈಗೊಂಡಿರುವುದರಿಂದಲೋ ಅನ್ಯಗ್ರಾಮದ ವರ್ತಕರಿಂದ ಭಿನ್ನವಾಗಿರಲೋ ಸ್ಥಳದ–ತಳದ ವಿಶೇಷಣದಿಂದ ಗುರುತಿಸಲ್ಪಟ್ಟಿದ್ದಾರೆ[೨೨೧] ಎಂದು ಅಭಿಪ್ರಾಯಿಸಲಾಗಿದೆ.

ಕ್ರಿ.ಶ.೧೧೩೭ರ ಸಿರವಾಳ ಶಾಸನವು[೨೨೨]ಸಿರಿವೊಳಲು ಪ್ರಭು ನಾಲ್ವರು ಸೆಟ್ಟಿಯರು. ಮಹಾನಗರದಲ್ಲಿಯು ತಳದ ಬಳಂಜಿಗರು ಎಂಬ ಉಲ್ಲೇಖವನ್ನು ನೀಡುತ್ತದೆ. ಇಂಥ ಉಲ್ಲೇಖಗಳು ಹಗರಟಗಿ, ಮುದನೂರು ಹಾಗೂ ಏವೂರು ಶಾಸನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಗುರುತಿಸಬಹುದು.

ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳಲ್ಲಿ ಮುಖ್ಯವಾಗಿ ಈ ಕೆಳಕಂಡ ವರ್ತಕ ಪ್ರಕಾರಗಳ ಕುರಿತು ಉಲ್ಲೇಖಿಸಲಾಗಿದೆ. ಉಪ್ಪಿನಿಕ ಗೌವುಡಗಳು[೨೨೩] ಗವರೆ ಗಾತ್ರಿಗರು(ಅದೇ ಶಾ.ಸಂ.೮೫, ಹಗರಟಗಿ) ಗಾತ್ರಿಯ[೨೨೪] ಉಭಯನಾನಾದೇಶಿ(ಶಾ.ಸಂ.೫೫, ೫೭, ೬೧, ಮುದನೂರು ಹಾಗೂ ಶಾ.ಸಂ. ೮೫, ಹಗರಟಗಿ) ವೊಕ್ಕಲು (ಶಾ.ಸಂ.೮೫, ಹಗರಟಗಿ) ಭಿಲ್ಲುರಕೆದಂಡಹಸ್ತರು(ಶಾ.ಸಂ.೩, ಎಡೆಯಾಪುರ ಮತ್ತು ಶಾ.ಸಂ.೮೫, ಹಗರಟಗಿ) ಸೊಲ್ಲಿಗ ಸಮಯ(ಶಾ.ಸಂ.೬೭, ಮುದನೂರು) ಹಾಗೂ ಹನ್ನವಣಿಗರು(ಶಾ.ಸಂ. ೮೫, ಹಗರಟಗಿ) ಮುಂತಾದ ವರ್ತಕ ಪ್ರಕಾರಗಳು ಹೆಚ್ಚಿನ ಪ್ರಮಾಣದಲ್ಲಿ ಈ ಪ್ರದೇಶದಲ್ಲಿ ತಮ್ಮ ವ್ಯಾಪಾರ ವೃತ್ತಿ ಕೈಗೊಂಡ ಪ್ರಮುಖ ಸಮುದಾಯಗಳಾಗಿದ್ದವು ಎಂದು ಅಭಿಪ್ರಾಯಿಸಬಹುದು. ಉಲ್ಲೇಖಿಸಿದ ಪದ ನಿಷ್ಪತ್ತಿ ಹಾಗೂ ಅವರು ಮಾಡುತ್ತಿದ್ದ ವ್ಯಾಪಾರ ಕುರಿತು ಈಗಾಗಲೇ ಹಲವಾರು ಗ್ರಂಥಗಳಲ್ಲಿ ಆ ಕುರಿತು ವಿವೇಚಿಸಲಾಗಿದೆ. ಹಾಗಾಗಿ ಅವುಗಳ ಕುರಿತು ವಿವರವಾಗಿ ಬರೆಯುವ ಯತ್ನ ಮಾಡಿಲ್ಲ[೨೨೫].

**ವರ್ತಕ ಶ್ರೇಣಿ ಅಥವಾ ಸಂಘಗಳು**

ಪ್ರತಿಯೊಂದು ವೃತ್ತಿ ಸಮುದಾಯ ತನ್ನ ವ್ಯಾಪಾರದ ಚಟುವಟಿಕೆಯ ಹಿನ್ನೆಲೆಯಲ್ಲಿ ಸಂಘಗಳನ್ನು ಅಥವಾ ಶ್ರೇಣಿಗಳನ್ನು ರಚಿಸಿಕೊಂಡಿದ್ದವು. ಈ ದೇಶದಲ್ಲಿ ತುಂಬಾ ಪ್ರಾಚೀನ ಕಾಲದಿಂದಲೇ ಇಂಥ ಶ್ರೇಣಿಗಳ ಕುರಿತು ದಾಖಲೆಗಳು ಸಿಗುತ್ತವೆ. ಶಾತವಾಹನ ಮತ್ತು ಗುಪ್ತರ ಆಳ್ವಿಕೆಯಲ್ಲಿ ಈ ವ್ಯಾಪಾರಿ ಶ್ರೇಣಿಗಳು ತುಂಬಾ ಬಲಗೊಂಡಿದ್ದವು. ಅಲ್ಲದೇ ಸಾಮ್ರಾಜ್ಯದ ಎಲ್ಲೆಯನ್ನು ಮೀರಿ ತಮ್ಮ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದವು. ಅದೇ ರೀತಿ ನಮ್ಮ ನಾಡಿನಲ್ಲಿ ಅಯ್ಯಾವೊಳೆ ಐದನೂರ ಶ್ರೇಣಿಯು ಹೆಚ್ಚು ಪ್ರಸಿದ್ಧಿ ಪಡೆದಿರುವ ಸಂಗತಿಯಾಗಿದೆ. ಅಲ್ಲದೇ ಆಯಾ ವೃತ್ತಿ ಸಮುದಾಯಗಳು ಕಟ್ಟಿಕೊಂಡಿರುವ ಇಂಥ ಸಂಘಗಳನ್ನು ಶ್ರೇಣಿ, ಸಂಘ, ಸಂಸ್ಥೆ, ನಾಡು, ಕೊತ್ತಳಿ ಎಂದು ಸಾಮಾನ್ಯವಾಗಿ ಕರೆಯಲಾಗಿದೆ. ಸೂರಪುರ ತಾಲೂಕಿನ ಏವೂರಿನ ಶಾಸನವು[೨೨೬] ೧೨೦ ಕೊತ್ತಳಿ ಅಥವಾ ಗೊತ್ತಳಿ ಕುರಿತು ಉಲ್ಲೇಖವು ಮುಖ್ಯ ಮಾಹಿತಿ ಆಗಿದೆ.

ಇಂಥ ಕೊತ್ತಳಿಗಳ ಕುರಿತು ಉಲ್ಲೇಖಿಸಲಾದ ಬಗೆಗೂ ಸಂಖ್ಯೆಯ ವಿದ್ವಾಂಸರಲ್ಲಿ ಹಲವು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿರುವುದನ್ನು ಗಮನಿಸಬಹುದು. ಈ ಪ್ರದೇಶದ ಶಾಸನಗಳಲ್ಲಿ ಅಯ್ಯಾವೊಳೆ-೫೦೦[೨೨೭], ೯೨-ಜೇಡಹಟಗಾರರು[೨೨೮], ಹಂನ್ನಿಚ್ಛಾಸಿರ ಜಿಲ್ಲವಮುನ್ನೂರರು[೨೨೯] ಹಾಗೂ ಮೂವತ್ತಾರ ಜೀಡ[೨೩೦] ಹನ್ನವಣಿಗ ಸಾಸಿರ[೨೩೧]ಗಳ ಕುರಿತು ವಿವರಗಳು ದಾಖಲಾಗಿವೆ. ಇವು ಸಂಖ್ಯೆಯನ್ನು ಹೊಂದಿರುವ ವರ್ತಕ ಮತ್ತು ವೃತ್ತಿ ಸಂಘಗಳ ವಿವರಗಳಾಗಿವೆ.

ನೂರಿಪ್ಪತ್ತು ಒಕ್ಕಲು[೨೩೨] ವೇಶವರ್ಗ(ಬಹುಶಃ ಇದು ವೈಶ್ಯ ಆಗಿರಬಹುದೇ)[೨೩೩] ವೀರಬಣಂಜ ಧರ್ಮ[೨೩೪] ಸೆಟ್ಟಿಗುತ್ತ ಕುರಿತು ಉಲ್ಲೇಖಗಳು ಕಂಡುಬರುತ್ತವೆ. ಆದರೆ ಮುಮ್ಮರಿದಂಡಗಳ ಕುರಿತು ಅತೀ ಹೆಚ್ಚಿನ ಉಲ್ಲೇಖಗಳು ಈ ಪ್ರದೇಶದ ಶಾಸನಗಳಲ್ಲಿ ಉಪಲಬ್ಧವಾಗಿರುವುದನ್ನು ಗುರುತಿಸಬಹುದು. ಮುದನೂರು, ಏವೂರು, ಹಗರಟಗಿ, ರಾಜನಕೋಳೂರು, ಹುಣಸಗಿ, ಸಗರ, ಶಿರವಾಳ ಗ್ರಾಮದ ಶಾಸನಗಳಲ್ಲಿ ಅವರ ಕುರಿತು ಹಲವಾರು ವಿವರಗಳು ದಾಖಲಾಗಿವೆ.

ವೃತ್ತಿ ಪ್ರಕಾರಗಳು ಹಾಗೂ ವೃತ್ತಿ ಸಂಘದ ಸದಸ್ಯರು ಜನಸಾಮಾನ್ಯರು ಹಾಗೂ ರಾಜ್ಯಾಧಿಕಾರವ ನಡುವಿನ ಕೊಂಡಿಯಾಗಿದ್ದರು ಎಂದರೆ ತಪ್ಪಾಗಲಾರದು. ವ್ಯಾಪಾರ ಚಟುವಟಿಕೆಗಳು ಆ ಕಾಲದಲ್ಲಿಯೇ ಲಾಭದಾಯಕ ವಲಯವಾಗಿ ಮಾರ್ಪಟ್ಟಿತ್ತು. ಹಾಗಾಗಿ ಗ್ರಾಮದ ಪ್ರತಿ ದೇವಾಲಯವು ಹಾಗೂ ಮಹಾಜನರು ಮತ್ತು ಅಧಿಕಾರಿ ವರ್ಗಗಳು ಸಾಮಾನ್ಯವಾಗಿ ಅವರ ಸಹಾಯವಿಲ್ಲದೇ ಇರಲಾರದ ಸ್ಥಿತಿಗೆ ತಲುಪಿದ್ದವು. ಅಲ್ಲದೇ ಸಾಮಾಜಿಕ ಕಾರ್ಯಗಳಾದ ದಾನ-ದತ್ತಿ ದೇವಾಲಯಗಳ ನಿರ್ಮಾಣ, ಶೈಕ್ಷಣಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವ ಬಹುಮುಖ್ಯ ಕಾರ್ಯಗಳನ್ನು ಮಾಡುತ್ತಿದ್ದವು. ಅಲ್ಲದೇ ಅವರು ದಂಡಾಧಿಕಾರಿಗಳಂತಹ ಆಡಳಿತ ಹುದ್ದೆಯಲ್ಲಿಯು ತಮ್ಮ ಕಾರ್ಯವನ್ನು ನಿರ್ವಹಿಸಿರುವ ಉಲ್ಲೇಖಗಳು ಕಂಡುಬರುತ್ತವೆ. ಕ್ರಿ.ಶ.೧೨೭೯ರ ಹಗರಟಗಿ ಶಾಸನವು ದೇವಗಿರಿ ಸೇವುಣರ ಇಮ್ಮಡಿ ಸಿಂಘನ ಕಾಲದಲ್ಲಿ ಹಗರಟಗಿ-೩೦೦ ನಾಡಿನ ಸರ್ವಾಧಿಕಾರಿ ಹುದ್ದೆಯಲ್ಲಿದ್ದ ಪಾರಿಸೆಟ್ಟಿ ಎಂಬ ವ್ಯಕ್ತಿಯು ಆಳ್ವಿಕೆ ಮಾಡುತ್ತಿದ್ದ ಮಹತ್ವದ ಉಲ್ಲೇಖವನ್ನು ನೀಡುತ್ತದೆ[೨೩೫].

## ನಾಣ್ಯಗಳು

ನಾಣ್ಯ ಚಲಾವಣೆ ಆರ್ಥಿಕಾಭಿವೃದ್ಧಿಯಲ್ಲಿ ಹೊಸ ಮನ್ವಂತರವನ್ನೇ ತೆರೆದಿದೆ. ಅರ್ಥವ್ಯವಸ್ಥೆ ಇನ್ನು ವಿಕಸಿತವಾಗದ ಸಮಯದಲ್ಲಿ ಕೊಡು ಕೊಳ್ಳುವ ವ್ಯವಹಾರಕ್ಕೆ ವಸ್ತುಗಳನ್ನು ಬಳಸಲಾಗುತ್ತಿತ್ತು. ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದು ಅಚ್ಚಿನ ಟಂಕಸಾಲೆಗಳೆಂದು ಕರೆಯುತ್ತಿದ್ದರು ಎಂಬ ಅಭಿಪ್ರಾಯಗಳು ದಾಖಲಾಗಿವೆ[೨೩೬].

ವ್ಯಾಪಾರ-ವ್ಯವಹಾರಗಳಲ್ಲಿ ಗದ್ಯಾಣದ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಇದನ್ನು ಪೊನ್ ಎಂದು ಕರೆಯುತ್ತಿದ್ದರು. ಇದು ರಾಷ್ಟ್ರಕೂಟ ಮೂರನೆಯ ಕೃಷ್ಣನಿಂದ ಹಿಡಿದು ಯಾದವ ಸಿಂಘಣನ ಕಾಲದವರೆಗೆ ಗದ್ಯಾಣ(ಪೊನ್) ಬಳಕೆಯ ವ್ಯಾಪ್ತಿಯನ್ನು ಗುರುತಿಸಬಹುದಾಗಿದೆ ಹಾಗೂ ಅವುಗಳ ತೂಕಗಳ ಕುರಿತಂತೆ ಕೆಲವು ಭಿನ್ನಾಭಿಪ್ರಾಯಗಳು ಸಹ ದಾಖಲಾಗಿವೆ[೨೩೭] ನಾಣ್ಯಗಳಲ್ಲಿ ಹೆಚ್ಚಾಗಿ ಬಂಗಾರ ಮತ್ತು ಬೆಳ್ಳಿಯ ಲೋಹದಿಂದ ಮಾಡಿದ ನಾಣ್ಯಗಳು ಬಳಕೆಯಲ್ಲಿದ್ದವು. ಅಂಥ ಕೆಲವು ನಾಣ್ಯಗಳ ಈ ಪ್ರದೇಶದಲ್ಲಿಯೂ ಚಲಾವಣೆ ಇದ್ದಿರುವ ಕುರಿತು ಶಾಸನಗಳು ಮಾಹಿತಿ ಒದಗಿಸುತ್ತವೆ.

ಸುವರ್ಣ[೨೩೮] ಪೊನ್ನ[೨೩೯] ಹಿರಣ್ಯ[೨೪೦] ಹೊನ್ನ[೨೪೧] ಅಡ್ಡ[೨೪೨] ಅರೇವೀಸ್[೨೪೩] ಪಣ[೨೪೪] ವೀಸ[೨೪೫] ಹಾಗ[೨೪೬] ಹಾಗೂ ಮರೆಯಕಾಣಿ[೨೪೭] ನಾಣ್ಯಗಳ ಕುರಿತು ಉಲ್ಲೇಖಗಳು ಕಂಡುಬಂದಿವೆ.

ಲೊಕ್ಕಿಗದ್ಯಾಣ ಅಥವಾ ಲೊಕ್ಕಿಹಣ ಆ ಸಂದರ್ಭದಲ್ಲಿ ತುಂಬಾ ಪ್ರಸಿದ್ಧಿ ಹಾಗೂ ಮಹತ್ವ ಪಡೆದ ಹಣವಾಗಿತ್ತು. ಇದರ ಟಂಕಸಾಲೆ ಅಥವಾ ಶಾಲೆ ಗದಗ ತಾಲೂಕಿನ ಲಕ್ಕುಂಡಿಯಾಗಿತ್ತು ಎಂಬ

ವಿವರಗಳು ದಾಖಲಾಗಿದ್ದುಂಟು. ನಾಣ್ಯಗಳನ್ನು ಟಂಕಿಸುವ ಶಾಲೆ ಅಥವಾ ಸ್ಥಳದಲ್ಲಿ ಕಂಮಟೇಶ್ವರ ದೇವಾಲಯವು ಇರುವ ಬಗೆಗೆ ಹೇಳಲಾಗುತ್ತದೆ. ಅಂಥದ್ದೇ ಉದಾಹರಣೆಯೊಂದು ಪ್ರಸ್ತುತ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಏವೂರಿನ ಗ್ರಾಮದಲ್ಲಿರುವ ಶ್ರೀ ಸ್ವಯಂಭೂ ಸೋಮೇಶ್ವರ ಸಂಗಮೇಶ್ವರ ಹಾಗೂ ಬಾವಿ ಬಸವಣ್ಣ ಗುಡಿ ಆವರಣದಲ್ಲಿ ಇತ್ತೆಂಬ ಮಾಹಿತಿಗಳುಂಟು. ಕ್ರಿ.ಶ. ೧೧೧೦ರ ತೇದಿಯ ಏವೂರಿನ ಶಾಸನದಲ್ಲಿ[೨೪೮] ಕಂಮಟೇಶ್ವರ ದೇವರಿಗೆ ಕಂಚಗಾರ ಗೊತ್ತಳಿ(ಶಿಲ್ಪಗಳು) ಬಡಿಗ ಹಾಗೂ ಕಂಮಾರರು ದತ್ತಿ ನೀಡಿರುವ ಉಲ್ಲೇಖವನ್ನು ಗಮನಿಸಬಹುದು.

**ತೂಕ ಮತ್ತು ಅಳತೆಗಳು**

ಸಾಮಾನ್ಯವಾಗಿ ಸಾಮಾನುಗಳನ್ನು ಪ್ರಮಾಣಬದ್ಧವಾಗಿ ಮಾರಲು ಅಥವಾ ಕೊಳ್ಳಲು ತೂಕ ಮತ್ತು ಅಳತೆಗಳು ಅವಶ್ಯಕವಾಗಿದ್ದವು. ವಿಶೇಷವಾಗಿ ಧಾನ್ಯಗಳನ್ನು ಎಣ್ಣೆ ಪದಾರ್ಥಗಳನ್ನು ತೂಕದಿಂದ ಬಟ್ಟೆ ಹಾಗೂ ಭೂಮಿಗೆ ಸಂಬಂಧಿಸಿದಂತೆ ಮಾಪನ ಅಳತೆಗಳಲ್ಲಿ ಅಳೆಯುತ್ತಿದ್ದರು. ಆ ಕುರಿತಿರುವ ಉಲ್ಲೇಖಗಳು ಈ ಪ್ರದೇಶದ ಪ್ರಾಚೀನ ಶಾಸನಗಳಲ್ಲಿ ಲಭ್ಯವಿರುವುದನ್ನು ಗುರುತಿಸಬಹುದು.

ತೂಕಗಳಲ್ಲಿ ಮುಖ್ಯವಾಗಿ ಅರೆಹೇರ ಮತ್ತು ಅರವಾನ[೨೪೯] ತೊಲೆ[೨೫೦] ಶುಂಠಿ ಜೀರಿಗೆ ಅಳೆಯುವ ಪಲ[೨೫೧] ಎಣ್ಣೆ ತೂಕಮಾಡುವ ಪಳಿಗೆ[೨೫೨] ಬಳ್ಳ ಕುರಿತು[೨೫೩] ಮಾನದ ಬಗೆಗೆ[೨೫೪] ಹಾಗೂ ಜೋಳ ಮತ್ತು ಭತ್ತದ ಧಾನ್ಯಗಳನ್ನು ಅಳೆಯುವ ಸುಟ್ಟಗ ಹಾಗೂ ಹೇರು[೨೫೫] ಕುರಿತು ಉಲ್ಲೇಖಗಳನ್ನು ನೋಡಬಹುದು.

ಭೂಮಿಯನ್ನು ಅಳೆಯುವ ಅಳತೆ ಮಾಪನಗಳ ವಿವರಗಳು ಈ ಪ್ರದೇಶದ ಶಾಸನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದಾಖಲಾಗಿವೆ. ದಾನ-ದತ್ತಿ ಬಿಡುವ ವಿಶೇಷ ಸಂದರ್ಭಗಳಲ್ಲಿ ಹಲವು ಬಗೆಯ ಹೆಸರಿರುವ ಭೂಮಾಪನ ಅಥವಾ ಅಳತೆಗಳ ಉಲ್ಲೇಖಗಳಿವೆ. ಮಾಣಿಕೇಶ್ವರ ಕೋಲು[೨೫೬] ಮಾಣಿಕೇಶ್ವರ ಗಡಿಂಬ[೨೫೭] ಎಳರಾಮೆಯ ಫಳೆ[೨೫೮] ಎಳರಾಮೆಯ ತೀರ್ಥದ ಗಡಿಂಬ[೨೫೯] ಕುರಿತು ಹೆಚ್ಚು ಉಲ್ಲೇಖಗಳು ಇಲ್ಲಿರುವ ಶಾಸನಗಳಲ್ಲಿ ಪ್ರಸ್ತಾಪವಾಗಿರುವುದನ್ನು ಗಮನಿಸಬಹುದು. ಮಾಣಿಕೇಶ್ವರ ಕೋಲು ಹಗರಟಗಿಯಲ್ಲಿ ಹೆಚ್ಚು ಚಾಲ್ತಿಯಲ್ಲಿದ್ದರೆ ಎಳರಾಮೆ(ಯಡ್ರಾಮೆ) ಫಳೆ ಅಥವಾ ಗಡಿಂಬದ ಉಲ್ಲೇಖ ಏವೂರು ಹಾಗೂ ಮುದನೂರು ಪರಿಸರದಲ್ಲಿ ವಿಶೇಷವಾಗಿ ಕಂಡುಬಂದಿವೆ. ದಾನ ವಿನೋದದ ಫಳೆಯ ಕುರಿತು ಏವೂರಿನ ಶಾಸನವು ಉಲ್ಲೇಖಿಸುತ್ತದೆ[೨೬೯] ವರಟನ ಮಲ್ಲನ ಫಳೆ[೨೭೦] ಮರಟನ ಕೋಲು[೨೭೧] ಮಂಜನಕೋಲು[೨೭೨] ದೇವಮಾನ[೨೭೩] ನಿವರ್ತ್ತನ[೨೭೪] ಪದ್ಮ ಹಸ್ತ[೨೭೫] ಗೇಣ[೨೭೬] ಕಂಬ[೨೭೭] ಕಂಮ[೨೭೮] ಕೆಯ್ಯಾನೀಳ[೨೭೯] ಬೀರೊದ್ದನ ಕೋಲ[೨೮೦] ಹಾಗೂ ಅರವತ್ತು ನಾಲ್ಗೇಣ ಕೋಲ[೨೮೧] ಕುರಿತು ಉಲ್ಲೇಖಗಳನ್ನು ಪ್ರಸ್ತುತ ಪ್ರದೇಶದಲ್ಲಿರುವ ಶಾಸನಗಳಲ್ಲಿ ಗಮನಿಸಬಹುದು.

ಈ ಅಳತೆ ಮಾಪನಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರುತ್ತಿದ್ದವು ಎಂದು ಹೇಳಬಹುದು. ಹಾಗಾಗಿಯೇ ಆಯಾ ಊರಿನ ಪರಿಸರದಲ್ಲಿ ವಿಶೇಷ ಹೆಸರಿನ ಅಳತೆ ಮಾಪನಗಳು ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ನಾಣ್ಯ ತೂಕ ಅಳತೆಗಳ

ಮೇಲೆ ಆಯಾ ಭಾಗದ ಆಡಳಿತಾಧಿಕಾರಿಗಳ ಸಂಪೂರ್ಣ ಹತೋಟಿ ಇರುತ್ತಿತ್ತೆಂದು ಅಭಿಪ್ರಾಯಿಸಲಾಗಿದೆ[೨೭೨].

**ಆದಾಯ, ಖರ್ಚು(ವ್ಯಯ) ಹಾಗೂ ಸಾರ್ವಜನಿಕ ತೆರಿಗೆಗಳು**

ರಾಜ್ಯವು ಅಭಿವೃದ್ಧಿಗೊಳ್ಳಲು ಹಾಗೂ ಸುಭದ್ರ ಸುವ್ಯವಸ್ಥಿತವಾಗಿ ನಡೆಯಲು ಆದಾಯವು ಮುಖ್ಯವಾಗಿ ಬೇಕೆ ಬೇಕಾಗುತ್ತಿತ್ತು. ಹಾಗಾಗಿ ತೆರಿಗೆಯನ್ನು ವ್ಯಾಪಾರದ ವೃತ್ತಿ ಪ್ರವರ್ತಕರ ಮೇಲೆ, ಪ್ರಾಣಿ ಸಂಪತ್ತಿನ ಮೇಲೆ ಸಾಮಾನು ಸರಂಜಾಮುಗಳಿಗೆ ಹಾಗೂ ಆಸ್ತಿಯ ಮೇಲೆ ಕರವನ್ನು ವಿಧಿಸುವ ವಿವರಗಳು ದಾಖಲಾಗಿವೆ. ಈ ವ್ಯವಸ್ಥೆಯು ಎಲ್ಲ ಕಾಲಕ್ಕೂ ನಿರಂತರವಾಗಿ ಮುಂದುವರೆದುಕೊಂಡು ಬಂದಿರುವುದನ್ನು ಗಮನಿಸಬಹುದು. ಅಳತೆ ಮಾಪನ ಹಾಗೂ ತೂಕಗಳಂತೆ ಇಂಥ ಸುಂಕಾದಾಯ(ಆದಾಯ ತೆರಿಗೆ)ದಲ್ಲಿ ಏಕರೂಪತೆ ಇರಲಿಲ್ಲ. ತೆರಿಗೆ ಅಥವಾ ಸುಂಕವನ್ನು ಸಂಗ್ರಹಿಸುವ ಅಧಿಕಾರ ವರ್ಗವೇ ರಾಜ್ಯಾಧಿಕಾರದಲ್ಲಿ ತುಂಬ ಮಹತ್ವದ ಸ್ಥಾನ ಪಡೆದಿತ್ತು. ಕೆಲವೊಮ್ಮೆ ವಸ್ತು-ವಿನಿಮಯ ಪದ್ಧತಿ ಜಾರಿಯಲ್ಲಿದ್ದರಿಂದ ಅದರ ಮೇಲೆ ನಿರ್ದಿಷ್ಟ ಪ್ರಮಾಣದ ತೆರಿಗೆ ವಿಧಿಸುವುದು ಕಷ್ಟವಾಗಿತ್ತು. ಯುದ್ಧದಲ್ಲಿ ಸೋತ ಪ್ರಾಂತಗಳಲ್ಲಿನ ಜನರ ಮೇಲೆ ವಿಜಯಿ ರಾಜ್ಯವು ಹೆಚ್ಚಿನ ತೆರಿಗೆಯನ್ನು ವಸೂಲಿ ಮಾಡಿರುವ ಸಂಗತಿಗಳು ದಾಖಲಾಗಿರುವುದುಂಟು.

ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳಿಗೂ ಸಂಬಂಧಿಸಿದಂತೆ ಕೆಲವು ತೆರಿಗೆಗಳನ್ನು ವಿಧಿಸುತ್ತಿದ್ದರು. ಹಲವಾರು ಗೊತ್ತಳಿಗಳು ಧಾರ್ಮಿಕ ಸಾಮಾಜಿಕ ದಾನ ಚಟುವಟಿಕೆಗಳನ್ನು ನಿರ್ವಹಿಸುವಾಗ ಕೆಲವು ಸೇವಾ ತೆರಿಗೆಗಳನ್ನು ನೀಡುತ್ತಿದ್ದವು ಎಂಬ ವಿವರಗಳು ಇವೆ. ಸಂಬಂಧಿಸಿದ ಅಂಥ ಎಲ್ಲ ವಿವರಗಳನ್ನು ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ವೃತ್ತಿ ಸಮುದಾಯ, ಸಂಘ, ಶ್ರೇಣಿ, ಜನಸಾಮಾನ್ಯರಿಂದ ಹಾಗೂ ಯುದ್ಧ ವಿಜಯಿಗಳಿಂದ ಗಳಿಸಲ್ಪಟ್ಟ ಆದಾಯ ಮತ್ತು ತೆರಿಗೆ ಹಣವನ್ನು ರಾಜ್ಯವು ಹೆಚ್ಚಿನಂಶ ತನ್ನ ಗಡಿರಕ್ಷಣೆ, ಕೋಟೆ ಕಟ್ಟಲು, ದೇವಾಲಯ ನಿರ್ಮಿಸಲು ಸೈನ್ಯ ರಚನೆ, ಯುದ್ಧಾಯುಧಗಳನ್ನು ತಯಾರಿಸಲು ಹಾಗೂ ರಾಜಪರಿವಾರದ ಖರ್ಚಿಗಾಗಿ ರಾಜ್ಯದ ಸಂಪತ್ತನ್ನು ಖರ್ಚು ಮಾಡಲಾಗುತ್ತಿತ್ತು. ಆ ಕುರಿತು ವಿವರಗಳು ಈ ಪ್ರದೇಶದ ಶಾಸನಗಳಲ್ಲಿ ಪ್ರಾಯಶಃ ದಾಖಲಾದಂತಿಲ್ಲ.

ಈ ಪ್ರದೇಶದಲ್ಲಿ ಮುಖ್ಯವಾಗಿ ದಾಖಲಾದ ವಿವರಗಳೆಂದರೆ ಆರುವಣಬೊಟ್ಟು[೨೭೩] ಆರುವಣ[೨೭೪], ಅಷ್ಟಭೋಗ ತೇಜಸ್ವಾಮ್ಯ[೨೭೫] ಎತ್ತಿ ನೊಕ್ಕ[೨೭೬] ಒಕ್ಕಲು ಅಡ್ಡ[೨೭೭] ಒಕ್ಕಲದರೆ[೨೭೮] ಒಕ್ಕಲುಸುಂಕ[೨೭೯] ವಡ್ಡರಾವುಳ[೨೮೦] ಮಡ್ಡರಾವುಳ[೨೮೧] ಜೇಷ್ಠಭೋಗ ತೇಜಾಂಶ[೨೮೨] ತಸ್ಲಂದಿ[೨೮೩] ಬೀರವಣ[೨೮೪] ಮೂಲೆಗ್ರಾಸ[೨೮೫] ವಕ್ಕಲದೆರೆ(೬೬, ಮುದನೂರು) ಸಾರಿಗೆ(೬೭ ಮುದನೂರು) ಸಿದ್ಧಾಯ(೬೯ ಮುದನೂರು ಹಾಗೂ ೯೮, ಹೆಮ್ಮಡಗಿ) ಸೆಟ್ಟದರೆ(೬೭-ಮುದನೂರು)ಸೇಸೆ(೬೭ ಮುದನೂರು) ಸುಂಕ(೮ ಮತ್ತು ೧೩ ಐವೂರು) ಸುಂಕ ಸೊಂಟಕೆ(೨ ಎಡೆಯಾಪುರ) ಹೆಜ್ಜುಂಕ (೩-ಎಡೆಯಾಪುರ, ೧೭, ೫೩ ಮತ್ತು

೬೭ ಐವೂರು ಹಾಗೂ ೯೮-ಹೆಮ್ಮಡಗಿ) ಸಾಮಾಜಿಕ ದಂಡ ಹಾಗೂ ಇನ್ನಿತರ ಸಂಗತಿಗಳಿಗಾಗಿ ವಿಧಿಸಿದದಂಡ(೮ ಐವೂರು) ಹಾಗೂ ದಶವಂದ(೯೮ ಹೆಮ್ಮಡಗಿ) ಪ್ರಕಾರಗಳ ಕುರಿತು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಮುದನೂರಿನ ಶಾಸನವೊಂದರಲ್ಲಿ ಹೊಸಂತಿಲ ಹಾಗ (೬೦ ಮುದನೂರು) ಎಂಬ ತೆರಿಗೆಯನ್ನು ನಮೂದಿಸಿರುವುದನ್ನು ಗಮನಿಸಬಹುದು. ಹೊಸಂತಿಲ ಅಥವಾ ಪೊಸಂತಿಲ್ಲ ಎಂಬುದು ಹೊಸ್ತಿಲು ಅರ್ಥವನ್ನು ನೀಡುತ್ತದೆ. ಬಹುಶಃ ಪ್ರತಿಮನೆಗೆ(ಹೊಸ್ತಿಲು) ವಿಧಿಸುವ ತೆರಿಗೆ ಇದಾಗಿರಬಹುದು.

ಶಹಾಪುರ ತಾಲೂಕಿನ ಶಾಸನಗಳಲ್ಲಿಯು ಅಳತೆ ತೂಕ ಹಾಗೂ ಇತರೆ ವಿವರಗಳ ಕುರಿತು ಸಂಗತಿಗಳು ದಾಖಲಾಗಿವೆ. ಸಿಂಗನ ಗರುಡನ ಗಳೆಯ[೨೮೫], ಸೊಂಟಿಗ[೨೮೬] ಹಿರಿಯ ಕೋಲ ಮತ್ತರ[೨೮೭] ೩೨ ಗೇಣು ಕೋಲು ದಸ(ಶ)ವಂದ ತೆರಿಗೆ[೨೮೮] ೩೨ ಗೇಣ ಕೋಲ [೨೮೯] ೬೪ ಗೇಣ ಕೋಲ[೨೯೦] ಮುಂತಾದ ಉಲ್ಲೇಖಗಳು ದಾಖಲಾಗಿವೆ. ಬಳ್ಳ ಹೇರು, ಮನ ಮತ್ತು ಮಾನ್ಯ ಎಂಬ ವಿವರಗಳು ಸಹ ಈ ತಾಲೂಕಿನ ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು.

ದಾನ ಶಾಸನಗಳುದ್ದಕ್ಕೂ ಕಂಡುಬರುವ ಸರ್ವಾಭಾಧಾ ಪರಿಹಾರ, ಸರ್ವನಮಸ್ಯಾ ತ್ರಿಭೋಗಾದ್ಯಂತರಸಿದ್ಧಿ ಇತ್ಯಾದಿ ವಿವರಗಳು ಅಥವಾ ದಾನದತ್ತಿಗಳು ಬಹುಶಃ ಕರವಿನಾಯಿತಿಗಳಿಂದ ಮುಕ್ತವಾದ ಉಪಭೋಗವನ್ನು ಸೂಚಿಸುತ್ತವೆ. ಅಗ್ರಹಾರ, ಬ್ರಹ್ಮಪುರಿ ಹಾಗೂ ಘಟಿಕಾಸ್ಥಾನಗಳಲ್ಲಿ ವಾಸಿಸುತ್ತಿದ್ದ ಮಹಾಜನರು(ಬ್ರಾಹ್ಮಣರು) ಬಹುಶಃ ಎಲ್ಲ ತೆರಿಗೆಗಳಿಂದ ವಿನಾಯಿತ ಹೊಂದಿದ್ದರು. ಹಾಗೆಯೇ ದೇವಾಲಯಗಳ ಚಟುವಟಿಕೆಗಳು ಸಹ ಕರಗಳಿಂದ ಮುಕ್ತವಾಗಿದ್ದವು ಎಂದು ಅಭಿಪ್ರಾಯಿಸಬಹುದು. ಒಟ್ಟಾರೆ ಈ ಅಧ್ಯಾಯದಲ್ಲಿ ಈ ಪ್ರದೇಶದಲ್ಲಿ ಲಭ್ಯವಿರುವ ಹಾಗೂ ಈ ಭಾಗದ ಇತಿಹಾಸದ ಮಾಹಿತಿಗಳನ್ನು ನೀಡಿರುವ ಬೇರೆ ಬೇರೆ ಪರಿಸರದ ಕೆಲವೊಂದು ಶಾಸನಗಳಲ್ಲಿ ದಾಖಲಾದ ವಿವರಗಳನ್ನು ಅನುಲಕ್ಷಿಸಿ ಈ ವಿವರಗಳನ್ನು ಕಟ್ಟಿಕೊಡಲಾಗಿದೆ. ಯಾದಗಿರಿ ಜಿಲ್ಲೆಯ ಪರಿಸರದ ಪ್ರಾಚೀನ ಸಮಾಜೋ-ಧಾರ್ಮಿಕ ಹಾಗೂ ಆರ್ಥಿಕ ಅಂಶಗಳನ್ನು ಅವಶ್ಯಕತೆಯಿದ್ದಷ್ಟು ಹಾಗೂ ಈ ಪ್ರಾಚೀನ ಪರಿಸರದಲ್ಲಿದ್ದ ಕೆಲವು ಸಾಹಿತ್ಯಿಕ ವಿವರಗಳನ್ನು ಸಂಕ್ಷಿಪ್ತವಾಗಿ ಈ ಅಧ್ಯಾಯದಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

## ಕೊನೆ ಟಿಪ್ಪಣಿ

೧. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೫೨

೨. ಅದೇ ಪುಟ.೧೫೨

೩. ಸುತಾಶಾ.ಶಾ.ಸಂ.೬೩, ಮುದನೂರು

೪. ಸು.ತಾ.ಶಾ.ಸಂ.ಸಂ.೮, ಐವೂರು

೫. ಅದೇ ಶಾ.ಸಂ.೯೬, ಮಣಸಗಿ, ಪುಟ.೨೫

೬. ಅದೇ ಶಾ.ಸಂ.೩೭, ತಿಂಥಣಿ

೭. ಅದೇ ಶಾ.ಸಂ.೮, ಏವೂರು, ಪುಟ.೨೬

೮. ಅದೇ ಶಾ.ಸಂ.೩೨, ಕೆಂಬಾವಿ, ಪುಟ.೭೩

೯. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೫೪

೧೦. ಜಡಿಗೇರ ವಾಸುದೇವ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ–೧, ಪುಟ.೧೭೬

೧೧. ಸು.ತಾ.ಶಾ.ಶಾ.ಸಂ.೮, ಏವೂರು, ಪುಟ.೨೭

೧೨. ಅದೇ ಪುಟ.೨೭

೧೩. ಅದೇ ಶಾ.ಸಂ.೨೨, ಕಕ್ಕೇರಿ ಪುಟ.೫೩

೧೪. ಅದೇ ಶಾ.ಸಂ.೬೯, ಮುದನೂರು, ಪುಟ.೧೪೮

೧೫. ಅದೇ ಶಾ.ಸಂ.೮೫, ಮುದನೂರು

೧೬. ಕ.ಜಿ.ಶಾ.ಶಾ.ಸಂ.೨೮, ಸಗರ(ಸಹಾಪುರ ತಾಲೂಕು), ಪುಟ.೪೩೨

೧೭. ಅದೇ ಶಾ.ಸಂ.೩೫, ಶಹಾಪುರ ತಾಲೂಕು), ಪುಟ.೪೪೭

೧೮. ಸು.ಜಿ.ಶಾ.ಶಾ.ಸಂ.೩೩, ಕೆಂಬಾವಿ, ಪುಟ.೭೫

೧೯. ಅದೇ ಶಾ.ಸಂ.೪೯, ಬೊಮ್ಮನಹಳ್ಳಿ

೨೦. ಅದೇ ಶಾ.ಸಂ.೮೯, ಹಗರಟಗಿ, ಪುಟ.೧೮೮

೨೧. ಅದೇ ಶಾ.ಸಂ.೮೪, ಹಗರಟಗಿ, ಪುಟ.೧೭೩

೨೨. ಸು.ತಾ.ಶಾ.ಪುಟ.liii

೨೩. ಅದೇ ಶಾ.ಸಂ.೮, ಏವೂರು, ಪುಟ.೨೭

೨೪. ಅದೇ ಶಾ.ಸಂ.೪೬, ಬೈಚಬಾಳ, ಪುಟ.೧೦೧

೨೫. ಅದೇ ಶಾ.ಸಂ.೯೩, ಹಿರಿಯ ಹೆಬ್ಬಾಳ, ಪುಟ.೧೯೭

೨೬. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೮೬

೨೭. ಅದೇ ಶಾ.ಸಂ.೬೭ ಮುದನೂರು ಪುಟ.೧೪೨

೨೮. ಗೋಗಿ ಹನುಮಾಕ್ಷಿ, ಅದೇ ಶಾ.ಸಂ.೭೬, ರಾಜನಕೋಳೂರು), ಪುಟ.೧೬೧

೨೯. ಅದೇ ಶಾ.ಸಂ.೯೦, ಹಗರಟಗಿ, ಪುಟ.೧೯೧

೩೦. ಅದೇ ಶಾ.ಸಂ.೧೪, ಏವೂರು, ಪುಟ.೩೮

೩೧. ಸು.ತಾ.ಶಾ.ಪುಟ.lii

೩೨. ಅದೇ ಶಾ.ಸಂ.೨೦, ಏವೂರು, ಪುಟ.೫೦

೩೩. ಅದೇ ಶಾ.ಸಂ.೩೫, ಚೆನ್ನೂರು, ಪುಟ.೭೯

೩೪. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೫೯

೩೫. ಸು.ತಾ.ಶಾ.ಶಾ.ಸಂ.೨, ಎಡೆಯಾಪುರ, ಪುಟ.೩

೩೬. ಕ.ಜಿ.ಶಾ.ಶಾ.ಸಂ.೩(ಶಹಾಪುರ ತಾಲೂಕು), ಪುಟ.೩೯೩

೩೭. ಅದೇ ಪುಟ.೧೫೯

೩೮. ಸುತಾಶಾಶಾಸಂ.೨೫, ಕಚಕನೂರು, ಪುಟ.೫೭

೩೯. ಅದೇ ಶಾ.ಸಂ.೩೧, ಕೆಂಬಾವಿ, ಪುಟ.೭೯-೮೦

೪೦. ಅದೇ ಶಾ.ಸಂಖ್ಯೆ.೬೪, ಮುದನೂರು, ಪುಟ.೧೩೪-೧೩೫

೪೧. ಅದೇ ಶಾ.ಸಂ.೮, ಏವೂರು

೪೨. ಅದೇ ಶಾ.ಸಂ.೮೫, ಹಗರಟಗಿ

೪೩. ಅದೇ ಶಾ.ಸಂ. ೮೮ ಹಗರಟಗಿ

೪೪. ಅದೇ ಶಾ.ಸಂ.೯೫, ಹುಣಸಗಿ

೪೫. ಅದೇ ಶಾ.ಸಂ.೩೨, ಹುಣಸಗಿ

೪೬. ಅದೇ ಶಾ.ಸಂ.೯೮, ಹೆಮ್ಮಡಗಿ

೪೭. ಅದೇ ಶಾ.ಸಂ.೮೫, ಹಗರಟಗಿ

೪೮. ಸು.ತಾ.ಶಾ.ಪುಟ.lii

೪೯. ಕ.ಜಿ.ಶಾ.ಶಾ.ಸಂ.೧೧, ದೋರನಹಳ್ಳಿ(ಶಹಾಪುರ ತಾಲೂಕು), ಪುಟ.೪೦೬

೫೦. ಅದೇ ಶಾ.ಸಂ.೭೦, ವಡಗೇರಿ(ಜೇವರ್ಗಿ ತಾಲೂಕು)

೫೧. ಸು.ತಾ.ಶಾ.ಶಾ.ಸಂ.೩೭, ತಿಂಥಣಿ

೫೨. ಅದೇ ಶಾ.ಸಂ.೮, ಏವೂರು, ಪುಟ.೧೯

೫೩. ಕ.ಜಿ.ಶಾ. ಶಾ.ಸಂ.೩೫ ಮತ್ತು ೩೬, ಸಂಗಮ(ಶಹಾಪುರ ತಾಲೂಕು)

೫೪. ಸು.ತಾ.ಶಾ.ಶಾ.ಸಂ.೮, ಮುದನೂರು

೫೫. ಅದೇ ಶಾ.ಸಂ.೮, ಏವೂರು

೫೬. ಅದೇ ಶಾ.ಸಂ.೫೨, ಮುದನೂರು, ಪುಟ.೧೧೩

೫೭. ಅದೇ ಶಾ.ಸಂ.೯೦, ಹಗರಟಗಿ, ಪುಟ.೧೯೦

೫೮. ಕ.ಜಿ.ಶಾ.ಸು.೨೯, ಸಗರ, (ಶಹಾಪುರ ತಾಲೂಕು).

೫೯. ಕ.ಜಿ.ಶಾ.ಶಾ.ಸಂ.೧೮, ಮದ್ರಕಿ(ಶಹಾಪುರ ತಾಲೂಕು)

೬೦. ಸು.ತಾ.ಶಾ.ಶಾ.ಸಂ.೮, ಏವೂರು

೬೧. ಅದೇ ಶಾ.ಸಂ.೩೭, ತಿಂಥಣಿ

೬೨. ಅದೇ ಶಾ.ಸಂ.೯೯, ಮುದನೂರು

೬೩. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೧೭೬

೬೪. ಅದೇ ಪುಟ.೧೭೬

೬೫. ಸು.ತಾ.ಶಾ.ಶಾ.ಸಂ.೮, ಏವೂರು, ಪುಟ.೨೫

೬೬. ಅದೇ ಶಾ.ಸಂ.೩೭, ತಿಂಥಣಿ

೬೭. ಕ.ಜಿ.ಶಾ.ಶಾ.ಸಂ.೨೮, ಸಗರ(ಶಹಾಪುರ ತಾಲೂಕು)

೬೮. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೨೭೮

೬೯. ಸು.ತಾ.ಶಾ.ಶಾ.ಸಂ.೩೭, ತಿಂಥಣಿ

೭೦. ಅದೇ ಶಾಸಂ.೮೪, ಹಗರಟಗಿ

೭೧. ಕ.ಜಿ.ಶಾ.ಶಾ.ಸಂ.೩೬, ಸಂಗಮ(ಶಹಾಪುರ ತಾಲೂಕು)

೭೨. ಅದೇ ಶಾ.ಸಂ.೩೫. ಸಂಗಮರು

೭೩. ಸು.ತಾ.ಶಾ.ಪುಟ.lxi

೭೪. ಅದೇ ಶಾ.ಸಂ.೮, ಏವೂರು

೭೫. ಅದೇ ಶಾ.ಸಂ.೯೭, ಹೆಮ್ಮಡಗಿ

೭೬. ಅದೇ ಶಾ.ಸಂ.೯೪, ಹುಣಸಗಿ

೭೭. ಅದೇ ಶಾ.ಸಂ.೪೧, ದೇವರಗೋನಾಲ

೭೮. ಅದೇ ಪುಟ.lxiii

೭೯. ಅದೇ ಶಾ.ಸಂ.೩೧, ಕೆಂಬಾವಿ

೮೦. ಅದೇ ಶಾ.ಸಂ.೯೨, ಹಾವಿನಾಳ

೮೧. ಅದೇ ಪುಟ.lxiv

೮೨. ಅದೇ ಶಾಸನ ಸಂಖ್ಯೆ ೯೪, ಹುಣಸಗಿ

೮೩. ಅದೇ ಶಾ.ಸಂ.೪೬, ಬೈಚಬಾಳ

೮೪. ಅದೇ ಶಾ.ಸಂ.೯೩, ಹಿರಿಯ ಹೆಬ್ಬಾಳ

೮೫. ಅದೇ ಪುಟ.lxx

೮೬. ಅದೇ ಶಾ.ಸಂ.೨೦, ಏವೂರು

೮೭. ಅದೇ ಶಾ.ಸಂ.೮, ಏವೂರು

೮೮. ಅದೇ ಶಾ.ಸಂ.೧೪, ಏವೂರು

೮೯. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ–೨೫೯

೯೦. ಕ.ಜಿ.ಶಾ.ಸಂ.೩೦, ಸಿರವಾಳ(ಶಹಾಪುರ ತಾಲೂಕು) ಪುಟ.

೯೧. ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೬೦

೯೨. ಸು.ತಾ.ಶಾ.ಸಂ.೪೯, ಬೊಮ್ಮನಹಳ್ಳಿ

೯೩. ಅದೇ ಶಾ.ಸಂ.೩೩, ಕೆಂಬಾವಿ

೯೪. ಅದೇ ಶಾ.ಸಂ.೮೪, ಹಗರಟಗಿ

೯೫. ಅದೇ ಅನುಬಂಧ: ಶಾಸಂ. ೨ ಮತ್ತು ೫ ಏವೂರು, ಪುಟ.೨೧೮–೨೨೧

೯೬. ಕ.ಜಿ.ಶಾ.ಶಾ.ಸಂ.೬, ಗೋಗಿ(ಶಹಾಪುರ ತಾಲೂಕು

೯೭. ಸು.ತಾ.ಶಾ.ಅನುಬಂಧ, ಶಾ.ಸಂ.೫, ಏವೂರು, ಪುಟ.೨೨೧

೯೮. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ

೯೯. ಸು.ತಾ.ಶಾ.ಶಾ.ಸಂ.೩೩, ಕೆಂಬಾವಿ

೧೦೦. ಅದೇ ಶಾಸಂ.೮೯, ಹಗರಟಗಿ

೧೦೧. ಅದೇ ಶಾ.ಸಂ.೩೩, ಕೆಂಬಾವಿ

೧೦೨. ಅದೇ ಶಾ.ಸಂ.೮೯, ಹಗರಟಗಿ

೧೦೩. ಕ.ಜಿ.ಶಾ.ಶಾ.ಸಂ.೬, ಗೋಗಿ(ಶಹಾಪುರ ತಾಲೂಕು).

೧೦೪. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೬೭

೧೦೫. ಅದೇ ಪುಟ.೨೬೭

೧೦೬. ಸು.ತಾ.ಶಾ.ಶಾ.ಸಂ.೮, ಏವೂರು

೧೦೭. ಹೈ.ಕ.ಬಾ.ಕ.ಶಿ.ಶಾ.ಪುಟ.xxi

೧೦೮. ಅದೇ ಶಾ.ಸಂ.ತಾ.ಶಾ. ಏವೂರು

೧೦೯. ಅದೇ ಶಾ.ಸಂ.೧೫, ಏವೂರು

೧೧೦. ಅದೇ ಶಾ.ಸಂ.೧೫, ಏವೂರು

೧೧೧. ಅದೇ ಶಾ.ಸಂ.೮೮, ಹಗರಟಗಿ

೧೧೨. ಅದೇ ಶಾ.ಸಂ.೯೪, ಹುಣಸಗಿ

೧೧೩. ಅದೇ ಶಾ.ಸಂ.೭೩, ಯಾಳಗಿ

೧೧೪. ಅದೇ ಶಾ.ಸಂ.೯೩, ಹಿರಿಯ ಹೆಬ್ಬಾಳ

೧೧೫. ಅದೇ ಪುಟ.೧೯೬

೧೧೬. ಅದೇ ಶಾ.ಸಂ.೭೫ ಮತ್ತು ೭೬, ರಾಜನಕೋಳೂರು

೧೧೭. ಅದೇ ಶಾ.ಸಂ.೩೭, ತಿಂಥಣಿ

೧೧೮. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೭೦

೧೧೯. ಕಲಬುರ್ಗಿ ಎಂ.ಎಂ., ಮಾರ್ಗ-೨, ಪುಟ.೧೬೯

೧೨೦. ಅದೇ ಪುಟ.೧೬೯)

೧೨೧. ಡೇವಿಡ್ ಲಾರೆಂಜನ್, ಕಾಪಾಲಿಕರು ಮತ್ತು ಕಾಳಾಮುಖರು, ಪುಟ.೭

೧೨೨. ಕ.ಜಿ.ಶಾ.ಶಂ.ನಂ.೨೮, ಸಗರ(ಶಹಾಪುರ ತಾಲೂಕು) ಪುಟ.೪೩೨

೧೨೩. ಕಲಬುರ್ಗಿ, ಮಾರ್ಗ-೩, ಪುಟ.೧೬೩

೧೨೪. ಡೆವಿಡ್ ಲಾರೆಂಜನ್, ಕಾಪಾಲಿಕ ಮತ್ತು ಕಾಳಾಮುಖರು, ಪುಟ.೨೮೬

೧೨೫. ಕಲಬುರ್ಗಿ, ಮಾರ್ಗ-೪, ಪುಟ.೭೬

೧೨೬. ಡೆವಿಡ್ ಲಾರೆಂಜನ್, ಕಾಪಾಲಿಕ ಮತ್ತು ಕಾಳಾಮುಖ, ಪುಟ.೨೨೭

೧೨೭. ಕಲಬುರ್ಗಿ ಎಂ.ಎಂ., ಮಾರ್ಗ-೧, ಪುಟ.೧೬೮

೧೨೮. ಕಲಬುರ್ಗಿ ಎಂ.ಎಂ., ಮಾರ್ಗ-೧, ಪುಟ.೧೭೦

೧೨೯. ಕಾಪಾಲಿಕ ಮತ್ತು ಕಾಳಾಮುಖ, ಪುಟ.೧೯೩

೧೩೦. ಸು.ತಾ.ಶಾ.ಶಾ.ಸಂ.೮, ಏವೂರು, ಪುಟ.೨೫

೧೩೧. ಅದೇ ಶಾ.ಸಂ.೧೯, ಏವೂರು

೧೩೨. ಅದೇ ಶಾ.ಸಂ.೪೬, ಬೈಚಬಾಳ

೧೩೩. ಅದೇ ಶಾ.ಸಂ.೨೮, ಕನ್ನೆಳ್ಳಿ

೧೩೪. ಅದೇ ಶಾ.ಸಂ.೯೨, ಹಾವಿನಾಳ

೧೩೫. ಅದೇ ಶಾ.ಸಂ.೫೨, ೫೪, ೬೫ ಹಾಗೂ ೬೨, ಮುದನೂರು

೧೩೬. ಅದೇ ಶಾ.ಸಂ.೬೯, ೮೫, ೮೬, ೮೭ ಮತ್ತು ೮೮, ಹಗರಟಗಿ

೧೩೭. ಅದೇ ಶಾ.ಸಂ.೯೮, ಹೆಮ್ಮಡಗಿ

೧೩೮. ಕ.ಜಿ.ಶಾ.ಶಾ.ಸಂ.೪೨, ಹೋತಗಲ್(ಶಹಾಪುರ ತಾಲೂಕು), ಪುಟ.೪೬೨

೧೩೯. ಅದೇ ಶಾ.ಸಂ.೨೮, ಸಗರ(ಶಹಾಪುರ ತಾಲೂಕು) ಪುಟ.೪೩೨

೧೪೦. ಸು.ತಾ.ಶಾ.ಶಾ.ಸಂ.೮, ಏವೂರು

೧೪೧. ಸು.ತಾ.ಶಾ.ಶಾ.ಸಂ.೧೨, ಮತ್ತು ೧೩ ಏವೂರು

೧೪೨. ಅದೇ ಶಾ.ಸಂ.೨೮, ಕನ್ನೆಳ್ಳಿ

೧೪೩. ಅದೇ ಪುಟ.xlix

೧೪೪. ಅದೇ.ಶಾ.ಸಂ.೪೫, ಬೈಚಬಾಳ

೧೪೫. ಅದೇ ಶಾ.ಸಂ.೯೮, ಹೆಮ್ಮಡಗಿ

೧೪೬. ಶಿವಾನಂದ ವ್ಹಿ., ಹೈದ್ರಾಬಾದ್-ಕರ್ನಾಟಕ ಭಾಗದ ಶಿಲಾಶಾಸನಗಳು, ಪುಟ.೨೨೮

೧೪೭. ಅದೇ ಶಾ.ಸಂ.೨೨, ಕಕ್ಕೇರಿ

೧೪೮. ಗೋಗಿ ಹನುಮಾಕ್ಷಿ, ಅನುಶಾಸನ, ಸಂಪುಟ.೧, ಪುಟ.೧೦೨

೧೪೯. ಕಲಬುರ್ಗಿ ಎಂ.ಎಂ., ಮಾರ್ಗ-೪, ಪುಟ.೩೦೫

೧೫೦. ಅದೇ ಪುಟ.೩೮೫

೧೫೧. ಕ.ಜಿ.ಶಾ.ಶಾ.ಸಂ.೨೮, ಸಗರ, ಶಾಹಪುರ ತಾಲೂಕು

೧೫೨. ಸು.ತಾ.ಶಾ.ಸಂ.೫೨, ಮುದನೂರು

೧೫೩. ಅದೇ ಶಾ.ಸಂ.೨೨, ಕಕ್ಕೇರಿ

೧೫೪. ಕ.ಜಿ.ಶಾ.ಶಾ.೩೨, ಸಿರಿವಾಳ(ಶಹಾಪುರ ತಾಲೂಕು)

೧೫೫. ಅದೇ ಶಾ.ಸಂ.೪೧, ಹೋತಗಲ್ಲ(ಶಹಾಪುರ ತಾಲೂಕು)

೧೫೬. ಕ.ಜಿ.ಶಾ.ಶಾ.ಸಂ.೩೫, ಸಂಗಮ(ಶಹಾಪುರ ತಾಲೂಕು)

೧೫೭. ಲಾರೆಂಜನ್ ಡೆವಿಡ್, ಕಾಪಾಲಿಕ ಮತ್ತು ಕಾಳಾಮುಖ, ಪುಟ.೧೩೫

೧೫೮. ಸು.ತಾ.ಶಾ.ಶಾ.ಸಂ.೩೨, ಕೆಂಬಾವಿ, ಪುಟ.೭೩-೭೪

೧೫೯. ಸು.ತಾ.ಶಾ. ಅದೇ ಶಾ.ಸಂ.೮೪, ಹಗರಟಗಿ

೧೬೦. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೦೨

೧೬೧. ಕ.ಜಿ.ಶಾ.ಶಾ.ಸಂ. ೨೫, ಮುಡಬಾಳ(ಶಹಾಪುರ ತಾಲೂಕು), ಪುಟ.೪೨೮

೧೬೨. ಸಾ.ತಾ.ಶಾ.ಶಾ.ಸಂ.೮, ಏವೂರು, ಪುಟ.೨೫

೧೬೩. ಅದೇ ಶಾ.ಸಂ.೧೧, ಏವೂರು, ಪುಟ.೩೩

೧೬೪. ಅದೇ ಶಾ.ಸಂ.೬೨, ಮುದನೂರು, ಪುಟ.೧೩೧

೧೬೫. ಅದೇ ಶಾ.ಸಂ.೬೪, ಮುದನೂರು, ಪುಟ.೧೬೪

೧೬೬. ಅದೇ ಶಾ.ಸಂ.೪೪, ಬಾಚಲಾಪುರ, ಪುಟ.೯೭

೧೬೭. ಅದೇ ಶಾ.ಸಂ.೩೧, ಕೆಂಬಾವಿ, ಪುಟ.೭೦-೭೧

೧೬೮. ಅದೇ ಶಾ.ಸಂ.೩೬, ತೀರ್ಥ, ಪುಟ.೮೧

೧೬೯. ಅದೇ ಶಾಸಂ.೯, ಏವೂರು, ಪುಟ.೨೯

೧೭೦. ಅದೇ ಶಾ.ಸಂ.೭೦, ಮುದನೂರು, ಪುಟ.೧೫೧

೧೭೧. ಅದೇ ಶಾ.ಸಂ.೨ ಎಡೆಯಾಪುರ, ಪುಟ.೩

೧೭೨. ಸು.ತಾ.ಶಾ.ಸಂ.೩೭, ತಿಂಥಣಿ, ಪುಟ.೮೮

೧೭೩. ಅದೇ ಶಾ.ಸಂ.೪೭, ಬೈಚಬಾಳ, ಪುಟ.೧೦೨

೧೭೪. ಅದೇ ಶಾ.ಸಂ.೯೨, ಹಾವಿನಾಳ, ಪುಟ.೧೯೪

೧೭೫. ಅದೇ ಶಾ.ಸಂ.೭೫), ರಾನಕೋಳೂರು, ಪುಟ.೧೬೦

೧೭೬. ಅದೇ ಶಾಸಂ.೯, ಏವೂರು, ಪುಟ.೨೯

೧೭೭. ಅದೇ ಶಾ.ಸಂ.೫೪, ಮುದನೂರು

೧೭೮. ಅದೇ ಶಾ.ಸಂ.೫೨, ಮುದನೂರು

೧೭೯. (ಕ.ಜಿ.ಶಾ.ಶಾ.ಸಂ.೧, ಅಣಬಿ(ಶಾಹಪುರ ತಾಲೂಕು) ಪುಟ.೩೯೧

೧೮೦. ಅದೇ ಶಾ.ಸಂ.೮, ಏವೂರು, ಪುಟ.೨೫

೧೮೧. ಅದೇ ಶಾ.ಸಂ.೧೯, ಏವೂರು, ಪುಟ.೪೮

೧೮೨. ಅದೇ ಶಾ.ಸಂ.೯, ಏವೂರು, ಪುಟ.೨೯

೧೮೩. ಅದೇ ಶಾಸಂ.೨೨, ಕಕ್ಕೇರಿ, ಪುಟ.೫೩

೧೮೪. ಅದೇ ಶಾ.ಸಂ.೨೧, ಪುಟ.೫೧

೧೮೫. ಅದೇ ಶಾಸಂ ೨೬, ಕಡಕಲ್ಲು, ಪುಟ.೬೧

೧೮೬. ಅದೇ ಶಾ.ಸಂ.೪೬, ಬೈಚಬಾಳ, ಪುಟ.೧೦೧

೧೮೭. ಕಜಿಶಾ.ಶಾ.ಸಂ.೧೩, ಧರಿಯಾಪುರ(ಶಹಾಪುರ ತಾಲೂಕು), ಪುಟ.೪೧೦

೧೮೮. ಅದೇ ಶಾ.ಸಂ.೫, ಏವೂರು, ಪುಟ.೮

೧೮೯. ಅದೇ ಶಾ.ಸಂ.೭೩, ಯಾಳಗಿ, ಪುಟ.೧೫೫

೧೯೦. ಅದೇ ಶಾ.ಸಂ.೫೨, ಮುದನೂರು, ಪುಟ.೧೧೩

೧೯೧. ಅದೇ ಶಾ.ಸಂ.೯೦, ಹಗರಟಗಿ, ಪುಟ.೧೯೦

೧೯೨. ಅದೇ ಶಾ.ಸಂ.೮೬, ಹಗರಟಗಿ

೧೯೩. ಸು.ತಾ.ಶಾ.ಶಾ.ಸಂ.೮೧ ರಿಂದ ೯೧, ಹಗರಟಗಿ, ಶಾ.ಸಂ.೪ ರಿಂದ ೨೧, ಏವೂರು ಹಾಗೂ ಶಾ.ಸಂ. ೫೨ ರಿಂದ ೭೨ ಮುದನೂರು ಗ್ರಾಮಗಳ ಶಾಸನಗಳ ವಿವರಗಳಲ್ಲಿ ಹೆಚ್ಚಾಗಿ ಅವುಗಳ ಕುರಿತು ವಿವರಗಳಿವೆ.

೧೯೪. ಅದೇ ಶಾ.ಸಂ.೧೬, ಏವೂರು, ಪುಟ.೪೩

೧೯೫. ಕ.ಜಿ.ಶಾ.ಶಾ.ಸಂ.೨೮, ಸಗರ, ಶಹಾಪುರ ತಾಲೂಕು( ಪುಟ.೪೩೪

೧೯೬. ಸು.ತಾ.ಶಾ.ಸಂ.೯೭, ೯೮, ೯೯ ಮತ್ತು ೧೦೦, ಹೆಮ್ಮಡಗಿ

೧೯೭. ಅದೇ ಶಾ.ಸಂ.೧೬, ಏವೂರು

೧೯೮. ಅದೇ ಶಾ.ಸಂ.೨೮, ಕನ್ನೆಳ್ಳಿ, ಪುಟ.೬೫

೧೯೯. ಅದೇ ಶಾ.ಸಂ.೫೬, ಮುದನೂರು

೨೦೦. ಅದೇ ಶಾ.ಸಂ.೬೭, ಮುದನೂರು

೨೦೧. ಅದೇ ಶಾ.ಸಂ.೫೬, ಮುದನೂರು, ಪುಟ.೧೨೦

೨೦೨. ಅದೇ ಶಾ.ಸಂ.೫೬, ಮುದನೂರು

೨೦೩. ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೧೦

೨೦೪. ಸು.ತಾ.ಶಾ.ಶಾ.ಸಂ.೧೧, ಏವೂರು

೨೦೫. ಅದೇ ಶಾ.ಸಂ.೫೨, ಮುದನೂರು

೨೦೬. ಕ.ಜಿ.ಶಾ.ಶಾ.ಸಂ.೪೨, ಹೋತಗಲ್, ಶಹಾಪುರ ತಾಲೂಕು, ಪುಟ.೪೬೨

೨೦೭. ಸು.ತಾ.ಶಾ.ಶಾ.ಸಂ.೫೯, ಮುದನೂರು

೨೦೮. ಅದೇ ಶಾ.ಸಂ.೮೫, ಹಗರಟಗಿ

೨೦೯. ಅದೇ ಶಾ.ಸಂ.೮೫, ಹಗರಟಗಿ

೨೧೦. ಅದೇ ಶಾ.ಸಂ.೮೩, ಹಗರಟಗಿ

೨೧೧. ಅದೇ ಶಾ.ಸಂ.೯೦, ಹಗರಟಗಿ

೨೧೨. ಕೊಪ್ಪ ಎಸ್.ಕೆ., ತರ್ದವಾಡಿ ನಾಡು ಒಂದು ಅಧ್ಯಯನ, ಪುಟ.೨೧೧

೨೧೩. ಸು.ತಾ.ಶಾ.ಶಾ.ಸಂ.೫೭, ಮುದನೂರು

೨೧೪. ಅದೇ ಶಾ.ಸಂ.೬೦, ಮುದನೂರು

೨೧೫. ಅದೇ ಶಾ.ಸಂ.೪೫, ಬಿಜಾಸಪುರ

೨೧೬. ಕ.ಜಿ.ಶಾ.ಶಾ.ಸಂ.೨೮, ಸಗರ(ಶಹಾಪುರ ತಾಲೂಕು)

೨೧೭. ಅದೇ ಶಾ.ಸಂ.೩೨, ಸಿರಿವಾಳ(ಶಹಾಪುರ ತಾಲೂಕು)

೨೧೮. ಹೈ.ಕ.ಕ.ಶಿ.ಪುಟ.xxx ಮತ್ತು ಕ.ಜಿ.ಶಾ.ಸಂ.೩೩, ಸಿರಿವಾಳ(ಶಹಾಪುರ ತಾಲೂಕು) ಕ್ರಿ.ಶ.೧೧೮೯, ಪುಟ.೪೪೨

೨೧೯. ಸು.ತಾ.ಶಾ.ಶಾ.ಸಂ.೮೫, ಹಗರಟಗಿ, ಪುಟ.೧೭೭

೨೨೦. ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ.೧೨

೨೨೧. ತರ್ದವಾಡಿನಾಡು: ಒಂದು ಅಧ್ಯಯನ, ಪುಟ.೨೧೪

೨೨೨. ಕ.ಜಿ.ಶಾ.ಶಾ.ಸಂ.೩೨, ಸಿರಿವಾಳ ಶಹಾಪುರ ತಾಲೂಕು

೨೨೩. ಸು.ತಾ.ಶಾ.ಶಾ.ಸಂ.೫೫, ಮುದನೂರು ಶಾ.ಸಂ.೮೫ ಮತ್ತು ೮೬, ಹಗರಟಗಿ

೨೨೪. ಅದೇ ಶಾ.ಸಂ. ೮೫, ಹಗರಟಗಿ

೨೨೫. ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ೧೯೮೬, ಧಾರವಾಡ ಹಾಗೂ ಕೊಪ್ಪ ಎಸ್.ಕೆ, ತರ್ದವಾಡಿ ನಾಡು: ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ೧೯೯೦, ಸಿಂದಗಿ

೨೨೬. ಸು.ತಾ.ಶಾ.ಸಂ.೧೪, ಏವೂರು

೨೨೭. ಅದೇ ಶಾ.ಸಂ.೬೧, ಮುದನೂರು, ಶಾ.ಸಂ.೮೫, ಹಗರಟಗಿ

೨೨೮. ಶಾ.ಸಂ.೯೦, ಹಗರಟಗಿ

೨೨೯. ಅದೇ ಶಾ.ಸಂ.೮೭, ಹಗರಟಗಿ ಮತ್ತು ಶಾ.ಸಂ.೫೯, ಮುದನೂರು

೨೩೦. ಅದೇ ಶಾ.ಸಂ.೩, ಎಡೆಯಾಪುರ, ಶಾಸಂ.೫೫ ಮತ್ತು ೬೧, ಮುದನೂರು ಹಾಗೂ ಶಾ.ಸಂ.೮೬, ಹಗರಟಗಿ

೨೩೧. ಅದೇ ಶಾ.ಸಂ.೨೨ ಕಕ್ಕೇರಿ)

೨೩೨. ಅದೇ ಶಾ.ಸಂ.೮೪, ಹಗರಟಗಿ

೨೩೩. ಅದೇ ಶಾ.ಸಂ.೧೫, ಏವೂರು

೨೩೪. ಶಾಸಂ.೮೬, ಹಗರಟಗಿ) ಸೆಟ್ಟಿಗುತ್ತ(ಅದೇ ಶಾ.ಸಂ.೫೬, ಮತ್ತು ೫೯, ಮುದನೂರು, ಶಾಸಂ.೭೬, ರಾಜನಕೋಳೂರು, ಶಾ.ಸಂ. ೮೮ ಮತ್ತು ೯೧, ಹಗರಟಗಿ

೨೩೫. ಅದೇ ಶಾ.ಸಂ.೯೦ ಹಗರಟಗಿ, ಪುಟ.೧೯೦

೨೩೬. ಕೊಪ್ಪ ಎಸ್.ಕೆ., ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೨೦

೨೩೭. ಅದೇ ಪುಟ.೨೨೦-೨೨೧

೨೩೮. ಸು.ತಾ.ಶಾ.ಶಾ.ಸಂ.೧೯, ಐವೂರು

೨೩೯. ಅದೇ ಶಾ.ಸಂ.೬೫, ಮುದನೂರು

೨೪೦. ಅದೇ ಶಾ.ಸಂ.೭೪, ರಾಜನಕೋಳೂರು

೨೪೧. ಅದೇ ಶಾ.ಸಂ.೧೦ ಐವೂರು ಮತ್ತು ಶಾ.ಸಂ.೫೯, ಮುದನೂರು

೨೪೨. ಅದೇ ಶಾ.ಸಂ.೧೪, ಐವೂರು

೨೪೩. ಅದೇ ಶಾ.ಸಂ.೮೪-೮೫, ಮುದನೂರು ಮತ್ತು ಶಾ.ಸಂ. ೬೬, ೬೭, ಮುದನೂರು

೨೪೪. ಅದೇ ಶಾ.ಸಂ.೧೭ ಐವೂರು

೨೪೫. ಅದೇ ಶಾ.ಸಂ. ೧೦ ಐವೂರು, ಶಾ.ಸಂ. ೬೭ ಮುದನೂರು, ಶಾ.ಸಂ.೮೪ ಹಗರಟಗಿ

೨೪೬. ಅದೇ ಶಾ.ಸಂ. ೮,೧೦,೧೨ ಐವೂರು ಮತ್ತು ಶಾ.ಸಂ. ೫೨,೬೨ ಮುದನೂರು

೨೪೭. ಅದೇ ಶಾ.ಸಂ. ೮೪, ೮೫ ಮತ್ತು ೯೦, ಹಗರಟಗಿ

೨೪೮. ಅದೇ ಶಾ.ಸಂ.೮೪, ಹಗರಟಗಿ

೨೪೯. ಅದೇ ಶಾ.ಸಂ.೮೫, ಹಗರಟಗಿ

೨೫೦. ಅದೇ ಶಾ.ಸಂ.೮೪, ಹಗರಟಗಿ

೨೫೧. ಅದೇ ಶಾ.ಸಂ.೫೯, ಮುದನೂರು

೨೫೨ ಅದೇ ಶಾ.ಸಂ.೭೩, ಯಾಳಗಿ

೨೫೩ ಅದೇ ಶಾ.ಸಂ.೫೨, ಮುದನೂರು, ಶಾ.ಸಂ.೭೩ ಮತ್ತು ೮೫ ಹಗರಟಗಿ

೨೫೪. ಅದೇ ಶಾ.ಸಂ.೨೨ ಕಕ್ಕೇರಿ, ಶಾ.ಸಂ.೫೨, ಮುದನೂರು, ಶಾ.ಸಂ.೭೩ ಮತ್ತು ಶಾ.ಸಂ.೭೬ ರಾಜನಕೋಳೂರು

೨೫೫. ಅದೇ ಶಾ.ಸಂ.೧೧, ಐವೂರು, ಶಾ.ಸಂ.೫೭, ಮುದನೂರು ಹಾಗೂ ಶಾ.ಸಂ.೯೮, ಹಗರಟಗಿ

೨೫೬. ಅದೇ ಶಾ.ಸಂ.೯೦, ಹಗರಟಗಿ

೨೫೭. ಅದೇ ಶಾಸಂ.೮೫, ಹಗರಟಗಿ

೨೫೮. ಅದೇ ಶಾ.ಸಂ.೮, ಐವೂರು

೨೫೯. ಶಾ.ಸಂ.೮ ಮತ್ತು ೧೧ ಐವೂರು

೨೬೦. ಅದೇ ಶಾ.ಸಂ. ೮ ಹಾಗೂ ೧೯ ಐವೂರು

೨೬೧. ಅದೇ ಶಾ.ಸಂ. ೧೫ ಮತ್ತು ೧೮ ಐವೂರು

೨೬೨. ಅದೇ ಶಾ.ಸಂ.೨೨ ಮತ್ತು ೨೮ ಐವೂರು ಹಾಗೂ ಶಾ.ಸಂ. ೨ ಎಡೆಯಾಪುರ

೨೬೩. ಅದೇ ಶಾ.ಸಂ.೨೨ ಐವೂರು ಹಾಗೂ ಶಾ.ಸಂ. ೮೫ ಮತ್ತು ೯೦ ಹಗರಟಗಿ

೨೬೪. ಅದೇ ಶಾ.ಸಂ.೩೭ ತಿಂಥಣಿ

೨೬೫. ಅದೇ ಶಾ.ಸಂ.೯೮, ಹೆಮ್ಮಡಗಿ

೨೬೬. ಅದೇ ಶಾ.ಸಂ.೮, ೧೧, ೨೩ ಐವೂರು

೨೬೭. ಅದೇ ಶಾ.ಸಂ.೯೫, ಹಗರಟಗಿ

೨೬೮. ಅದೇ ಶಾ.ಸಂ.೫೨, ಮುದನೂರು

೨೬೯. ಅದೇ ಶಾ.ಸಂ.೭೪, ರಾಜನಕೋಳೂರು ಮತ್ತು ಶಾ.ಸಂ.೯೩, ಹಗರಟಗಿ

೨೭೦. ಅದೇ ಶಾ.ಸಂ.೯೫, ಹುಣಸಗಿ

೨೭೧. ಅದೇ ಶಾ.ಸಂ.೯೮, ಹೆಮ್ಮಡಗಿ

೨೭೨. ತರ್ದವಾಡಿ ನಾಡು: ಒಂದು ಅಧ್ಯಯನ, ಪುಟ.೨೨೪

೨೭೩. ಅದೇ ಶಾಸಂ.೯೮ ಹೆಮ್ಮಡಗಿ

೨೭೪. ಶಾಸಂ ೧೨ ಐವೂರು ಶಾಸ.೫೫ ಮುದನೂರು ಮತ್ತು ಶಾಸಂ.೮೮, ಹಗರಟಗಿ

೨೭೫. ಶಾಸಂ.೯೮ ಹೆಮ್ಮಡಗಿ

೨೭೬. ಶಾ.ಸಂ.೬೭ ಮುದನೂರು

೨೭೭. ಅದೇ ಸಂ.೧೪, ಐವೂರು

೨೭೮. ಅದೇ ಶಾ.ಸಂ.೯೮, ಹೆಮ್ಮಡ

೨೭೯. ಅದೇ ಶಾ.ಸಂ.೧೦, ಐವೂರು

೨೮೦. ಅದೇ ಶಾ.ಸಂ.೯೮, ಹೆಮ್ಮಡಗಿ

೨೮೧. ಅದೇ ಶಾ.ಸಂ.೫೫ ಮತ್ತು ೬೭ ಮುದನೂರು

೨೮೨. ಅದೇ ಶಾ.ಸಂ.೬೪, ಮುದನೂರು ೯೮ ಹೆಮ್ಮಡಗಿ

೨೮೩. ಅದೇ ಶಾ.ಸಂ. ೯೭, ಮುದನೂರು, ೮೫ ಹಗರಟಗಿ ಹಾಗೂ ೯೮ ಹೆಮ್ಮಡಗಿ

೨೮೪. ಅದೇ ಶಾ.ಸಂ.೬೭, ಮುದನೂರು

೨೮೫. ಕ.ಜಿ.ಶ.ಶಾ.ಸಂ.೧, ಅಣಬಿ(ಶಹಾಪುರ ತಾಲೂಕು)

೨೮೬. ಅದೇ ಶಾ.ಸಂ.೭, ತಳಜೀಡು

೨೮೭. ಅದೇ ಶಾ.ಸಂ.೭, ತಳಜೀಡು

೨೮೮. ಶಾ.ಸಂ.೧೭, ಭೀಮರಾಯನ ಗುಡಿ

೨೮೯. ಶಾ.ಸಂ.೩೨, ಸಿರಿವಾಳ

೨೯೦. ಶಾ.ಸಂ.೪೨, ಹೋತಗಲ್ಲು

## ಅಧ್ಯಾಯ ೫

# ವಾಸ್ತು ಮತ್ತು ಮೂರ್ತಿಶಿಲ್ಪ

ಇತಿಹಾಸ ಕಟ್ಟಿಕೊಡುವಲ್ಲಿ ಶಾಸನಗಳ ಪಾತ್ರ ಎಷ್ಟು ಮುಖ್ಯವೋ ಅಷ್ಟೇ ಪ್ರಾಮುಖ್ಯತೆಯನ್ನು ದೇವಾಲಯಗಳು ಹೊಂದಿವೆ. ನಮ್ಮ ನಾಡಿನ ಪ್ರತಿ ಗ್ರಾಮದಲ್ಲಿಯೂ ಅವುಗಳಿಗೆ ಸಂಬಂಧಿಸಿದ ಸಣ್ಣ ಪುಟ್ಟ ಅವಶೇಷವಾದರೂ ಕಂಡೇ ಕಾಣುತ್ತೇವೆಂದು ಪರಿಭಾವಿಸಿದರೆ ತಪ್ಪಾಗಲಾರದು. ಇಂಥ ಸಂಗತಿಗಳಿಂದ ಯಾದಗಿರಿ ಜಿಲ್ಲೆಯೂ ಹೊರತಾಗಿಲ್ಲ. ಈ ಪ್ರದೇಶದಲ್ಲಿ ನಿರ್ಮಾಣವಾಗಿರುವ ದೇವಾಲಯಗಳು ಸಹ ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ ಬಹು ಪ್ರಾಮುಖ್ಯತೆಯನ್ನು ಹೊಂದಿರುವುವು. ಅವು ಕೂಡಾ ವೈವಿಧ್ಯಮಯ ಪಾತ್ರವನ್ನು ವಹಿಸಿವೆ. ಅಲ್ಲದೇ ಅವು ಹೊಂದಿದ್ದ ಕಾರ್ಯವ್ಯಾಪ್ತಿಯು ಸಹ ಬಹು ವಿಸ್ತಾರವಾದುದೆ ಆಗಿದೆ.

ಅಗಣಿತ ಸಂಖ್ಯೆಯಲ್ಲಿರುವ ದೇವಾಲಯಗಳ ನಿರ್ಮಾಣದ ಹಿಂದೆ ಅನೇಕ ಉದ್ದೇಶ ಮತ್ತು ಕಾರಣಗಳಿವೆ. ಮುಖ್ಯವಾಗಿ ಧಾರ್ಮಿಕ ಶ್ರದ್ಧೆ ಹಾಗೂ ನಂಬಿಕೆಗಳು ಇಂಥ ರಚನೆಗಳ ಹಿಂದಿರುವ ಮೂಲಭೂತ ಅಂಶಗಳಾಗಿವೆ. ಆದರೆ ಈ ಬಗೆಯ ಪ್ರಕ್ರಿಯೆಗಳಿಗೆ ಕಾರಣವಾದ ಆಲೋಚನೆಗಳು ಯಾವ ಕಾಲದಲ್ಲಿ ಹುಟ್ಟಿಕೊಂಡಿರಬಹುದು ಎಂಬ ಜಿಜ್ಞಾಸೆಗಳು ಹಾಗೆಯೇ ಉಳಿದುಕೊಂಡಿವೆ. ಆ ಕುರಿತು ಯಾವ ಶಾಸ್ತ್ರಗ್ರಂಥವು ಅವುಗಳ ಮೂಲ ಹುಟ್ಟು ಹಾಗೂ ಬೆಳವಣಿಗೆಗಳ ಬಗೆಗೆ ಖಚಿತ ಅಭಿಪ್ರಾಯಗಳನ್ನು ಪ್ರಕಟಿಸಲು ಸಾಧ್ಯವಾಗಿಲ್ಲ. ಮಾನವನ ಸಂಸ್ಕೃತಿಯ ವಿಕಾಸದ ಜೊತೆ ಜೊತೆಗೆ ಇಂಥ ಆಲೋಚನೆಗಳು ಬಂದಿರಬಹುದೆಂಬ ಸಾಮಾನ್ಯ ಅಭಿಪ್ರಾಯಗಳನ್ನೇ ನಂಬಲಾಗಿದೆ.

ಮೊಟ್ಟ ಮೊದಲಿಗೆ ಪ್ರಕೃತಿಪೂಜೆ, ಪಿತೃಪೂಜೆ, ಸಾಂಕೇತಿಕ ಪೂಜೆ, ಗುಣವಿಶೇಷಗಳ ಪೂಜೆ, ಯಾಗ, ಯಜ್ಞಗಳು ಹೀಗೆ ಹಲವು ರೂಪಗಳಲ್ಲಿ ವಿವಿಧ ಮಾರ್ಗಗಳ ಮೂಲಕ ಮಾನವರಲ್ಲಿಯೇ ಮೂಡಿದ್ದ ದೈವಿಕ ಭಾವನೆಗಳು ಕಾರಣವಾದವು. ಆನಂತರ ಮಾನವನ ಮನಸ್ಸಿನ ವಿವಿಧ ಭಾವನೆಗಳಿಗೆ ತಕ್ಕಂತೆ ವಿವಿಧ ಕಾರ್ಯಗಳಿಗೆ ತಕ್ಕಂತೆ ವಿವಿಧ ಚಿತ್ರಗಳಿಗೆ ತಕ್ಕಂತೆ ದೇವರ ಪ್ರತಿಮೆಯು ರೂಪಗೊಂಡಿತು[1]. ಕ್ರಿಸ್ತಶಕಕ್ಕೆ ಮುನ್ನ ದೇವಾಲಯಗಳು ರಚನೆಗೊಂಡವು ಎಂದು ಹೇಳಲು ಸಾಧ್ಯವಿದ್ದರೂ ಅವುಗಳ ಸ್ವರೂಪ ವ್ಯಕ್ತವಾಗುವುದಿಲ್ಲ. ಹರಪ್ಪ ಮೆಹೆಂಜೋದಾರೋ ಉತ್ಖನನಗಳಲ್ಲಿ ಸಾರ್ವತ್ರಿಕ ಕಟ್ಟಡಗಳನ್ನು ಗುರುತಿಸಬಹುದೇ ಹೊರತು ದೇವಾಲಯಗಳೆಂದು ಗುರುತಿಸಲಾಗುವ ರಚನೆಗಳಿಲ್ಲ ಎಂಬ ಅಭಿಪ್ರಾಯವು

ದಾಖಲಾಗಿದೆ[5]. ತಾನು ಕಟ್ಟಿಕೊಂಡ ಗೃಹವಾಸ್ತುವೇ, ದೇವಾಲಯ ಅಥವಾ ಧಾರ್ಮಿಕ ವಾಸ್ತುವಿಗೆ ಮೂಲಪ್ರೇರಣೆಯಾಯಿತು. ಹಾಗಾಗಿ ಪ್ರಕೃತಿಯ ರಹಸ್ಯಗಳು ಮಾನವನ ಆತ್ಮದಲ್ಲಿ ಚರ್ಚಿತಗೊಂಡು ಅವು ಸಹ ತನ್ನ ದೇಹದ ಭಾಗಗಳಂತೆ ಆಗಿರುವ ರಚನೆಗಳೆಂದು ಪರಿಭಾವಿಸಕೊಂಡಿರಬಹುದು. ಹಾಗಾಗಿ ದೇವಾಲಯ ಭಾಗಗಳು ಸಹ ಮಾನವನ ಅಂಗಾಂಗಗಳೆಂದು ತಿಳಿದೇ ರಚನೆಗೊಂಡವು.

ದೇವಾಲಯಗಳ ನಿರ್ಮಾಣ ಹಾಗೂ ಬೆಳವಣಿಗೆಯು ಆರಂಭಗೊಂಡ ನಿರ್ದಿಷ್ಟ ಕಾಲದ ಕುರಿತು ಕೊನೆಯಲ್ಲಿದ ಚರ್ಚೆಗಳು ನಡೆಯುತ್ತಲೇ ಇವೆ. ಇದರಿಂದ ನಮ್ಮ ನಾಡು ಸಹ ಹೊರತಾಗಿಲ್ಲ. ಮೌರ್ಯ ಚಕ್ರವರ್ತಿ ಚಂದ್ರಗುಪ್ತನ ಕಾಲದಿಂದಲೂ ನಮ್ಮ ನಾಡಿನೊಂದಿಗೆ ಸಂಬಂಧ ಇಟ್ಟುಕೊಂಡಿದ್ದರೂ ಎಂಬ ಉಲ್ಲೇಖಗಳಿದ್ದರೂ ಆ ಕಾಲದಲ್ಲಿ ರಚನೆಯಾದ ಭೌತಿಕ ಖಚಿತ ಸಾಕ್ಷಿಗಳ ಕೊರತೆ ಕಾಡುತ್ತದೆ.

ಭಾರತದ ಇತಿಹಾಸದಲ್ಲಿ ಮೌರ್ಯಯುಗ ವಾಸ್ತು ಮತ್ತು ಶಿಲ್ಪಕಲೆಗೆ ಪ್ರಸಿದ್ಧವಾಗಿದೆ. ಆದರೆ ಅವರ ಕಾಲದಲ್ಲಿ ರಚನೆಯಾದ ಯಾವುದೇ ಶಿಲ್ಪದ ಅವಶೇಷಗಳು ಇರುವರೆಗೆ ನಮ್ಮ ನಾಡಿನಲ್ಲಿ ಉಪಲಬ್ದವಿಲ್ಲ. ಆದರೆ ಅಶೋಕನ ಕಾಲದ ಶಿಲಾಶಾಸನಗಳು ಮಾತ್ರ ರಾಜ್ಯದ ಬೇರೆ ಬೇರೆ ಭಾಗದಲ್ಲಿ ಸಿಕ್ಕಿವೆ ಎಂಬ ಅಭಿಪ್ರಾಯಗಳು ದಾಖಲಾಗಿದ್ದವು[6]. ಆದರೆ ಇಂಥ ಕೊರತೆಗಳು ಇತ್ತೀಚಿನ ದಿನಗಳಲ್ಲಿ ಇದ್ದಂತಿಲ್ಲ. ಕಾರಣ ಉತ್ಖನನಗೊಂಡ ಸನ್ನತಿ ನೆಲೆಯಲ್ಲಿ ಮೌರ್ಯರ ಕಾಲದ ಅವಶೇಷಗಳು ಹೇರಳ ಪ್ರಮಾಣದಲ್ಲಿಯೇ ಕಂಡುಬಂದಿವೆ ಅವು ಅತ್ಯಂತ ಮಹತ್ವದ್ದು. ಪ್ರಾಯಶಃ ಸನ್ನತಿಯಲ್ಲಿ ಮೌರ್ಯ ಸಾಮ್ರಾಜ್ಯದ ಒಬ್ಬ ಉನ್ನತ ಆಡಳಿತಾಧಿಕಾರಿ ಇದ್ದಿರಬೇಕೆಂದು ಕಾಣುತ್ತದೆ. ಮತ್ತು ಆ ಕಾಲದಿಂದಲೇ ಈ ಪ್ರದೇಶದಲ್ಲಿ ಬೌದ್ಧ ಧರ್ಮ ಪ್ರಚಾರವಾಗಿದ್ದಿರಬಹುದು ಎಂಬ ವಿವರಗಳು ದಾಖಲೆಗೊಂಡಿವೆ[7]. ಪ್ರಾಚೀನ ಪ್ರಸಿದ್ಧಿ ಪಡೆದ ಈ ಸನ್ನತಿಯು ಈ ಜಿಲ್ಲೆಯ ಶಿರವಾಳ ಅಣಬಿ ಹಾಗೂ ಹುರುಸಗುಂಡಗೆ(ಶಹಾಪುರ ತಾಲೂಕು) ಗ್ರಾಮಗಳಿಗೆ ತುಂಬಾ ಹತ್ತಿರದಲ್ಲಿಯೇ ಇರುವಂಥದ್ದು. ಈ ಗ್ರಾಮಗಳು ಹಾಗೂ ಸನ್ನತಿ ನೆಲೆಯ ಮಧ್ಯೆ ನದಿ ಮಾತ್ರ ಹರಿದಿರುವುದು. ಬಹುಶಃ ತಲಸ್ಪರ್ಶಿಯಾದ ವಿಶೇಷ ಅಧ್ಯಯನ ಕೈಗೊಂಡರೆ ಪ್ರಾಯಶಃ ಈ ಪರಿಸರದಲ್ಲಿಯು ಸಹ ಅದೇ ಕಾಲದ ಚಾರಿತ್ರಿಕ ಸಂಗತಿಗಳು ಕಂಡು ಬರುವುದರಲ್ಲಿ ಅನುಮಾನಗಳಿಲ್ಲ.

ದೇವಾಲಯ ಮತ್ತು ಶಿಲ್ಪಗಳಿಗೆ ಸಂಬಂಧಿಸಿದಂತೆ ಇತಿಹಾಸ ಪ್ರಾರಂಭ ಕಾಲದಿಂದಲೂ ಉಪಲಬ್ಧವಿರುವ ಕೆಲವು ವಿವರಗಳನ್ನು ಸಂಕ್ಷಿಪ್ತವಾಗಿ ವಿವೇಚಿಸುವುದಾದರೆ ಈ ಪ್ರದೇಶದಲ್ಲಿದ್ದ ಸನ್ನತಿ ಮತ್ತು ಕಣಗಿನಾಳ ಗ್ರಾಮಗಳ ಪರಿಸರದಲ್ಲಿ ಶಾತವಾಹನ ಕಾಲದ ಹಲವು ಕುರುಹುಗಳು ಯಥೇಚ್ಛವಾಗಿ ಕಂಡುಬಂದಿವೆ. ಅವು ಸ್ತೂಪದ ಅವಶೇಷಗಳಾಗಿದ್ದು ಅದೇ ಆವರಣದಲ್ಲಿ ಕೆಲವು ಬಿಡಿಶಿಲ್ಪಗಳು ಹಾಗೂ ಚಿಕ್ಕಚಿಕ್ಕ ಫಲಕಗಳ ಮೇಲಿರುವ ಶಾಸನಗಳು ದೊರೆತಿರುವುವು. ಈ ವಿಷಯಗಳು ಬಹುತೇಕ ಅಧ್ಯಯನಕಾರರಿಗೆ ತಿಳಿದಿರುವ ಸಂಗತಿಗಳಾಗಿವೆ. ಅದೇ

ರೀತಿಯ ಬಿಡಿಶಿಲ್ಪಗಳು ಹಾಗೂ ಒಂದೆರಡು ಶಾಸನ ಫಲಕಗಳು ಯಾದಗಿರಿ ಜಿಲ್ಲಾ ಪರಿಸರದ ಶಿರವಾಳ, ಅಣಬಿ, ಹುರುಸಗುಂಡಗಿ ಹಾಗೂ ವಜ್ಜಲ ಗ್ರಾಮಗಳಲ್ಲಿ ದೊರಕಿರುವ ಮಾಹಿತಿಗಳುಂಟು. ಅಲ್ಲದೇ ಆ ಕಾಲದಲ್ಲಿ ಅರ್ಥಾ ಶಾತವಾಹನರ ಆಳ್ವಿಕೆಯ ಅವಧಿಯಲ್ಲಿ ಇವೆಲ್ಲವುಗಳು ಪ್ರಸಿದ್ಧ ಧಾರ್ಮಿಕ ಹಾಗೂ ವ್ಯಾಪಾರಿ ಕೇಂದ್ರಗಳಾಗಿಗಿದ್ದಿರಬಹುದು. ಆ ಕಾಲದ ದತ್ತಿ ಸ್ಮಾರಕ ಶಿಲಾಫಲಕವೊಂದನ್ನು ಅಣಬಿ ಗ್ರಾಮದಲ್ಲಿರುವ ಹಿರೇಮಠ ಎಂದು ಕರೆಯುವ ಮಠದ ಗೋಡೆಗೆ ಪೂರ್ವಾಭಿಮುಖವಾಗಿ ಆನಿಸಿ ಇಡಲಾಗಿದೆ. ಆರು ಅಡಿ ಎತ್ತರ, ಒಂದು ಅಡಿ ಅಗಲ, ನಾಲ್ಕು ಇಂಚು ದಪ್ಪವಾಗಿರುವ ಸೇದಿಕಲ್ಲಿನಲ್ಲಿ ಉಬ್ಬುಶಿಲ್ಪದಿಂದ ಕೂಡಿದ ಕೆಲವು ಕೆತ್ತನೆಗಳಿವೆ[೫]. ಕ್ಷೇತ್ರಕಾರ್ಯದಲ್ಲಿ ಇದನ್ನು ಗಮನಿಸಲಾಗಿದೆ. ಒಂದು ಶ್ರೀಮಂತ ಕುಟುಂಬ ಹೊಂದಿರಬಹುದಾದ ಜೀವನಾತಿಥ್ಯವನ್ನು ಈ ಶಿಲ್ಪದಲ್ಲಿ ಕಂಡರಿಸಲಾಗಿದೆ. ಪರಿಚಾರಕ ವರ್ಗದ ಸ್ತ್ರೀಯ ಶಿಲ್ಪಗಳು ಇಲ್ಲಿವೆ. ಇದರ ಮೇಲೆ ಘರತಯಶೋಪಾಲಯ ಎಂಬ ಎಂಟು ಅಕ್ಷರಗಳ ಬ್ರಾಹ್ಮೀ ಲಿಪಿಗಳಿವೆ. ಆದರೆ ಅದು ಏನನ್ನು ವಿವರಿಸುತ್ತದೆ ಎಂಬುದರ ಬಗೆಗೆ ಖಚಿತವಾದ ಅಭಿಪ್ರಾಯವು ಮೂಡಿಬಂದಿಲ್ಲ. ಬಹುಶಃ ಇದು ಆ ವ್ಯಕ್ತಿಯ ಹೆಸರಾಗಿರಬಹುದೇ? ಇಂಥದ್ದೇ ಶಿಲ್ಪವನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಹುರಸಗುಂಡಗಿಯ ಗ್ರಾಮದಿಂದ ಸುಮಾರು ಎರಡು ಕಿಲೋಮೀಟರ್ ಅಂತರದಲ್ಲಿರುವ ಹೊಲದಲ್ಲಿ ಕಾಣುತ್ತೇವೆ. ಅದನ್ನು ಮರಕ್ಕೆ ಆನಿಸಿ ಇಡಲಾಗಿದೆ. ಈ ಸ್ಥಳಕ್ಕೆ ತುಸು ದೂರದಲ್ಲಿಯೇ ಭೀಮಾನದಿಗೆ ಸೇತುವೆ ಕಟ್ಟಲಾಗಿದ್ದು ಅದು ಈ ಭಾಗದಿಂದ ಸನ್ನತಿ ಗ್ರಾಮಕ್ಕೆ ಸಂಪರ್ಕ ಕಲ್ಪಿಸುತ್ತದೆ. ಅಣಬಿಯ ಫಲಕದಲ್ಲಿರುವ ಕೆತ್ತನೆಗಳೆ ಅದರಲ್ಲಿವೆ. ಶಿರವಾಳದಲ್ಲಿಯೂ ಇದೇ ಮಾದರಿಯ ಶಿಲ್ಪ. ಆ ಮೊದಲ ಹಲವು ವರ್ಷಗಳ ಹಿಂದೆ ಇತ್ತು ಎಂಬ ಸ್ಥಳೀಯರು ನೀಡಿರುವ ಅಭಿಪ್ರಾಯಗಳು ಇವೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಅದು ಕಂಡುಬರದಿರುವುದು ವಿಷಾದದ ಸಂಗತಿ.

ಶಾತವಾಹನ ಕಾಲಕ್ಕೆ ಸಂಬಂಧಿಸಿದ ಇನ್ನೊಂದು ಕುರುಹು ಸುರಪುರ ತಾಲೂಕಿನ ವಜ್ಜಲ ಗ್ರಾಮದಲ್ಲಿ ಕಂಡುಬಂದಿರುವ ಉಲ್ಲೇಖವು ದಾಖಲಾಗಿದೆ[೬]. ಲಿಪಿ ಸ್ವರೂಪದಿಂದ ಸುಮಾರು ಕ್ರಿ.ಶ.೨ನೆಯ ಶತಮಾನಕ್ಕೆ ಸೇರಿಸಬಹುದಾದ ಈ ಶಾಸನವು ಈ ಭಾಗದಲ್ಲಿ ಶಾತವಾಹನರು ಆಳಿದರೆಂಬುದಕ್ಕೆ ಮೊಟ್ಟಮೊದಲ ಪುರಾವೆಯಿದು ಎಂಬ ಮಹತ್ವದ ಅಭಿಪ್ರಾಯಗಳು ದಾಖಲಾಗಿವೆ. ಅಲ್ಲದೇ ಈ ತಾಲೂಕಿನಲ್ಲಿ(ಸುರಪುರ) ಬ್ರಾಹ್ಮಲಿಪಿವುಳ್ಳ ಪ್ರಾಕೃತ ಭಾಷೆಯಲ್ಲಿರುವ ದೊರೆತ ಮೊದಲ ಶಾಸನವಿದು ಎಂಬ ವಿವರವುಂಟು. ಆದರೆ ನಿರ್ದಿಷ್ಟವಾದ ಅದೇ ಕಾಲಕ್ಕೆ ಸಂಬಂಧಿಸಿ ಭೌತಿಕ ಕಟ್ಟಡಗಳಾವುವು ಈ ಭಾಗದಲ್ಲಿ ಈ ವರೆಗೂ ಕಂಡುಬಂದಿರುವುದಿಲ್ಲ.

ಶಹಾಪುರ ತಾಲೂಕಿನ ಗುರುಸುಣಗಿ ಗ್ರಾಮದಿಂದ ಸುಮಾರು ಎರಡು ಕಿಲೋಮೀಟರ್ ಅಂತರದಲ್ಲಿರುವ ಚಿಕ್ಕದಾದ ಗುಡ್ಡದಲ್ಲಿ ಇಟ್ಟಿಗೆಗಳನ್ನು ದೊಡ್ಡ ಪ್ರಮಾಣದಲ್ಲಿ ನೋಡಬಹುದಾಗಿದೆ.

ಅಲ್ಲಿ ಬಹುಶಃ ಶಾತವಾಹನರ ಕಾಲಕ್ಕೆ ಸಂಬಂಧಿಸಿದ ಸ್ತೂಪಗಳಿರಬಹುದೆಂದು ಅಭಿಪ್ರಾಯಿಸಲಾಗಿದೆ[೬]. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ವಿವರಗಳನ್ನು ಗಮನಿಸಲಾಗಿದೆ. ಈವರೆಗೂ ಆ ಸ್ಥಳದಲ್ಲಿ ಸುಟ್ಟ ಹಾಗೂ ಸುಡಲಾರದ ಇಟ್ಟಿಗೆಯ ಅವಶೇಷಗಳು ಹೇರಳವಾಗಿ ಬಿದ್ದಿರುವುದನ್ನು ಕಾಣುತ್ತೇವೆ. ಈ ನೆಲೆಯ ಪಕ್ಕದಲ್ಲಿರುವ ಸಿದ್ದೇಶ್ವರ ಗುಡಿಯ ಬಳಿ ಇರುವ ಗವಿಯಲ್ಲಿ ಬೋಧಿವೃಕ್ಷ ಫಲಕ ಹಾಗೂ ಧರ್ಮಚಕ್ರ ಸ್ತಂಭದ ತುಂಡುಗಳಿವೆ. ಆದರೆ ಅಂಥ ಸಾಕ್ಷಿಗಳು ಸಹ ಸದ್ಯ ಇದ್ದಂತಿಲ್ಲ. ಶಹಾಪುರ ತಾಲೂಕಿನ ಹಾರಣಗೇರಿ ಗ್ರಾಮದ ಹಳ್ಳದಲ್ಲಿ ಶಾತವಾಹನ ಅರಸು ಗೌತಮಿ ಪುತ್ರ ಸಾತಕರ್ಣಿಯ ಕಾಲಕ್ಕೆ ಸೇರಿದ ಸಂಬಂಧಿಸಿದ ನಾಣ್ಯಗಳು ಸಾಕಷ್ಟು ಸಂಖ್ಯೆಯಲ್ಲಿ ಸ್ಥಳೀಕರಿಗೆ ಲಭಿಸಿರುವ ಮಾಹಿತಿಗಳು ಪ್ರಕಟವಾಗಿವೆ[೭]. ಈ ನಾಣ್ಯದ ಮುಮ್ಮುಖದಲ್ಲಿ ಉಜ್ಜಯಾನಿ ಚಿಹ್ನೆ, ಸೂರ್ಯಚಂದ್ರರಿದ್ದು, ಹಿಮ್ಮುಖದಲ್ಲಿ ಗೌತಮಿ ಪುತ್ರ ಸಾತಕರಣಿಸ ಎಂಬ ಬ್ರಾಹ್ಮಿ ಲೇಖವಿದೆ. ಹಾಗಾಗಿ ಇದು ಶಾತವಾಹನರ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿತ್ತೆಂಬ ಅಂಶವನ್ನು ಈ ನಾಣ್ಯಗಳು ಪುಷ್ಠೀಕರಿಸುತ್ತವೆ ಎಂದು ಅಭಿಪ್ರಾಯಿಸಲಾಗಿದೆ.

ತುಂಬಾ ಮುಖ್ಯವಾದ ಇನ್ನೊಂದು ಉಲ್ಲೇಖವೆಂದರೆ ಹುರಸಗುಂಡಗಿ ನೆಲೆಯಿಂದ ವರದಿಯಾದ ವಿವರಗಳಲ್ಲಿ ಶಾತವಾಹನರ ಕಾಲದ ಬೌದ್ಧ ಸಂಬಂಧವುಳ್ಳ ಎರಡು ದಿಬ್ಬಗಳನ್ನು ಗುರುತಿಸಿರುವುದನ್ನು ದಾಖಲಿಸಲಾಗಿದೆ. ಅದರಲ್ಲಿ ಅತೀ ಪ್ರಾಮುಖ್ಯವಾದ ಇನ್ನೊಂದು ಸಂಗತಿ ಇದ್ದು, ಅಲ್ಲಿಂದ ವರದಿಯಾಗಿರುವ ಬೌದ್ಧ ಅವಶೇಷಗಳಲ್ಲಿ, ಆಸೀನಭಂಗಿಯಲ್ಲಿರುವ ಗಜಲಕ್ಷ್ಮೀಯ ಸುಂದರ ಕೆತ್ತನೆಯುಳ್ಳ ಪದಕವಿರುವ ಕೊರಳ ಹಾರವನ್ನು ಧರಿಸಿರುವ ಯಕ್ಷನ ಶಿಲ್ಪವು ಮಹತ್ವದ್ದಾಗಿದ್ದು ದಕ್ಷಿಣ ಭಾರತದಲ್ಲಿ ಲಭ್ಯವಿರುವ ಗಜಲಕ್ಷ್ಮೀಯ ಅತ್ಯಂತ ಪ್ರಾಚೀನ ಉದಾಹರಣೆ ಇದಾಗಿದೆ ಎಂದು ಅಭಿಪ್ರಾಯಿಸಲಾಗಿದೆ[೮]. ಆದರೆ ಇಲ್ಲಿ ವಿವರಿಸಿರುವ ಆ ಬಗೆಯ ಶಿಲ್ಪವು ಸದ್ಯ ಈ ಗ್ರಾಮದಲ್ಲಿ ಇದ್ದಂತಿಲ್ಲ. ಭೀಮಾನದಿಯ ದಂಡೆಯ ಆಸುಪಾಸಿನಲ್ಲಿರುವ ಕೆಲವು ಗ್ರಾಮಗಳಲ್ಲಿ ಆ ಕಾಲದ ಹಲವು ಅವಶೇಷಗಳು ಕಂಡುಬರುತ್ತವೆ. ಗುರಸುಣಗಿ ನೆಲೆ ಮಾತ್ರ ಊರಿನಿಂದ ಸ್ವಲ್ಪ ದೂರದಲ್ಲಿರುವ ಗುಡ್ಡದ ಮೇಲೆ ಕೇಂದ್ರೀಕೃತವಾಗಿದೆ. ಅಲ್ಲಿರುವ ಶಾತವಾಹನ ಕಾಲದ ಸಾಕ್ಷಿಗಳನ್ನು ಗಮನಿಸಬಹುದು. ಉಲ್ಲೇಖಿಸಿದ ವಿವರಗಳಲ್ಲಿ ಹೆಚ್ಚಿನವು ದೇವಾಲಯಕ್ಕೆ ಸಂಬಂಧಿಸಿದ ಆಕರಗಳೇ ಹೆಚ್ಚಾಗಿವೆಯೆಂದು ಪರಿಭಾವಿಸಬಹುದು. ಆದರೆ ದುರ್ದೈವಶಾತ ನಿರ್ದಿಷ್ಟ ರೂಪದಲ್ಲಿರುವ ದೇವಾಲಯ ರಚನೆ ಮಾತ್ರ ಕಂಡುಬಂದಿಲ್ಲ.

ಶಾತವಾಹನ ಅರಸರ ಸಾಮಂತರಾಗಿದ್ದ ಚುಟು ಅರಸರು ಬನವಾಸಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದರೆಂಬ ವಿವರಗಳಿವೆ. ಅವರಿಗೆ ಸಂಬಂಧಿಸಿದ ಆಕರಗಳು ಅತ್ಯಂತ ಕಡಿಮೆಯೆಂದು ಅಭಿಪ್ರಾಯಿಸಲಾಗಿದೆ. ಆ ಕಾಲದಲ್ಲಿ ನಾಗಾರಾಧನೆಯ ಚಟುವಟಿಕೆಗಳು ಇದ್ದಿರುವ ಬಗೆಗೆ ದಾಖಲೆಗಳು ಲಭ್ಯವಾಗಿವೆ. ಬನವಾಸಿಯಲ್ಲಿ ಕಂಡುಬಂದಿರುವ ನಾಗ ಪ್ರತಿಮೆಯನ್ನು ಚುಟುಕುಲಾನಂದ ಸಾತಕರಣಿಯ ಮಗಳಾದ ಶಿವಸ್ಕಂದ ನಾಗಶ್ರೀಯು

ನಾಗಪ್ರತಿಮೆ, ಕೆರೆ ಮತ್ತು ವಿಹಾರಗಳನ್ನು ದಾನಮಾಡಿದಂತೆ ಆ ಶಾಸನ ತಿಳಿಸುತ್ತದೆ. ಸಂಜಯತಿ (ಬನವಾಸಿ)ಯ ಆಚಾರ್ಯನಾದ ಇರವೋರಕ(ಇಂದ್ರಮಯೂರ)ನ ಶಿಷ್ಯ ನಟಕ(ನರ್ತಕ)ನೆಂಬುವನು ಈ ನಾಗಶಿಲ್ಪವನ್ನು ಕೆತ್ತಿದಂತೆಯೂ ಶಾಸನದಲ್ಲಿ ಹೇಳಲಾಗಿದೆ. ನಾಗಾರಾಧನೆಯ ಪ್ರಾಚೀನತೆಯನ್ನು ತಿಳಿಯಲು ಈ ಶಾಸನ ಮತ್ತು ನಾಗಶಿಲ್ಪ ಪ್ರಬಲ ಆಧಾರವನ್ನೊಗಿಸುತ್ತವೆ. ಈ ಶಾಸನೋಕ್ತ ನಟಕನೇ ಈಗ ತಿಳಿದಿರುವಂತೆ ಕರ್ನಾಟಕದ ಮೊತ್ತ ಮೊದಲನೆಯ ರೂವಾರಿ ಎಂದು ಅಭಿಪ್ರಾಯಿಸಲಾಗಿದೆ[೧೦]. ಈ ವಿವರವನ್ನು ಇಲ್ಲಿ ಉಲ್ಲೇಖಿಸುವ ಬಹುಮುಖ್ಯ ಕಾರಣಗಳೆಂದರೆ ಇದೇ ರೀತಿಯ ವಿವರಣೆಯುಳ್ಳ ಕೆಲವು ನಾಗ ಪ್ರತಿಮೆಗಳು ಈ ಪ್ರದೇಶದಲ್ಲಿ ವಿಪರೀತ ಅನ್ನುವಷ್ಟು ಸಂಖ್ಯೆಯಲ್ಲಿ ಲಭ್ಯವಾಗಿವೆ.

ಶಾತವಾಹನ ಕಾಲದ ಕುರುಹುಗಳು ಕಂಡುಬಂದಿರುವ ಅಣಬಿ, ಶಿರವಾಳ, ಹುರಸಗುಂಡಗಿ ಹಾಗೂ ಭೀಮಾನದಿಯ ದಂಡೆಯ ಪರಿಸರದಲ್ಲಿರುವ ಕೋಡಾಲ, ಸಂಗಮ, ಹಯ್ಯಾಳ ಬಿ ಹಾಗೂ ಅನಕಸೂಗೂರು, ಮದ್ರಕಿ, ಚಟ್ನಳ್ಳಿ(ಶಹಾಪುರ ತಾಲೂಕು) ಮುದನೂರಿನ ಲಕ್ಷ್ಮಣ ತೀರ್ಥದ ಬಾವಿ ದಂಡೆಯ ಮೇಲಿರುವ ನಾಗಪ್ರತಿಮೆಗಳೆಲ್ಲವು ಸುಂದರವಾದ ಶಿಲ್ಪಗಳಾಗಿವೆ. ಇಂಥೆಲ್ಲ ಶಿಲ್ಪಗಳಲ್ಲಿಯೇ ಹುರಸಗುಂಡಗಿ ಗ್ರಾಮದಲ್ಲಿ ದೊರಕಿರುವ ಶಿಲ್ಪವು ಬಹು ವಿಶೇಷವೆನ್ನಬಹುದಾದ ನಾಗ ಪ್ರತಿಮೆಯಾಗಿದೆ. ಹುರಸಗುಂಡಗಿಯ ಹುಲಸಮ್ಮಾಯಿ ಗುಡಿಯಲ್ಲಿರುವ ನಾಗಪ್ರತಿಮೆಗಳೆಲ್ಲವು ಪ್ರಾಯಶಃ ಕರ್ನಾಟಕದಲ್ಲಿಯೇ ಸಿಗಬಹುದಾದ ಅಪರೂಪದ ಶಿಲ್ಪವಾಗಿದೆಯೆಂದರೆ ಅತಿಶಯೋಕ್ತಿ ಆಗಲಾರದು. ಸುಮಾರು ಐದು ಅಡಿ ಎತ್ತರದ ನಾಗದಂಪತಿಗೆ ಸಂಬಂಧಿಸಿದ ಶಿಲ್ಪವನ್ನು ಸ್ಥಳೀಯವಾಗಿ ಹುಲಸಮ್ಮಾಯಿಯೆಂದು ಕರೆಯಲಾಗುತ್ತದೆ[೧೧].

ಇಂಥ ಅಪರೂಪದ ಶಿಲ್ಪಗಳು ಈ ಪ್ರದೇಶದಲ್ಲಿ ಈವರೆಗೂ ಕಂಡುಬರುತ್ತವೆ. ಸೂಕ್ಷ್ಮ ಮತ್ತು ಸಮಗ್ರ ಅಧ್ಯಯನದ ದೃಷ್ಟಿಕೋನದಿಂದ ವಂಚಿತವಾಗಿರುವ ಈ ಪರಿಸರವನ್ನು ಅಧ್ಯಯನಾಸಕ್ತರು ಗಮನಿಸಿದರೆ ಉತ್ತಮವಾದ ಫಲಿತಾಂಶ ದೊರಕುವುದರಲ್ಲಿ ಸಂಶಯಗಳಿಲ್ಲ. ಬೌದ್ಧಧರ್ಮದ ತಾಂತ್ರಿಕ ಪಂಥದಲ್ಲಿ ಮಹತ್ವಪಡೆದಿದ್ದ ನಾಗರಾಧನೆಯಂಥ ನಂಬಿಕೆಗಳು ಶಾತವಾಹನ ಹಾಗೂ ಚುಟುಗಳ ಕಾಲದಲ್ಲಿ ಹೆಚ್ಚಿನ ವಿಸ್ತಾರ ಪಡೆದಿರಬಹುದು. ಬಹುಶಃ ಅಂಥದ್ದೇ ಅವಶೇಷಗಳು ಈ ಪರಿಸರದಲ್ಲಿಯೂ ಹುದುಗಿಕೊಂಡಿವೆ. ಅವುಗಳನ್ನು ಹುಡುಕುವ ಕೆಲಸ ಆಗಬೇಕಾದ ಜರೂರಿದೆ.

ಕನ್ನಡ ನಾಡಿನ ಕಲ್ಪನೆಯನ್ನು ಕಂಡು ಸಹಕಾರಗೊಳಿಸಿದ ಆದಿ ಕದಂಬರ ಕಾಲದ ಅವಶೇಷಗಳ ಈವರೆಗೂ ಈ ಪ್ರದೇಶದಲ್ಲಿ ಲಭ್ಯವಾಗಿಲ್ಲ. ಕ್ಷೇತ್ರಕಾರ್ಯದಲ್ಲಿಯೂ ನೂರಾರು ಗ್ರಾಮಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ಸಂಗ್ರಹಿಸುವ ಸಂದರ್ಭದಲ್ಲಿಯೂ ಆ ಕಾಲದವೆನ್ನಬಹುದಾದ ಅಸ್ಪಷ್ಟವಾದ ಸಾಕ್ಷಿಗಳ ತುಣುಕಗಳು ಕೂಡಾ ಕಂಡುಬಂದಿಲ್ಲ. ಅಲ್ಲದೇ ಕನ್ನಡ ನಾಡಿನ ಭೌಗೋಳಿಕ ಮೇರೆಗಳನ್ನು ಮೊಟ್ಟಮೊದಲಿಗೆ ವಿಶಾಲವಾಗಿ ವಿಸ್ತರಿಸಿ

ಭದ್ರಗೊಳಿಸಿದ ಬಾದಾಮಿ ಚಾಲುಕ್ಯರ ಕಾಲದವೆನ್ನಬಹುದಾದ ಅವಶೇಷಗಳ ಲವಲೇಷ ಪ್ರಮಾಣವು ಸಂಬಂಧಿಸಿ ಸಹ ಈವರೆಗೂ ಈ ಪ್ರದೇಶದಲ್ಲಿ ಕಂಡು ಬಂದಿರುವ ವಿವರಗಳು ದಾಖಲಾಗಿಲ್ಲ. ಅವರಿಗೆ ಸಂಬಂಧಿಸಿದಂತೆ ಕಲಬುರ್ಗಿ ಪಟ್ಟಣಲ್ಲಿರುವುದೆಂದು ವರದಿಯಾಗಿರುವ ಚಾಲುಕ್ಯ ವಿನಯಾದಿತ್ಯನ ಕಾಲದ ತಾಮ್ರ ಶಾಸನ ಮಾತ್ರ. ಆದರೆ ಅದು ಸಹ ಕೂಟ ಶಾಸನವಾಗಿರುವುದರಿಂದ ಅಗಣ್ಯವೆನಿಸುತ್ತದೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೨]. ಆದರೆ ಈ ಜಿಲ್ಲೆಯ ಉಪಲಬ್ಧವಿರುವ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಸಗರನಾಡು ಹಾಗೂ ಹಗರಟಗೆ ನಾಡು ಎಂಬ ಭೌಗೋಳಿಕ ಕ್ಷೇತ್ರಗಳಂತೂ ಬಹುಶಃ ಬಾದಾಮಿ ಚಾಲುಕ್ಯರ ಅವಧಿಯ ಪೂರ್ವದಲ್ಲಿಯೇ ರೂಪಗೊಂಡಿರುವಂಥವು. ಇದರ ಬಗೆಗೆ ಈಗಾಗಲೆ ಚರ್ಚಿಸಲಾಗಿದೆ. ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣವಾಗಿದ್ದಿರಬಹುದೆಂಬ ಕೆಲವು ಊಹೆಗಳು ದಾಖಲಾಗಿವೆ. ಅಂಥವುಗಳನ್ನು ಹಿನ್ನೆಲೆಯಲ್ಲಿ ಪರಿಗಣಿಸುವುದು ಸ್ವಲ್ಪ ಕಷ್ಟ. ಈ ಜಿಲ್ಲೆಯಲ್ಲಿರುವ ಕೆಲವು ಕೋಟೆಗೆ(ಯಾದಗಿರಿ ಮತ್ತು ಶಹಾಪುರ) ಸಂಬಂಧಿಸಿದ ಕೆಲವು ಅವಶೇಷಗಳಿರುವ ಕುರಿತು ಕೆಲವು ವಿಚಾರಗಳು ವ್ಯಕ್ತವಾಗಿವೆ. ಆದರೆ ನಮ್ಮ ಅಧ್ಯಯನ ವ್ಯಾಪ್ತಿಗೆ ಸಂಬಂಧಿಸಿದವುಗಳಲ್ಲ.

ಶಹಾಪುರ ಪಟ್ಟಣದ ಸಾಗರಾದ್ರಿ ತಪ್ಪಲು ಎಂದು ಸಂಬೋಧಿಸಲ್ಪಡುತ್ತಿರುವ ಗುಡ್ಡದಲ್ಲಿ ರೂಪಗೊಂಡಿರುವ ಕೋಟೆಯ ಚಟುವಟಿಕೆಗಳು ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣಗೊಂಡವು ಎಂಬ ಅಭಿಪ್ರಾಯಗಳು ದಾಖಲಾಗಿವೆ. ಅಲ್ಲದೇ ಯಾದಗಿರಿ ಪಟ್ಟಣಕ್ಕೆ ಹೊಂದಿಕೊಂಡಿರುವ ಬೆಟ್ಟದ ಮೇಲೆಯೂ ಅದೇ ಕಾಲದಲ್ಲಿ ಕೋಟೆ ನಿರ್ಮಾಣದ ಚಟುವಟಿಕೆಗಳು ನಡೆದಿರುವ ಬಗೆಗೆ ಸಂಶೋಧಕರಲ್ಲಿ ಕೆಲವು ಗುಮಾನಿಗಳಿವೆ. ಉಲ್ಲೇಖಿಸಿರುವ ಈ ಎರಡು ಕೋಟೆಗಳನ್ನು ಸಗರ ಜಗನ್ನಾಥನೆ ನಿರ್ಮಿಸಿದ ಎಂಬ ಐತಿಹ್ಯಗಳು ಜನಮಾನಸದಲ್ಲಿ ಇಂದಿಗೂ ದಾಖಲಾಗಿ ಉಳಿದಿವೆ. ಅಲ್ಲದೇ ಇದೇ ವಿವರವುಳ್ಳ ಅಕ್ಷರಗಳು ಯಾದಗಿರಿ ಕೋಟೆಯ ಬಾಗಿಲವಾಡದಲ್ಲಿ ಕೆತ್ತಲಾಗಿರುವುದನ್ನು ಗಮನಿಸಬಹುದು. ಆದರೆ ಖಚಿತವಾಗಿ ನಂಬಬಹುದಾದ ಆಧಾರಗಳ ಕೊರತೆಯ ಹಿನ್ನೆಲೆಯಲ್ಲಿ ಈ ಬಗೆಗೆ ನಿರ್ದಿಷ್ಟವಾದ ಅಭಿಪ್ರಾಯ ರೂಪಿಸುವುದು ಕಷ್ಟಕರವಾದ ಸಂಗತಿಯಾಗಿದೆ. ಆದರೂ ಈ ಪರಿಸರದಲ್ಲಿ ರೂಪಗೊಂಡ ಪ್ರಾಚೀನ ನಾಡುಗಳ ನಿರ್ದಿಷ್ಟ ಮೇರೆಗಳಂತೂ ಬಾದಾಮಿ ಚಾಲುಕ್ಯರ ಅವಧಿಯಲ್ಲಿಯೇ ಹರಳುಗಟ್ಟಿಕೊಂಡಿರುವಂಥವು ಎಂಬುದರಲ್ಲಿ ಅನುಮಾನಗಳಿಲ್ಲ. ಹತ್ತನೆಯ ಶತಮಾನದ ಪೂರ್ವಪಾದದಲ್ಲಿಯೇ ಕಂಡುಬಂದ ರಾಷ್ಟ್ರಕೂಟ ಮೂರನೆಯ ಕೃಷ್ಣನ ಕಾಲದ ಶಿರವಾಳ ಶಾಸನದಲ್ಲಿ ಸಗರನಾಡಿನ ಸ್ಪಷ್ಟ ಉಲ್ಲೇಖ ಕಂಡುಬಂದಿದೆ. ಹಾಗಾಗಿ ಆ ಮೊದಲೇ ಅಂದರೆ ಬಾದಾಮಿ ಚಾಲುಕ್ಯರ ಆಡಳಿತಾವಧಿಯಲ್ಲಿಯೇ ಈ ಪ್ರಾಚೀನ ವಿಭಾಗಗಳು ರೂಪುಗೊಂಡವು ಎಂಬುದಕ್ಕೆ ಬಲವಾದ ಸಾಕ್ಷಿ ಒದಗಿಸುವ ಶಾಸನ ವಿವರ ಬಹುಶಃ ಇದಾಗಬಹುದೆಂದು ಊಹಿಸಬಹುದು.

ಶಿರವಾಳ ಹೊರತುಪಡಿಸಿ ಯಾದಗಿರಿ ತಾಲೂಕಿನ ನಂದಿಬೆಳಗುಂದಿ ಬಸವಣ್ಣನ ಗುಡಿಯು ಮುಂಭಾಗದಲ್ಲಿರುವ ಹಾಗೂ ದೋರನಹಳ್ಳಿ(ಶಹಾಪುರ) ಮಲ್ಲಯ್ಯನ ಗುಡಿಯ ಶಾಸನಗಳು ಪ್ರಾಯಶಃ ಬಾದಾಮಿ ಚಾಲುಕ್ಯ ಆಡಳಿತಾವಧಿಯ ಕೊನೆಯ ಘಟ್ಟದಲ್ಲಿ ಆದವುಗಳೇ ಎಂಬ ಅಭಿಪ್ರಾಯಗಳಿಗೂ ಅವಕಾಶಗಳಿವೆ. ಆದರೆ ಅವುಗಳ ಕುರಿತು ತಲಸ್ಪರ್ಶಿಯ ಅಧ್ಯಯನ ಜರೂರು ಇದ್ದೇ ಇದೆ. ಆದರೆ ಈ ಜಿಲ್ಲಾ ಪರಿಸರದಲ್ಲಿ ನಿರ್ಮಾಣವಾಗಿರುವ ದೇವಾಲಯ ಹಾಗೂ ಶಿಲ್ಪಗಳಲ್ಲಿ ಒಂದಾದರೂ ಸಹ ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣವಾದವುಗಳೆಂದು ಖಚಿತವಾಗಿ ಮಾತ್ರ ಹೇಳಲಿಕ್ಕಾಗದು.

ಪ್ರಸ್ತುತ ಯಾದಗಿರಿ ಜಿಲ್ಲೆಯ ಯಾದಗಿರಿ ತಾಲೂಕಿನ ಗಡಿಗೆ ಹೊಂದಿಕೊಂಡಿರುವ ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ಹಾಗೂ ಸೇಡಂ ತಾಲೂಕಿನ ಪ್ರದೇಶಗಳ ಆಳ್ವಿಕೆಯೊಂದಿಗೆ ಸಾರ್ವಭೌಮರಾಗಿ ಬೆಳೆದ ರಾಷ್ಟ್ರಕೂಟರು ಸಹ ಯಾದಗಿರಿ ಜಿಲ್ಲೆಯ ಪ್ರಾಚೀನ ಪರಿಸರದಲ್ಲಿ ವಾಸ್ತುಶಿಲ್ಪಗಳನ್ನು ನಿರ್ಮಿಸಿರುವಸ ಸಾಕ್ಷಿಗಳು ಕಂಡುಬಂದಿಲ್ಲ. ಈ ಪ್ರದೇಶದ ಕಲ್ಲ–ಕೆಳಗು ಹಾಗೂ ಸಗರ–ನಾಡು ಅವರು ರಾಜ್ಯ ಸ್ಥಾಪಿಸಿದ ಪ್ರಾಚೀನ ಅರಲು ವಿಭಾಗಕ್ಕೆ ಹೊಂದಿಕೊಂಡಂತೆ ಇದ್ದವು. ರಾಜಕೀಯವಾಗಿ ಅವುಗಳ ಗಡಿಗಳು ಇಷ್ಟೊಂದು ಹತ್ತಿರವಿದ್ದರೂ ಸಾಂಸ್ಕೃತಿಕವಾಗಿ ಅವರು ನಿರ್ಮಿಸಿದ ನಿರ್ಮಾಣಗಳು ಮಾತ್ರ ದೊಡ್ಡ ಸಂಖ್ಯೆಯಲ್ಲಿ ಇರಲಿ ಕೆಲವು ಅಪೂರ್ಣ ಪ್ರಮಾಣದಲ್ಲಿಯೂ ಉಳಿದುಬಂದಿಲ್ಲ. ಆದರೆ ಅವರ ಕಾಲಕ್ಕೆ ಸಂಬಂಧಿಸಿದ ಅಸ್ಪಷ್ಟ ಮಾಹಿತಿ ನೀಡುವ ಒಂದೆರಡು ಶಾಸನಗಳು(ಕ್ರಿ.ಶ.೯೩೭ ತೇದಿಯ ಶಿರವಾಳ ಶಾಸನ ಹೊರತುಪಡಿಸಿ) ಮಾತ್ರ ಈ ಪ್ರದೇಶದಲ್ಲಿ ಕಂಡುಬಂದಿರುವುದನ್ನು ಊಹಿಸಲಾಗಿದೆ.

ಶಹಾಪುರ ತಾಲೂಕಿನ ದೋರನಹಳ್ಳಿಯ ಮಲ್ಲಯ್ಯನ ಗುಡಿ ಹಾಗೂ ಸುರಪುರ ತಾಲೂಕಿನ ಶೆಳ್ಳಗಿ ಗ್ರಾಮ ಪರಿಸರದಲ್ಲಿರುವ ಮಂಟಪ ಮಾರುತಿ ದೇವಾಲಯದ ಹಾಗೂ ಯಾದಗಿರಿ ತಾಲೂಕಿನ ನಂದಿಬೆಳಗುಂದಿ ಗ್ರಾಮದ ಬಸವಣ್ಣನ ಗುಡಿಯ ಮುಂಭಾಗದಲ್ಲಿ ಆ ಕಾಲದೆನ್ನಬಹುದಾದ ಶಾಸನಗಳನ್ನು ಸಂಶಯಗಳನ್ನಿಟ್ಟುಕೊಂಡೇ ಗುರುತಿಸಲಾಗಿದೆ. ಅಲ್ಲದೇ ವಾಸ್ತು ವಿವರ ದೃಷ್ಟಿಯಿಂದಲೂ ಸಹ ಅಂಥದ್ದೇ ಅಭಿಪ್ರಾಯಪಡಬಹುದು. ಈ ಜಿಲ್ಲೆಯ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಿದಂತೆ ಕೆಲವೊಂದು ಗ್ರಾಮಗಳಲ್ಲಿ ಮಾತ್ರ ಬೆರಳೆಣಿಕೆ ಸಾಕ್ಷಿಗಳು ರಾಷ್ಟ್ರಕೂಟ ಕಾಲದವುಗಳೆಂದು ಊಹಿಸಿ ಗುರುತಿಸಬಹುದಾದ ಸಾಧ್ಯತೆಗಳುಂಟು.

ಯಾದಗಿರಿ ಬೆಟ್ಟದಲ್ಲಿ ನಿರ್ಮಾಣವಾದ ಕೋಟೆಯ ಆವರಣದಲ್ಲಿ ಮೂರನಾಲ್ಕು ಗುಹಾ ಶಿಲ್ಪಗಳಿವೆ. ಆದರೆ ಈ ಗುಹೆಗಳು ಅಷ್ಟೇನೂ ಕಡಿದಾದವುಗಳಲ್ಲ. ಜೈನಮತಕ್ಕೆ ಸಂಬಂಧಿಸಿದ(ಆದಿನಾಥ, ಪಾರ್ಶ್ವನಾಥ ಹಾಗೂ ಮಹಾವೀರನ)ಶಿಲ್ಪಗಳಿವು. ಬಹುಶಃ ರಾಷ್ಟ್ರಕೂಟ ಆಳ್ವಿಕೆಯ ಕೊನೆಯ ಘಟ್ಟದಲ್ಲಿ ಅಥವಾ ಕಲ್ಯಾಣ ಚಾಲುಕ್ಯರ ಆಡಳಿತ ಪ್ರಾರಂಭಗೊಂಡ ಅತೀ ಶೀಘ್ರಾವಧಿಯಲ್ಲಿ ಇವು ರಚನೆಯಾದಂತವುಗಳೆಂದು ತರ್ಕಿಸಬಹುದು. ಶಹಾಪುರ ತಾಲೂಕಿನ ದೋರನಹಳ್ಳಿಯ ಮಲ್ಲಯ್ಯನ ಗುಡಿಯಲ್ಲಿರುವ ಕಂಬಗಳು ಸಹ ರಾಷ್ಟ್ರಕೂಟ

ಕಾಲದವುಗಳು ಎಂಬುದರಲ್ಲಿ ಅನುಮಾನಗಳಿಲ್ಲ. ಈ ಅಭಿಪ್ರಾಯಕ್ಕೆ ಪೂರಕವೆಂಬಂತೆ ಗುಡಿಯ ಮುಂಭಾಗದಲ್ಲಿ ಆ ಕಾಲದ ಅಸ್ಪಷ್ಟ ಶಾಸನವು ಈವರೆಗೂ ಉಳಿದು ಬಂದಿರುವುದನ್ನು ಗಮನಿಸಬಹುದು.

ಯಾದಗಿರಿ ಜಿಲ್ಲೆಯ ನಂದಿಬೆಳಗುಂದಿ ಗ್ರಾಮದ ಬಸವಣ್ಣನ ಗುಡಿಯ ಮುಂಭಾಗದಲ್ಲಿ ರಾಷ್ಟ್ರಕೂಟ ಕಾಲದ ಸ್ಥಂಭಶಾಸನ ಇದೆ. ಅದು ಸಹ ಹೆಚ್ಚು ಸವೆದುದರಿಂದ ಅಸ್ಪಷ್ಟವಾಗಿಯೇ ಕಂಡುಬರುತ್ತದೆ. ಆದರೆ ಈ ಗುಡಿಯ ತಲವಿನ್ಯಾಸ ಗಮನಿಸಿದಾಗ ನಮಗೆ ತಿಳಿಯಬಹುದಾದ ಮುಖ್ಯ ಸಂಗತಿ ಎಂದರೆ ಅಧಿಷ್ಠಾನದ ಮೇಲೆ ಕಟ್ಟಿರುವ ಪರಿ. ಅದರ ಕಾಲಗಣನೆಯನ್ನು ಗುರುತಿಸಲು ಈ ಅಧಿಷ್ಠಾನವು ಸಹಾಯಕವಾಗುತ್ತದೆ. ಬಹುಶಃ ಪ್ರಾಚೀನ ದೇವಾಲಯವು ಜಿದ್ದುಹೋದಾಗ ಅದೇ ಪ್ರಾಚೀನ ಸ್ಮಾರಕದ ಅಧಿಷ್ಠಾನದ ಮೇಲೆಯೇ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮತ್ತೆ ಈ ಗುಡಿಯನ್ನು ಕಟ್ಟಿ ನಿಲ್ಲಿಸುವ ಪ್ರಯತ್ನದಲ್ಲಿ ಯಶಸ್ಸನ್ನು ಹೊಂದಲಾಗಿದೆ. ಸುರಪುರ ತಾಲೂಕಿನ ಶೆಳ್ಳಗಿ ಅಥವಾ ಪ್ರಾಚೀನ ಸೆಲದಹಳ್ಳಿಯಲ್ಲಿ ಇದೇ ತೆರನಾದ ಅವಶೇಷಗಳು ಕಂಡುಬರುತ್ತವೆ. ಕೃಷ್ಣಾನದಿಯ ದಂಡೆಯ ಮೇಲೆ ರಚನೆಯಾಗಿರುವ ಮಂಟಪ ಮಾರುತಿ ದೇವಾಲಯವು ಪ್ರಾಯಶಃ ಸುಮಾರು ಮೂರು ಭಾರಿ ಆದರೂ ಜೀರ್ಣೋದ್ಧಾರಗೊಂಡಿದೆಯೆಂದು ಗುರುತಿಸಬಹುದು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ವಿಜಯನಗರ ಕಾಲದಲ್ಲಿ ಅದು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗಿರುವುದರ ಗುರುತುಗಳಿವೆ. ಆದರೆ ಇದರ ಪ್ರಾಚೀನ ಹೆಸರು ಏನಾಗಿತ್ತು ಎಂಬುದು ತಿಳಿಯದಾದ ಸಂಗತಿ.

ಶಹಾಪುರ ತಾಲೂಕಿನ ಶಿರವಾಳ ಗ್ರಾಮದಲ್ಲಿ ಕಂಡುಬರುವ ಕೆಲವು ದೇವಾಲಯಗಳು ರಾಷ್ಟ್ರಕೂಟ ಕಾಲದಲ್ಲಿಯೇ ನಿರ್ಮಾಣವಾದವುಗಳೆಂದು ಖಚಿತವಾಗಿ ಹೇಳಬಹುದು. ಅಲ್ಲದೇ ಅವರ ಕಾಲದ ಸ್ಪಷ್ಟವಾದ ಶಾಸನ ಮಾಹಿತಿ ಸಹ ದಾಖಲಾಗಿರುವುದನ್ನು ಈಗಾಗಲೇ ಅಧ್ಯಾಯ ಮೂರರಲ್ಲಿ ಚರ್ಚಿಸಲಾಗಿದೆ. ಗ್ರಾಮಕ್ಕೆ ಹೊಂದಿಕೊಂಡೆ ಹರಿಯುತ್ತಿರುವ ಹಳ್ಳದ ದಂಡೆಯ ಮೇಲೆ ನನ್ನಯ್ಯ, ನಾದಯ್ಯ, ಸುಜ್ಞಾನೇಶ್ವರ ಹಾಗೂ ಹೆಸರು ದಾಖಲಾಗದ ಕೆಲವು ಪ್ರಾಚೀನ ಗುಡಿಗಳು ನಿಶ್ಚಿತವಾಗಿ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾದಂತವುಗಳು.

ಶಹಾಪುರ ತಾಲೂಕಿನ ಗುರುಸುಣಗಿ ಗ್ರಾಮದಲ್ಲಿಯೂ ರಾಷ್ಟ್ರಕೂಟ ಕಾಲದ ದೇವಾಲಯ ನಿರ್ಮಾಣವಾಗಿದ್ದಿರಬಹುದಾದ ಸಾಧ್ಯತೆಗಳಿವೆ. ಕಾರಣ ಎರಡನೆಯ ಜಯಸಿಂಹನ ಕಾಲದ ಒಂದು ಶಾಸನ. ಪುನರ್ಭರಣಗೊಂಡ ವಿಚಾರ ದಾಖಲಿಸುತ್ತದೆ. ಇದೇ ಅಧ್ಯಾಯದಲ್ಲಿ ರಾಷ್ಟ್ರಕೂಟರನ್ನು ಬದಿಗೊತ್ತಿ ಅಧಿಕಾರದ ಚುಕ್ಕಾಣಿ ಹಿಡಿದ ಕಲ್ಯಾಣ ಚಾಲುಕ್ಯರು ಈ ಪ್ರದೇಶದ ಪ್ರಾಚೀನ ಆಡಳಿತ ವಿಭಾಗಗಳಲ್ಲಿ ಹೆಚ್ಚಿನ ಸಂಖ್ಯೆಯ ದೇವಾಲಯಗಳ ನಿರ್ಮಾಣಕ್ಕೆ ಕಾರಣಕರ್ತರಾದರು. ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲದಿಂದ ಹಿಡಿದು ನಾಲ್ಕನೆಯ ಸೋಮೇಶ್ವರನ ಕಾಲದವರೆಗೂ ಈ ಪ್ರದೇಶದಲ್ಲಿ ದೇವಾಲಯಗಳು ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಆದರೂ ತ್ರಿಭುವನಮಲ್ಲ, ನಿತ್ಯಭೂಮಿದಾನಲೋಲ ಬಿರುದಾಂಕಿತ ಆರನೆಯ

ವಿಕ್ರಮಾದಿತ್ಯನ ಕಾಲದಲ್ಲಿ ಅಂದರೆ ಕ್ರಿ.ಶ.೧೦೭೬-೧೧೨೬ರ ಕಾಲಾವಧಿಯಲ್ಲಿ ಈ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯ ದೇವಾಲಯಗಳು ನಿರ್ಮಾಣವಾದುವು. ಅಲ್ಲದೇ ವಾಸ್ತು ವಿವರದ ದೃಷ್ಟಿಯಿಂದ ಉನ್ನತವಾದ ದೇವಾಲಯಗಳು ಸಹ ಈತನ ಆಡಳಿತಾವಧಿಯಲ್ಲಿ ಕಟ್ಟಲ್ಪಟ್ಟಿರುವಂಥವು.

ಕಲ್ಯಾಣ ಚಾಲುಕ್ಯ ಮೂರನೆಯ, ನಾಲ್ಕನೆಯ ಸೋಮೇಶ್ವರರು ಹಾಗೂ ಕಲಚೂರ್ಯರ ಆಳ್ವಿಕೆಯಲ್ಲಿ ಯಾದಗಿರಿ ಜಿಲ್ಲೆಯ ಪ್ರಾಚೀನ ವಿಭಾಗಗಳಲ್ಲಿ ದೇವಾಲಯಗಳ ಚಟುವಟಿಕೆಯ ಕುರಿತು ವಿವರಗಳು ಕಂಡುಬಂದಿದ್ದರೂ ಅವರುಗಳು ಸಹ ಆಗಲೇ ಕಟ್ಟಿದ್ದ ದೇವಾಲಯಗಳಿಗೆ ದಾನ-ದತ್ತಿ ನೀಡಿರುವ ಪ್ರಯತ್ನ ಹೆಚ್ಚಿನ ಪ್ರಮಾಣದಲ್ಲಿ ಮಾಡಿದರೂ ಹೊರತು ಪರಿಗಣಿಸಬಹುದಾದ ಹೆಚ್ಚಿನ ಸಂಖ್ಯೆಯಲ್ಲಿ ದೇವಾಲಯಗಳನ್ನು ಕಟ್ಟಲಾಗಲಿಲ್ಲ ಎಂದು ಅಭಿಪ್ರಾಯಿಸಬಹುದು.

ದೇವಗಿರಿ ಸೇವುಣರು ಹಾಗೂ ಅವರ ಮಹಾಮಂಡಳೇಶ್ವರರಾದ ಎಳೆಮೇಲ(ಆಲಮೇಲ) ಅಥವಾ ತರ್ದವಾಡಿ ನಾಡಿನ ಶಿಲಾಹಾರರು ಈ ಪ್ರಾಚೀನ ವಿಭಾಗಗಳನ್ನು ಹದಿಮೂರನೆಯ ಶತಮಾನದ ಮೊದಲಾರ್ಧದ ಪೂರ್ವಪಾದದಿಂದ ಹದಿನಾಲ್ಕನೆಯ ಶತಮಾನದವರೆಗೂ ಆಳ್ವಿಕೆ ಮಾಡಿರುವ ದಾಖಲೆಗಳುಂಟು. ಅವರ ಅವಧಿಯಲ್ಲಿಯೂ ಸಹ ಹಗರಟಗಿ, ಮುದನೂರು, ಯಾಳಗಿ ಹಾಗೂ ಶಿರವಾಳ ಗ್ರಾಮಗಳಲ್ಲಿ ಮಾತ್ರ ಅವರ ಕಾಲಕ್ಕೆ ಒಂದೆರಡು ದೇವಾಲಯಗಳನ್ನು ನಿರ್ಮಿಸಿರುವ ಮಾಹಿತಿಗಳು ಕಂಡುಬರುತ್ತವೆ. ಆದರೆ ಅವು ಸಹ ವಾಸ್ತು ವಿವರಗಳ ಹಿನ್ನೆಲೆಯಿಂದ ಗಮನಿಸಲೇಬೇಕಾದ ಪ್ರಾಮುಖ್ಯತೆ ಪಡೆದ ದೇವಾಲಯಗಳಂತೂ ಅಲ್ಲ. ಅಲ್ಲದೇ ಅವರ ಕಾಲದಲ್ಲಿ ಕಟ್ಟಲಾಗಿದೆ ಎಂದು ಸಾಬೀತುಗೊಳ್ಳುವ ಒಂದೆರಡು ದೇವಾಲಯಗಳು ಸಹ ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿವೆ. ಹಾಗಾಗಿ ಪ್ರಾಚೀನ ಮೂಲ ಸ್ವರೂಪದ ಸ್ಥಿತಿಯನ್ನು ಕಳೆದುಕೊಂಡು ನಿಂತಿರುವುದನ್ನು ಮಾತ್ರ ಈವರೆಗೂ ಗಮನಿಸಬಹುದು.

ಶಿಲಾಹಾರದ ಅವಧಿಯ ಚಟುವಟಿಕೆಗಳಲ್ಲಿ ದೇವಾಲಯಗಳ ನಿರ್ಮಾಣಕ್ಕಿಂತ ದಾನ-ದತ್ತಿಯ ಚಟುವಟಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಜರುಗಿದವು. ಆದರೆ ಇತಿಹಾಸ ಸದಾಕಾಲ ನೆನಪಿಡುವಂತಹ ಒಂದೇ ದೇವಾಲಯ ಈ ಪ್ರದೇಶದಲ್ಲಿ ನಿರ್ಮಾಣವಾಗಲಿಲ್ಲ. ಶಿರವಾಳದಲ್ಲಿರುವ ಸಿದ್ಧಶಾಂತೇಶ್ವರ(ಸಿದ್ದೇಶ್ವರ), ಮುದನೂರಿನ ಲಕ್ಷ್ಮೇಶ್ವರ ಹಾಗೂ ರಾಮನಾಥ, ರಾಜನಕೋಳೂರಿನ ಶಂಕರನಾರಾಯಣ ಹಾಗೂ ಹಗರಟಗಿಯಲ್ಲಿರುವ ಕೆಲವು ಪ್ರಮುಖ ದೇವಾಲಯಗಳಿಗೆ ಪುನಃ ದಾನ-ದತ್ತಿ ನೀಡಿದರೂ ವಿನಹ ಈ ರೀತಿಯ ದೇವಾಲಯ ಕಟ್ಟಲು ಅವರಿಗೂ ಆಗಲಿಲ್ಲ. ಯಾಳಗಿಯಲ್ಲಿರುವ ಕೇಶವ ದೇವಾಲಯವು ಮಾತ್ರ ಸೇವುಣರ ಆಡಳಿತಾಧಿಕಾರಿ ಗಣಪತಿರೆಡ್ಡಿ ಆಣತಿ ಮೇರೆಗೆ ನಿರ್ಮಾಣವಾಯಿತೆಂಬ ಸ್ಪಷ್ಟ ಉಲ್ಲೇಖವು ದಾಖಲಾಗಿದೆ. ಆದರೆ ಅದು ಸಹ ಜೀರ್ಣೋದ್ಧಾರಗೊಂಡಿದ್ದರಿಂದ ತನ್ನ ಮೂಲರೂಪವನ್ನು ಕಳೆದುಕೊಂಡು ನಿಂತಿರುವುದನ್ನು ಕಾಣಬಹುದು.

ಉತ್ತರದ ಆಕ್ರಮಣಗಳು ದೆಹಲಿ ಸುಲ್ತಾನರ ಮೂಲಕ ದಕ್ಷಿಣದಲ್ಲಿಯು ತೀವ್ರಗೊಂಡವು. ಈಗಾಗಲೇ ಒಂದು ಸಹಸ್ರಮಾನ ಕಾಲ ಕಟ್ಟಿಕೊಳ್ಳುತ್ತಾ ಬಂದಿದ್ದ ದಕ್ಷಿಣ ಭಾರತದಲ್ಲಿದ್ದ ರಾಜಕೀಯ ಮತ್ತು ಸಾಂಸ್ಕೃತಿಕ ಸೌಧಗಳು ಅನಿರೀಕ್ಷಿತ ಹೊಡೆತಗಳಿಂದ ಬುಡಮೇಲುಗೊಂಡವು. ಉತ್ತರ ಭಾರತದ ಮುಸ್ಲಿಂರ ದಾಳಿಗಳು ಕೇವಲ ರಾಜಕೀಯ ಸ್ಥಾನಮಾನಗಳನ್ನು ಮಾತ್ರ ಬದಲಾಯಿಸಲಿಲ್ಲ. ಮುಖ್ಯವಾಗಿ ಆವರೆಗೂ ನಡೆದುಕೊಂಡು ಬಂದಿದ್ದಂತಹ ದೇವಾಲಯ ನಿರ್ಮಾಣ ಚಟುವಟಿಕೆಗಳ ಮೇಲೂ ಅಗಾಧವಾದ ಪರಿಣಾಮ ಬೀರಿದವು. ಅದರಿಂದ ಪ್ರಸ್ತುತ ಯಾದಗಿರಿ ಜಿಲ್ಲಾ ಪ್ರದೇಶವು ತಪ್ಪಿಸಿಕೊಳ್ಳಲಾಗಲಿಲ್ಲ. ಹಾಗೂ ವಿಶೇಷ ಪರಿಣಾಮಗಳು ಉಳಿದೆಲ್ಲ ಭಾಗಗಳಿಗಿಂತ ಈ ಪ್ರದೇಶದ ಮೇಲೆ ಹೆಚ್ಚಿನ ಪ್ರಮಾಣದಲ್ಲಿ ಘಟಿಸಿದವು. ಕಾರಣ ದಕ್ಷಿಣ ಭಾರತದ ಪ್ರವೇಶಕ್ಕೆ ಆ ಮುಂಚೆ ದೊಡ್ಡ ತಡೆಗೋಡೆಯಾಗಿದ್ದು ಪ್ರಸ್ತುತ ಸಗರನಾಡು ಪ್ರದೇಶವೇ ಎಂದರೆ ತಪ್ಪಾಗಲಾರದು. ಸಗರ ಪ್ರವೇಶದ ಮೂಲಕ ಅಂಥ ಅಡತಡೆ ಬಯಲಾಗಿ ಕೆಲವೇ ವರ್ಷಗಳಲ್ಲಿ ದೆಹಲಿಯ ಖಿಲ್ಜಿಯ ಹಾಗೂ ಆನಂತರದ ಮಹ್ಮಮದ ಬಿನ್ ತುಘಲಕ್ ಸೈನ್ಯವು ಇಡೀ ದಕ್ಷಿಣ ಭಾರತವನ್ನೇ ಆಕ್ರಮಿಸಿಕೊಳ್ಳುವುದರಲ್ಲಿ ಯಶಸ್ವಿಯಾದವು.

ಈ ವಿವರಗಳನ್ನು ಸ್ಪಷ್ಟಪಡಿಸುವ ಕಾರಣವೇನೆಂದರೆ ಕ್ರಿ.ಶ.೧೩೧೦ರ ನಂತರ ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ದೇವಾಲಯ ನಿರ್ಮಾಣ ಚಟುವಟಿಕೆಗಳು ಸಂಪೂರ್ಣವಾಗಿ ನಿಂತೇ ಹೋದವು ಎಂದರೆ ತಪ್ಪಾಗಲಾರದು. ಅಂಥ ಕಾರ್ಯಗಳನ್ನು ಪ್ರೋತ್ಸಾಹಿಸಿ ಸಹಾಯ ಮಾಡಬೇಕಾದ ರಾಜಕೀಯ ವ್ಯವಸ್ಥೆಯೇ ಈ ಪ್ರದೇಶದಲ್ಲಿ ಇಲ್ಲದಂತಾಯಿತು. ಕ್ರಿ.ಶ.೧೩೦೦ ರಿಂದ ೧೩೫೦ರ ವರೆಗಿನ ಈ ಅವಧಿಯಲ್ಲಿ ಯಾದಗಿರಿ ಜಿಲ್ಲಾ ಪ್ರದೇಶವು ಕೇವಲ ಯುದ್ಧಕ್ಕಾಗಿಯೇ ನಿರ್ಮಾಣವಾದಂತಹ ಆಟದ ಮೈದಾನದಂತೆ ತೋರಿತು. ದಕ್ಷಿಣ ಮತ್ತ ಉತ್ತರ ಭಾರತದ ಗಡಿರೇಖೆಯಂತಾದ ಸಗರನಾಡು, ತರ್ದವಾಡಿ, ಆಳಂದಸಾಸಿರ, ಕಲ್ಲಕೆಳಗುನಾಡು, ಹಗರಟಗಿ ಪ್ರದೇಶ ಹಾಗೂ ಆಂಧ್ರಪ್ರದೇಶದ ವೆಂಗಿಮಂಡಲ ಅಥವಾ ಪ್ರಾಚೀನ ಆಡಳಿತ ವಿಭಾಗವಾದ ಬೋಧನ ಪ್ರದೇಶಗಳು ಮೇಲಿಂದ ಮೇಲೆ ಜರುಗಿದ ಯುದ್ಧಗಳಿಂದ ನಲುಗಿಹೋದವು.

ಅದೇ ಕಾಲಕ್ಕೆ ದಕ್ಷಿಣದಲ್ಲಿಯೂ ಹೊಸ ಸಾಮ್ರಾಜ್ಯಶಾಹಿಗಳು ಹುಟ್ಟಿಕೊಂಡವು. ಪ್ರಾಚೀನ ಶಾಸನಗಳಲ್ಲಿ ಪೆದ್ದೊರೆ ಅಥವಾ ಪೆದ್ದೊರೆ ಎಂದು ಕರೆಯಲ್ಪಡುವ ಕೃಷ್ಣಾ ಹಾಗೂ ಕಿರಿದೊರೆ ಹೆಸರಿನ ತುಂಗಭದ್ರಾ ನದಿಗಳು ಕ್ರಿ.ಶ.೧೪ನೇ ಶತಮಾನದ ಮೂವತ್ತರ ದಶಕಾನಂತರ ಹುಟ್ಟಿಕೊಂಡ ಹೊಸ ಸಾಮ್ರಾಜ್ಯ ಶಕ್ತಿಗಳಾದ ವಿಜಯನಗರ ಹಾಗೂ ಬಹಮನಿ ಅರಸರ ರಾಜ್ಯಗಳಿಗೆ ಶಾಶ್ವತ ಗಡಿರೇಖೆಗಳಾದವು. ಆ ನಂತರ ಈ ಭಾಗವು ಬಹುವರ್ಷಗಳ ಬಹಮನಿಗಳ ಆಡಳಿತ ಸುಪರ್ದಿಗೆ ಒಳಗಾಯಿತು. ಇಂಥ ಪರಿಣಾಮಗಳು ದೇವಾಲಯಗಳ ನಿರ್ಮಾಣ ಚಟುವಟಿಕೆಗಳಿಗೆ ಭಾರೀ ಹಿನ್ನಡೆ ಉಂಟುಮಾಡಿದವು. ದೇವಾಲಯಗಳ ಜಾಗದಲ್ಲಿ ಸ್ಮಾರಕ ಸಂಸ್ಕೃತಿಯ ವಿಚಾರಗಳು ಪ್ರಬಲಗೊಂಡವು.

ಸ್ಮಾರಕಗಳ ರಚನೆಯ ವಾಸ್ತು ವಿವರಗಳು ಹರಳುಗಟ್ಟಿ ಕವಲೊಡೆದ ಮೊದಲ ಪ್ರದೇಶವೆಂದರೆ ಸಗರನಾಡು ಎಂದರೆ ತಪ್ಪಾಗಲಾರದು. ಆದರೂ ೧೪ನೇ ಶತಮಾನದಲ್ಲಿಯೂ ಒಂದೆರಡು ದೇವಾಲಯಗಳು ಶಿರಿವಾಳ, ಹಗರಟಗಿ, ಭೀಮರಾಯನಗುಡಿ, ಸುರಪುರ, ಶೆಳ್ಳಿಗೆ, ಯಾದಗಿರಿ, ಚಿಂಡರಕಿ, ಗುರುಮಿಟ್ಕಲ್, ಗಾಜರಕೋಟ, ಕಕ್ಕೇರಿ, ತಿಂಥಣಿ, ದೇವರಗೋನಾಳ, ಶಹಾಪುರ, ಸಗರ ಮುಂತಾದ ಕೆಲವು ಸ್ಥಳಗಳಲ್ಲಿ ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ಒಂದೆರಡು ದೇವಾಲಯಗಳನ್ನು ಸುರಪುರ ಪಾಳೇಗಾರರು ತಮ್ಮ ಆಡಳಿತಾವಧಿಯಲ್ಲಿ ನಿರ್ಮಿಸಿರುವ ದಾಖಲೆಗಳಿವೆ. ಭೀಮರಾಯನಗುಡಿ ದೇವಾಲಯ, ಸುರಪುರದ ವೇಣುಗೋಪಾಲಸ್ವಾಮಿ, ತಿಂಥಣಿಯ ಹಾಗೂ ದೇವರಗೋನಾಳದಲ್ಲಿರುವ ಮೌನೇಶ್ವರ, ಕಕ್ಕೇರಿಯ ಸೋಮನಾಥ ಹಾಗೂ ಯಾದಗಿರಿ ಬೆಟ್ಟದ ಮೇಲಿರುವ ಹೆಸರಿಲ್ಲದ ಕೆಲವು ಚಿಕ್ಕ ಗುಡಿಗಳು ಸಹ ಸುರಪುರದ ಪಾಳೇಗಾರರ ಕಾಲಾವಧಿಯಲ್ಲಿಯೇ ನಿರ್ಮಾಣವಾದುಗಳೆಂದು ಗುರುತಿಸಬಹುದು.

ಪ್ರಸ್ತುತ ಪ್ರಬಂಧದ ಈ ಅಧ್ಯಾಯದಲ್ಲಿ ದೇವಾಲಯಗಳಲ್ಲದೇ ಮಸೀದಿ, ದರ್ಗಾ ಹಾಗೂ ಇಂಡೋ-ಇಸ್ಲಾಮಿಕ್ ಶೈಲಿಯ ಇನ್ನಿತರ ಕೆಲವು ಸ್ಮಾರಕಗಳನ್ನು ಈ ಚೌಕಟ್ಟಿನಲ್ಲಿ ನಿಷ್ಕರ್ಷಿಸಲಾಗಿದೆ. ಅಂಥ ನಾಲ್ಕೈದು ಸ್ಮಾರಕಗಳ ಕುರಿತು ಈ ಅಧ್ಯಾಯದ ಕೊನೆ ಪುಟಗಳಲ್ಲಿ ವಿವರಗಳನ್ನು ಬರೆಯಲಾಗಿದೆ. ಯಾದಗಿರಿ ಜಿಲ್ಲೆ ಪ್ರಾಚೀನ ಪ್ರದೇಶಗಳಲ್ಲಿ ಆ ಕಾಲದಲ್ಲಿಯೇ ನಿರ್ಮಾಣವಾಗಿರುವ ಮುಸ್ಲಿಂ ಪಂಥಕ್ಕೆ ಸಂಬಂಧಿಸಿದ ಸ್ಮಾರಕಗಳು ನಿರ್ಮಾಣವಾಗಲು ಬಹುಮುಖ್ಯ ಕಾರಣಗಳೆಂದರೆ ಉತ್ತರದಿಂದ ಬಂದು ಶಾಶ್ವತವಾಗಿ ಇಲ್ಲಿಯೇ ನೆಲೆನಿಂತ ಕೆಲವು ಮುಸ್ಲಿಂ ಆಡಳಿತಗಾರರು ಎಂದರೆ ತಪ್ಪಾಗಲಾರದು. ಅಲ್ಲಾಉದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನ ಸೈನ್ಯದಲ್ಲಿ(ಚಿಕ್ಕಸೈನ್ಯ ಘಟಕದ ಮುಖ್ಯಸ್ಥ) ಹುದ್ದೆಯಲ್ಲಿದ್ದ ಸರ್ಮಸ್ತರ ಎಂಬ ಸೈನ್ಯಾಧಿಕಾರಿ ದಂಡೆತ್ತಿ ಬಂದ ಸೈನ್ಯದ ಜೊತೆಗೆ ಹಿಂದಿರುಗದೇ ಸಗರನಾಡಿನ ಮಹಾಪಟ್ಟಣ ಸಗರದಲ್ಲಿಯೇ ಶಾಶ್ವತವಾಗಿ ನೆಲೆನಿಂತ. ಸೈನ್ಯ ವೃತ್ತಿಯನ್ನು ತೊರೆದು ಸೂಫಿಸಂತನಾಗಿ ಪರಿವರ್ತನೆ ಹೊಂದಿದ ಎಂಬ ಅಭಿಪ್ರಾಯಗಳಿವೆ. ಇಡೀ ದಕ್ಷಿಣ ಭಾರತದಲ್ಲಿಯೇ ಮೊಟ್ಟಮೊದಲಿಗನಾಗಿ ನೆಲೆನಿಂತ ಮೊದಲ ಸೂಫಿ ಸಂತನೆಂದರೆ ಈತನೇ ಎಂಬ ಅಭಿಪ್ರಾಯಗಳುಂಟು[೧೩]. ಬಹಮನಿ ಅರಸರು ಬಲಗೊಳ್ಳಲು ಸುಮಾರು ಮೂವತ್ತು ವರ್ಷಗಳ ಮೊದಲೇ ಈ ಭಾಗದಲ್ಲಿ ಸೂಫಿಗಳ ಪ್ರಭಾವವು ಹರಳುಗಟ್ಟಿತು. ಹಾಗಾಗಿ ಅಂಥ ಹಲವಾರು ಸೂಫಿ ಸಂತರಿಗಾಗಿ ನಿರ್ಮಾಣವಾದ ದರ್ಗಾ ಹಾಗೂ ಕಟ್ಟೆಗಳು ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಅಲ್ಲದೇ ಅವುಗಳು ವಿವಿಧ ಕಾಲಘಟ್ಟಗಳಲ್ಲಿ ನಿರ್ಮಾಣವಾಗಿರುವುದನ್ನು ಗುರುತಿಸಬಹುದು.

ಸಗರ ಗ್ರಾಮದಲ್ಲಿರುವ ಸೂಫಿಸರ್ಮಸ್ತರ, ಕೆಂಬಾವಿಯ ಜಜ್ಞಾ ಮಸ್ಜಿದ್, ಅಗ್ನಿಯ ಶಹಾಪತಿ ಶಹಾಲಾಲ್, ಅನ್ಪುರದ ಅಲ್ಲಾವುದ್ದೀನ್, ಯಾದಗಿರಿಯ ಯಾಕೂಬ್‌ಖಾದ್ರಿ, ಶಹಾಜಾನ್

ಷಾ ಹಾಗೂ ಪೀರ್ ಗಯಬಸಾಬನ ದರ್ಗಾಗಳು ಈ ಭಾಗದಲ್ಲಿ ಹೆಚ್ಚಿನ ಪ್ರಸಿದ್ಧಿ ಪಡೆದಿವೆ. ಸುರಪುರ ತಾಲೂಕಿನ ಕೆಂಬಾವಿ ಹಾಗೂ ಅಗ್ನಿ ಶಹಾಪುರ ತಾಲೂಕಿನ ಸಗರ ಹಾಗೂ ಗೋಗಿ ಮತ್ತು ಯಾದಗಿರಿ ತಾಲೂಕಿನ ಯಾದಗಿರಿ ಪಟ್ಟಣ ಹಾಗೂ ಕಡೇಚೂರು ಗ್ರಾಮಗಳಲ್ಲಿ ಬಹಮನಿ ಹಾಗೂ ವಿಜಯಪುರ ಆದಿಲ್‌ಷಾಹಿಗಳ ಕಾಲದಲ್ಲಿ ಕಟ್ಟಿದ ಬಹು ಸುಂದರವಾಗಿರುವ ಸ್ಮಾರಕಗಳು ಈವರೆಗೂ ಉಳಿದುಕೊಂಡು ಬಂದಿರುವುದನ್ನು ಗಮನಿಸಬಹುದು. ಕಡೇಚೂರು ಗ್ರಾಮದಲ್ಲಿರುವ ಮಸೀದಿ ಹಾಗೂ ಗೋಗಿಯ ಖಾಲಿ ಗುಂಬಜ ಸ್ಮಾರಕಗಳು ಈ ಪ್ರದೇಶದಲ್ಲಿ ಕಂಡುಬರುವ ಸ್ಮಾರಕಗಳಲ್ಲಿಯೇ ತುಂಬಾ ಉತ್ಕೃಷ್ಟ ರಚನೆಗಳೆಂದರೆ ತಪ್ಪಾಗಲಾರದು.

ಈವರೆಗೂ ವಿವರಿಸಿದ ಸಂಕ್ಷಿಪ್ತ ಮಾಹಿತಿಗಳು ಕ್ಷೇತ್ರಕಾರ್ಯದ ಮೂಲಕ ಕಂಡುಕೊಂಡ ಸಂಗತಿಗಳ ಹಿನ್ನೆಲೆಯಲ್ಲಿ ವ್ಯಕ್ತವಾದಂಥವು. ಸುಮಾರು ೩೫೦ ಗ್ರಾಮಗಳನ್ನು ಹೊಂದಿರುವ ಪ್ರಸ್ತುತ ಯಾದಗಿರಿ ಜಿಲ್ಲೆಯಲ್ಲಿ ಹೆಚ್ಚು ಕಡಿಮೆ ಸುಮಾರು ೧೫೦ ವಾಸ್ತು ವಿವರಗಳು ಅಳಿದುಳಿದು, ಭಗ್ನಗೊಂಡ ಹಾಗೂ ಜೀರ್ಣೋದ್ಧಾರ ಹೊಂದಿದ ಸ್ಥಿತಿಯಲ್ಲಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ಶೇಕಡಾ ತೊಂಬತ್ತಕ್ಕಿಂತ ಹೆಚ್ಚಿನ ಸಂಖ್ಯೆಯ ದೇವಾಲಯಗಳು ಒಂದಿಲ್ಲ ಒಂದು ಕಾರಣಗಳಿಗಾಗಿ ಧಕ್ಕೆಗೊಳಗಾಗಿವೆ. ಇಂಥ ಸಂಗತಿಗಳಿಗೆ ದರ್ಗಾ ಮತ್ತು ಮಸೀದಿಗಳು ಸಹ ಹೊರತಾಗಿಲ್ಲ. ವಾಸ್ತು, ಶಿಲ್ಪ, ಮಸೀದಿ, ದರ್ಗಾ ಹಾಗೂ ಇಂಡೋ-ಇಸ್ಲಾಮಿಕ್ ರಚನೆಗಳ ಕುರಿತಂತೆಯೇ ಪ್ರತ್ಯೇಕ ಅಧ್ಯಯನ ಕೈಗೊಳ್ಳಬಹುದಾದಷ್ಟು ವಿವರಗಳು ಈ ಜಿಲ್ಲೆಯಲ್ಲಿವೆ. ಆದರೆ ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯ ಮಿತಿಯ ಹಿನ್ನೆಲೆಯಲ್ಲಿ ಕೆಲವು ವಿಚಾರಗಳನ್ನು ಮಾತ್ರ ನಿರ್ವಚಿಸಲು ಪ್ರಯತ್ನಿಸಲಾಗಿದೆ. ಅಲ್ಲದೇ ಈ ಪ್ರದೇಶದಲ್ಲಿರುವ ಪ್ರಾಚೀನ ಸ್ಮಾರಕಗಳು ಬೆಳೆದು ಬಂದ ಬಗೆಗಳನ್ನು ಸಂಕ್ಷಿಪ್ತರೂಪದಲ್ಲಿ ದಾಖಲಿಸಲು ಅವುಗಳಿಗೆ ಸಂಬಂಧಿಸಿದ ಶಾಸನ ವಿವರಗಳಲ್ಲಿ ದಾಖಲಾದ ಸಂಗತಿಗಳನ್ನು ಅವಶ್ಯಕತೆ ಇದ್ದಷ್ಟು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರದೇಶದ ದೇವಾಲಯಗಳು ಹೊಂದಿರಬಹುದಾದ ಸಾಮಾನ್ಯ ಲಕ್ಷಣಗಳನ್ನು ಹಾಗೂ ಮೂರ್ತಿಶಿಲ್ಪಗಳು ಹೊಂದಿರಬಹುದಾದ ರಚನಾವಿನ್ಯಾಸಗಳು ಸೇರಿಸಿದಂತೆಯೇ ಅವುಗಳ ಕುರಿತು ಸ್ಥೂಲವಾಗಿರುವ ಈ ವಿವರಗಳನ್ನೆಲ್ಲ ಒಟ್ಟಾರೆಯಾಗಿ ದಾಖಲಿಸಲಾಗಿದೆ.

**ಈ ಪ್ರದೇಶದಲ್ಲಿ ಕಂಡುಬರುವ ದೇವಾಲಯಗಳ ಸಾಮಾನ್ಯ ಲಕ್ಷಣಗಳು**

ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ನಿರ್ಮಾಣವಾಗಿರುವ ಹೆಚ್ಚಿನ ಸಂಖ್ಯೆಯ ದೇವಾಲಯಗಳು ಸರಳ ರಚನೆಗಳಿಂದ ಅಥವಾ ನಿರಾಲಂಕಾರದಿಂದ ಕೂಡಿದವುಗಳು. ಆದರೂ ಇಂಥ ಅಭಿಪ್ರಾಯಗಳಿಗೆ ಅಪವಾದವೆಂಬಂತೆ ಏವೂರಿನ, ಸಂಗಮೇಶ್ವರ-ಸೋಮೇಶ್ವರ, ಬಾವಿ ಬಸವಣ್ಣ, ಶಿರವಾಳದ ಸಿದ್ಧೇಶ್ವರ, ನನ್ನಯ್ಯ ಮತ್ತು ನಾದಯ್ಯನ ಗುಡಿಗಳು ಕೆಂಬಾವಿಯ ರೇವಣ ಸಿದ್ದೇಶ್ವರ, ಇಡ್ಲೂರಿನ ಶಂಕರಲಿಂಗ ಹಾಗೂ ತಿರುಮಲೇಶ್ವರಿ, ಮುದನೂರಿನ ರಾಮನಾಥ

ಹಾಗೂ ಮಲ್ಲಿಕಾರ್ಜುನ, ಕೋಡಾಲದ ರಾಮಲಿಂಗೇಶ್ವರ, ಚಟ್ನಳ್ಳಿಯ ಕೋಟಿಬಸವೇಶ್ವರ, ಜಾಹಾಗೀರ ಅರಕೇರಿಯ ಸಹಸ್ರಲಿಂಗೇಶ್ವರ, ಹೆಮ್ಮಡಗಿಯ ಮತ್ತು ಬೆಳಗುಂದಿಯ ಬಸವಣ್ಣನ ಗುಡಿಗಳು ಹಗರಟಗಿಯ ಧರ್ಮರಾಜನ ಗುಡಿ, ಅಗ್ನಿಯ ಬಸದಿ ಹಾಗೂ ಹದಿನೈದನೆಯ ಶತಮಾನದ ನಂತರ ಕಟ್ಟಿದರೂ ತುಂಬಾ ಅಲಂಕಾರಿಕವಾಗಿ ಮೂಡಿಬಂದಿರುವ ಗಾಜರಕೋಟ ಗ್ರಾಮದಲ್ಲಿರುವ ಮಲ್ಲಿಕಾರ್ಜುನ, ರಾಚಪ್ಪಯ್ಯ ಹಾಗೂ ಕಡ್ಲಪ್ಪಯ್ಯನ ಗುಡಿಗಳು ಹಾಗೂ ಚಂಡರಕಿಯ ಸಂಗಮೇಶ್ವರ ಗುಡಿಗಳು ಹೆಚ್ಚಿನ ಅಲಂಕರಣೆಗಳಿಂದ ಕೂಡಿ ಶೋಭಿಸುತ್ತಿರುವುದನ್ನು ಗಮನಿಸಬಹುದು. ಗುರುಸುಣಗಿಯಲ್ಲಿರುವ ಚಂದಾಹುಸೇನಿ ದರ್ಗಾವು ಈ ಹಿಂದೆ ದೇವಾಲಯವೇ ಆಗಿತ್ತು. ಆ ಸ್ಮಾರಕವು ಸಹ ಈವರೆಗೂ ನಾಲ್ಕು ತಲ ಹೊಂದಿದ ಶಿಖರ, ಅಲಂಕಾರದಿಂದ ಕೂಡಿದ ಭಿತ್ತಿ ಹಾಗೂ ಉಪಾನ, ಜಗತಿ, ಕುಮದ, ತ್ರಿಪಟ್ಟ ಕುಮುದ, ಕಪೋತ ಹಾಗೂ ಗಳ ಭಾಗಗಳನ್ನು ಹೊಂದಿರುವ ಅಧಿಷ್ಠಾನ ಈವರೆಗೂ ಹಾಗೆಯೇ ಉಳಿದುಬಂದಿರುವುದನ್ನು ಕಾಣಬಹುದು.

ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಏಕ ಕೂಟ ಹಾಗೂ ತ್ರಿಕೂಟ ತಲವಿನ್ಯಾಸದ ರಚನೆಗಳೇ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ದ್ವಿಕೂಟ ಹಾಗೂ ಪಂಚಕೂಟ ಹಾಗೂ ಸಪ್ತಕೂಟ ಮಾದರಿಯ ಒಂದೆರಡು ದೇವಾಲಯಗಳು ರಚನೆಯಾಗಿರುವುದನ್ನು ಸಹ ಕಾಣಬಹುದು. ಐವೂರಿನ ಸಂಗಮೇಶ್ವರ–ಸೋಮೇಶ್ವರ ದೇವಾಲಯವು ಪ್ರಾರಂಭದಲ್ಲಿ ಏಕಕೂಟ ತಲವಿನ್ಯಾಸ ಹೊಂದಿದ್ದರೂ ಆನಂತರ ದ್ವಿಕೂಟ ಮತ್ತು ತ್ರಿಕೂಟವಾಗಿ ಪುನಾರಚನೆಗೊಳ್ಳುತ್ತಾ ಬೆಳೆದಿರುವ ವಿಶೇಷ ಲಕ್ಷಣವುಳ್ಳ ದೇವಾಲಯವಾಗಿದೆ. ಅದರಂತೆ ಸಪ್ತಕೂಟ ತಲವಿನ್ಯಾಸ ಹೊಂದಿದ ಅಣಬಿಯಲ್ಲಿರುವ ಕುಂಬಾರ ಸಾಲಿ ಎಂದು ಕರೆಯಲ್ಪಡುತ್ತಿರುವ ದೇವಾಲಯ ಅಥವಾ ಬಸದಿ ತನ್ನ ಭಾಗಗಳನ್ನು ಕಳೆದುಕೊಳ್ಳುತ್ತಾ ತ್ರಿಕೂಟದ ಮಾದರಿಯ ಸ್ಥಿತಿಗೆ ತಲುಪಿರುವುದನ್ನು ಗಮನಿಸಬಹುದು. ಚತುಷ್ಕೂಟ ಮಾದರಿಯ ಒಂದೇ ಒಂದು ದೇವಾಲಯ ಚಟ್ನಳ್ಳಿಯಲ್ಲಿರುವ ಕೋಟೆಬಸವವೇಶ್ವರ ದೇವಾಲಯವಾಗಿದೆ. ಈ ದೇವಾಲಯದ ತಲವಿನ್ಯಾಸವೇ ವಿಶಿಷ್ಟವಾಗಿದೆ. ಇದೇ ರೀತಿ ವೈಶಿಷ್ಟ್ಯತೆಯಿಂದ ಕೂಡಿದ ತಲ ವಿನ್ಯಾಸವನ್ನು ಹೊಂದಿರುವ ಸಿದ್ದೇಶ್ವರ ಗುಡಿಯನ್ನು ಶಿರವಾಳದಲ್ಲಿ ಕಾಣುತ್ತೇವೆ. ಇದು ಪಂಚಕೂಟ ತಲವಿನ್ಯಾಸಕ್ಕೆ ಹೆಸರುವಾಸಿಯಾದ ಕೆಲವೇ ಕೆಲವು ದೇವಾಲಯಗಳಲ್ಲಿ ಇದು ಒಂದು.

ಕೆಂಬಾವಿಯ ರೇವಣಸಿದ್ದೇಶ್ವರ, ತುಮಕೂರಿನಲ್ಲಿರುವ ಕಲ್ಮೇಶ್ವರ, ತಳಬೀಡಿನಲ್ಲಿರುವ ಸಿದ್ದೇಶ್ವರ, ಯರಗೋಳದ ಕಲ್ಲಯ್ಯ ಮುತ್ಯಾನಗುಡಿ, ಇಡ್ಲೂರಿನ ಶಂಕರಲಿಂಗ ಮದ್ರಕಿಯ ಗೂಳಿಬಸವೇಶ್ವರ ಹಾಗೂ ಹಗರಟಗಿಯಲ್ಲಿರುವ ಮೂರು ಕಳಸದ ಗುಡಿಗಳು ತ್ರಿಕೂಟ ತಲವಿನ್ಯಾಸ ಹೊಂದಿರುವಂತವುಗಳಾಗಿವೆ.

ದ್ವಿಕೂಟ ರಚನೆಗಳು ಅತ್ಯಂತ ಕಡಿಮೆ ಸಂಖ್ಯೆಯಲ್ಲಿದ್ದರೂ ವಾಸ್ತು ದೃಷ್ಟಿಯಿಂದ ತುಂಬಾ ಸುಂದರವಾಗಿ ಕಾಣಿಬರುವ ದೇವಾಲಯಗಳಾಗಿವೆ. ಪ್ರಮುಖವಾಗಿ ಮುದನೂರಿನಲ್ಲಿ ಮಲ್ಲಿಕಾರ್ಜುನ ಹಾಗೂ ರಾಮನಾಥನ ಗುಡಿಗಳು ದ್ವಿಕೂಟ ರಚನೆಗಳಾಗಿವೆ. ಐವೂರಿನ

ಪ್ರಸಿದ್ಧ ದೇವಾಲಯವಾದ ಸೋಮೇಶ್ವರ–ಸಂಗಮೇಶ್ವರ ದೇವಾಲಯವು ಮೂಲತಹ ದ್ವಿಕೂಟ ತಲವಿನ್ಯಾಸ ಹೊಂದಿರುವಂಥದ್ದನ್ನು ಗಮನಿಸಬಹುದು. ಜಹಾಗೀರ, ಅರಕೇರಿಯ, ಸಹಸ್ರಲಿಂಗೇಶ್ವರ ಹಾಗೂ ಕೋಡಾಲದ ರಾಮಲಿಂಗೇಶ್ವರ ದೇವಾಲಯಗಳು ದ್ವಿಕೂಟ ವಿನ್ಯಾಸದವುಗಳೆಂದೇ ಗುರುತಿಸಬಹುದು.

ಈ ಪ್ರದೇಶದಲ್ಲಿ ರಚನೆಯಾಗಿರುವ ಬಹುತೇಕ ದೇವಾಲಯಗಳ ಅಧಿಷ್ಠಾನವು ಸರಳ ರಚನೆಗಳಿಂದ ಕೂಡಿರುವಂತವುಗಳಾಗಿವೆ. ಆದರೂ ಶಿರವಾಳದಲ್ಲಿರುವ ನನ್ನಯ್ಯ, ನಾದಯ್ಯ, ಸಿದ್ದೇಶ್ವರ ಹಾಗೂ ಮಲ್ಲಿಕಾರ್ಜುನ, ಏವೂರಿನ ಬಾವಿ ಬಸವಣ್ಣನ ಗುಡಿ, ಜಹಾಗೀರ ಅರಕೇರಿಯ ಸಹಸ್ರಲಿಂಗೇಶ್ವರ, ಇಡ್ಲೂರಿನ ತಿರುಮಲೇಶ್ವರಿ, ಗುರುಸುಣಗಿಯ ಚಂದಾಹುಸೇನಿ ದರ್ಗಾ, ಕೆಂಬಾವಿಯ ರೇವಣಸಿದ್ದೇಶ್ವರ, ಕೋಡಾಲದ ರಾಮಲಿಂಗೇಶ್ವರ ದೇವಾಲಯದ ಅಧಿಷ್ಠಾನ ಭಾಗದಲ್ಲಿ ಗಜ ಪಟ್ಟಿಕೆ ಕೆತ್ತಲಾಗಿದೆ. ಇದೊಂದು ಅಪರೂಪದ ಉದಾಹರಣೆಯಾಗಿ ಕಂಡುಬರುತ್ತದೆ. ಕೋಡಾಲದ ರಾಮಲಿಂಗೇಶ್ವರ ಹಾಗೂ ಹಗರಟಗಿಯ ಧರ್ಮರಾಜನ ಗುಡಿಗಳು ಸ್ವಲ್ಪಮಟ್ಟಿಗೆ ಹೆಚ್ಚಿನ ಭಾಗಗಳನ್ನು ಒಳಗೊಂಡಿವೆ. ಕಲ್ಯಾಣದ ಚಾಲುಕ್ಯ ಕಾಲದ ಅಧಿಷ್ಠಾನದ ಜನಪ್ರಿಯ ರಚನಾ ವಿನ್ಯಾಸಗಳಾದ ಉಪಾನ, ಜಗತಿ, ಕುಮದ, ತ್ರಿಪಟ್ಟ ಕುಮದ, ಗಳ ಹಾಗೂ ಕಪೋತ ರಚನೆಗಳನ್ನು ಸರ್ವೇಸಾಮಾನ್ಯವಾಗಿ ಇಲ್ಲಿರುವ ಪ್ರಮುಖ ದೇವಾಲಯಗಳ ಅಧಿಷ್ಠಾನದ ಭಾಗಗಳು ಸಹ ಅವುಗಳನ್ನೇ ಒಳಗೊಂಡಿವೆ. ಕಪೋತ ಪಟ್ಟಿ ಮತ್ತು ಗಳ ಕಡ್ಡಾಯ ಎಂಬಂತೆ ಅಳವಡಿಕೆಯಾಗಿವೆ.

ದೇವಾಲಯಗಳಲ್ಲಿ ಭಿತ್ತಿಯ ಭಾಗವು ತುಂಬಾ ಪ್ರಾಮುಖ್ಯವಾದುದು. ಇಲ್ಲಿರುವ ಹೆಚ್ಚಿನ ದೇವಾಲಯಗಳ ಗೋಡೆ ಭಾಗಗಳು ನಿರಾಲಂಕಾರದಿಂದ ಕೂಡಿವೆ. ಶಿರವಾಳ ಹಾಗೂ ಏವೂರಿನ ಕೆಲವು ದೇವಾಲಯಗಳಲ್ಲಿ ತುಂಬಾ ಅಲಂಕಾರಿಕ ಭಿತ್ತಿಯ ರಚನೆಗಳಿವೆ. ಶಿರವಾಳದ ನನ್ನಯ್ಯ ಮತ್ತು ನಾದಯ್ಯನ ಗುಡಿಗಳ ಭಿತ್ತಿಯಲ್ಲಿ ಸುಂದರವಾದ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿದೆ. ಅಂಥದ್ದೇ ರಚನೆಗಳು ಏವೂರಿನ ಬಾವಿ ಬಸವಣ್ಣ ಗುಡಿಯಲ್ಲಿ ಭಿತ್ತಿಯಲ್ಲಿಯೂ ಕಾಣುತ್ತೇವೆ. ದೇವಾಲಯಗಳ ಕೇಂದ್ರಗಳೆಂದೇ ಪ್ರಸಿದ್ಧವಾಗಿರುವ ಏವೂರು, ಶಿರವಾಳ, ಹಗರಟಗಿ ಹಾಗೂ ಮುದನೂರುಗಳನ್ನು ಹೊರತುಪಡಿಸಿ ಅಪರೂಪ ಎಂಬಂತೆ ಕಾಣುವ ಜಹಾಗೀರ ಅರಕೇರಿಯಲ್ಲಿರುವ ಸಹಸ್ರಲಿಂಗೇಶ್ವರ ಹಾಗೂ ಇಡ್ಲೂರಿನ ತಿರುಮಲೇಶ್ವರಿ ಗುಡಿಗಳ ಭಿತ್ತಿ ಭಾಗಗಳು ತುಂಬಾ ಸೊಗಸಾಗಿ ಮೂಡಿಬಂದಿವೆ. ಅವುಗಳಲ್ಲಿ ಅರ್ಧಕಂಬಗಳು, ಕುಂಬ ಪಂಜರಗಳು, ಭಿತ್ತಿಯಲ್ಲಿರುವ ಕೋಷ್ಠಕಗಳು, ಜಾಲಂಧರಗಳು ಬಳ್ಳಿ ಹಾಗೂ ಹೂವುಗಳಿಂಗಳಿಂದ ಕೂಡಿದ ಸುಂದರ ರಚನೆವುಳ್ಳ ಪಟ್ಟಿಕೆಗಳು ಹಾಗೂ ಚಿಕ್ಕಪುಟ್ಟ ಪ್ರಾಣಿಗಳ ಕೆಲವೊಂದು ಉಬ್ಬುಶಿಲ್ಪ ಪಟ್ಟಿಕೆಯನ್ನು ಈ ದೇವಾಲಯಗಳ ಭಿತ್ತಿ ಭಾಗಗಳಲ್ಲಿ ರಚಿಸಿರುವುದನ್ನು ಗಮನಿಸಬಹುದು.

ಗಾಜರಕೋಟನಲ್ಲಿರುವ ಮಲ್ಲಿಕಾರ್ಜುನ ದೇವಾಲಯದ ಒಳಭಿತ್ತಿ ಹಾಗೂ ಹೊರಭಿತ್ತಿ ಎರಡರಲ್ಲೂ ಉಬ್ಬುಶಿಲ್ಪಗಳ ಫಲಕಗಳನ್ನು ಅಳವಡಿಸಲಾಗಿದೆ. ಆದರಲ್ಲಿ ಹೆಚ್ಚಿನವು ಕಲ್ಯಾಣ ಕ್ರಾಂತಿಯನ್ನು ನೆನಪಿಸುವ ಸನ್ನಿವೇಶದವುಗಳು. ಹಾಗಾಗಿ ಈ ಗ್ರಾಮವನ್ನು ಮರಿ ಕಲ್ಯಾಣವೆಂದೇ

ಕರೆಯಲಾಗುತ್ತದೆ. ಆದರೆ ಈ ದೇವಾಲಯ ಮತ್ತು ಈ ಉಬ್ಬುಶಿಲ್ಪಗಳು ಮಾತ್ರ ಹದಿನೈದನೆಯ ಶತಮಾನ ನಂತರವೇ ರಚನೆಗೊಂಡಿರುವಂಥವುಗಳೆಂದು ಅಭಿಪ್ರಾಯಿಸಬಹುದು. ಮುದನೂರಿನ ರಾಮನಾಥ, ಮಲ್ಲಿಕಾರ್ಜುನ ಹಾಗೂ ವೇಣುಗೋಪಾಲಸ್ವಾಮಿ ಗುಡಿಗಳ ಭಿತ್ತಿ ಭಾಗದಲ್ಲಿಯೂ ಉಬ್ಬುಕೆತ್ತನೆಗಳುಂಟು.

ಮೂರ್ತಿಶಿಲ್ಪಗಳು ದೇವಾಲಯದ ಸೌಂದರ್ಯವನ್ನು ಇಮ್ಮಡಿಗೊಳಿಸಲು ಮುಖ್ಯಪಾತ್ರಹಿಸುತ್ತದೆ. ದೇವಾಲಯ ಕಲ್ಪನೆಗಳಿಗಿಂತ ಮೊದಲೇ ಮೂರ್ತಿಶಿಲ್ಪಗಳೇ ಹುಟ್ಟಿಕೊಂಡಿದ್ದವು ಎಂಬ ಸಾರ್ವತ್ರಿಕವಾದ ಅಭಿಪ್ರಾಯವು ಮೂರ್ತಿಶಿಲ್ಪ ಕುರಿತಿರುವ ಅಧ್ಯಯನಗಳಲ್ಲಿ ವ್ಯಕ್ತವಾಗಿದೆ. ಸಿಂಧೂನಾಗರಿಕತೆಯ ಚರಿತ್ರೆಯೊಂದಿಗೆ ಶಿಲ್ಪಗಳ ಇತಿಹಾಸವು ಪ್ರಾರಂಭವಾಗುತ್ತದೆ. ನಮ್ಮ ನಾಡಿನ ವಾಸ್ತು ವಿವರಗಳು ಸಹ ಶಿಲ್ಪಗಳ ಮೂಲಕವೇ ಪ್ರಾರಂಭಗೊಂಡಿರುವ ಸಂಗತಿ ತಿಳಿದಿರುವ ವಿಷಯವೇ ಆಗಿದೆ. ಅಂಥ ಬಹುಮುಖ್ಯ ಶಿಲ್ಪ(ಬಿಡಿ ಹಾಗೂ ಉಬ್ಬುಶಿಲ್ಪ)ಗಳು ಈ ಪ್ರದೇಶದಲ್ಲಿಯೂ ಕಂಡುಬಂದಿವೆ. ಅವುಗಳ ಕುರಿತು ಇಲ್ಲಿ ಪ್ರತ್ಯೇಕವಾಗಿ ವಿವರಿಸದೇ ದೇವಾಲಯಗಳ ಕುರಿತು ನೀಡಿರುವ ವಿವರಗಳಲ್ಲಿಯೇ ಅವುಗಳ ಕುರಿತು ವಿವರಣಾತ್ಮಕ ಚರ್ಚೆಯ ವಿವರಗಳನ್ನು ದಾಖಲಿಸಲಾಗಿದೆ.

ದೇವಾಲಯಗಳ ಸೌಂದರ್ಯವನ್ನು ಹೆಚ್ಚಿಸುವ ಬಹುಮುಖ್ಯ ಭಾಗವೆಂದರೆ ಶಿಖರವೆಂದರೆ ತಪ್ಪಾಗಲಾರದು. ಅದು ಏಕ, ದ್ವಿ, ತ್ರಿ ಚತುಸ್ತ ಹಾಗೂ ಪಂಚತಲ ಅಥವಾ ಸ್ತರಗಳಲ್ಲಿ ರಚನೆಯಾಗಿರುತ್ತದೆ. ಮುಖ್ಯವಾಗಿ ಈ ಶಿಖರದ ಲಕ್ಷಣಗಳ ಮೂಲಕವೇ ಆಯಾ ದೇವಾಲಯಗಳು ಯಾವ ಕಾಲಕ್ಕೆ ಸಂಬಂಧಿಸಿದವೆಂದು ನಿರ್ದಿಷ್ಟವಾಗಿ ಹೇಳಲು ಸಹಾಯಕವಾಗುವ ಬಹುಮುಖ್ಯ ಅಂಶವು ಶಿಖರವಾಗಿದೆ.

ಸಾಮಾನ್ಯವಾಗಿ ದ್ರಾವಿಡ, ನಾಗರ, ವೇಸರ ಮಾದರಿಗಳ ಶಿಖರಗಳು ಹೆಚ್ಚಾಗಿ ಕಂಡುಬರುತ್ತವೆ. ಅಲ್ಲದೇ ಇತ್ತೀಚೆಗೆ ಅವುಗಳಿಗೆ ಬಳಸುವ ಪಾರಿಭಾಷಿಕ ಶಬ್ದಗಳು ಬೇರೆ ಬೇರೆ ಆಗಿರುವುದನ್ನು ಗಮನಿಸಬಹುದು. ಈ ಪ್ರದೇಶದಲ್ಲಿರುವ ಹೆಚ್ಚಿನ ದೇವಾಲಯಗಳಿಗೆ ಶಿಖರಗಳೇ ಇಲ್ಲವೆಂದರೆ ಅತಿಶಯೋಕ್ತಿ ಆಗಲಾರದು. ಆದರೂ ಗುರುಸುಣಗಿಯ ಚಂದಾಹುಸೇನಿ ದರ್ಗಾದ ಶಿಖರ, ಜಹಾಗೀರ ಅರಕೇರಿ ಸಹಸ್ರಲಿಂಗೇಶ್ವರ, ಹಗರಟಗಿಯ ಮೂರು ಕಳಸದ ಗುಡಿ ಹಾಗೂ ಮುದನೂರಿನ ಮಲ್ಲಿಕಾರ್ಜುನ ದೇವಾಲಯಗಳಿಗೆ ವೇಸರ ಅಥವಾ ಕಲ್ಯಾಣ ಚಾಲುಕ್ಯ ಶೈಲಿಯ ಶಿಖರಗಳಿರುವುದನ್ನು ಗುರುತಿಸಬಹುದು. ಕದಂಬನಾಗರ ಅಥವಾ ಫಂಸಾನ ಮಾದರಿಯ ಶಿಖರ ಹೊಂದಿರುವ ದೇವಾಲಯಗಳ ಸಂಖ್ಯೆ ಇವೆಲ್ಲವುಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಆದರೆ ನಾಗರ ಮಾದರಿಯ ಲಕ್ಷಣವುಳ್ಳ ದೇವಾಲಯಗಳು ಈ ಭಾಗದಲ್ಲಿ ಕಂಡುಬಂದಿರುವ ವಿವರ ತಿಳಿದುಬಂದಿಲ್ಲ.

ಸಾಮಾನ್ಯವಾಗಿ ದೇವಾಲಯಗಳು ಗರ್ಭಗೃಹ, ಅಂತರಾಳ ಅಥವಾ ಸುಖನಾಸ ಅಥವಾ ಅರ್ಧಮಂಟಪ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿರುತ್ತವೆ. ಇಂಥೆಲ್ಲ ಲಕ್ಷಣಗಳು ಈ ಪ್ರದೇಶದಲ್ಲಿರುವ ದೇವಾಲಯಗಳಲ್ಲಿಯೂ ಗುರುತಿಸಬಹುದು. ಆದರೆ ಸಭಾಮಂಟಪ,

ಮಹಾಮಂಟಪ ಹಾಗೂ ನೃತ್ಯ ಅಥವಾ ರಂಗಮಂಟಪದ ಭಾಗಗಳು ಇಲ್ಲವೇ ಇಲ್ಲವೆಂದೇ ಹೇಳಬಹುದು. ಸಿರಿವಾಳದ ಸಿದ್ದೇಶ್ವರ, ಹಗರಟಗಿಯ ಭೀಮೇಶ್ವರ ಅಥವಾ ಭೀಮನಗುಡಿ ಹಾಗೂ ಧರ್ಮರಾಜನ ಗುಡಿ, ಏವೂರಿನ ಸಂಗಮೇಶ್ವರ–ಸೋಮೇಶ್ವರ ಕೆಂಬಾವಿಯ ರೇವಣಸಿದ್ದೇಶ್ವರ ಹಾಗೂ ಚಟ್ನಳ್ಳಿಯ ಕೋಟೆ ಬಸವೇಶ್ವರ ದೇವಾಲಯಗಳಿಗಿರುವ ನವರಂಗಗಳು ಮಾತ್ರ ಸ್ವಲ್ಪಮಟ್ಟಿಗೆ ವಿಸ್ತಾರವಾಗಿರುವುದನ್ನು ಕಾಣುತ್ತೇವೆ. ಮುಖಮಂಟಪ ರಚನೆಗಳು ಕೂಡಾ ಇಲ್ಲಿರುವ ದೇವಾಲಯಗಳಲ್ಲಿ ಕಡಿಮೆಯೆಂದೇ ಹೇಳಬಹುದು. ಪ್ರಾಚೀನ ದ್ವಾರಮಂಟಪ ಉಳಿದಕೊಂಡ ಒಂದೇ ಒಂದು ಉದಾಹರಣೆ ಸಿಗುವ ಸ್ಥಳವೆಂದರೆ ಏವೂರಿನ ಬಾವಿ ಬಸವಣ್ಣ ಹಾಗೂ ಸೋಮೇಶ್ವರ ಸಂಗಮೇಶ್ವರ ದೇವಾಲಯದ ಆವರಣಕ್ಕಿರುವ ಪ್ರವೇಶ ಮಂಟಪ ಮಾತ್ರ.

ಸ್ತಂಭ ಅಥವಾ ಕಂಬಗಳು ಹೆಚ್ಚಾಗಿ ನವರಂಗ ಹಾಗೂ ಮುಖ ಮಂಟಪದಲ್ಲಿ ಅಳವಡಿಸಲಾಗಿರುತ್ತದೆ. ಈ ಭಾಗದ ದೇವಾಲಯಗಳಲ್ಲಿರುವ ಕಂಬಗಳು ಹೆಚ್ಚಾಗಿ ಚೌಕಾಕಾರದ ಹಾಗೂ ದುಂಡನೆಯ ರಚನೆಯವು. ಆದರೆ ಅಲಂಕಾರ ದೃಷ್ಟಿಯಿಂದ ಅವು ಸಹ ಅಷ್ಟೊಂದು ಗಮನ ಸೆಳೆಯುವಂಥವುಗಳಲ್ಲ. ಹಗರಟಗಿ ಗ್ರಾಮದಲ್ಲಿರುವ ಬಹುತೇಕ ದೇವಾಲಯಗಳಲ್ಲಿ ಚೌಕಾಕಾರದ ಬೃಹದಾಕಾರದ ಕಂಬಗಳನ್ನು ಅಳವಡಿಸಲಾಗಿರುವುದನ್ನು ಕಾಣುತ್ತೇವೆ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಅಭಿಪ್ರಾಯಿಸುವುದಾದರೆ, ಏವೂರಿನ ಬಾವಿ ಬಸವಣ್ಣ ಹಾಗೂ ಸೋಮೇಶ್ವರ–ಸಂಗಮೇಶ್ವರ ದೇವಾಲಯಗಳಲ್ಲಿರುವ ಕಂಬಗಳು ಹೆಚ್ಚಿನ ಅಲಂಕರಣೆ ಹೊಂದಿವೆ. ಆ ಕುರಿತು ಆ ಗ್ರಾಮದ ದೇವಾಲಯಗಳ ವಿವರಗಳಲ್ಲಿ ಸಮಗ್ರವಾಗಿ ಬರೆಯಲಾಗಿದೆ.

ಬಾಗಿಲವಾಡ, ಉತ್ತರಾಂಗದ ಜಾಲಂಧರ, ಮಕರತೋರಣ ಪಟ್ಟಿಕೆ, ಅಡ್ಡಲಾಗಿ ಜೋಡಿಸಿರುವ ತೊಲಗಳ ಮೇಲೆ ಅಲಂಕರಣೆಗೊಂಡಿರುವ ವಿವರಗಳು ಸಹ ಅಷ್ಟಕ್ಕಷ್ಟೇ ಎಂಬಂತಿವೆ. ಬಾಗಿಲವಾಡಾದ ಉತ್ತರಾಂಗದ ಭಾಗಗಳಲ್ಲಿರುವ ಉಬ್ಬುಶಿಲ್ಪಗಳು, ದೇವಾಲಯದ ಕಂಬಗಳ, ಭಿತ್ತಿಯ ಹಾಗೂ ಅಧಿಷ್ಠಾನ ಭಾಗದಲ್ಲಿ ಅಳವಡಿಸಲಾಗಿರುವ ಉಬ್ಬುಶಿಲ್ಪಗಳು ಹಾಗೂ ಪ್ರತ್ಯೇಕವಾದ ಬಿಡಿಶಿಲ್ಪಗಳ ಕುರಿತು ಆಯಾ ಗ್ರಾಮದ ಪ್ರಮುಖ ದೇವಾಲಯಗಳ ಕುರಿತು ವಿವರಿಸಿರುವ ವಿಷಯಗಳಲ್ಲಿಯೇ ಸಮಗ್ರವಾಗಿ ಚರ್ಚಿಸಲಾಗಿದೆ. ಹಾಗಾಗಿ ಆ ವಿವರಗಳನ್ನು ತುಂಬಾ ಸಂಕ್ಷಿಪ್ತವಾಗಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಅದೇ ರೀತಿ ಈ ಪ್ರದೇಶದಲ್ಲಿ ಉಪಲಬ್ಧವಿರುವ ದರ್ಗಾ ಮತ್ತು ಮಸೀದಿಗಳ ಕುರಿತು ಸಹ ಆಯಾ ಗ್ರಾಮದಲ್ಲಿ ಕಂಡುಬಂದಿರುವ ಸ್ಮಾರಕ ವಿವರಗಳಲ್ಲಿಯೇ ಚರ್ಚಿಸಿ ದಾಖಲಿಸಲಾಗಿದೆ.

ಒಟ್ಟಾರೆ ಐದನೆಯ ಅಧ್ಯಾಯವು ಈ ಪ್ರದೇಶದ ಪ್ರಾಚೀನ ವಿಭಾಗಗಳಲ್ಲಿ ಬೆಳೆದು ಬಂದಿರುವ ದೇವಾಲಯಗಳ ಕುರಿತು ಅಮೂಲಾಗ್ರ ವಿವರಗಳನ್ನು ನಿರ್ದಿಷ್ಟ ಅಧ್ಯಯನ ಚೌಕಟ್ಟಿನಲ್ಲಿ ಚರ್ಚಿಸಿ ಸಂಕ್ಷಿಪ್ತವಾಗಿ ದಾಖಲಿಸುವ ಮುಖ್ಯ ಉದ್ದೇಶ ಹೊಂದಲಾಗಿದೆಯೆಂದು ಅಭಿಪ್ರಾಯಿಸಬಹುದು. ಆದರೂ ಸೂಕ್ಷ್ಮ ಹಾಗೂ ವಿವರವಾದ ಅಧ್ಯಯನ ಕಟ್ಟಿಕೊಡಲು ಆ ಕುರಿತೇ ಪ್ರತ್ಯೇಕ ಅಧ್ಯಯನ ಕೈಗೊಳ್ಳಬಹುದಾದ ಸಾಮಾಗ್ರಿ–ಸಂಪನ್ಮೂಲವು ಯಾದಗಿರಿ

ಜಿಲ್ಲೆಯಲ್ಲಿ ಉಪಲಬ್ಧವಿದೆ. ಕ್ಷೇತ್ರಕಾರ್ಯದ ಮೂಲಕ ಈ ಪ್ರದೇಶದಲ್ಲಿದ್ದ ಬಹುತೇಕ ಗ್ರಾಮಗಳನ್ನು ಸಂದರ್ಶಿಸಿ ಅಲ್ಲಿರುವ ದೇವಾಲಯಗಳಿಗೆ ಸಂಬಂಧಿಸಿದ ವಿವರಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಅವುಗಳ ಕುರಿತು ನಿಷ್ಕರ್ಶಾತ್ಮಕ ಹಿನ್ನೆಲೆಯಲ್ಲಿ ದಾಖಲಿಸುವ ಪ್ರಯತ್ನ ಇದಾಗಿದೆ. ಅಲ್ಲದೇ ಹೆಚ್ಚಿನ ವಿವರಗಳು ಈ ಕೆಳಗಿನಂತಿವೆ.

**ದೇವಾಲಯಗಳಿಗೆ ಸಂಬಂಧಿಸಿದ ಶಾಸನ ವಿವರಗಳು**

ಈ ಜಿಲ್ಲೆಯಲ್ಲಿ ಉಪಲಬ್ದ ಇರುವ ಶಾಸನಗಳಲ್ಲಿ ದಾಖಲಾಗಿರುವ ವಿವರ ಗಮನಿಸಿದಾಗ ಶೈವ, ವೈಷ್ಣವ ಹಾಗೂ ಜೈನ ಪಂಥಗಳಿಗೆ ಸಂಬಂಧಿಸಿದ ದೇವಾಲಯಗಳು ಇಲ್ಲಿ ಕಂಡುಬರುವುದನ್ನು ಗಮನಿಸಬಹುದು. ಅಂಥ ವಿವರಗಳನ್ನು ಈ ಜಿಲ್ಲೆಯಲ್ಲಿ ಲಭ್ಯವಿರುವ ಕೆಲವೊಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

**ಬಸದಿಗಳ ಕುರಿತ ಶಾಸನ ವಿವರ**

ಅಗ್ನಿ, ಹಗರಟಗಿ ಹಾಗೂ ಏವೂರು ಗ್ರಾಮಗಳಲ್ಲಿರುವ ಮೂರು ಪ್ರಾಚೀನ ಬಸದಿಗಳನ್ನು ಹೊರತುಪಡಿಸಿದರೆ ಸದ್ಯ ಉಳಿದುಕೊಂಡು ಸಮಾನ ಸ್ಥಿತಿಯಲ್ಲಿರುವ ಅಂಥ ಸ್ಮಾರಕಗಳು ಈ ಪ್ರದೇಶದಲ್ಲಿ ಕಂಡುಬಂದಿಲ್ಲ. ಏವೂರಿನ ಈಳಗೇರ ಓಣಿಯಲ್ಲಿರುವ ಪ್ರಾಚೀನ ಬಸದಿಯನ್ನು ಕುರಿತು ಶಾಸನ ಉಲ್ಲೇಖವಿದೆ[೪೪]. ಇದೊಂದು ಉದಾಹರಣೆ ಹೊರತುಪಡಿಸಿದರೆ ಉಳಿದವುಗಳ ಬಗೆಗೆ ಕನಿಷ್ಠ ವಿವರ ಇರಲಿ ಅವುಗಳ ಹೆಸರು ಸಹ ಏನಿದ್ದವು ಎಂದು ತಿಳಿಯದು ಅಗ್ನಿ ಗ್ರಾಮದಲ್ಲಿರುವ ಪಾಳುಬಿದ್ದ ಬಸದಿಯನ್ನು ಸ್ಥಳೀಯವಾಗಿ ಜಿನಾಲಯವೆಂದು ಕರೆಯುತ್ತಾರೆ. ಅಲ್ಲದೇ ಅಲ್ಲಿರುವ ಮುಖ್ಯ ಶಿಲ್ಪದ ಬಗೆಗೂ ಕೆಲವು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ[೪೫]. ಹಗರಟಗಿ ಗ್ರಾಮದಲ್ಲಿಯೂ ಭಗ್ನ ಜಿನಾಲಯ ಇದೆ. ಅದು ವಾಸ್ತುವಿವರಗಳಿಂದ ತುಂಬಾ ಮುಖ್ಯವಾದ ಸ್ಮಾರಕವಾಗಿದೆ. ಆ ಕುರಿತು ಮುಂದಿನ ಪುಟಗಳಲ್ಲಿ ಪ್ರತ್ಯೇಕ ವಿವರಗಳನ್ನು ದಾಖಲಿಸಲಾಗಿದೆ. ಈ ವಿವರಗಳಲ್ಲಿ ಬಸದಿ ಹಾಗೂ ಶಿಲ್ಪಗಳ ವಿವರವು ಒಳಗೊಂಡಿದೆ.

ಶಹಾಪುರ ತಾಲೂಕಿನ ಮದ್ರಕಿ ಹಾಗೂ ಗೋಗಿ ಗ್ರಾಮಗಳಲ್ಲಿ ಜೈನ ಪಂಥಕ್ಕೆ ಸಂಬಂಧಿಸಿದ ಕುರುಹುಗಳು ಕಂಡುಬಂದಿವೆ. ಅಲ್ಲದೇ ಯಾದಗಿರಿ ಪಟ್ಟಣದಲ್ಲಿಯೂ ಆದಿನಾಥ ತೀರ್ಥಂಕರ ಬಸದಿಯೊಂದಿದೆ. ಮುಖ್ಯವಾಗಿ ಈ ಪಟ್ಟಕ್ಕೆ ಹೊಂದಿಕೊಂಡ ಬೆಟ್ಟದ ಮೇಲಿರುವ ಗುಹೆಗಳಲ್ಲಿ ಕಂಡರಿಸುವ ಆ ಪಂಥಕ್ಕೆ ಸಂಬಂಧಿಸಿದ ಶಿಲ್ಪಗಳು ಬಹು ಪ್ರಾಚೀನತೆಯಿಂದ ಕೂಡಿರುವಂಥವುಗಳು.

**ವೈಷ್ಣವ ದೇವಾಲಯಗಳ ಕುರಿತ ಶಾಸನ ವಿವರ**

ಶೈವದಷ್ಟೇ ವೈಷ್ಣವ ಧರ್ಮವು ಈ ಪ್ರದೇಶದಲ್ಲಿ ಪ್ರಾಮುಖ್ಯತೆ ಪಡೆದಿದ್ದರೂ ಅವುಗಳಿಗೆ ಸಂಬಂಧಿಸಿದ ದೇವಾಲಯಗಳ ಸಂಖ್ಯಾ ದೃಷ್ಟಿಯಿಂದ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಇರುವುದನ್ನು ಗಮನಿಸಬಹುದು. ಇಂಥ ಸಂಗತಿಗಳಿಗೆ ಬಹುಮುಖ್ಯ ಕಾರಣಗಳೆಂದರೆ ಈ ಭಾಗದಲ್ಲಿ ತುಂಬಾ ಪ್ರಭಾವಶಾಲಿಯಾಗಿದ್ದ ಕಾಳಾಮುಖ ಪರಂಪರೆಯ ಸಿಂಹಪರಿಷನ್ಮಂಡಳಿ

ಹಾಗೂ ಪಾಶುಪತಕ್ಕೆ ಸಂಬಂಧಿಸಿದ ನಾಥ ಪಂಥಗಳ ಪ್ರಭಾವವೇ ಕಾರಣ ಇರಬಹುದೆಂದು ತರ್ಕಿಸಬಹುದು.

ರಾಜನಕೋಳೂರಿನಲ್ಲಿ ನಿರ್ಮಾಣವಾದ ಶಂಕರನಾರಾಯಣ[೧೬] ಕೇಶವ ದೇವಾಲಯ[೧೭], ಮುದನೂರು[೧೮]. ಹಗರಟಗಿ[೧೯] ಹಾಗೂ ಹುಣಸಗಿ[೨೦] ಶಾಸನಗಳಲ್ಲಿ ಉಲ್ಲೇಖಗಳಿವೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಆ ದೇವಾಲಯಗಳು ಕಂಡುಬರುವುದಿಲ್ಲ.

ಯಾಳಗಿಯಲ್ಲಿ ಚಂನಕೇಶ ದೇವಾಲಯ ಕುರಿತು ಕ್ರಿ.ಶ.೧೨೫೪ರ ತೇದಿಯ ಶಾಸನವು ಉಲ್ಲೇಖಿಸುತ್ತದೆ[೨೧]. ಪ್ರಾಯಶಃ ಈ ದೇವಾಲಯವು ದೇವಗಿರಿ ಸೇವುಣರ ಕಾಲದಲ್ಲಿ ನಿರ್ಮಾಣವಾಗಿರುವಂಥದ್ದು. ಕ್ರಿ.ಶ.೧೧೭೯ರ ಏವೂರಿನ ಶಾಸನದಲ್ಲಿ[೨೨]. ಕೇಶವ ದೇವಾಲಯ ಮತ್ತು ಮಾಧವ ದೇವರ ಕೆಯಂ(ಹೊಲ)ದ ಉಲ್ಲೇಖವಿದೆ. ಬಹುಶಃ ಮಾಧವ ಹೆಸರಿನ ದೇವರ ಗುಡಿಯೊಂದು ಅಲ್ಲಿದ್ದಿರಬಹುದಾದ ಸಾಧ್ಯತೆಗಳನ್ನು ಅಲ್ಲಗಳಿಯಲಿಕ್ಕಾಗದು. ಕ್ರಿ.ಶ.೧೦೮೧ರ ಹಿರಿಯ ಹೆಬ್ಬಾಳ ಶಾಸನವು[೨೩] ದಂಡನಾಯಕ ಮಲ್ಲಿನಾಥನ ದಂಡನಾಯಕ ಮಾಧವರಾಜನು ನಾರಾಯಣದೇವಾಲಯವನ್ನು ಕಟ್ಟಿಸಿ ಅದಕ್ಕೆ ದಾನ ನೀಡಿದ ವಿವರವನ್ನು ನೀಡುತ್ತದೆ. ಉಳಿದಂತೆ ಶಹಾಪುರ ಹಾಗೂ ಯಾದಗಿರಿ ತಾಲೂಕಿನ ಶಾಸನಗಳಲ್ಲಿ ವೈಷ್ಣವ ಪಂಥಕ್ಕೆ ಸಂಬಂಧಿಸಿದ ದೇವಾಲಯಗಳ ಕುರಿತು ಉಲ್ಲೇಖಗಳು ಇದ್ದಂತಿಲ್ಲ. ವೈಷ್ಣವ ಪಂಥಕ್ಕೆ ಸಂಬಂಧಿಸಿ ಈ ಕೆಳಕಂಡ ದೇವಾಲಯಗಳನ್ನು ಗಮನಿಸಬಹುದು.

**ಶೈವ ದೇವಾಲಯಗಳ ಕುರಿತ ಶಾಸನ ವಿವರ**

ಜೈನ ಹಾಗೂ ವೈಷ್ಣವ ಪಂಥದ ನಾಲ್ಕೈದು ದೇವಾಲಯಗಳನ್ನು ಹೊರತುಪಡಿಸಿದರೆ ಈ ಜಿಲ್ಲೆಯ ಪ್ರಾಚೀನ ವಿಭಾಗಗಳಲ್ಲಿ ನಿರ್ಮಾಣವಾದ ದೇವಾಲಯಗಳೆಲ್ಲವು ಶೈವಕ್ಕೆ ಸಂಬಂಧಿಸಿದಾಗಿವೆ. ಪ್ರಮುಖವಾಗಿ ಏವೂರಿನ ಸಂಗಮೇಶ್ವರ ಸೋಮೇಶ್ವರ[೨೪] ಹಗರಟಗಿ ಗ್ರಾಮದಲ್ಲಿರುವ ದೇವಾಲಯಗಳು[೨೫], ಕೆಂಬಾವಿಯ ರೇವಣಸಿದ್ದೇಶ್ವರ[೨೬] ಹುಣಸಗಿಯಲ್ಲಿರುವ ನೀಲಕಂಠೇಶ್ವರ, ನಂದಿಬೆಳಗುಂದಿಯ ಬಸವಣ್ಣ, ಹೆಮ್ಮಡಗಿಯ ಬಸವಣ್ಣ, ಈಡ್ಲೂರಿನ ಶಂಕರಲಿಂಗ ದೇವಾಲಯ, ಶಿರವಾಳದಲ್ಲಿರುವ ಸಿದ್ದೇಶ್ವರ[೨೭], ಶಾಸನದಲ್ಲಿ ಇದನ್ನು ಸಿದ್ಧಶಾಂತೇಸ್ವರನೆಂದು ಉಲ್ಲೇಖಿಸಲಾಗಿದೆ). ಚಟ್ನಳ್ಳಿಯಲ್ಲಿರುವ ಕೋಟಿ ಬಸವೇಶ್ವರ ಸಂಗಮದಲ್ಲಿರುವ ಸಂಗಮೇಶ್ವರ[೨೮] ಹಗರಟಗಿಯ ಉಗ್ರಭೀಮೇಶ್ವರ[೨೯], ಹಾವಿನಾಳ ಹಾಗೂ ಹಯ್ಯಾಳ ಬಿ ಗ್ರಾಮದಲ್ಲಿರುವ ಕಲ್ಮೇಶ್ವರ ದೇವಾಲಯಗಳು ಯರಗೋಳದಲ್ಲಿರುವ ಕಲ್ಲಯ್ಯ ಮುತ್ಯಾನ ಗುಡಿ, ಕೋಡಾಲದ ರಾಮಲಿಂಗೇಶ್ವರ, ಗುರುಸುಣಗಿಯ ಚಂದಾಹುಸೇನಿ ದರ್ಗಾ, ಮದ್ರಕಿಯ ಗೂಳಿಬಸವೇಶ್ವರ, ಜಾಗೀರ್ ಅರಕೇರಿಯ ಸಹಸ್ರಲಿಂಗೇಶ್ವರ, ಮುದನೂರಿನ ಮಲ್ಲಿಕಾರ್ಜುನ ಹಾಗೂ ರಾಮನಾಥ ದೇವಾಲಯಗಳು ತುಮಕೂರು ಗ್ರಾಮದಲ್ಲಿರುವ ಕಲ್ಮೇಶ್ವರ ಹಾಗೂ ಯರಗೋಳದ ಅತ್ಯಂತ ತ್ರಿಕೂಟ ಹಾಗೂ ಸುಂದರವಾಗಿದ್ದ ದೇವಾಲಯಗಳು ಶೈವ ಪಂಥಕ್ಕೆ ಸಂಬಂಧಿಸಿದ ದೇವಾಲಯಗಳಾಗಿವೆ. ಅಲ್ಲದೇ ಅವುಗಳಲ್ಲಿ ಕೆಲವೊಂದು

ಬೇರೆ ಬೇರೆ ಹೆಸರಿನಿಂದ ಈ ದಿನಗಳಲ್ಲಿ ಕರೆಯಲ್ಪಡುತ್ತಿರುವುದನ್ನು ಗಮನಿಸಬಹುದು. ಆದರೆ ಅವು ಸಹ ಶೈವ ಆಚರಣೆಗಳಿಗೆ ಸಂಬಂಧಿಸಿದವುಗಲೆಂದು ಖಚಿತವಾಗಿ ಹೇಳಬಹುದು.

ಈ ಪ್ರದೇಶದ ದೇವಾಲಯಗಳಿಗೆ ಸಂಬಂಧಿಸಿದಂತೆ ಸ್ಥಾನಾಚಾರ್ಯರು, ತಪೋಧನರು ಹಾಗೂ ಮಹಾಜನರು ಸಂಬಂಧ ಹೊಂದಿರುವ ಬಗೆಗೆ ಶಾಸನಗಳು ಮಾಹಿತಿ ನೀಡುತ್ತವೆ. ಅವುಗಳ ಕುರಿತು ಈಗಾಗಲೇ ಅಧ್ಯಾಯ ನಾಲ್ಕರಲ್ಲಿಯ ಸಾಮಾಜಿಕ ಸ್ಥಿತಿಗತಿ ವಿಷಯಗಳಲ್ಲಿ ದೀರ್ಘವಾಗಿ ಚರ್ಚಿಸಲಾಗಿದೆ. ಅಲ್ಲದೇ ಇಲ್ಲಿರುವ ದೇವಾಲಯಗಳಿಗೆ ನೀಡಿದ ದಾನ-ದತ್ತಿಗಳ ವಿವರಗಳ ಬಗೆಗೆ ಪ್ರಸ್ತುತ ಅಧ್ಯಯನದಲ್ಲಿ ಪ್ರಾಸಂಗಿಕವಾದರೂ ಪ್ರತಿ ಅಧ್ಯಾಯದಲ್ಲಿಯೂ ಸಂದರ್ಭಕ್ಕನೂಸಾರ ಉಲ್ಲೇಖಿಸುತ್ತಾ ವಿವರಿಸಲಾಗಿದೆ. ಹಾಗಾಗಿ ಮತ್ತೆ ಆ ವಿವರಗಳನ್ನು ದೀರ್ಘವಾಗಿ ದಾಖಲಿಸದೆ ಸಂಕ್ಷಿಪ್ತವಾಗಿ ಮುಖ್ಯ ವಿಚಾರಗಳನ್ನು ಮಾತ್ರ ನೀಡುವ ಉದ್ದೇಶ ಇದಾಗಿದೆ.

ಈ ಭಾಗದಲ್ಲಿ ರಚನೆಯಾಗಿರುವ ದೇವಾಲಯಗಳ ಹಿಂದಿರುವ ಕರ್ತೃತ್ವ ಚಾಲನಾ ಶಕ್ತಿಗಳಾಗಿ ಬಹುಶಃ ಕಾಳಾಮುಖ ಪಂಥದ ಅನುಯಾಯಿಗಳೇ ಹೆಚ್ಚಿನ ಪ್ರಭಾವ ಬೀರಿದ್ದಾರೆ. ಅದರಲ್ಲೂ ಈ ಪ್ರದೇಶದಲ್ಲಿ ಕಾಳಾಮುಖ ಪರಂಪರೆಗೆ ಸಂಬಂಧಿಸಿದ್ದ ಸಿಂಹಪರಿಷತ್ತು ಅಥವಾ ಸಿಂಹಪರಿಷನ್ಮಂಡಲಿಯ ಸಿದ್ಧಾಂತಿಗಳ ಪ್ರಭಾವ ಇನ್ನು ಗಾಢವಾಗಿಯೇ ಪ್ರಭಾವಿಸಿದಂತಿದೆ. ಅಲ್ಲದೇ ಲಾಕುಳ ಆಗಮ ಶಾಸ್ತ್ರವು ಹೆಚ್ಚಿನ ಪ್ರಮಾಣದಲ್ಲಿ ದೇವಾಲಯ ಸಂಸ್ಕೃತಿಯ ಚಟುವಟಿಕೆಯಲ್ಲಿ ಅನುರುಕ್ತಗೊಂಡಂತಿದೆ. ಬಹುತೇಕ ಸ್ಥಾನಾಚಾರ್ಯರರು ಲಾಕುಳ ಆಗಮಕ್ಕೆ ಸಂಬಂಧಿಸಿದವರೆಂದು ಹೇಳಿಕೊಂಡಿರುವ ಉಲ್ಲೇಖಗಳು ಲಭ್ಯವಿರುವ ಶಾಸನಗಳಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದು.

ದೇವಾಲಯಗಳನ್ನು ರಚಿಸಿದ ಕುಶಲಕರ್ಮಿ ವರ್ಗದ ಪಾಂಚಳ ಕುಲಗಳ ಬಗೆಗೂ ಶಾಸನಗಳಲ್ಲಿ ಸ್ಪಷ್ಟವಾಗಿ ಉಲ್ಲೇಖವಾದ ವಿವರಗಳುಂಟು. ಆ ಕುರಿತು ಈಗಾಗಲೇ ಅಧ್ಯಾಯ ನಾಲ್ಕರಲ್ಲಿ ಚರ್ಚಿಸಲಾಗಿದೆ. ಅವರ ಜೊತೆಗೆ ಒಡ್ಡ ಅಥವಾ ವಡ್ಡ ಜಾತಿಯ ಕಟ್ಟಡ ನಿರ್ಮಾಣಕಾರ ಕುರಿತು ಸಹ ಒಂದೆರಡು ಉಲ್ಲೇಖಗಳು ಶಾಸನಗಳಲ್ಲಿ ವ್ಯಕ್ತವಾಗಿರುವುದನ್ನು ವಿವರಿಸಲಾಗಿದೆ. ಇತಿಹಾಸದಲ್ಲಿ ಎಂದೆಂದಿಗೂ ದಾಖಲಾಗಿ ಉಳಿಯುವ ಏವೂರಿನಲ್ಲಿರುವ ಬಾವಿ ಅಥವಾ ಪುಷ್ಕರಣಿ(ಶಿವಕೋಟಿತೀರ್ಥ) ವಡ್ಡರ ನಾಗೋಜನ ಕಾರ್ಯಕುಶಲತೆಗೆ ಹಿಡಿದ ಕೈಗನ್ನಡಿಯಂತೆ ತೋರುತ್ತದೆ. ಬಹುಶಃ ಬಾವಿಗಳ ನಿರ್ಮಾಣ ಕಾರ್ಯದಲ್ಲಿ ವಡ್ಡ ಜಾತಿಯ ಕುಶಲ ಕರ್ಮಿಗಳೇ ಹೆಚ್ಚಾಗಿ ತೊಡಗಿಸಿಕೊಂಡಿದ್ದರೆಂದು ಅಭಿಪ್ರಾಯಿಸಬಹುದು.

**ವಾಸ್ತು(ದೇವಾಲಯಗಳ)ವಿವರ**

**ಬಸದಿಗಳು**

**ಯಾದಗಿರಿ-ಕಾಳಮ್ಮ ಅಥವಾ ಚೌಡೇಶ್ವರಿ ದೇವಾಲಯ**

ನೈಸರ್ಗಿಕವಾದ ಗುಹೆಯಲ್ಲಿ ಸುಂದರವಾದ ಶಿಲ್ಪವೊಂದಿದ್ದು ಅದನ್ನು ಕಾಳಮ್ಮ ಪದ್ಮಾವತಿ, ಭುವನೇಶ್ವರಿ ಮತ್ತು ಚೌಡೇಶ್ವರಿ ಎಂದು ಕರೆಯಲಾಗುತ್ತದೆ. ಚಿಕ್ಕದಾದ ಗುಹೆಯಲ್ಲಿ

ರಚನೆಗೊಂಡಿರುವ ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ಮೆಟ್ಟಿಲುಗಳ ಸಹಾಯದಿಂದ ಏರಿಕೊಂಡು ದೇವಾಲಯ ತಲುಪಬೇಕಾಗುತ್ತದೆ. ಇಲ್ಲಿರುವ ಶಿಲ್ಪ ಬಹುಶಃ ಪದ್ಮಾವತಿ ಯಕ್ಷಿಯ ಶಿಲ್ಪವಾಗಿದ್ದಿರಬಹುದು. ಅದನ್ನೇ ಕಾಲಾನಂತರ ಬೇರೆ ಬೇರೆ ಹೆಸರಿನಿಂದ ಸಂಬೋಧಿಸಿ ಪೂಜಿಸಲಾರಂಭಿಸಿರಬಹುದು.

ಇದೇ ಗುಡಿಯ ಪಕ್ಕದಲ್ಲಿ ನೈಸರ್ಗಿಕವಾಗಿ ನಿರ್ಮಾಣವಾದ ಚಿಕ್ಕ ಗುಹೆಯೊಂದಿದ್ದು ಅದರಲ್ಲಿ ಜೈನ ಮತಪಂಥಕ್ಕೆ ಸೇರಿದ ಮೂರು ಉಬ್ಬುಶಿಲ್ಪಗಳನ್ನು ಗೋಡೆಯ ಭಾಗದಲ್ಲಿ ಕಂಡರಿಸಲಾಗಿದೆ. ಅವು ತೀರ್ಥಂಕರರಾದ ಆದಿನಾಥ, ಪಾರ್ಶ್ವನಾಥ ಮತ್ತು ಮಹಾವೀರನಿಗೆ ಸಂಬಂಧಿಸಿದ ಶಿಲ್ಪಗಳಾಗಿವೆ. ಕೆಳಭಾಗದಲ್ಲಿ ಕೆತ್ತಿರುವ ಲಾಂಛನಗಳ ಹಿನ್ನೆಲೆಯಲ್ಲಿ ಅವುಗಳನ್ನು ಖಚಿತವಾಗಿ ಗುರುತಿಸಬಹುದು. ಆದರೂ ಅವುಗಳಲ್ಲಿ ಕೆಲವು ಮಾಸಿರುವುದರಿಂದ ಸಹಜವಾಗಿ ಗುರುತಿಸುವುದು ಕಷ್ಟವೇ ಸರಿ. ಖಡ್ಗಾಸನದಲ್ಲಿ ನಿಂತಿರುವ ಅವುಗಳಿಗೆ ಮುಕ್ಕೊಡೆಗಳನ್ನು ನಿರ್ಮಿಸಲಾಗಿದೆ. ಈ ಮೂರು ಶಿಲ್ಪಗಳ ಕೆಳಭಾಗದಲ್ಲಿ ಇನ್ನೆರಡು ಚಿಕ್ಕದಾದ ಉಬ್ಬುಶಿಲ್ಪಗಳಿದ್ದು ಅವು ಬಹುಶಃ ಭಕ್ತಾದಿಗಳವೋ ಅಥವಾ ಯಕ್ಷ, ಯಕ್ಷಿಯರಿಗೆ ಸಂಬಂಧಿಸಿದ ಶಿಲ್ಪಗಳಿರಬಹುದು ಎಂಬುದನ್ನು ಸ್ಪಷ್ಟವಾಗಿ ತಿಳಿಯುವುದು ಕಷ್ಟಕರ.

ಈ ಶಿಲ್ಪಗಳು ಬಹುಶಃ ೧೧-೧೨ನೇ ಶತಮಾನದಲ್ಲಿ ನಿರ್ಮಾಣವಾಗಿದ್ದಿರಬಹುದು. ಆದರೆ ಈ ಬೆಟ್ಟದಲ್ಲಿ ಜೈನ ಯತಿಗಳು ವಾಸಿಸಿರುವ ಹಾಗೂ ಸಲ್ಲೇಖನ ವ್ರತ ಕೈಗೊಂಡಿರುವ ಚಟುವಟಿಕೆಗಳು ಮಾತ್ರ ೯ನೇ ಶತಮಾನದಿಂದಲೇ ಪ್ರಾರಂಭವಾಗಿರಬಹುದೆಂದು ಅಭಿಪ್ರಾಯಿಸಬಹುದು. ಅದಕ್ಕೆ ಪುಷ್ಟಿದಾಯಕ ನೀಡುವ ಹಲವು ಸಾಕ್ಷಿಗಳು ಈ ಬೆಟ್ಟದಲ್ಲಿ ಕಂಡುಬಂದಿವೆ. ಜೈನ ಮುನಿಗಳಿಗೆ ತಮ್ಮ ವಿಧಿ ಆಚರಣೆಗಳನ್ನು ನಿರ್ವಹಿಸಲು ಈ ಬೆಟ್ಟದ ಸ್ಥಳವು ತುಂಬಾ ಪ್ರಶಸ್ತವಾಗಿ ಕಂಡಿರಬಹುದು. ಬಹುಶಃ ಈ ಗುಹಾಶಿಲ್ಪಗಳು ನಿರ್ಮಾಣವಾಗುವ ಮೊದಲೆ ಸುಮಾರು ನೂರಾರು ವರ್ಷಗಳ ಹಿಂದಿನಿಂದಲೂ ಈ ಸ್ಥಳದಲ್ಲಿ ಜೈನ ಮತಪಂಥಕ್ಕೆ ಸಂಬಂಧಿಸಿದ ಧಾರ್ಮಿಕ ಚಟುವಟಿಕೆಗಳು ನಡೆದುಬಂದಿರಬಹುದು. ಆದ್ದರಿಂದ ಇಂಥ ಕಾರಣಗಳ ನೆನಪಿಗಾಗಿಯೇ ಬಹುಶಃ ಇಲ್ಲಿರುವ ಗುಹೆಯಲ್ಲಿ ಇಂಥ ಶಿಲ್ಪಗಳು ಕಂಡರಣೆಯಾಗಿವೆ. ಆದರೆ ಅವು ೧೧ನೇ ಶತಮಾನದ ನಂತರವೇ ಈ ಮೂರು ಉಬ್ಬುಶಿಲ್ಪಗಳನ್ನು ಕಂಡರಿಸಿದ್ದಿರಬಹುದು. ಅಲ್ಲದೇ ಯಕ್ಷಿ ಪದ್ಮಾವತಿಗಾಗಿಯೇ ಇಲ್ಲೊಂದು ಪ್ರತ್ಯೇಕ ಶಿಲ್ಪವನ್ನು ಇಲ್ಲಿನ ಗುಹೆಯಲ್ಲಿ ನಿರ್ಮಿಸಲಾಗಿದೆ. ಅದು ಮುಂದಿನ ದಿನಗಳಲ್ಲಿ ಕಾಳಮ್ಮ, ಚೌಡೇಶ್ವರಿ, ಪಾರ್ವತಿ ಎಂಬ ಮುಂತಾದ ಹೆಸರುಗಳನ್ನು ಪಡೆದುಕೊಂಡು ಹೆಚ್ಚಿನ ಜನಪ್ರಿಯತೆಯನ್ನು ಪಡೆದಿದೆ.

## ಅಗ್ನಿ ದೇವಾಲಯ

ಗ್ರಾಮದ ಪೋಲಿಸ್ ಪಾಟೀಲರ ಮನೆಯ ಹತ್ತಿರ ಇರುವ ಈ ಜಿನಾಲಯವು ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣವಾಗಿರುವಂಥದ್ದು. ಅದು ನೆಲದಲ್ಲಿ ಹುದಗಿದಂತೆ ಕಾಣುತ್ತದೆ. ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿರುವ ಈ ದೇವಾಲಯದಲ್ಲಿ ಕತ್ತಲೆಯು ಸದಾ ಆವರಿಸಿರುತ್ತದೆ. ಗರ್ಭಗೃಹದ ಬಾಗಿಲವಾಡವು ಪಂಚಶಾಖೆಗಳನ್ನು ಹೊಂದಿದ್ದು

ಅದರ ಕೆಳಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿರುವುದನ್ನು ಗಮನಿಸಬಹುದು. ಈ ದ್ವಾರಬಂಧದಲ್ಲಿ ಪುಷ್ಪಪಟ್ಟಿಕೆ ಹಾಗೂ ಚಿಕ್ಕದಾಗಿರುವ ಉಬ್ಬುಶಿಲ್ಪಗಳಿಂದ ಕೂಡಿರುವ ಯಾಳಿ ಪಟ್ಟಿಕೆಯನ್ನು ಸುಂದರವಾಗಿ ಕೆತ್ತಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಅವು ಮಧ್ಯ ಭಾಗದಲ್ಲಿ ಹದಿನೆಂಟು ಪಟ್ಟಿಕೆಯನ್ನು ಹೊಂದಿರುವುವು. ವೃತ್ತಾಕಾರ ಮತ್ತು ತಟ್ಟೆ ಆಕಾರದ ಫಲಕ ಹಾಗೂ ಚೌಕಾಕಾರದ ಬೋಧಿಗೆಗಳನ್ನು ಕಂಬಗಳಲ್ಲಿ ಅಳವಡಿಸಲಾಗಿದೆ. ನವರಂಗದ ಬಾಗಿಲವಾಡವು ಸರಳ ರಚನೆಯದ್ದು. ಗರ್ಭಗೃಹ ಹಾಗೂ ನವರಂಗದ ಬಾಗಿಲವಾಡದಲ್ಲಿರುವ ಲಲಾಟದಲ್ಲಿ ಜಿನಬಿಂಬಗಳನ್ನು ಕಂಡರಿಸಲಾಗಿದೆ.

ಪದ್ಮಾಸನದಲ್ಲಿ ಕುಳಿತಿರುವ ವರ್ಧಮಾನನ ಬಿಡಿಶಿಲ್ಪವು ದೇವಾಲಯದ ಗರ್ಭಗೃಹದಲ್ಲಿದೆ. ಅದು ಸುಮಾರು ಐದು ಅಡಿ ಎತ್ತರವಾಗಿದೆ. ಸುಮಾರು ಎರಡು ಅಡಿ ಪೀಠದಲ್ಲಿ ಇದನ್ನು ಸ್ಥಾಪಿಸಲಾಗಿದೆ. ಈ ಪೀಠದಲ್ಲಿ ಸಿಂಹದ ಲಾಂಛನವಿದ್ದಿರುವುದರಿಂದ ಅದು ಖಚಿತವಾಗಿ ಮಹಾವೀರನದೇ ಆಗಿರಬಹುದೆಂದು ಅಭಿಪ್ರಾಯಿಸಬಹುದು. ಆದರೆ ಇದು ಆದಿನಾಥನ ಶಿಲ್ಪವು ಆಗಿದ್ದಿರಬಹುದೆಂಬ ಹೇಳಿಕೆಗಳು ಪ್ರಕಟವಾಗಿವೆ. ಕ್ರಿ.ಶ.೯-೧೦ನೇ ಶತಮಾನದ್ದಾಗಿರಬಹುದಾದ ಈ ಮೂರ್ತಿಯ ಶಿರದಲ್ಲಿ ಸುರುಳಿಯಾಕಾರದ ತಲೆಗೂದಲು ಹಾಗೂ ಅವು ಎರಡೂ ಭುಜಗಳ ಮೇಲೆ ಜಡೆಗಳೋಪಾದಿಯಲ್ಲಿ ಹರಡಿರುವುದನ್ನು ಗಮನಿಸಬಹುದು. ಸಾಮಾನ್ಯವಾಗಿ ಈ ಭಾಗದಲ್ಲಿ ದೊರಕಿರುವ ಪುರಾತನ ಪ್ರತಿಮೆಗಳ ಭುಜಗಳ ಮೇಲಿರುವ ಜಡೆಯನ್ನು ಈ ಪ್ರತಿಮೆಯಲ್ಲಿ ಮಾತ್ರ ಬಿಡಿಸಿದ್ದು ತುಂಬಾ ವಿಶೇಷವಾಗಿದೆ. ಅದಮ್ಯವಾಗಿ ಬೇರೆ ಬೇರೆ ಸ್ಥಳಗಳಲ್ಲಿ ಕಂಡುಬಂದಿರುವ ಆದಿನಾಥ ತೀರ್ಥಂಕರ ಪ್ರತಿಮೆಗಳಿಗೆ ಕೆಲವು ಕಡೆ ಭುಜಗಳ ಮೇಲೆ ಜಡೆ ಬಿಡಿಸಿರುವುದನ್ನು ಗಮನಿಸಿ ಈ ಪ್ರತಿಮೆಯೂ ಆದಿನಾಥ(ವೃಷಭನಾಥ) ತೀರ್ಥಂಕರರ ಪ್ರತಿಮೆಯೆಂದು ಹಲವು ವಿದ್ವಾಂಸರು ತರ್ಕಿಸಿದ್ದಾರೆಂದು ಅಭಿಪ್ರಾಯಿಸುತ್ತಾರೆ[೨೦]. ಆದರೆ ಅದರಲ್ಲಿರುವ ಲಾಂಛನವು ಸಿಂಹವಾಗಿದ್ದರಿಂದ ಇದು ಮಹಾವೀರನಿಗೆ ಸಂಬಂಧಿಸಿದ್ದೆಂದು ಶ್ರೀಯುತ ಡಿ.ಎನ್.ಅಕ್ಕಿ ಅವರು ಅಭಿಪ್ರಾಯಿಸುತ್ತಾರೆ. ಪ್ರಾಯಶಃ ಇದೇ ಸರಿಯಾದುದೆನಿಸುತ್ತದೆ.

ಗರ್ಭಗೃಹದ ಬಾಗಿಲಿನ ಅಕ್ಕಪಕ್ಕದಲ್ಲಿ ಇರಿಸಲಾದ ಮಾತಂಗ ಮತ್ತು ಸಿದ್ಧಾಯಿಕಾ ಯಕ್ಷ-ಯಕ್ಷಿಯರ ಬಿಡಿ ಶಿಲ್ಪಗಳು ಇಲ್ಲಿವೆ. ಇವರು ವರ್ಧಮಾನ ಮಹಾವೀರ ತೀರ್ಥಂಕರನ ಯಕ್ಷ-ಯಕ್ಷಿಯರಾಗಿದ್ದು ಹಾಗಾಗಿ ಇದು ಮಹಾವೀರನಿಗೆ ಸಂಬಂಧಿಸಿದ ಜಿನಾಲಯವೆಂದು ಅಭಿಪ್ರಾಯಿಸಬಹುದು. (ತೀರ ಇತ್ತೀಚೆಗೆ ಇಲ್ಲಿದ್ದ ಎಲ್ಲ ಶಿಲ್ಪಗಳನ್ನು ಸ್ಥಳಾಂತರ ಮಾಡಲಾಗಿದೆಯೆಂಬ ಸುದ್ದಿ ಪ್ರಕಟವಾಗಿದೆ ಇದು ತುಂಬಾ ಖೇದಕರ ಸಂಗತಿ).

**ಏವೂರು–ದೇಗುಲ**

ಏವೂರು ಸುರಪುರ ತಾಲೂಕಿನ ಅಂಚಿನಲ್ಲಿರುವ ಗ್ರಾಮ. ಇದು ಐತಿಹಾಸಿಕ ಮಹತ್ವವನ್ನು ಪಡೆದು ವಿಜೃಂಭಿಸಿರುವಂಥದ್ದು. ಗ್ರಾಮದ ಪ್ರವೇಶದಲ್ಲಿಯೇ ಇರುವ ಈಳಗೇರ ಅಥವಾ ಗುತ್ತೇದಾರರ ಓಣಿಯಲ್ಲಿರುವ ಈ ದೇಗುಲವು ಜೈನಮತಪಂಥಕ್ಕೆ ಸಂಬಂಧಿಸಿದೆಂದು ತಿಳಿಯಲು ಅಡ್ಡಿಯಿಲ್ಲ. ಕಾರಣ ಬಾಗಿಲವಾಡಿನ ಲಲಾಟದಲ್ಲಿ ಜಿನ ಬಿಂಬವಿರುವುದನ್ನು ಕಾಣಬಹುದು.

ಆದರೆ ಸದ್ಯ ಈ ಸ್ಮಾರಕವು ತುಂಬಾ ಶೋಚನೀಯ ಸ್ಥಿತಿಗೆ ತಲುಪಿದೆ. ಗರ್ಭಗೃಹದಲ್ಲಿದ್ದ ಮೂರ್ತಿಯು ಮಾಯವಾಗಿದೆ. ಹಾಗಾಗಿ ಇದು ನಿರ್ದಿಷ್ಟವಾಗಿ ಯಾವ ತೀರ್ಥಂಕರರಿಗೆ ಸಂಬಂಧಿಸಿದ್ದು ಎಂದು ಗುರುತಿಸುವಲ್ಲಿ ಕಷ್ಟಕರವಾಗುತ್ತದೆ. ಆದರೂ ಸಿಕ್ಕಿರುವ ಶಾಸನಗಳ ಹಿನ್ನೆಲೆಯಲ್ಲಿ ಕೆಲವು ಸಂಶೋಧಕರು ಇದನ್ನು ಶಾಂತಿನಾಥ ತೀರ್ಥಂಕರರಿಗೆ ಸಂಬಂಧಿಸಿದ ಜಿನಾಲಯವಾಗಿತ್ತೆಂದು ಅಭಿಪ್ರಾಯಿಸಿದ್ದಾರೆ. ಆದರೆ ಸ್ಥಳೀಯವಾಗಿ ಮಾತ್ರ ಇದನ್ನು ಈಗಲೂ ದೇಗುಲವೆಂದೇ ಕರೆಯಾಗುತ್ತದೆ.

ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾದ ಈ ಜಿನಾಲಯವು ನಕ್ಷತ್ರಾಕಾರದ ತಲವಿನ್ಯಾಸವನ್ನು ಹೊಂದಿರುವುದನ್ನು ಗಮನಿಸಬಹುದು. ಈ ವಿನ್ಯಾಸದ ಸ್ಮಾರಕಗಳ ಸುರಪುರ ತಾಲೂಕಿನಲ್ಲಿ ಅತ್ಯಂತ ವಿರಳ ಸಂಖ್ಯೆಯಲ್ಲಿವೆ. ಉದಾಹರಣೆಗೆ ಕೆಂಭಾವಿ ಸಿರವಾಳ ಮತ್ತು ಹುಣಸಗಿಯಲ್ಲಿ ಮಾತ್ರ ಇಂಥ ವಿನ್ಯಾಸಹೊಂದಿರುವ ಸ್ಮಾರಕಗಳನ್ನು ಕಾಣುತ್ತೇವೆ.

ಏಕಕೂಟ ಮಾದರಿಯ ಈ ಜಿನಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಸೋಪಾನಗಳನ್ನು ಬಳಸಿಕೊಂಡು ಇದನ್ನು ಪ್ರವೇಶಿಸಬೇಕಾಗುತ್ತದೆ. ಗರ್ಭಗೃಹದಲ್ಲಿರುವ ಮೂರ್ತಿಶಿಲ್ಪವಿರುವ ಪೀಠವು ಕೇವಲ ಖಾಲಿ ಫಲಕವನ್ನು ಹೊಂದಿದೆ. ಬಾಗಿಲವಾಡದ ಲಲಾಟದಲ್ಲಿ ಜಿನಬಿಂಬವಿದೆ. ಅದರ ದ್ವಾರಬಂಧವು ಪಂಚಶಾಖೆಗಳಿಂದ ಕೂಡಿರುವುದು. ಅದರಲ್ಲಿ ಕೆಲವು ಅಲಂಕರಣೆಗಳನ್ನು ಮಾಡಲಾಗಿದೆ. ಉತ್ತರಾಂಗದ ಭಾಗವು ಮುಂಚಾಚಿದೆ. ದ್ವಾರದಲ್ಲಿ ಪುಷ್ಪ, ಅರ್ಧಕಂಬ ಹಾಗೂ ಸಿಂಹಗಳಿರುವ ಚಿಕ್ಕದಾದ ಉಬ್ಬುಶಿಲ್ಪಗಳಿಂದ ಕೂಡಿದ ಪಟ್ಟಿಕೆಯನ್ನು ಕೆತ್ತಲಾಗಿದೆ. ತೆರದ ಅಂತರಾಳವು ಬರಿದಾಗಿದೆ. ಇದರಲ್ಲಿ ಅರ್ಧಕಂಬಗಳ ರಚನೆಯಿದ್ದು ಅವುಗಳ ಮೇಲೆ ತೆರದ ಬಾಯಿವುಳ್ಳ ಬಟ್ಟಲವನ್ನು ಉಲ್ಟಾ ಇಟ್ಟಾಗ ಕಾಣುವ ಹಾಗೆ ಅದರ ಅಲಂಕರಣೆ ಕಂಡುಬರುತ್ತದೆ.

ನವರಂಗದಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ನಾಲ್ಕು ಕಂಬಗಳಿವೆ. ಅವು ಬುಡಭಾಗದಲ್ಲಿ ಚೌಕಾಕಾರವಾಗಿದ್ದು ದಂಡಾಗ್ರದಲ್ಲಿ ವೃತ್ತಬಂಧ ಕೆತ್ತನೆಯನ್ನು ಹೊಂದಿರುವುವು. ಇವುಗಳಲ್ಲದೆ ಚೌಕಾಕಾರದ ವೃತ್ತ ಹಾಗೂ ತಟ್ಟೆ ಆಕಾರದ ಫಲಕಗಳ ರಚನೆಗಳು ಹಾಗೂ ಬೋಧಿಗೆಗಳು ಈ ಕಂಬಗಳಲ್ಲಿವೆ. ಭಾವಣಿಯಲ್ಲಿ ಭುವನೇಶ್ವರಿಯನ್ನು ಕಂಡರಿಸಲಾಗಿದೆ.

ದೇವಾಲಯದ ಹೊರಗೋಡೆಯ ಭಾಗದಲ್ಲಿ ಷೋಡಶ ಮಾದರಿಯ ಅರ್ಧಕಂಬಗಳ ರಚನೆ ಸುತ್ತಲೂ ಮುಂದುವರೆದಿವೆ. ಪ್ರಸ್ತರ ಭಾಗದಲ್ಲಿ ಕುಂಬದ ಆಕರವುಳ್ಳ ಕೆತ್ತನೆಗಳನ್ನು ಸುತ್ತಲೂ ಕೆತ್ತಲಾಗಿದೆ. ಅಲ್ಲದೇ ಇದೇ ಪ್ರಸ್ತರದಲ್ಲಿ ಕಪೋತ, ಗಳ ರಚನೆಗಳನ್ನು ಕಾಣುತ್ತೇವೆ. ಬಹುಶಃ ಈ ಜಿನಾಲಯಕ್ಕೆ ವೇಸರ ಮಾದರಿಯ ಶಿಖರ ಇದ್ದಿರಬಹುದಾಗಿತ್ತು ಎಂದು ಊಹಿಸಬಹುದಾಗಿದೆ. ಆದರೆ ಸದ್ಯ ಅದರ ಕುರುಹುಗಳು ಕಂಡುಬರುವುದಿಲ್ಲ. ಇದರ ಅಧಿಷಾ«ನವು ಉಪಾನ, ಜಗತಿ, ಗಳ, ತ್ರಿಪಟ್ಟ ಕುಮದ ಹಾಗೂ ಕಪೋತ ಅಲಂಕರಣೆಗಳನ್ನು ಹೊಂದಿದೆ. ಅವು ಸ್ಪಷ್ಟವಾಗಿ ಕಾಣುತ್ತಿದ್ದು ಈ ಜಿನಾಲಯವು ಕಲ್ಯಾಣ ಚಾಲುಕ್ಯರ ಕಾಲದ ನಿರ್ಮಿತಿ ಎಂಬುದರಲ್ಲಿ ಯಾವ ಅನುಮಾನಗಳಿಲ್ಲ. ಗುಡಿಯ ಸೋಪಾನಕ್ಕೆ ಇಕ್ಕೆಲಗಳಲ್ಲಿ ಹಸ್ತಿಫಲಕಗಳನ್ನು ಜೋಡಿಸಲಾಗಿದೆ.

ಊರಿನ ವಾಯುವ್ಯ ದಿಕ್ಕಿಗೆ ಇರುವ ಚಂದ್ರು ನಾಯಕ ಮತ್ತು ಶಿವಣ್ಣ ಸಾಹುಜಾಳೆ ಅವರ ಹೊಲಗಳ ಮಧ್ಯದಲ್ಲಿರುವ ಡೋಣದಲ್ಲಿ ಕ್ರಿ.ಶ.ಸು.೧೨ನೇ ಶತಮಾನದ ಕಾಲಕ್ಕೆ ಸಂಬಂಧಿಸಿದ ಶಾಸನ ಕಂಡುಬಂದಿರುವ ಮಾಹಿತಿ ಲಭ್ಯವಾಗಿದೆ. ಏವೂರಿನಲ್ಲಿದ್ದ ನಾಗವರ್ಮ ಸೆಟ್ಟಿಯು ಈ ಬಸದಿಯ ಶಾನ್ತಿನಾಥ ದೇವರಿಗೆ ಬಿಟ್ಟ ಭೂದತ್ತಿ ಉಲ್ಲೇಖಿಸುತ್ತದೆ[೮]. ಈ ಹಿನ್ನೆಲೆಯಲ್ಲಿ ತಿಳಿಯಬಹುದಾದ ವಿಚಾರವೆಂದರೆ ಈಳಗೇರ ಓಣಿಯಲ್ಲಿರುವ ಪ್ರಸ್ತುತ ದೇಗುಲವು ಪ್ರಾಚೀನ ಕಾಲದಲ್ಲಿ ಶಾಂತಿನಾಥ ಬಸದಿ ಆಗಿದೆಯೆಂಬ ಎಂಬ ಅಭಿಪ್ರಾಯಕ್ಕೆ ಬರಬಹುದು. ಆದರೆ ಜೈನ ಮತಪಂಥಕ್ಕೆ ಸಂಬಂಧಿಸಿದ ಕೆಲವು ತೃಟಿತ ಶಿಲ್ಪಗಳು ಊರಿನಲ್ಲಿರುವ ಹನುಮಂತನ ಗುಡಿಯ ಆವರಣದಲ್ಲಿ ಮಾತ್ರ ಲಭ್ಯವಾಗುತ್ತವೆ.

**ವೈಷ್ಣವ ದೇವಾಲಯಗಳು**

**ಮುದನೂರು–ವೇಣುಗೋಪಾಲಸ್ವಾಮಿ**

ಪೂರ್ವಾಭಿಮುವಾಗಿರುವ ಈ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿರುವುದು. ಗರ್ಭಗೃಹದ ಬಾಗಿಲವಾಡವು ತ್ರಿಶಾಖೆಯಿಂದ ಕೂಡಿದೆ. ಅದರಲ್ಲಿರುವ ಬಳ್ಳಿ ಪಟ್ಟಿಕೆಯು ಅಗಲವಾಗಿದ್ದು ಉಳಿದಂತೆ ಅರ್ಧಕಂಬಗಳ ರಚನೆಯನ್ನು ಮಾಡಲಾಗಿದೆ. ದ್ವಾರದ ಪೇದ್ಯಭಾಗದಲ್ಲಿ ಉಬ್ಬುಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿರುವುದು ಬಾಗಿಲವಾಡವು ಅತ್ಯಂತ ಸರಳ ರಚನೆಯಿಂದ ಕೂಡಿರುವುದು. ಅಂತರಾಳವು ಬರಿದಾಗಿದೆ. ಅಲ್ಲದೆ ಅದರ ಬಾಗಿಲವಾಡವು ಸಹ ಸಾದಾ ಅಲಂಕರಣೆಯದ್ದು. ಲಲಾಟದಲ್ಲಿ ಉಗ್ರನರಸಿಂಹನ ಉಬ್ಬುಶಿಲ್ಪವಿದೆ.

ನವರಂಗದಲ್ಲಿರುವ ನಾಲ್ಕು ಕಂಬಗಳು ಕಲ್ಯಾಣದ ಚಾಲುಕ್ಯರ ಕಾಲದವುಗಳು. ಆದರೆ ಅವು ವಿಶೇಷ ಅಲಂಕರಣೆಗಳನ್ನೇನು ಹೊಂದಿರುವುದಿಲ್ಲ. ಬುಡ ಭಾಗದಲ್ಲಿ ಚೌಕಾಕಾರ ದಂಡಾಗ್ರ ಭಾಗದಲ್ಲಿ ವೃತ್ತಬಂಧ ಪಟ್ಟಿಕೆ ಹಾಗೂ ವೃತ್ತಫಲಕ ಮತ್ತು ಬೋಧಿಗೆಯನ್ನು ಕಂಬದಲ್ಲಿ ಅಳವಡಿಸಲಾಗಿದೆ.

ಹೊರಗೋಡೆಯನ್ನು ನವೀಕರಿಸಲಾಗಿದೆ. ಅಧಿಷ್ಠಾನ ಭಾಗದಲ್ಲಿರುವ ರಚನೆಗಳು ಕಂಡುಬರುವುದಿಲ್ಲ. ದೇವಾಲಯದ ಶಿಖರವನ್ನು ಸಹ ಇತ್ತೀಚೆಗೆ ಹೊಸದಾಗಿ ನಿರ್ಮಿಸಲಾಗಿದೆ. ಈ ಗುಡಿಯ ಪಕ್ಕದಲ್ಲಿಯೇ ತೀರ್ಥ(ಹೊಂಡ)ವಿದೆ. ಅಲ್ಲದೇ ಗುಡಿಯ ಹಿಂಭಾಗದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಎರಡು ಕಂಬಗಳಿದ್ದು ಅವುಗಳನ್ನು ಪ್ರಕಾರ ಮಂಟಪದಲ್ಲಿ ಅಳವಡಿಸಲಾಗಿದೆ. ಈ ಕಂಬಗಳ ಬುಡಭಾಗವು ಚೌಕಾಕಾರವಾಗಿದ್ದು ದಂಡಾಗ್ರದಲ್ಲಿ ವೃತ್ತಬಂಧ ಪಟ್ಟಿಕೆಯನ್ನು ಕೆತ್ತಲಾಗಿದೆ. ಅವುಗಳಿಗೆ ವೃತ್ತಫಲಕ ಹಾಗೂ ಬೋಧಿಗೆಗಳು ಸಹ ಇವೆ. ಇವು ಶಾಸನ ಸಹಿತವಿರುವ ಕಂಬಗಳು. ಇನ್ನೆರಡು ಕಂಬಗಳಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ.

**ಶೆಳ್ಳಗಿ–ಮಾರುತಿ ಮಂಟಪ**

ಇಲ್ಲೊಂದು ಪ್ರಾಚೀನ ದೇವಾಲಯವು ಆ ಮೊದಲೇ ಇತ್ತು ಎಂಬುದು ನಿರ್ವಿವಾದ. ನದಿಯ ದಂಡೆಯ ಮೇಲೆಯೇ ಇರುವುದರಿಂದ ಬಹುಶಃ ಅದು ಪ್ರವಾಹಕ್ಕೆ ಒಳಗಾಗುತ್ತಾ

ಬಂದಿರುವುದು. ಹೀಗಾಗಿ ಅದು ತನ್ನ ಮೂಲ ಹೆಸರನ್ನು ಕಳೆದುಕೊಂಡು ಪ್ರಸ್ತುತ ಹೆಸರನ್ನು ಪಡೆದಿದೆಯೆಂದು ಭಾಸವಾಗುತ್ತದೆ. ಅಲ್ಲದೇ ಈ ದೇವಾಲಯಕ್ಕೆ ಆ ಮೊದಲು ಯಾವ ಹೆಸರಿನಿಂದ ಸಂಬೋಧಿಸಲಾಗುತ್ತಿತ್ತು ಎಂಬುದು ಸಹ ತಿಳಿಯದಾದ ವಿಷಯ. ಇಲ್ಲಿಯ ಆವರಣದಲ್ಲಿರುವ ಹಾಗೂ ರಾಷ್ಟ್ರಕೂಟ ಕಾಲದ್ದು ಎನ್ನಬಹುದಾದ ಶಾಸನವೊಂದು ಪ್ರಕಟಗೊಂಡಿದೆ(ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಪುಟ.೧೬೭). ಈ ವಿಷಯದಿಂದ ತಿಳಿಯಬಹುದಾದ ಸಂಗತಿಯೆಂದರೆ ಬಹುಶಃ ಈ ಸ್ಥಳದಲ್ಲಿ ರಾಷ್ಟ್ರಕೂಟ ಕಾಲದಲ್ಲಿಯೇ ನಿರ್ಮಿತವಾದ ದೇವಾಲಯವೊಂದಿರಬಹುದೆಂದು ಅಭಿಪ್ರಾಯಿಸಬಹುದು. ನದಿಯ ಪ್ರವಾಹಕ್ಕೆ ಒಳಗಾಗಿ ಅದು ಕ್ಷೀಣಿಸುತ್ತಾ ಬೇರೆ ರೂಪಪಡೆಯುತ್ತಾ ಬಂದಿರುವ ಸಾಧ್ಯತೆಗಳುಂಟು.

ಪ್ರಸ್ತುತ ಈ ದೇವಾಲಯವನ್ನು ಮಂಟಪ ಮಾರುತಿ ಎಂದು ಕರೆಯಲಾಗುತ್ತದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯವು ಗ್ರಾಮದಿಂದ ಸುಮಾರು ಒಂದು ಮೈಲು ದೂರದಲ್ಲಿ ಕೇಂದ್ರಿಕೃತವಾಗಿದೆ. ಅದರ ಗೋಡೆಯ ಭಾಗಗಳನು ಸಿಮೆಂಟಿನಿಂದ ಬಳಿಯಲಾಗಿದ್ದು ಸದ್ಯ ಅದು ಗರ್ಭಗೃಹ ಹಾಗೂ ಆಯತಾಕಾರದ ನವರಂಗ ಮಂಟಪ ಹಾಗೂ ಸುತ್ತಲೂ ಪ್ರಾಂಗಣ ಮಂಟಪ ಹೊಂದಿರುವುದನ್ನು ಕಾಣುತ್ತೇವೆ. ಅಲ್ಲದೇ ರಾಷ್ಟ್ರಕೂಟ ಹಾಗೂ ಕಲ್ಯಾಣದ ಚಾಲುಕ್ಯ ಕಾಲದವುಗಳು ಎನ್ನಬಹುದಾದ ಪ್ರಾಚೀನ ಕಂಬಗಳು ಮಾತ್ರ ಉಳಿದುಕೊಂಡು ಬಂದಿರುವುದನ್ನು ಗಮನಿಸಬಹುದು. ಅವು ಪೀಠ, ಪಾದ, ದಂಡಾಗ್ರ, ಕಲಶ, ಫಲಕ ಹಾಗೂ ಬೋಧಿಗೆಗಳನ್ನು ಹೊಂದಿರುವುವು. ಇವು ಮಧ್ಯಭಾಗದಲ್ಲಿ ಹದಿನಾರು ಪಟ್ಟಿಕೆಯನ್ನೊಳಗೊಂಡ ರಚನೆಗಳಾಗಿವೆ. ಅಲ್ಲದೇ ಅವುಗಳನ್ನೆಲ್ಲ ಜೋಡಿಸಿ ಕಟ್ಟಿದಂತೆ ಇನ್ನೊಂದು ಅಡ್ಡಪಟ್ಟಿಕೆಯನ್ನು ಕೊರೆಯಲಾಗಿದೆ. ಇಲ್ಲಿರುವ ಕೆಲವು ಕಂಬಗಳು ವಿಜಯನಗರ ಕಾಲದಲ್ಲಿ ರಚನೆಯಾದವುಗಳು. ಅವುಗಳಲ್ಲಿರುವ ಕೆಲವು ಕಂಬಗಳಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದ್ದು ಅವು ವಿಷ್ಣುವಿನ ಅವತಾರಗಳಿಗೆ ಸಂಬಂಧಿಸಿದ ಕಥನಗಳನ್ನು ವಿವರಿಸುವ ಶಿಲ್ಪಗಳಾಗಿವೆಯೆಂಬುದನ್ನು ಗಮನಿಸಬಹುದು. ಅಲ್ಲದೇ ಕೆಲವು ಕಂಬಗಳಲ್ಲಿ ಪಂಚತಂತ್ರ ಕಥೆಗಳನ್ನು ವಿವರಿಸುವ ಕಥಾನಕ ಉಬ್ಬುಶಿಲ್ಪಗಳನ್ನು ಸಹ ಕೊರೆಯಲಾಗಿದೆ.

ಈ ದೇವಾಲಯಕ್ಕೆ ಸಂಬಂಧಿಸಿದಂತೆ ಚರ್ಚಿಸಬೇಕಾದ ಇನ್ನೊಂದು ಮಹತ್ವದ ಸಂಗತಿಯೆಂದರೆ ಪದ್ಮಾಸೀನ ಸ್ಥಿತಿಯಲ್ಲಿ ಕುಳಿತ ಋಷಿಯ ಶಿಲ್ಪ. ಆ ಶಿಲ್ಪದ ಮುಂಭಾಗದಲ್ಲಿ ಕೈಮುಗಿದು ಕುಳಿತಿರುವ ದಂಪತಿಯ ಶಿಲ್ಪವು ಅದರಲ್ಲಿಯೇ ಮೂಡಿದೆ. ಇದು ಯಾರದ್ದು ಎಂಬುದು ಖಚಿತವಾಗಿ ತಿಳಿದುಬಂದಿಲ್ಲ. ಆದರೆ ಈ ಗುಡಿಗೆ ಸಂಬಂಧಿಸಿದಂತೆ ಐತಿಹ್ಯವೊಂದಿದೆ. ಆ ಪ್ರಕಾರ ಆ ಗುಡಿಯನ್ನು ವ್ಯಾಸರಾಯರು ಪುನರ್ ಪ್ರತಿಷ್ಠಾಪಿಸಿದರೆಂದು ಹೇಳಲಾಗುತ್ತದೆ. ಈ ಗುಡಿಯು ಪ್ರವಾಹದ ಪರಿಣಾಮವಾಗಿ ನೀರಿನಲ್ಲಿ ಮುಳುಗಿ ಆ ನಂತರ ತೆರವು ಆದ ಸಮಯದಲ್ಲಿ ವ್ಯಾಸರಾಯರು ಇಲ್ಲಿಗೆ ಬಂದಿದ್ದರು. ಹಾಗಾಗಿ ಪ್ರವಾಹದಿಂದ ಜಖಂಡಗೊಂಡಿದ್ದ ಈ ಗುಡಿಯನ್ನು ಮತ್ತೆ ಅದೇ ಸಮಯದಲ್ಲಿ ಇಲ್ಲಿ ಮಾರುತಿ ಶಿಲ್ಪವನ್ನು ಪ್ರತಿಷ್ಠಾಪಿಸುವುದರ ಮೂಲಕ ಈ ಕ್ಷೇತ್ರವನ್ನು ಹಾಗೂ ಗುಡಿಯನ್ನು ಪುನರ್ ಪ್ರತಿಷ್ಠಾಪನೆಗೊಳಿಸಿದರು ಎಂಬ ಪ್ರತೀತಗಳಿವೆ. ವೈಷ್ಣವ ಪರಂಪರೆಯ ಮಧ್ವಾಸಂಪ್ರದಾಯದ ಅನುಯಾಯಿಯಾಗಿದ್ದ ವ್ಯಾಸರಾಯರು

ಮಧ್ವರ ಅವತಾರವಾದ ಮಾರುತಿಯನ್ನು ಇಲ್ಲಿ ಸ್ಥಾಪಿಸಿರುವುದು ಸಹಜವಾದ ಪ್ರಕ್ರಿಯೆಯಾಗಿದೆ. ಅಲ್ಲದೇ ಕೃಷ್ಣಾ, ಭೀಮಾ ಹಾಗೂ ತುಂಗಭದ್ರಾ ನದಿಗಳಗುಂಟ ಇಂಥ ಹಲವು ಧಾರ್ಮಿಕ ಶ್ರದ್ಧಾ ಕೇಂದ್ರಗಳನ್ನು ವೈಷ್ಣವ ಪರಂಪರೆಯಲ್ಲಿ ನಂಬಿಕೆಯಿಟ್ಟಿರುವ ಹಲವು ಯತಿಗಳು ಪ್ರಾರಂಭಿಸಿರುವ ಬಗೆಗೆ ಹತ್ತಾರು ಉದಾಹರಣೆಗಳು ಇತಿಹಾಸ ಪುಟಗಳಲ್ಲಿ ದಾಖಲಾಗಿವೆ. ಯಾದಗಿರಿ ಜಿಲ್ಲಾ ಪರಿಸರದಲ್ಲಿ ಈ ಪರಂಪರೆಗೆ ಸಂಬಂಧಿಸಿದ ಇಂಥ ಮೂರು ಕೇಂದ್ರಗಳನ್ನು ಗಮನಿಸಬಹುದು. ಯರಗೋಳ, ಶೆಳ್ಳಿಗೆ ಹಾಗೂ ಹುಣಸಿಕೊಳ್ಳದಲ್ಲಿ(ಕಣ್ವಮಠ) ಈ ಪರಂಪರೆಯ ಶ್ರದ್ಧಾಕೇಂದ್ರಗಳಿರುವುದನ್ನು ಇಂದಿಗೂ ಕಾಣುತ್ತೇವೆ.

**ಸುರಪುರ–ವೇಣುಗೋಪಾಲಸ್ವಾಮಿ**

ಸುರಪುರ ಪಟ್ಟಣವು ತಾಲೂಕಿನ ಕೇಂದ್ರ ಹಾಗೂ ಮುಖ್ಯ ಪಟ್ಟಣವಾಗಿದೆ. ವಿಶಾಲವಾದ ಗುಡ್ಡದ ಮೇಲೆ ಹರಡಿಕೊಂಡಿರುವ ಈ ಪಟ್ಟಣವು ನೈಸರ್ಗಿಕವಾದ ರಕ್ಷಣೆಗಳನ್ನು ತಾನಾಗಿಯೇ ಮೈಗೂಡಿಸಿಕೊಂಡಿರುವುದನ್ನು ಗಮನಿಸಬಹುದು. ಈ ನಗರವು ಸುರಪುರ ಪಾಳೇಗಾರರ ಕಾಲದಲ್ಲಿ ನಿರ್ಮಾಣಗೊಂಡಿರುವಂಥದ್ದು.

ಮೊದ ಮೊದಲು ಸುರಪುರ ಪಾಳೇಗಾರರು ವಾಗಣಗೇರಿ ಸ್ಥಳವನ್ನು ತಮ್ಮ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಹಾಗಾಗಿ ವಾಗಣಗೇರಿಯ ಮೇಲಿನ ಔರಂಗಜೇಬನ ನಿರಂತರ ದಾಳಿಗಳು ಸುರಪುರ ಪಾಳೇಗಾರರನ್ನು ತಮ್ಮ ರಾಜಧಾನಿ ಪಟ್ಟಣ ಬದಲಿಸುವಂತೆ ಮಾಡಿತು ಎಂಬ ಅಭಿಪ್ರಾಯಗಳಿವೆ. ಸ್ಥಳಾಂತರಗೊಂಡಿದ್ದ ಹೊಸ ನಗರದ ಸುತ್ತಲೂ ಭದ್ರವಾದ ಕೋಟೆಯನ್ನು ಹಾಗೂ ಎತ್ತರವಾದ ಬಾಗಿಲವಾಡಗಳನ್ನು ಇವರ ಕಾಲದಲ್ಲಿ ನಿರ್ಮಿಸಲಾಯಿತೆಂದು ತೋರುತ್ತದೆ. ಅದೇ ಕಾಲಕ್ಕೆ ಅವರ ಆಡಳಿತಾವಧಿಯಲ್ಲಿಯೇ ಇಲ್ಲೊಂದು ವೇಣುಗೋಪಾಲಸ್ವಾಮಿ ದೇವಾಲಯವನ್ನು ಸಹ ಕಟ್ಟಲಾಯಿತು. ಗೋಸಲ ವಂಶದ ಸುರಪುರದ ನಾಯಕರು ಮೂಲತಹ ತೆಲಂಗಾಣ ಪ್ರದೇಶಗಳಿಂದ ಬಂದವರೆಂದು ತೋರುತ್ತದೆ. ಅವರು ಸೇವುಣ ಅರಸರಿಗೆ ಕುಮ್ಮಟದ ಆಡಳಿತಾಗರರಿಗೆ ಹಾಗೂ ವಿಜಯನಗರದ ಸೈನ್ಯದಲ್ಲಿ ಅಧಿಕಾರಿಗಳಾಗಿ ಸೇವೆ ಸಲ್ಲಿಸಿದ್ದರೆಂದು ಅಭಿಪ್ರಾಯಿಸಲಾಗುತ್ತದೆ. ಆದರೆ ಅವರು ವಿಜಾಪುರ ಆದಿಲ್‌ಷಾಹಿಗಳ ಅಧಿಕಾರಾವಧಿಯಲ್ಲಿ ಹೆಚ್ಚಿನ ಸ್ಥಾನಮಾನ ಪಡೆದರೆಂದು ಅಭಿಪ್ರಾಯಿಸಬಹುದು. ಅವರು ಮೂಲತಹ ತೆಲಂಗಾಣ ಪ್ರದೇಶದಿಂದ ಬಂದವರಾಗಿದ್ದರಿಂದ ಅವರು ಮಾತನಾಡುವ ಭಾಷೆಯು ತೆಲುಗು ಆಗಿತ್ತು. ಅಲ್ಲದೇ ಅವರು ಸಹಜವಾಗಿ ಆ ಭಾಗದ ಬೇಡರ ಕುಲಗಳಿಗೆ ಪೂಜನೀಯವಾಗಿದ್ದ ತಿರುಪತಿ ವೆಂಕಟರಮಣ ಅಥವಾ ವೈಷ್ಣವ ಮತಪಂಥಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದು ಆಶ್ಚರ್ಯದ ಸಂಗತಿಯಾಗಿರಲಿಲ್ಲ. ಈ ಹಿನ್ನೆಲೆಯಲ್ಲಿ ಅವರು ಅದೇ ಹೆಸರಿನ ದೇವಾಲಯವನ್ನು ತಮ್ಮ ಸಂಸ್ಥಾನದಲ್ಲಿ ನಿರ್ಮಿಸಿದ್ದಾರೆ.

ಎತ್ತರದ ಗುಡ್ಡದ ಮೇಲೆ ಇದನ್ನು ಕಟ್ಟಲಾಗಿದೆ. ಇದು ಆಯತಾಕಾರದ ತಲವಿನ್ಯಾಸವನ್ನು ಹೊಂದಿರುವುದು. ಪೂರ್ವಾಭಿಮುಖವಾಗಿರುವ ಈ ದೇವಾಲಯವು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿದೆ. ಆದರೂ ಅದು ಪ್ರಾಚೀನ ದೇವಾಲಯದಷ್ಟೇ ಮನಸೂರೆಗೊಳ್ಳುವುದು. ಸುಮಾರು ನೂರು ಮೆಟ್ಟಿಲುಗಳನ್ನು ಏರಿಕೊಂಡು ಹೋಗಬೇಕಾಗುತ್ತದೆ.

ಇದು ಗರ್ಭಗೃಹ, ಅಂತರಾಳ ಹಾಗೂ ವಿಶಾಲವಾದ ತೆರದ ನವರಂಗವನ್ನು ಹೊಂದಿರುವುದು. ಹೊರಗೋಡೆ ಹಾಗೂ ಅಧಿಷ್ಠಾನದ ಭಾಗಗಳು ಅತ್ಯಂತ ಸರಳ ರಚನೆಯಿಂದ ಕೂಡಿವೆ. ನವರಂಗದಲ್ಲಿ ಕೆಲವು ಶಿಲ್ಪಗಳಿದ್ದು ಅವು ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ್ದಾಗಿವೆ. ಕೂರ್ಮ, ಸಿಂಹ, ನರಸಿಂಹ, ಮಕರ ಹಾಗೂ ವೇಣುಧಾರಿ ಗೋಪಾಲ, ಸಮುದ್ರಮಂಥನ ಚಿತ್ರಗಳು, ಯುದ್ಧದಲ್ಲಿ ನಿರತ ಯೋಧರ ಶಿಲ್ಪಗಳು, ಬೇಟೆಯಲ್ಲಿ ತೊಡಗಿರುವ ಬೇಟೆಗಾರರ ಶಿಲ್ಪಗಳನ್ನು ಇಲ್ಲಿ ಕಾಣುತ್ತೇವೆ.

ದೇವಾಲಯದ ಪ್ರಸ್ತರ ಭಾಗದಲ್ಲಿ ಕೈಪಿಡಿಗಳಿದ್ದು ಅವು ಸುತ್ತಲೂ ಮುಂದುವರೆದಿವೆ. ಅಲ್ಲದೇ ಅವುಗಳಲ್ಲಿ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿದೆ. ಅದರಲ್ಲಿ ಪ್ರಮುಖವಾಗಿ ಕೃಷ್ಣ, ವಿಷ್ಣುವಿಗೆ ಸಂಬಂಧಿಸಿದ ಶಿಲ್ಪಗಳನ್ನು ನಿರ್ಮಿಸಲಾಗಿದೆ. ಪ್ರಸ್ತರ ಭಾಗದಲ್ಲಿರುವ ಕೈಪಿಡಿ ಹಾಗೂ ಅಲ್ಲಿರುವ ಶಿಲ್ಪಗಳು ಗಾರೆಯಲ್ಲಿ ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಈ ಗುಡಿಯ ಮುಂಭಾಗದಲ್ಲಿಯೇ ಹೊಂಡವನ್ನು ನಿರ್ಮಿಸಲಾಗಿದೆ. ಗೋಪಾಲಸ್ವಾಮಿಗೆ ಸಂಬಂಧಿಸಿದಂತೆ ಗೋಕುಲಾಷ್ಟಮಿಯಂದು ವಿಶೇಷ ಜಾತ್ರೆ ಜರುಗುತ್ತದೆ.

**ಶೈವ ದೇವಾಲಯಗಳು**

**ಈಡ್ಲೂರು–ಶಂಕರಲಿಂಗ**

ಯಾದಗಿರಿ ತಾಲೂಕಿನಲ್ಲಿ ಉಳಿದುಕೊಂಡಿರುವ ಪ್ರಾಚೀನ ದೇವಾಲಯಗಳು ತುಂಬಾ ವಿರಳ ಸಂಖ್ಯೆಯಲ್ಲಿವೆ. ಅಲ್ಲದೇ ಅಳಿದುಳಿದ ಇಂಥ ಕೆಲವು ಸ್ಮಾರಕಗಳು ಸಹ ಸುಸ್ಥಿತಿಯಲ್ಲಿ ಇರುವುದಿಲ್ಲ. ಆದರೆ ಅಪವಾದವೆಂಬಂತೆ ಈಡ್ಲೂರಿನಲ್ಲಿರುವ ಶಂಕರಲಿಂಗೇಶ್ವರ ದೇವಾಲಯದ ಸ್ಥಿತಿ ಮಾತ್ರ ಉತ್ತಮವಾಗಿದೆಯೆಂಬುದು ಗಮನಾರ್ಹ. ದೇವಾಲಯದ ಸುತ್ತಲೂ ಇತ್ತೀಚೆಗೆ ಕೆಲವು ಕಟ್ಟಡಗಳನ್ನು ಕಟ್ಟಿದ್ದರೂ ಮೂಲ ದೇವಾಲಯಕ್ಕೆ ಚ್ಯುತಿ ಬರುವಂತಹ ಕಾರ್ಯಚಟುವಟಿಕೆಗಳನ್ನು ಮಾಡಿರುವುದಿಲ್ಲ. ಆದರೆ ದೇವಾಲಯಗಳ ಅಧ್ಯಯನ ದೃಷ್ಟಿಯಿಂದ ಮಹತ್ವ ಪಡೆದಿರುವ ಇಂಥ ಸ್ಮಾರಕಗಳು ಅಧ್ಯಯನಕಾರರ ಅವಕೃಪೆಗೆ ಒಳಗಾಗಿರುವುದು ಮಾತ್ರ ವಿಪರ್ಯಾಸವೇ ಸರಿ. ದೇವಾಲಯದ ಆವರಣದಲ್ಲಿಯೇ ಸುಂದರವಾದ ಶಾಸನವೊಂದಿದ್ದು ಅದು ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಸುಮಾರು ಐದು ಅಡಿ ಎತ್ತರ ಮೂರು ಅಡಿ ಅಗಲವಾಗಿರುವ ಈ ಶಾಸನದ ನಾಲ್ಕು ಮಗ್ಗಲುಗಳಲ್ಲಿಯೂ ಅಕ್ಷರಗಳನ್ನು ಕಂಡರಿಸಲಾಗಿದೆ. ಬಹುಶಃ ಇದು ಸಹ ಶಾಸನ ತಜ್ಞರ ಗಮನಸೆಳೆದಂತೆ ಕಾಣುವುದಿಲ್ಲ.

ಗ್ರಾಮದಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿರುವ ಈ ಸ್ಮಾರಕದ ಪಕ್ಕದಲ್ಲಿಯೇ ಅಗಲವಾದ ಹಳ್ಳೊಂದು ಹರಿದಿದೆ. ಅದನ್ನು ಈಡ್ಲೂರು ಹಳ್ಳವೆಂದೇ ಕರೆಯಲಾಗುತ್ತದೆ. ಬೇಸಿಗೆ ಕಾಲದಲ್ಲೂ ನೀರಿನಿಂದ ಜಿಣುಗುವ ಈ ನೀರಿನ ಮೂಲವೇ ಇಂಥದ್ದೊಂದು ಸ್ಮಾರಕ ಇಲ್ಲಿ ಭವ್ಯವಾಗಿ ನಿರ್ಮಾಣವಾಗಲು ಕಾರಣವಾಗಿರಬಹುದು. ವಿಶಾಲವಾದ ಆವರಣವನ್ನು ಹೊಂದಿರುವ ಈ ದೇವಾಲಯಕ್ಕೆ ಉತ್ತರ ಮತ್ತು ಪೂರ್ವಾಭಿಮುಖ ಪ್ರವೇಶದ್ವಾರಗಳಿವೆ. ಆದರೂ ಉತ್ತರಾಭಿಮುಖ ಪ್ರವೇಶ ದ್ವಾರವನ್ನೇ

ಹೆಚ್ಚಿನ ಪ್ರಮಾಣದಲ್ಲು ಉಪಯೋಗಿಸಲಾಗುತ್ತದೆ. ಈ ದೇವಾಲಯದ ಸಂಕೀರ್ಣದಲ್ಲಿ ಶಂಕರಲಿಂಗೇಶ್ವರ ಮಾತ್ರವಲ್ಲದೇ ಪಾರ್ವತಿ-ಗಣೇಶ್ವರ ಎಂಬ ಹೆಸರಿನ ಗುಡಿಗಳು ಇವೆ. ಈ ದೇವಾಲಯವು ತ್ರಿಕೂಟ ವಿನ್ಯಾಸವನ್ನು ಹೊಂದಿದೆ.

ಮೂರು ಗರ್ಭಗೃಹ, ಅಂತರಾಳ ಹಾಗೂ ಅವೆಲ್ಲವನ್ನು ಒಳಗೊಂಡಿರುವ ವಿಶಾಲವಾದ ನವರಂಗವು ಈ ದೇವಾಲಯಕ್ಕಿದೆ. ಪೂರ್ವಾಭಿಮುಖವಾಗಿರುವ ಮುಖ್ಯ ಗರ್ಭಗೃಹದಲ್ಲಿ ಬೃಹದಾಕಾರದ ಲಿಂಗವಿದ್ದು ಅದು ನಿತ್ಯವು ಪೂಜೆಗೊಳಲ್ಪಡುತ್ತದೆ. ಗರ್ಭಗೃಹದ ಛತ್ತಿನಲ್ಲಿ ಸುಂದರವಾದ ಭುವನೇಶ್ವರಿಯನ್ನು ಕೆತ್ತಲಾಗಿದ್ದು ಅದು ಕಮಲ ಪುಷ್ಪದ ರಚನಾ ವಿನ್ಯಾಸವನ್ನು ಹೊಂದಿರುವುದನ್ನು ಕಾಣುತ್ತೇವೆ. ಗರ್ಭಗೃಹದ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ಕೂಡಿದ್ದು ಅದರಲ್ಲಿರುವ ಅರ್ಧವೃತ್ತಪಟ್ಟಿಕೆ ಮತ್ತು ಚಿಕ್ಕದಾಗಿರುವ ಉಬ್ಬುಶಿಲ್ಪಗಳು ಇದರ ಸೌಂದರ್ಯವನ್ನು ಇನ್ನೂ ಹೆಚ್ಚುವಂತೆ ಮಾಡಿವೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದ್ದು ಬಾಗಿಲವಾಡದಲ್ಲಿರುವ ಉತ್ತರಾಂಗದ ಭಾಗದಲ್ಲಿ ಮುಂಚಾಚಿದ ಕಪೋತ ರಚನೆಯಿದೆ. ಅಲ್ಲದೇ ಅದರಲ್ಲಿ ಶಿಖರ ಪಟ್ಟಿಕೆಗಳನ್ನು ಕಂಡರಿಸಲಾಗಿದ್ದು ಅವು ಕದಂಬನಾಗರ ಅಥವಾ ಫಂಸಾನ ಮಾದರಿಯವುಗಳಾಗಿವೆ. ಶಂಕರಲಿಂಗ ದೇವಾಲಯದ ಮುಖ್ಯ ಶಿಖರವು ಸಹ ಫಂಸಾನ ಶೈಲಿಯದ್ದಾಗಿದೆ. ಬಾಗಿಲವಾಡಗಳ ಪೇದ್ಯ(ಕೆಳ)ಭಾಗದಲ್ಲಿ ಚಿಕ್ಕದಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈಗಾಗಲೇ ವಿವರಿಸಿರುವ ಈ ಎಲ್ಲ ಲಕ್ಷಣಗಳು ಮೂರು ಗರ್ಭಗೃಹಗಳ ಬಾಗಿಲವಾಡಗಳಲ್ಲಿವೆ.

ಮೂರೂ ಗರ್ಭಗಳಿಗೆ ಹೊಂದುಕೊಂಡಿರುವ ಅಂತರಾಳು, ಬಾಗಿಲವಾಡವು ಜಾಲಂಧರಗಳಿಂದ ನಿರ್ಮಾಣಗೊಂಡಿವೆ. ಅಲ್ಲದೇ ಅಂತರಾಳದ ಉತ್ತರಾಂಗ ಭಾಗವು ಜಾಲಂಧರದಿಂದಲೇ ರೂಪುಗೊಂಡಿದೆ. ಅಂತರಾಳಗಳಲ್ಲಿ ಸುಂದರವಾದ ಭುವನೇಶ್ವರಿಯನ್ನು ಕೆತ್ತಲಾಗಿದೆ. ಮುಖ್ಯ ಗರ್ಭಗೃಹದಲ್ಲಿ ಲಿಂಗವಿದ್ದರೆ ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿ ನಂದಿಶಿಲ್ಪವನ್ನಿಡಲಾಗಿದೆ. ಬಹುಶಃ ನಂದಿಗಾಗಿಯೇ ಒಂದು ಗರ್ಭಗೃಹವನ್ನು ಮೀಸಲಿಟ್ಟಿರಬಹುದು. ಆದರೆ ಅದರಲ್ಲಿರುವ ಶಿಲ್ಪವು ಉತ್ತರಾಭಿಮುಖವಾಗಿರದೆ ಅದು ಮುಖ್ಯ ಗರ್ಭಗೃಹದ ಲಿಂಗಕ್ಕೆ ಎದುರಾಗಿ ಅಂದರೆ ಪಶ್ಚಿಮಾಭಿಮುಖವಾಗಿಯೇ ಅದನ್ನು ಸ್ಥಾಪಿಸಲಾಗಿರುವುದನ್ನು ಗಮನಿಸಬಹುದು. ಉತ್ತರಾಭಿಮುಖ ಗರ್ಭಗೃಹದಲ್ಲಿ ವೀರಭದ್ರನ ಶಿಲ್ಪವನ್ನಿಡಲಾಗಿದೆ. ಬಹುಶಃ ಇದು ಪ್ರಾಚೀನ ಶಿಲ್ಪವಲ್ಲ. ಇಲ್ಲೊಂದು ಬೇರೆ ಶಿಲ್ಪವು ಆ ಮೊದಲು ಪೂಜೆಗೊಳ್ಳುತ್ತಿರಬಹುದು. ಆದರೆ ಅದು ಕೆಲವು ಕಾರಣಗಳಿಗಾಗಿ ನಾಶವಾದ್ದರಿಂದ ಅದೇ ಸ್ಥಳದಲ್ಲಿ ವೀರಭದ್ರನ ಶಿಲ್ಪವನ್ನು ಪ್ರತಿಷಾ«ಪಿಸಿರಬಹುದೆಂದು ಅಭಿಪ್ರಾಯಿಸಬಹುದು.

ಶಂಕರಲಿಂಗೇಶ್ವರ ಗುಡಿಯ ನವರಂಗವು ವಿಶಾಲವಾಗಿ ರಚನೆಯಾಗಿದ್ದುಂಟು. ಅದರ ಒಂಭತ್ತು ಅಂಕಣಗಳಲ್ಲಿಯೂ ಭುವನೇಶ್ವರಿಯನ್ನು ರಚಿಸಲಾಗಿದೆ. ನವರಂಗದಲ್ಲಿರುವ ಕಂಬಗಳು ಕಲ್ಯಾಣ ಚಾಲುಕ್ಯ ಕಾಲದ ನಿರ್ಮಿತಿಗಳು ಎಂಬುದರಲ್ಲಿ ಅನುಮಾನಗಳಿಲ್ಲ. ಅವು ಚೌಕಾಕಾರದವುಗಳು. ಅವುಗಳಲ್ಲಿ ಪಾದ, ದಂಡ, ದಂಡಾಗ್ರ, ಕಲಶ, ನಕ್ಷತ್ರಾಕಾರದ ಫಲಕ ಹಾಗೂ ತಟ್ಟೆ ಆಕಾರದ ಫಲಕಗಳನ್ನು ಅಳವಡಿಸಲಾಗಿದೆ. ದಂಡ ಭಾಗವು ಚೌಕಾಕಾರದ್ದಾಗಿದ್ದರೆ

ದಂಡಾಗ್ರ ಭಾಗದಲ್ಲಿ ಹದಿನಾರು ಪಟ್ಟಿಕೆಗಳನ್ನು ರಚಿಸಲಾಗಿದೆ. ಅಲ್ಲದೇ ಎಲ್ಲ ಪಟ್ಟಿಕೆಗಳನ್ನು ಸುತ್ತಿ ಕಟ್ಟಿದಂತೆ ಕಾಣುವ ಅಡ್ಡಲಾಗಿ ಅದರ ಮೇಲೊಂದು ವೃತ್ತಪಟ್ಟಿಕೆಯನ್ನು ದಂಡಾಗ್ರಭಾಗದಲ್ಲಿ ಕೆತ್ತಿರುವುದನ್ನು ಕಾಣುತ್ತೇವೆ. ಕಲಶ ಭಾಗದಲ್ಲಿ ತ್ರಿಕೋನ ಆಕೃತಿ ಅಥವಾ ಪಿರಾಮಿಡ್ ಆಕಾರವನ್ನು ಹೊಂದಿದ್ದ ರಚನೆಯನ್ನು ಮಾಡಲಾಗಿದೆ. ಕಂಬಗಳಿಗೆ ಅಳವಡಿಸಿರುವ ನಕ್ಷತ್ರಾಕಾರದ ಫಲಕಗಳು ತುಂಬಾ ಸುಂದರವಾಗಿವೆ. ಕಂಬಗಳಲ್ಲಿರುವ ಬೋಧಿಗೆಗಳು ದೊಡ್ಡದಾಗಿವೆ. ನಾಲ್ಕು ಕಂಬಗಳನ್ನೊಳಗೊಂಡು ನಿರ್ಮಾಣವಾಗಿರುವ ಛತ್ತಿನಲ್ಲಿ ಬಹು ಸುಂದರವಾದ ಭುವನೇಶ್ವರಿಯನ್ನು ಕೆತ್ತಲಾಗಿದೆ. ಅದರಲ್ಲಿ ಆನೆ, ಕುದುರೆ ಸವಾರರ ಮತ್ತು ಮಕರ (ಮೊಸಳೆ)ಗಳ ಉಬ್ಬುಶಿಲ್ಪಗಳನ್ನು ರಚಿಸಲಾಗಿದೆ.

ನವರಂಗದಲ್ಲಿರುವ ನಾಲ್ಕು ಕೋಷ«ಕಗಳು ಬರಿದಾಗಿವೆ. ಅವು ಚಿಕ್ಕ ಮಂಟಪಗಳಂತೆ ಕಂಡುಬರುತ್ತವೆ. ನವರಂಗಕ್ಕೆ ಕಕ್ಷಾಸನವಿತ್ತು. ಆದರೆ ಅದು ಹೊಸದಾಗಿ ನಿರ್ಮಿಸಿದ ಗೋಡೆಯಲ್ಲಿಯೇ ವಿಲೀನಗೊಂಡಂತೆ ಕಾಣುತ್ತದೆ. ಕಕ್ಷಾಸನದಲ್ಲಿದ್ದ ಕಂಬಗಳು ಈಗಲೂ ಗೋಡೆಯ ಭಾಗದಲ್ಲಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ದೇವಾಲಯದ ಅಧಿಷಾ«ನವು ಸಂಪೂರ್ಣವಾಗಿ ಹೂತುಹೋಗಿದೆ. ಹೊರಭಿತ್ತಿಯು ಸರಳ ರಚನೆಯಿಂದ ಕೂಡಿದೆ. ಪ್ರಸ್ತರ ಭಾಗವು ಸರಳವಾಗಿದೆ. ಫಂಸಾನ ಅಥವಾ ಕದಂಬನಾಗರ ಮಾದರಿಯ ಶಿಖರವು ದೇವಾಲಯಕ್ಕಿದೆ. ಅದು ಚೌಕಾಕಾರದ ಸ್ಥೂಪಿ ಮತ್ತು ದುಂಡಾಗಿರುವ ಕಲಶವನ್ನು ಹೊಂದಿದೆ.

ದೇವಾಲಯದ ಆವರಣದಲ್ಲಿ ಸುಮಾರು ಆರು ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. ಅದು ಅತ್ಯಂತ ಮೋಹಕವಾಗಿರುವುದು. ಇಲ್ಲಿರುವ ಇನ್ನೊಂದು ಪ್ರಮುಖ ಶಿಲ್ಪ ಸುವ್ಯಲಲಿತಾಸನದಲ್ಲಿ ಕುಳಿತಿರುವ ಗಿರಿಜಾಶಂಕರನದು. ಈ ಶಿಲ್ಪವು ಸುಮಾರು ಎರಡು ಅಡಿ ಎತ್ತರವಾಗಿದೆ. ಅಲ್ಲದೇ ತಲೆಗೆ ಮುಂಡಾಸ ಅಥವಾ ರುಮಾಲು ಕಟ್ಟಿಕೊಂಡಂತೆ ಕಾಣುವ ದಂಪತಿಯ ಬಿಡಿಶಿಲ್ಪವೊಂದಿದ್ದು ಅದು ಬಹುಶಃ ಭಕ್ತಾದಿಗಳಿಗೆ ಸಂಬಂಧಿಸಿದ ಶಿಲ್ಪದಂತೆ ಕಂಡುಬರುತ್ತದೆ. ಕಾಳಿ ದೇವತೆಗಾಗಿ ಕಟ್ಟಿದ ಪ್ರತ್ಯೇಕವಾದ ಮಂಟಪ ಇದೇ ಆವರಣದಲ್ಲಿದೆ. ಅದರಲ್ಲಿರುವ ಕಾಳಿಯ ಶಿಲ್ಪವು ಸುಂದರವಾಗಿದೆ.

ಶಂಕರಲಿಂಗೇಶ್ವರ ದೇವಾಲಯದ ಎಡಭಾಗದಲ್ಲಿ ಇನ್ನೊಂದು ಚಿಕ್ಕ ದೇವಾಲಯವಿದ್ದು ಅದನ್ನು ಪಾರ್ವತಿ-ಗಣೇಶ್ವರನೆಂದು ಕರೆಯಲಾಗುತ್ತದೆ. ಅದರ ಗರ್ಭಗೃಹ ಮತ್ತು ಅಂತರಾಳ ಭಾಗಗಳು ಮಾತ್ರ ಉಳಿದುಕೊಂಡಿದ್ದು ಉಳಿದೆಲ್ಲ ಭಾಗಗಳು ಬಿದ್ದುಹೋಗಿವೆ. ಇತ್ತೀಚೆಗೆ ನಿರ್ಮಿಸಿರುವ ಪಾರ್ವತಿಯ ಬಿಡಿ ಶಿಲ್ಪವೊಂದನ್ನು ಇದೇ ಗರ್ಭಗೃಹದಲ್ಲಿ ಪ್ರತಿಷಾ«ಪಿಸಲಾಗಿದೆ. ಅದರ ಬಾಗಿಲವಾಡವು ಸಹ ಶಂಕರಲಿಂಗ ದೇವಾಲಯದ ಗರ್ಭಗೃಹಗಳ ಬಾಗಿಲವಾಡದ ಲಕ್ಷಣಗಳನ್ನೇ ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿರುವುದು.

ಹೊರಭಿತ್ತಿಯು ನಿರಾಲಂಕಾರವಾಗಿದ್ದು ದೇವಾಲಯದ ಅಧಿಷಾ«ನ ಭಾಗದಲ್ಲಿ ಉಪಾನ, ಕುಮುದ, ಗಳ ಹಾಗೂ ಕಪೋತ ಪಟ್ಟಿಯನ್ನು ರಚಿಸಲಾಗಿದೆ. ಫಂಸಾನ ಮಾದರಿಯ

ಶಿಖರವು ಈ ದೇವಾಲಯಕ್ಕೂ ಇತ್ತು. ಅದು ಕೆಲವು ಕಾರಣಗಳಿಗಾಗಿ ಬಿದ್ದುಹೋಗಿರಬಹುದು. ಆದರೆ ಅಳಿದುಳಿದ ಅದರ ಕೆಲವು ಭಾಗಗಳಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಅದು ಸಹ ಕದಂಬ-ನಾಗರ ಮಾದರಿಯ ಶಿಖರವನ್ನು ಹೊಂದಿತ್ತು ಎಂಬುದನ್ನು ಸ್ಪಷ್ಟವಾಗಿ ಅಭಿಪ್ರಾಯಿಸಬಹುದು.

ಈ ಆವರಣದಲ್ಲಿರುವ ಎರಡೂ ದೇವಾಲಯಗಳನ್ನು ಗಮನಿಸಿದಾಗ ತಿಳಿಯಬಹುದಾದ ಬಹುಮುಖ್ಯ ಅಂಶವೆಂದರೆ ಮೂಲತಹ ಈ ದೇವಾಲಯಗಳು ಯಾವ ದೇವರುಗಳಿಗೆ ಸಂಬಂಧಿಸಿದವುಗಳು ಎಂಬುದು. ಬಹುಶಃ ಮೊದಮೊದಲು ಭೈರವನಿಗೆ ಸಂಬಂಧಿಸಿದಂತೆ ಇವು ರಚನೆಯಾಗಿರಬಹುದು. ಅಲ್ಲದೇ ಅದೇ ವೇಳೆಗೆ ಭೈರವಿ(ಕಾಳಿ) ಅಥವಾ ಪಾರ್ವತಿಗೂ ಸಂಬಂಧಿಸಿದಂತೆ ಇನ್ನೊಂದು ದೇವಾಲಯವನ್ನು ಮುಖ್ಯ ದೇವಾಲಯದ ಎಡಭಾಗದಲ್ಲಿಯೇ ನಿರ್ಮಿಸಲಾಗಿದೆ. ಆದರೆ ಕಾರಣಾಂತರಗಳಿಂದ ಈ ದೇವಾಲಯಗಳಲ್ಲಿದ್ದ ಆ ಮೊದಲಿದ್ದ ಎರಡೂ ಶಿಲ್ಪಗಳು ಬದಲಾವಣೆಗೊಂಡಿವೆ. ಇಂಥ ಪರಿವರ್ತನೆಗಳಿಗೆ ಸ್ಪಷ್ಟವಾದ ಕಾರಣಗಳು ತಿಳಿದುಬಂದಿಲ್ಲ.

ಶಂಕರಲಿಂಗ ದೇವಾಲಯವು ಮೂಲತಹ ತ್ರಿಕೂಟವಾಗಿದ್ದು ಅದರ ಗರ್ಭಗೃಹದಲ್ಲಿ ಮೂಲ ವಿಗ್ರಹ ಸ್ಥಾನಪಲ್ಲಟಗೊಂಡಿವೆ. ಹಾಗೆಯೇ ಎಡಭಾಗದಲ್ಲಿರುವ ಚಿಕ್ಕಗುಡಿಯಲ್ಲಿರುವ ಭೈರವಿ ಮೂರ್ತಿಯು ಸಹ ನಾಶವಾಗಿರಬಹುದು. ಹಾಗಾಗಿ ಅದೇ ಸ್ಥಳದಲ್ಲಿ ಮತ್ತೆ ಸಮಭಂಗಿಯಲ್ಲಿರುವ ಪಾರ್ವತಿಯ ಶಿಲ್ಪವನ್ನು ನಂತರಾವಧಿಯಲ್ಲಿ ತೀರ ಇತ್ತೀಚೆಗೆ ಸ್ಥಾಪಿಸಲಾಗಿರುವುದನ್ನು ಗಮನಿಸಬಹುದು. ವೀರಭದ್ರನ ಶಿಲ್ಪದ ಬಗೆಗೆ ಒಂದೆರಡು ಅಭಿಪ್ರಾಯಗಳನ್ನು ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಮೂಲತಃ ಇದು ಭೈರವ ಸಂಪ್ರದಾಯಕ್ಕೆ ಸಂಬಂಧಪಟ್ಟ ದೇವಾಲಯವಾಗಿದೆ. ಆದರೆ ಈ ದೇವಾಲಯದಲ್ಲಿರುವ ವೀರಭದ್ರನ ಶಿಲ್ಪ ಹಾಗೂ ಸಂಪ್ರದಾಯಗಳು ಬಹುಶಃ ಹದಿನೈದನೆಯ ಶತಮಾನದ ನಂತರವೇ ಬಂದಿರಬಹುದು. ಕಾರಣ ಭೈರವನ ಜಾಗದಲ್ಲಿ ವೀರಭದ್ರನನ್ನು ಕಂಡುಕೊಂಡು ಇಂಥ ಬದಲಾವಣೆಗಳು ಆಗಿರಬಹುದೇ? ಯಾದಗಿರಿ, ಕಾಳೆಬೆಳಗುಂದಿ ಪಡಿಬಿಡಿ ಹಾಗೂ ಹುಣಸಗಿಯಲ್ಲಿರುವ ದೇವಾಲಯಗಳಲ್ಲಿಯೂ ಇಂಥದ್ದೇ ಬದಲಾವಣೆಯ ಉದಾಹರಣೆಗಳನ್ನು ಕಾಣಬಹುದು. ಒಟ್ಟಿನಲ್ಲಿ ಈ ಪ್ರದೇಶದ ದೇವಾಲಯಗಳಲ್ಲಿದ್ದ ಭೈರವನ ಜಾಗದಲ್ಲಿ ವೀರಭದ್ರನು ಸ್ಥಾಪಿತನಾದನು. ಇಂಥ ಬದಲಾವಣೆಗೆ ಹಲವಾರು ಕಾರಣಗಳಿವೆ. ಅದಕ್ಕೊಂದು ಪ್ರತ್ಯೇಕ ಅಧ್ಯಯನವೇ ಬೇಕಾಗುತ್ತದೆ. ಭೈರವನ ಜಾಗದಲ್ಲಿ ವೀರಭದ್ರ ಸೇರಿಕೊಂಡಿರುವ ಈ ಪ್ರಭಾವದ ನಿಚ್ಚಳ ಸೂಚನೆ ನೀಡುವ ಸಂಗತಿಗಳನ್ನು ಮಾತ್ರ ಈ ಭಾಗದಲ್ಲಿರುವ ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದು.

**ಚಟ್ನಳ್ಳಿ–ಕೋಟೆ ಬಸವೇಶ್ವರ**

ಶಹಾಪುರ ತಾಲೂಕು ಹಾಗೂ ಯಾದಗಿರಿ ಜಿಲ್ಲಾ ಕೇಂದ್ರಗಳಿಗೆ ಸಮಾನಾಂತರ ದೂರದಲ್ಲಿರುವ ಚಟ್ನಳ್ಳಿ ಗ್ರಾಮವು ಅಲ್ಲಿನ ಕೋಟೆ ಬಸವೇಶ್ವರ ದೇವಾಲಯದ ಹಿನ್ನಲೆಯಲ್ಲಿ

ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಈ ದೇವಾಲಯದ ತಲಸನ್ಯಾಸ ವಿಶಿಷ್ಟವಾಗಿರುವುದು. ಇದೊಂದು ತ್ರಿಕೂಟ ರಚನೆ ಮೂರೂ ಗರ್ಭಗೃಹ ಹಾಗೂ ಅಂತರಾಳಗಳನ್ನು ಹೊಂದಿದೆ. ಆದರೆ ಅವುಗಳು ಒಂದಕ್ಕೊಂದು ಪ್ರತ್ಯೇಕವಾಗಿವೆ. ಅವುಗಳನ್ನೆಲ್ಲ ತೆರದ ನವರಂಗವು ಜೋಡಿಸಿದೆ. ಹೀಗಾಗಿ ಮೂರು ಕಡೆಯಿಂದ ನವರಂಗಕ್ಕೆ ಪ್ರವೇಶವನ್ನು ನಿರ್ಮಿಸಲಾಗಿದೆ. ದೇವಾಲಯಕ್ಕೆ ವಿಶಾಲವಾದ ಪ್ರಕಾರವಿದ್ದು ಅದರಲ್ಲಿ ಇನ್ನಿತರ ಚಿಕ್ಕಪುಟ್ಟ ಕಟ್ಟಡಗಳು ಹಾಗೂ ಗೂಡುಗಳನ್ನು ರಚಿಸಲಾಗಿತ್ತು. ಆದರೆ ಸದ್ಯ ಅವು ಸಹ ಉಳಿದುಕೊಂಡು ಬಂದಿರುವುದಿಲ್ಲ. ಇಲ್ಲಿರುವ ಕಟ್ಟಡಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಬಹುಶಃ ಈ ದೇವಾಲಯವು ಪ್ರಾಚೀನ ವಿದ್ಯಾಕೇಂದ್ರದ ಪ್ರಮುಖ ಚಟುವಟಿಕೆಯ ಕೇಂದ್ರವಾಗಿತ್ತೆಂದು ತೋರುತ್ತದೆ. ಗುಡಿಗಿರುವ ಮುಖ್ಯ ಪ್ರವೇಶವು ದಕ್ಷಿಣಾಭಿಮುಖವಾಗಿದ್ದರೂ ಆವರಣಕ್ಕೆ ಪೂರ್ವದಲ್ಲಿ ಮತ್ತೊಂದು ಪ್ರವೇಶವನ್ನು ನಿರ್ಮಿಸಲಾಗಿದೆ. ಬಹುಶಃ ಇದೊಂದು ಬಹುದೊಡ್ಡ ಸಂಕೀರ್ಣವಾಗಿತ್ತು. ಕೋಟಿ ಬಸವೇಶ್ವರ ದೇವಾಲಯದ ಸುತ್ತ ಈಗಲೂ ಚಿಕ್ಕಪುಟ್ಟ ಗುಡಿಗಳ ಅವಶೇಷಗಳಿರುವುದನ್ನು ಗಮನಿಸಬಹುದಾಗಿದೆ. ಆದರೆ ಇತ್ತೀಚೆಗೆ ಅವುಗಳನ್ನು ಸಹ ದುರಸ್ತಿಗೊಳಿಸಿ ಧಾರ್ಮಿಕೇತರ ಚಟುವಟಿಕೆಗಳಿಗೆ ಬಳಸಲಾಗುತ್ತದೆ. ಇಲ್ಲಿರುವ ಹೆಚ್ಚಿನ ಕಟ್ಟಡಗಳನ್ನು ಊಟೋಪಚಾರ ಕಾರ್ಯಕ್ಕಾಗಿ ಉಪಯೋಗಿಸಲಾಗುತ್ತಿದೆ. ಪ್ರಾಚೀನ ಅವಶೇಷಗಳಲ್ಲಿ ಮುಖ್ಯವಾಗಿ ಸೋಪಾನ ಹಾಗೂ ಹಸ್ತಿಫಲಕಗಳ ಕುರುಹುಗಳನ್ನು ಕಾಣಬಹುದಾಗಿದೆ.

ದಕ್ಷಿಣಾಭಿಮುಖವಾಗಿರುವ ಮುಖ್ಯ ಗರ್ಭಗೃಹವು ನಂದಿ ಅಥವಾ ಬಸವಣ್ಣನ ವಿಗ್ರಹವನ್ನು ಹೊಂದಿರುವುದನ್ನು ಕಾಣುತ್ತೇವೆ. ಅದಕ್ಕೆ ವಿಶೇಷ ಅಲಂಕಾರಗಳನ್ನು ಮಾಡಲಾಗಿದ್ದು ನಿತ್ಯವು ಅದಕ್ಕೆ ವೈಭವದ ಪೂಜೆ ಇರುತ್ತದೆ. ಗರ್ಭಗೃಹದ ಬಾಗಿಲವಾಡವು ಅತ್ಯಂತ ಆಕರ್ಷಕವಾಗಿದ್ದು ಅದು ಐದು ಪಂಚಪಟ್ಟಿಕೆಗಳನ್ನು ಹೊಂದಿರುವುದನ್ನು ಗಮನಿಸಬಹುದು. ಅವುಗಳಲ್ಲಿ ಪುಷ್ಪಪಟ್ಟಿಕೆ, ಹೊಸೆದ ಹಗ್ಗದಂತೆ ಕಾಣುವ ಪಟ್ಟಿಕೆ, ಚಿಕ್ಕ ಚಿಕ್ಕ ಉಬ್ಬುಶಿಲ್ಪಗಳನ್ನು (ಯಾಳಿ ಆಕೃತಿಗಳು) ಒಂದರ ಮೇಲೆ ಒಂದು ಇಟ್ಟಂತೆ ಈ ಪಟ್ಟಿಕೆ ಕಾಣುವುದು. ಅವೆಲ್ಲವುಗಳ ಮಧ್ಯದಲ್ಲಿ ವೃತ್ತಾಕಾರದಿಂದ ಕೂಡಿದ ಅರ್ಧಕಂಬಗಳ ರಚನೆಯನ್ನು ಮಾಡಲಾಗಿದೆ. ದ್ವಾರಬಂಧದ ಮೇಲ್ಭಾಗವು ಮುಂಚಾಚಿದ್ದು ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಈ ಶಿಲ್ಪಕ್ಕೆ ಮುಕ್ಕೊಡೆಯಂತೆ ಕಾಣುವ ಮುಂಚಾಚಿದ ರಚನೆಯನ್ನು ಮಾಡಲಾಗಿದೆ. ಉತ್ತರಾಂಗದಲ್ಲಿ ಶಿಖರ ಪಟ್ಟಿಕೆಗಳನ್ನು ರಚಿಸಲಾಗಿದ್ದು, ಅವುಗಳಲ್ಲಿ ಮುಖ್ಯವಾಗಿ ದ್ರಾವಿಡ, ನಾಗರ ಮತ್ತು ವೇಸರ ಶೈಲಿ ಶಿಖರಗಳ ಮಾದರಿಗಳನ್ನು ಕೆತ್ತಲಾಗಿದೆ. ಬಾಗಿಲವಾಡದ ಕೆಳಭಾಗ ಅಂದರೆ ಪೇದ್ಯ ಭಾಗದಲ್ಲಿ ನೃತ್ಯ ನಿರತವಾದ ಉಬ್ಬುಶಿಲ್ಪಗಳಿವೆ. ಅವುಗಳ ಪಕ್ಕದಲ್ಲಿ ಇನ್ನಿತರ ಚಿಕ್ಕ ಚಿಕ್ಕ ಶಿಲ್ಪಗಳನ್ನು ಕಂಡರಿಸಲಾಗಿದೆ. ಅವುಗಳಲ್ಲಿ ಹೆಚ್ಚಿನವು ಸ್ತ್ರೀಯರಿಗೆ ಸಂಬಂಧಿಸಿದವುಗಳಾಗಿವೆ. ಅವುಗಳನ್ನು ಚಿಕ್ಕದಾಗಿ ಚೆಂದವಾಗಿ ಕೆತ್ತಲಾಗಿರುವುದನ್ನು ಕಾಣಬಹುದು. ಅವು ಸಹ ವಿವಿಧ ಭಂಗಿಯ ನೃತ್ಯದಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಗರ್ಭಗೃಹದ ಹೊಸ್ತಿಲು ಚಿತ್ತಾಕರ್ಷಕವಾಗಿದ್ದು ಅದರಲ್ಲಿರುವ ಮಧ್ಯದ ಭಾಗವು ಮುಂಚಾಚಿದಂತೆ ಕಾಣುವುದು.

ಪೂರ್ವ ಮತ್ತು ಪಶ್ಚಿಮಾಭಿಮುಖ ಗರ್ಭಗೃಹಗಳಲ್ಲಿದ್ದ ಪ್ರಾಚೀನ ವಿಗ್ರಹಗಳು ಇಲ್ಲಿಯವರೆಗೂ ಉಳಿದುಬಂದಿಲ್ಲ. ಹಾಗಾಗಿ ಅಳಿದುಳಿದ ಅವಶೇಷಗಳನ್ನಷ್ಟೇ ಪೂಜಿಸಲಾಗುತ್ತದೆ. ಪಶ್ಚಿಮಾಭಿಮುಖ ಗರ್ಭಗೃಹದಲ್ಲಿ ಆದಿತ್ಯ ಪೀಠವಿದ್ದು ಅದು ತ್ರುಟಿತವಾಗಿದ್ದರಿಂದ ಅದರಲ್ಲಿ ಲಿಂಗವನ್ನಿಟ್ಟು ಪೂಜಿಸಲಾಗುತ್ತಿದೆ. ಪೂರ್ವಾಭಿಮುಖ ಗರ್ಭಗೃಹದಲ್ಲಿ ಲಿಂಗವನ್ನಿಡಲಾಗಿದೆ.

ಈ ಗರ್ಭಗೃಹಗಳಿಗಿರುವ ಬಾಗಿಲವಾಡಗಳು ಸಹ ಮುಖ್ಯಗರ್ಭಗೃಹದ ಬಾಗಿಲವಾಡದಂತೆ ಚಿತ್ತಾಕರ್ಷಕವಾಗಿವೆ. ಆದರೆ ಪಶ್ಚಿಮಾಭಿಮುಖ ಗರ್ಭಗೃಹದ ಬಾಗಿಲವಾಡದಲ್ಲಿರುವ ಉತ್ತರಾಂಗದಲ್ಲಿ ಶಿಖರ ಪಟ್ಟಿಕೆಗಳ ಬದಲಾಗಿ ಬ್ರಹ್ಮ ವಿಷ್ಣು ಮತ್ತು ಮಹೇಶ್ವರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದ್ದರೆ, ಪೂರ್ವಾಭಿಮುಖ ಗರ್ಭಗೃಹದ ಬಾಗಿಲವಾಡದ ಉತ್ತರಾಂಗದಲ್ಲಿ ನಾಗರ ಮಾದರಿಯ ಶಿಖರ ಪಟ್ಟಿಕೆಗಳನ್ನು ಕೆತ್ತಲಾಗಿದೆ.

ಮುಖ್ಯ ಗರ್ಭಗೃಹದ ಅಂತರಾಳವು ಬರಿದಾಗಿದ್ದು, ಅದರ ಗೋಡೆಯಲ್ಲಿರುವ ಅರ್ಧಕಂಬಗಳ ದಂಡಾಗ್ರದಲ್ಲಿ ಕೆತ್ತನೆಯನ್ನು ಮಾಡಲಾಗಿದೆ. ಉತ್ತರ, ಪೂರ್ವ ಮತ್ತು ಪಶ್ಚಿಮಾಭಿಮುಖ ಗರ್ಭಗೃಹಗಳಿಗಿರುವ ಅಂತರಾಳಗಳು ಸಹ ಬರಿದಾಗಿವೆ. ಅವು ತೆರೆದ ಅಂತರಾಳಗಳಾಗಿದ್ದು ಅವುಗಳ ಇಕ್ಕೆಲಗಳಲ್ಲಿ ಅರ್ಧಕಂಬಗಳಿರುವುದನ್ನು ಗಮನಿಸಬಹುದು. ಅಲ್ಲದೇ ದಂಡಾಗ್ರದ ಮೂಲೆಯ ಭಾಗಗಳನ್ನು ಕೊರೆದು ತೆಗೆಯಲಾಗಿದೆ. ಅರ್ಧಕಂಬಗಳಲ್ಲಿ ಕಪೋತ ಪಟ್ಟಿಕೆ, ಕಂಪ ಹಾಗೂ ಅರ್ಧ ಬೋಧಿಗೆಗಳ ರಚನೆ ಕಾಣುತ್ತೇವೆ.

ಇಲ್ಲಿರುವ ಮೂರು ಗರ್ಭಗೃಹಗಳು ಅಂತರಾಳಗಳನ್ನೊಳಗೊಂಡಿದ್ದು ಅವುಗಳಿಗೆ ವಿಶಾಲವಾದ ನವರಂಗವಿದೆ. ಅದು ತೆರೆದ ನವರಂಗವಾಗಿದೆ. ಇಲ್ಲಿರುವ ಕಂಬಗಳು ಸಹ ಸುಂದರವಾದ ಕೆತ್ತನೆಯನ್ನು ಹೊಂದಿವೆ. ಅವು ಉಪಾನ, ಪೀಠ, ಪಾದ, ದಂಡಾಗ್ರ ಹಾಗೂ ಬೋಧಿಗೆಗಳನ್ನು ಒಳಗೊಂಡಿದ್ದು ಕಂಬಗಳ ಉಪಾನ ಭಾಗದಲ್ಲಿ ತ್ರಿಪಟ್ಟ ಕುಮುದ ಹಾಗೂ ಗಳ ಭಾಗಗಳನ್ನು ಕೆತ್ತಲಾಗಿದೆ. ಅಲ್ಲದೇ ಅದೇ ಭಾಗದಲ್ಲಿ ಕಪೋತ (ಹಲ್ಲಿನ ಪಟ್ಟಿ)ವನ್ನು ಕಂಡರಿಸಲಾಗಿರುವುದನ್ನು ಕಾಣಬಹುದು. ದಂಡಾಗ್ರ ಭಾಗದಲ್ಲಿ ಹದಿನಾರು ಪಟ್ಟಿಕೆಗಳಿಂದ ರಚನೆಗೊಂಡ ವೃತ್ತವಿದೆ. ಅಲ್ಲದೇ ಎಲ್ಲ ಪಟ್ಟಿಕೆಗಳನ್ನು ಸುತ್ತಿಕಟ್ಟಿದಂತೆ ಅಡ್ಡಲಾಗಿ ರಚಿಸಲಾಗಿರುವ ಇನ್ನೊಂದು ಪಟ್ಟಿಕೆಯನ್ನು ಇಲ್ಲಿರುವ ಕಂಬಗಳಲ್ಲಿ ಕಾಣುತ್ತೇವೆ. ದಂಡಾಗ್ರದ ಮೇಲಿರುವ ಭಾಗವು ಚೌಕಾಕರವಿದ್ದು ಅದರ ಮೇಲಿರುವ ಘಟ ಭಾಗದಲ್ಲಿ ಕಮಲ ಪುಷ್ಪಗಳ ರಚನೆಯಿರುವುದು. ಅವುಗಳನ್ನು ಒಂದಕ್ಕೊಂದು ಉಲ್ಟಾ ಜೋಡಿಸಿ ಇಟ್ಟಂತೆ ಈ ಅಲಂಕರಣೆಯು ಕಾಣುವುದು. ಕಂಬಗಳಲ್ಲಿ ಕಪೋತ ಪಟ್ಟಿ, ವೃತ್ತಫಲಕ, ಕಂಪಗಳ ರಚನೆ ಇದೆ. ಅಲ್ಲದೇ ಅವುಗಳಲ್ಲಿ ತರಂಗ ಮಾದರಿಯ ಬೋಧಿಗೆಗಳಿರುವುದನ್ನು ನೋಡಬಹುದು. ಚೌಕಾಕಾರ(ಪಾದಭಾಗ)ದಲ್ಲಿ ಮಾತ್ರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಬಹುಶಃ ಇದರಲ್ಲೊಂದು ಸಮಭಂಗಿಯಲ್ಲಿ ಚಿತ್ರಿತವಾಗಿರುವ ಲಕ್ಷ್ಮೀ ಶಿಲ್ಪವು ಇದೆಯೆಂದು ಭಾಸವಾಗುತ್ತದೆ.

ನವರಂಗದ ಛತ್ತಿನಲ್ಲಿ ಆಳವಾದ ಭುವನೇಶ್ವರಿ ರಚನೆಯಿದ್ದು ಅದು ಕಮಲ ಪುಷ್ಪ ಮಾದರಿಯದ್ದು. ಅಲ್ಲದೇ ನಾಲ್ಕುಕಂಬಗಳನ್ನೊಳಗೊಂಡ ನೆಲಹಾಸದಲ್ಲಿ ಎತ್ತರದ ಕಟ್ಟೆ (Rised

Platform)ಇದೆ. ವಿಶೇಷವಾಗಿ ಗಮನಿಸಬಹುದಾದ ಎರಡು ಶಿಲ್ಪಗಳು ನವರಂಗದಲ್ಲಿದ್ದು ಅವು ನಾಗದೇವತೆಗೆ ಸಂಬಂಧಿಸಿದವುಗಳಾಗಿವೆ. ಸ್ತ್ರೀಪುರುಷ ನಾಗದೇವತೆಯ ಬಿಡಿಶಿಲ್ಪ ಹಾಗೂ ಒಂದೇ ಕಲ್ಲಿನಲ್ಲಿ ಸುಮಾರು ಮೂರು ಅಡಿ ಎತ್ತರದ ಏಳು ಹೆಡೆಯ ಸರ್ಪ ಅಥವಾ ನಾಗಶಿಲ್ಪವು ಮೊದಲ ನೋಟದಲ್ಲಿಯೇ ಮನಸೂರೆಗೊಳ್ಳುತ್ತದೆ. ತೆರೆದ ನವರಂಗಕ್ಕೆ ಕಕ್ಷಾಸನವಿದ್ದು ಅದು ಸುಮಾರು ನಾಲ್ಕು ಅಡಿ ಎತ್ತರವಾಗಿದೆ. ಅದರಲ್ಲಿ ಮೂರು ಕಂಬಗಳಿದ್ದು ಅವು ಗಿಡ್ಡನೆಯ ನಿಲುವುಗಳಿಂದ ಕೂಡಿದವುಗಳು. ಅವು ಗಂಟೆ ಆಕಾರದ ರಚನೆಯನ್ನು ಹೊಂದಿವೆ. ಈ ದೇವಾಲಯಕ್ಕೆ ಮುಖಮಂಟಪವಿದ್ದು ಅದಕ್ಕೆ ಛತ್ತನ್ನು (ಛಾವಣಿ) ನಿರ್ಮಿಸಲಾಗಿದೆ. ಮುಖ ಮಂಟಪಕ್ಕೆ ಸೋಪಾನಗಳನ್ನು ಹಾಗೂ ಹಸ್ತಿಫಲಕ ಶಿಲ್ಪಗಳನ್ನು ಅಳವಡಿಸಲಾಗಿದೆ.

ದೇವಾಲಯದ ಹೊರಗೋಡೆ ಸರಳ ರಚನೆಯಿಂದ ಕೂಡಿದೆ. ಅಲ್ಲದೇ ಅದರಲ್ಲಿ ಅರ್ಧಕಂಬಗಳ ರಚನೆಯನ್ನು ಮಾಡಲಾಗಿದೆ. ದೇವಾಲಯಕ್ಕಿರುವ ಭಿತ್ತಿ ಭಾಗದಲ್ಲಿ ಪ್ರಸ್ತರ, ಕಂಪ ಹಾಗೂ ಶಿಖರ ಪಟ್ಟಿಕೆಗಳಿವೆ. ಶಿಖರ ಮಾತ್ರ ಹೆಚ್ಚಿನ ದುರಸ್ತಿಗೆ ಒಳಗಾಗಿದೆ. ದೇವಾಲಯದ ಅಧಿಷಾ«ನ ಭಾಗವು ಸರಳ ರಚನೆಯಿಂದ ಕೂಡಿದ್ದು ಅದರಲ್ಲಿ ಉಪಾನ, ವೃತ್ತ ಕುಮುದ ಹಾಗೂ ಗಳ ಭಾಗಗಳನ್ನು ಕಾಣುತ್ತೇವೆ.

ಇದೊಂದು ತ್ರಿಕೂಟ ರಚನೆ. ಜೊತೆಗೆ ಬಹುಶಃ ತ್ರೈಪುರುಷ ದೇವಾಲಯವು ಆಗಿದ್ದಿರಬಹುದಾದ ಸಾಧ್ಯತೆಗಳಿವೆ. ಇದಕ್ಕೆ ಪುಷಿ«ದಾಯಿಕ ಸಂಗತಿಗಳೆಂದು ಪರಿಗಣಿಸಿ ಹೇಳುವುದಾದರೆ ಪೂರ್ವಾಭಿಮುಖ ಗರ್ಭಗೃಹದಲ್ಲಿ ಆದಿತ್ಯಪೀಠ ಅಥವಾ ಕುದುರೆಗಳ ಲಾಂಛನವಿರುವ ಪೀಠವನ್ನು ಕಾಣುತ್ತೇವೆ. ಆದರೆ ಅದರ ಮೇಲೆ ತೃಟಿತವಾದ ಲಿಂಗವನ್ನಿಟ್ಟು ಅದನ್ನು ಬೇರೆ ತರಹದಲ್ಲಿ ಬದಲಾಯಿಸಲಾಗಿದೆ. ತ್ರೈಪುರುಷ ಎಂದು ಕರೆಯಬಹುದಾದ ದೇವಾಲಯದಲ್ಲಿ ಸೂರ್ಯನಿಗೆ ಸಂಬಂಧಿಸಿದ ಅವಶೇಷಗಳು ಕಡ್ಡಾಯವೆಂಬಂತೆ ಇರುತ್ತವೆ. ಇಂಥ ಶಿಲ್ಪಗಳು ತ್ರೈಪುರುಷ ದೇವಾಲಯದಲ್ಲಿ ಮುಖ್ಯಪಾತ್ರವನ್ನು ವಹಿಸುತ್ತವೆ ಎಂಬುದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವ ಸಂಗತಿಗಳಾಗಿವೆ.

ಗುಡಿಯ ಆವರಣದಲ್ಲಿಯೇ ಉತ್ತರಾಭಿಮುಖವಾದ ಇನ್ನೊಂದು ಕಟ್ಟಡವಿದ್ದು ಅದರ ಬಗೆಗೆ ಹೆಚ್ಚಿನ ಜಿಜ್ಞಾಸೆಗಳು ಹುಟ್ಟಿಕೊಳ್ಳುತ್ತವೆ. ಇದೊಂದು ತ್ರೈಪುರುಷ ದೇವಾಲಯವಾಗಿದ್ದರಿಂದ ಇಲ್ಲೊಂದು ಗುರುಕುಲವು ಇದ್ದಿರುವ ಸಾಧ್ಯತೆಗಳಿವೆ. ಈ ಹಿನ್ನಲೆಯಲ್ಲಿ ಬಹುಶಃ ಅಭಿಪ್ರಾಯ ಪಡುಬಹುದಾದ ವಿಚಾರಾರ್ಹ ಸಂಗತಿಯೆಂದರೆ ಅದು ಪ್ರಾಚೀನ ಮಠ ಶಾಲೆ ಆಗಿದ್ದಿರಬಹುದೇ? ಎಂಬ ಊಹೆಗೆ ಅವಕಾಶವಿದೆ. ಪ್ರಸ್ತುತ ಈ ಸ್ಥಳದಲ್ಲಿಯೇ ಪಾಠ ಪ್ರವಚನಗಳು ನಡೆಯುತ್ತಿದ್ದಿರಬೇಕು. ವ್ಯಕ್ತಪಡಿಸಿರುವ ಅನಿಸಿಕೆಗಳು ಊಹಾತ್ಮಕವಾದರೂ ಅದಕ್ಕೆ ಪುಷ್ಟಿ ನೀಡುವ ನಂಬಬಹುದಾದ ಅವಶೇಷಗಳು ಈವರೆಗೂ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು. ಆದರೆ ಇಂಥ ಹೇಳಿಕೆಗಳಿಗೆ ಹೆಚ್ಚಿನ ಖಚಿತತೆ ನೀಡುವ ಶಾಸನಗಳು ಕಂಡುಬಂದಿದ್ದರೆ ಇನ್ನು ಪ್ರಬಲ ಸಾಕ್ಷಿಗಳಾಗಿ ಸಾಬೀತಾಗುತ್ತಿದ್ದವು. ಇಂಥ ಬೆಲೆಯುಳ್ಳ ಇತಿಹಾಸ ಮೌಲ್ಯದಿಂದ ಕೂಡಿರುವ ಈ ಪ್ರಾಚೀನ ಮಹತ್ವದ ಇಂಥ ಕಟ್ಟಡವನ್ನು ಇಂದು

ಸಾರ್ವಜನಿಕ ಕೆಲಸಕಾರ್ಯಗಳಿಗೆ ಬಳಸಿಕೊಳ್ಳುವ ಸಾಮಾನ್ಯ ಕಟ್ಟಡವನ್ನಾಗಿ ಪರಿವರ್ತಿಸಲಾಗಿರುವುದು ದುರಂತವೇ ಸರಿ.

ಈ ದೇವಾಲಯಕ್ಕೆ ಸಂಬಂಧಿಸಿದ ಅಥವಾ ಗ್ರಾಮಕ್ಕೆ ಸಂಬಂಧಪಟ್ಟ ವಿವರ ನೀಡುವ ಒಂದಾದರು ಶಾಸನವು ಕೂಡಾ ಈವರೆಗೂ ಕಂಡು ಬಂದಿಲ್ಲ. ಹೀಗಾಗಿ ಪ್ರಸ್ತುತ ಗ್ರಾಮವು ಪ್ರಾಚೀನ ಐತಿಹಾಸಿಕ ಮಹತ್ವವನ್ನು ಪಡೆದಿದ್ದರೂ ಅದನ್ನು ಸಾಬೀತುಗೊಳಿಸುವ ದೃಢವಾದ ವಿವರಗಳ ಬಗೆಗೆ ಖಚಿತ ಮಾಹಿತಿ ಸಿಗದಿರುವುದು ವಿಷಾದದ ಸಂಗತಿಯಾಗಿದೆ. ತೃಟಿತಗೊಂಡಿರುವ ಸ್ತ್ರೀಯ ಶಿಲ್ಪಗಳು ಈ ಆವರಣದಲ್ಲಿ ಅನಾಥವಾಗಿ ಮಾತ್ರ ಬಿದ್ದಿರುವುದನ್ನು ಇಂದಿಗೂ ಕಾಣುತ್ತೇವೆ.

**ಬೆಳಗುಂದಿ ಬಸವಣ್ಣ ದೇವಾಲಯ**

ಭೀಮಾ ನದಿ ದಂಡೆಯ ಮೇಲಿರುವ ಬೆಳಗುಂದಿ ಗ್ರಾಮದಲ್ಲಿ ಇತಿಹಾಸ ಪ್ರಸಿದ್ಧ ಬಸವಣ್ಣನ ದೇವಾಲಯವಿದೆ. ಗಾತ್ರದಲ್ಲಿ ದೊಡ್ಡದಾದ ಹಾಗೂ ನೋಟದಲ್ಲಿ ಕಲಾತ್ಮಕವಾಗಿ ಕಾಣುವ ಈ ಸುಂದರ ದೇವಾಲಯವು ಹಲವು ಬದಲಾವಣೆಗೆ ಒಳಗಾಗಿರುವುದನ್ನು ಗಮನಿಸಬಹುದು. ಯಾದಗಿರಿ ತಾಲೂಕು ಪರಿಸರದಲ್ಲಿ ಬೆಳಗುಂದಿ ಎಂಬ ಹೆಸರಿನ ಇನ್ನು ಕೆಲವು ಗ್ರಾಮಗಳಿವೆ. ಹಾಗಾಗಿ ಅದರ ಸ್ಪಷ್ಟವಾದ ಗುರುತಿಸುವಿಕೆಯಲ್ಲಿ ಗೊಂದಲವಾಗದಿರಲೆಂದು ಈ ಗ್ರಾಮವನ್ನು ಬಸವಣ್ಣನ ಹೆಸರಿನಿಂದಲೇ ಕರೆಯಲಾಗುತ್ತದೆ. ಹಾಗಾಗಿ ಇದಕ್ಕೆ ಬಸವಣ್ಣನ ಬೆಳಗುಂದಿ ಎಂಬ ಹೆಸರು ರೂಢಿಯಲ್ಲಿದೆಯೆಂದು ಅಭಿಪ್ರಾಯಿಸಲಾಗುತ್ತದೆ.

ಗ್ರಾಮದ ಪಶ್ಚಿಮಭಾಗದಲ್ಲಿರುವ ಬಸವಣ್ಣನ ದೇವಾಲಯವು ವಾಸ್ತುಶಿಲ್ಪ ಅಧ್ಯಯನ ದೃಷ್ಟಿಯಿಂದ ಮಹತ್ವದ ಸ್ಮಾರಕವಾಗಿದೆ. ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾಗಿರುವ ಈ ದೇವಾಲಯವು ಪ್ರದಕ್ಷಣಾ ಪಥವನ್ನು ಹೊಂದಿರುವುದನ್ನು ನೋಡಬಹುದು. ದೇವಾಲಯದ ರಚನೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಬಹುಶಃ ಇದು ಎರಡು ಹಂತಗಳಲ್ಲಿ ನಿರ್ಮಾಣವಾಗಿದ್ದರಬಹುದೇ? ಎಂಬ ಅನುಮಾನಗಳು ಉಂಟಾಗುತ್ತವೆ. ಗರ್ಭಗೃಹ ಹಾಗೂ ಅಂತರಾಳ ಭಾಗಗಳು ಮೊದಲ ಹಂತದಲ್ಲಿ ಅಲ್ಲದೇ ನವರಂಗ ಮತ್ತು ನಂದಿಮಂಟಪ ನಂತರಾವಧಿಯಲ್ಲಿ ರಚನೆಯಾಗಿವೆ ಎಂಬುದನ್ನು ಗುರುತಿಸಬಹುದಾಗಿದೆ. ಪೂರ್ವಾಭಿಮುಖವಾಗಿದ್ದ ಪ್ರವೇಶದ್ವಾರವನ್ನು ಶಾಶ್ವತವಾಗಿ ಮುಚ್ಚಲಾಗಿದ್ದು ಸದ್ಯ ದಕ್ಷಿಣಾಭಿಮುಖವಾಗಿರುವ ಪ್ರವೇಶದ್ವಾರ ಮಾತ್ರ ದೇವಾಲಯಕ್ಕಿದೆ. ಅಲ್ಲದೇ ಉತ್ತರಾಭಿಮುಖ ಪ್ರವೇಶ ದ್ವಾರವುಂಟು. ಆದರೆ ಅದರ ಬಳಕೆ ಮಾತ್ರ ಇದ್ದು ಇಲ್ಲದಂತಾಗಿದೆ. ದೇವಾಲಯಕ್ಕಿರುವ ಎರಡೂ ಪ್ರವೇಶ ದ್ವಾರಗಳಿಗೂ ಹೊಸದಾಗಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಪ್ರಾಚೀನ ಬಾವಿ ಇದ್ದು ಅದರಲ್ಲಿ ಸದಾಕಾಲ ನೀರು ನಿಂತಿರುತ್ತದೆ. ಬಹುಶಃ ಈ ಬಾವಿಯು ಸಹ ದೇವಾಲಯದಷ್ಟೇ ಪ್ರಾಚೀನ ಸ್ಮಾರಕ ಆಗಿರಬಹುದೆಂಬುವುದರಲ್ಲಿ ಯಾವ ಸಂಶಯಗಳಿಲ್ಲ.

ಗರ್ಭಗೃಹ, ತೆರದ ಅಂತರಾಳ, ನವರಂಗ ಹಾಗೂ ನಂದಿ ಮಂಟಪವನ್ನು ಈ ದೇವಾಲಯವು ಹೊಂದಿದೆ. ಗರ್ಭಗೃಹದಲ್ಲಿರುವ ಪ್ರಾಚೀನ ಲಿಂಗವು ನೆಲದಲ್ಲಿ

ಹೂತುಹೋಗಿರುವುದರಿಂದ ಅದರ ರುದ್ರಭಾಗವು ಮಾತ್ರ ಕಾಣುತ್ತದೆ. ಅದರಲ್ಲಿರುವ ಬ್ರಹ್ಮಭಾಗ, ವಿಷ್ಣುಭಾಗ ಹಾಗೂ ಯೋನಿಪೀಠವು ಕಾಣುವುದಿಲ್ಲ. ಗರ್ಭಗೃಹವು ವಿಶಾಲವಾಗಿದ್ದು ಅದರ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ಕೂಡಿರುವುದನ್ನು ಗಮನಿಸಬಹುದು. ಅದರಲ್ಲಿ ವೃತ್ತಾಕಾರ, ಅರ್ಧವೃತ್ತಾಕಾರದ ಬಳ್ಳಿ ಪಟ್ಟಿಕೆ ಮತ್ತು ಚಿಕ್ಕ ಚಿಕ್ಕದಾಗಿರುವ ಉಬ್ಬುಶಿಲ್ಪಗಳ ಪಟ್ಟಿಕೆ ಬಾಗಿಲವಾಡದಲ್ಲಿ ಸುತ್ತಲೂ ಕೆತ್ತಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಉತ್ತರಾಂಗ ಭಾಗದಲ್ಲಿ ಚಿಕ್ಕ ಮಂಟಪಾಕೃತಿಗಳನ್ನು ಕೆತ್ತಲಾಗಿದೆ. ಬಾಗಿಲವಾಡದ ಪೇದ್ಯಭಾಗದ ಇಕ್ಕೆಲಗಳಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳಿದ್ದು ಅವುಗಳನ್ನು ಕೂಡ ಸುಂದರವಾಗಿ ಕಂಡರಿಸಲಾಗಿದೆ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಇರುವ ಅಂತರಾಳದಲ್ಲಿ ಹಲವು ಪ್ರಾಚೀನ ಬಿಡಿಶಿಲ್ಪಗಳಿವೆ. ಅವುಗಳಲ್ಲಿ ಅನಂತಶಯನ ಮತ್ತು ಗಣಪತಿ ಶಿಲ್ಪ ಮುಖ್ಯವಾದವು. ಆದರೆ ಅವು ಸಹ ಭಾಗಶಃ ತೃಟಿತವಾಗಿರುವುದನ್ನು ನೋಡಬಹುದು. ತೆರದ ಅಂತರಾಳಕ್ಕೆ ವೃತ್ತ ಕಂಬಗಳಿಂದ ಕೂಡಿದ ತೋರಣವಿದ್ದು ಅದನ್ನು ಯಾಳಿಗಳಿಂದ ಸುಂದರಗೊಳಿಸಲಾಗಿದೆ. ಆದರೆ ತೋರಣ ಕಂಬಗಳಲ್ಲಿರುವ ಚಿಕ್ಕ ಚಿಕ್ಕ ಉಬ್ಬುಶಿಲ್ಪಗಳು ಮಾತ್ರ ಸವೆದು ಹೋಗಿರುವುದರಿಂದ ಈ ತೋರಣದ ಸೌಂದರ್ಯ ಸ್ವಲ್ಪ ಮಾಸಿದಂತೆ ಕಾಣುವುದು.

ದೊಡ್ಡದಾದ ನವರಂಗವು ದೇವಾಲಯಕ್ಕೆ ಹೆಚ್ಚಿನ ವಿಸ್ತಾರವನ್ನು ತಂದುಕೊಟ್ಟಿದೆ. ಅದರಲ್ಲಿರುವ ಬೃಹದಾಕಾರದ ನಾಲ್ಕು ಕಂಬಗಳು ಕಲ್ಯಾಣ ಚಾಲುಕ್ಯ ಕಾಲದ ನಿರ್ಮಿತಿಗಳು. ಆ ಕಾಲದ ಕಲಾಸೌಂದರ್ಯಕ್ಕೆ ಸಾಕ್ಷಿಯಾಗಿ ನಿಂತಿರುವ ಈ ನಾಲ್ಕು ಕಂಬಗಳು ಸಾಮಾನ್ಯವಾಗಿ ಒಂದೇ ಬಗೆಯ ರಚನಾ ಲಕ್ಷಣ ಹಾಗೂ ಕೆತ್ತನೆಗಳನ್ನು ಹೊಂದಿರುವುದನ್ನು ಗಮನಿಸಬಹುದು. ಕಂಬಗಳಲ್ಲಿ ಪಾದ, ದಂಡ, ದಂಡಾಗ್ರ, ಕಲಶ, ನಕ್ಷತ್ರಾಕಾರದ ಹಾಗೂ ತಟ್ಟೆ ಆಕಾರದ ಫಲಕಗಳನ್ನು ಅಳವಡಿಸಲಾಗಿದೆ. ಕಂಬಗಳಲ್ಲಿರುವ ಚೌಕಾಕಾರ ಬೋಧಿಗೆಗಳು ಹೆಚ್ಚಿನ ಭಾರವನ್ನು ತಡೆಯಲು ಉಪಯೋಗಿಸಿದಂತೆ ತೋರುತ್ತವೆ. ಇಲ್ಲಿರುವ ಕಂಬಗಳನ್ನು ಹಲವು ಕೆತ್ತನೆಗಳಿಂದ ಸುಂದರಗೊಳಿಸಲಾಗಿದ್ದು ಕಂಬಗಳ ದಂಡಾಗ್ರ(ಮಧ್ಯ)ಭಾಗದಲ್ಲಿ ಹದಿನಾರು ಪಟ್ಟಿಕೆಗಳನ್ನು ಕೆತ್ತಲಾಗಿದೆ. ಅಲ್ಲದೇ ಅವುಗಳನ್ನೆಲ್ಲ ಸೇರಿಸಿ ಕಟ್ಟಿದಂತೆ ಅಡ್ಡಲಾಗಿ ಇನ್ನೊಂದು ಅಡ್ಡಪಟ್ಟಿಕೆಯನ್ನು ಕೆತ್ತಲಾಗಿದೆ. ಕಂಬಗಳ ಕಲಶ ಭಾಗದಲ್ಲಿ ಯಾಳಿ ಚಿತ್ರಗಳನ್ನು ಬಿಡಿಸಲಾಗಿದ್ದು ಈ ಕಲಶದ ಮೇಲಿನ ಭಾಗದಲ್ಲಿ ನಕ್ಷಾತ್ರಾಕಾರದ ಫಲಕಗಳನ್ನು ಅಳವಡಿಸಲಾಗಿದೆ. ಒಟ್ಟಾರೆ ಹೇಳುವುದಾದರೆ ಯಾದಗಿರಿ ತಾಲೂಕು ಪರಿಸರದಲ್ಲಿರುವ ಅಳಿದುಳಿದ ದೇವಾಲಯಗಳಲ್ಲಿ ಇಷ್ಟೊಂದು ಕಲಾತ್ಮಕವಾದ ಮತ್ತು ದೊಡ್ಡ ಗಾತ್ರದ ಕಂಬಗಳು ಉಳಿದಿರುವುದು ಈ ದೇವಾಲಯದಲ್ಲಿ ಮಾತ್ರ ಎಂದು ಅಭಿಪ್ರಾಯಿಸಬಹುದು. ಈ ನಾಲ್ಕು ಕಂಬಗಳನ್ನೊಳಗೊಂಡು ನಿರ್ಮಾಣವಾಗಿರುವ ಛತ್ತಿನಲ್ಲಿ ಪುಷ್ಪ ಅಲಂಕರಣೆಯ ವೃತ್ತಾಕಾರದ ಸುಂದರ ಭುವನೇಶ್ವರಿಯನ್ನು ಕಂಡರಿಸಲಾಗಿದೆ. ಇದು ತುಂಬಾ ಆಕರ್ಷಕವಾಗಿ ಕಾಣುತ್ತದೆ. ಈ ದೇವಾಲಯಕ್ಕೆ ನವರಂಗದ ಮೂಲಕವು ಪ್ರವೇಶ ಕಲ್ಪಿಸಲಾಗಿದೆ. ಇದನ್ನು ಸಹ ತೋರಣ ಕಂಬಗಳಿಂದ ಅಲಂಕರಣೆ ಮಾಡಲಾಗಿರುವುದನ್ನು ಗಮನಿಸಬಹುದು.

ದೇವಾಲಯಕ್ಕೆ ಸಂಬಂಧಿಸಿದಂತೆ ಮತ್ತೊಂದು ಪ್ರಮುಖ ವಿಷಯವೆಂದರೆ ನವರಂಗದಲ್ಲಿರುವ ನಂದಿಶಿಲ್ಪ. ಅಖಂಡವಾದ ಕಪು¡Œಕಲ್ಲಿನಲ್ಲಿ ಕೆತ್ತಿರುವ ಈ ನಂದಿಶಿಲ್ಪವು ನೋಡಲು ತುಂಬಾ ಆಕರ್ಷಕವಾಗಿ ಕಾಣುವುದು. ಅದನ್ನು ನವರಂಗದಲ್ಲಿ ಇಡಲಾಗಿದ್ದು ನವರಂಗವನ್ನೇ ನಂದಿಮಂಟಪದಂತೆ ಪರಿವರ್ತಿಸಲಾಗಿದೆ. ಸುಮಾರು ಐದು ಅಡಿ ಎತ್ತರ ಹತ್ತು ಅಡಿ ಉದ್ದ ಹಾಗೂ ಮೂರು ಅಡಿ ಅಗಲವಾಗಿರುವ ಈ ನಂದಿಶಿಲ್ಪವು ಶಿಲ್ಪಕಾರನ ಕೈಚಳಕಕ್ಕೆ ಹಿಡಿದ ಗನ್ನಡಿಯಂತಿದೆ. ಇಂಥದೊಂದು ಬೃಹತ್ತಾದ ಮತ್ತು ಸುಂದರ ನಂದಿಶಿಲ್ಪವು ಯಾದಗಿರಿ ಜಿಲ್ಲೆಯ ಯಾವೊಂದು ಗ್ರಾಮದಲ್ಲಿ ಕಂಡುಬರುವುದಿಲ್ಲ. ನವರಂಗದಲ್ಲಿ ಗೂಡುಗಳಿದ್ದು ಅವು ಬರಿದಾಗಿವೆ. ಗೋಡೆಯ(ಅರ್ಧ) ಕಂಬಗಳಲ್ಲಿ ಪಾದ, ದಂಡ, ದಂಡಾಗ್ರ ಹಾಗೂ ಅರ್ಧಕಲಶ ಭಾಗಗಳನ್ನು ಕೆತ್ತಲಾಗಿದೆ.

ಎತ್ತರದ ಜಗತಿಯು ಈ ದೇವಾಲಯಕ್ಕಿದ್ದು ಅದರ ಅಧಿಷಾ«ನ ಭಾಗದಲ್ಲಿ ಉಪಾನ, ಅಗಲವಾದ ಗಳ ಹಾಗೂ ಸಪಾಟಾಗಿರುವ ಕಪೋತ ಭಾಗಗಳಿವೆ. ಇದು ನಕ್ಷತ್ರಾಕಾರದ ತಲವಿನ್ಯಾಸ ಹೊಂದಿರುವುದು. ಅಧಿಷಾ«ನದಲ್ಲಿ ಉಪಾನ, ಗಳ, ಚೂಪಾದ ಕುಮುದು ಮತ್ತು ಕಪೋತ ಭಾಗವನ್ನು ಕೆತ್ತಲಾಗಿದೆ. ಆದರೆ ಅದರಲ್ಲಿರುವ ಕೆಲವು ಭಾಗಗಳು ತೃಟಿತವಾಗಿದ್ದು ಅಳಿದುಳಿದ ಭಾಗಗಳಿಂದ ಮಾತ್ರ ಅಧಿಷಾ«ನದ ವಿವರಗಳನ್ನು ಗುರುತಿಸಬಹುದು. ಈ ತರಹದ ಅಧಿಷಾ«ನ ರಚನೆಯು ಯಾದಗಿರಿ ತಾಲೂಕಿನಲ್ಲಿರುವ ಇನ್ನಿತರ ಯಾವುದೇ ಗ್ರಾಮಗಳಲ್ಲಿರುವ ದೇವಾಲಯಗಳಲ್ಲಿ ಕಂಡುಬರುವುದಿಲ್ಲ. ಯರಗೋಳದಲ್ಲಿರುವ ಕಲ್ಲಪ್ಪ ಮುತ್ಯಾನ(ಕಲ್ಮೇಶ್ವರ) ಗುಡಿಯ ಅಧಿಷಾ«ನ ಇದೇ ಮಾದರಿಯದ್ದಿರಬಹುದು. ಆದರೆ ಆ ದೇವಾಲಯದ ಅಧಿಷಾ«ನವು ಸಹ ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತುಹೋಗಿದ್ದರಿಂದ ಸ್ಪಷ್ಟವಾದ ಅಭಿಪ್ರಾಯ ಹೊಂದುವುದು ಕಷ್ಟ.

ದೇವಾಲಯದ ಮುಂಭಾಗ(ಪೂರ್ವ)ದಲ್ಲಿ ಎರಡು ಸ್ತಂಭಗಳಿವೆ. ಅವುಗಳ ಮೇಲೆ ಕೆತ್ತಿರುವ ಶಾಸನಗಳು ಈ ವರೆಗೂ ಉಳಿದುಕೊಂಡಿರುವುದನ್ನು ಗಮನಿಸಬಹುದು. ಈ ಕಂಬಗಳ ನಾಲ್ಕು ಕಡೆಯಲ್ಲಿಯೂ ಶಾಸನ ಪಠ್ಯವನ್ನು ಕಂಡರಿಸಲಾಗಿದೆ. ಕಲ್ಯಾಣದ ಚಾಲುಕ್ಯರಸ ಇಮ್ಮಡಿ ಜಯಸಿಂಹ ಅಥವಾ ಜಗದೇಕಮಲ್ಲನ ಬಗೆಗೆ ಇದು ವಿವರ ನೀಡುತ್ತದೆ. ಜಗದೇಕಮಲ್ಲನು ಪೊಟ್ಟಳಕೆರೆಯ ನೆಲವೀಡಿನಿಂದ ರಾಜ್ಯವಾಳುತ್ತಿದ್ದನು. ಆತನ ಮಹಾಸಾಮಂತರಾದ ಚಟ್ಟರಸ ಮತ್ತು ಬರ್ಮರಸನು ಚಕ್ರವರ್ತಿಯ ಅನುಮತಿ ಪಡೆದು ನೀಡಿರುವ ದಾನದತ್ತಿಯನ್ನು ಉಲ್ಲೇಖಿಸುತ್ತದೆ. ಇದೇ ಶಾಸನದಲ್ಲಿ ವಿವರಿಸಿರುವಂತೆ ಬೆಳಗುಂದಿ ಗ್ರಾಮವು ಪ್ರಮುಖ ಬ್ರಹ್ಮಪುರಿಯಾಗಿದ್ದಲ್ಲದೇ ಈ ಪರಿಸರದಲ್ಲಿ ಹೆಚ್ಚಿನ ಮಹತ್ವ ಪಡೆದಿತ್ತೆಂಬುದು. ಇಲ್ಲಿರುವ ಬ್ರಹ್ಮೇಶ್ವರ ದೇವರಿಗೆ, ಸ್ಥಳೀಯ ತಪೋಧನರಿಗೆ, ಹಾಗೂ ವಿದ್ಯಾರ್ಥಿಗಳಿಗೆ ದಾನ ನೀಡುವ ಸಂದರ್ಭದಲ್ಲಿ ಇಲ್ಲಿದ್ದ ಸಾಮಂತರು ಗೌತಮ ಪಂಡಿತನ ಕಾಲ್ತೊಳೆದು ಕೆಲವು ಭೂದತ್ತಿಗಳನ್ನು ನೀಡಿದರೆಂಬ ಉಲ್ಲೇಖಗಳಿವೆ. ಅಲ್ಲದೇ ಅವರು ಕತ್ತಿವಿದ್ಯೆಯಲ್ಲಿ ಪರಿಣಿತರು ಹಾಗೂ ಶೂರರು ಆಗಿದ್ದರು ಎಂದು ವಿವರಿಸುತ್ತದೆ. ಈ ಶಾಸನದ ವಿವರಗಳಿಂದ ತಿಳಿದುಬರುವ ಸಂಗತಿಗಳೆಂದರೆ ಶಾಸನದಲ್ಲಿ ಉಲ್ಲೇಖಿತನಾಗಿರುವ ಜಗದೇಕಮಲ್ಲನು ಇನ್ನು ಮುಖ್ಯರಾಜನ

ಪಟ್ಟಾಧಿಕಾರಕ್ಕೆ ಬಂದಿರಲಿಲ್ಲ ಎಂಬುದು. ಕಾರಣ ಆವನ ಪೊಟ್ಟಲಕೆರೆ ನೆಲವೀಡಿನಿಂದ ಆಳುತ್ತಿದ್ದಿರುವ ವಿವರ ಇದರಲ್ಲಿದೆ. ಬಹುಶಃ ಸತ್ಯಾಶ್ರಯ ಇರಿವಬೆಡಂಗನೇ ಕಲ್ಯಾಣದಲ್ಲಿದ್ದ ಗದ್ದುಗೆಯ ಮುಖ್ಯ ಅರಸನಾಗಿದ್ದ. ಆದರೂ ಯುದ್ಧಪ್ರಿಯನಾದ ಜಗದೇಕಮಲ್ಲನು ಹೆಚ್ಚಿನ ಪ್ರಭಾವ ಹೊಂದಿ ರಾಜನಷ್ಟೇ ಪ್ರಭಾವಶಾಲಿಯಾಗಿದ್ದ ಎಂಬುದು ಮುಖ್ಯ ಸಂಗತಿ. ಹೀಗಾಗಿ ಸಾಮಂತರು ಆತನನ್ನೇ ಶಾಸನದಲ್ಲಿ ಪ್ರಮುಖ ವ್ಯಕ್ತಿಯೆಂಬಂತೆ ಸಂಬೋಧಿಸಿ ದಾನ-ದತ್ತಿಗಳನ್ನು ನೀಡಿದ್ದಾರೆ. ಇಂಥ ವಿವರಗಳು ಆ ಕಾಲದ ಶಾಸನದಲ್ಲಿ ವ್ಯಕ್ತವಾಗಿವೆ. ಈ ಶಾಸನದ ಲಿಪಿವಿನ್ಯಾಸ ಗಮನಿಸಿದರೆ ಕಲ್ಯಾಣದ ಚಾಲುಕ್ಯರ ಆಡಳಿತದ ಪ್ರಾರಂಭ ವರ್ಷಗಳಲ್ಲಿ ಅದು ರಚನೆಯಾಗಿರಬಹುದೆಂದು ಅಭಿಪ್ರಾಯಿಸಬಹುದಾಗಿದೆ. ಇಲ್ಲಿರುವ ಶಾಸನಗಳ ರಚನಾ ವಿನ್ಯಾಸ ಹಾಗೂ ಕಾಲಮಾನದ ಹಿನ್ನೆಲೆಯಲ್ಲಿ ದೇವಾಲಯದ ನಿರ್ಮಾಣ ಕುರಿತ ಅದರ ಕಾಲವನ್ನು ಸ್ಪಷ್ಟವಾಗಿ ಗುರುತಿಸುವುದಾದರೆ ಅದು ಸಹ ರಾಷ್ಟ್ರಕೂಟರ ಆಡಳಿತದ ಕೊನೆಯ ಘಟ್ಟದಲ್ಲಿ ಕಟ್ಟಲ್ಪಟ್ಟಿದೆ ಎಂಬುದರಲ್ಲಿ ಅನುಮಾನಗಳಿಲ್ಲ. ಬ್ರಹ್ಮಪುರಿಯಾಗಿದ್ದ ಬೆಳಗುಂದಿಯಲ್ಲಿ ರಚನೆಯಾಗಿರುವ ಈ ದೇವಾಲಯವು ಬ್ರಹ್ಮೇಶ್ವರನೆಂಬ ಹೆಸರಿನಿಂದ ತುಂಬಾ ಪ್ರಸಿದ್ಧಿ ಪಡೆದಿತ್ತು. ಕಾಲಾನಂತರ ಅದರ ಹೆಸರು ಬದಲಾಗಿ ಬಸವಣ್ಣ ಅಥವಾ ನಂದಿದೇವಾಲಯವೆಂದು ಬದಲಾವಣೆಗೊಂಡಿರುವುದು. ಕಲ್ಯಾಣದ ಚಾಲುಕ್ಯರು ತಮ್ಮ ಆರಾಧ್ಯದೈವ ಮತ್ತು ರಾಜಲಾಂಛನವಾಗಿದ್ದ ನಂದಿ(ಬಸವಣ್ಣ)ಗೆ ವಿಶೇಷ ಮಹತ್ವ ನೀಡಿ ಇಂಥ ಭವ್ಯವಾದ ದೇವಾಲಯ ಕಟ್ಟಲು ಸಾಮಂತರುಗಳಿಗೆ ಪ್ರೋತ್ಸಾಹ ನೀಡಿರುವ ಸಾಧ್ಯತೆಗಳಿವೆ.

### ಕೋಡಾಲ–ರಾಮಲಿಂಗೇಶ್ವರ ದೇವಾಲಯ

ಗ್ರಾಮದ ನಡುವೆ ಎರಡು ಪ್ರಾಚೀನ ದೇವಾಲಯಗಳಿಗಿರುವ ಆವರಣ ಮಾತ್ರ ಒಂದೆ. ರಾಮಲಿಂಗೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು ಇದೊಂದು ತ್ರಿಕೂಟರಚನೆಯಾಗಿತ್ತು. ಆದರೆ ಸದ್ಯ ಒಂದು ಗರ್ಭಗೃಹ ಹಾಗೂ ಅದಕ್ಕೆ ಹೊಂದಿಕೊಂಡಿರುವ ಅಂತರಾಳ ಹಾಗೂ ಕ್ಷೀಣಿಸಿರುವ ನವರಂಗ ಮಂಟಪ ಮಾತ್ರ ಉಳಿದಿರುವುದನ್ನು ಕಾಣುತ್ತೇವೆ. ಈ ಮೊದಲು ರಾಮಲಿಂಗೇಶ್ವರ ಗುಡಿಯು ಸಾಲಾಗಿ ಮೂರು ಗರ್ಭಗೃಹಗಳನ್ನು ಹೊಂದಿದ್ದ ದೇವಾಲಯವಾಗಿತ್ತು. ಆದರೆ ಸದ್ಯ ರಾಮಲಿಂಗೇಶ್ವರ ಹಾಗೂ ಶಂಕರಲಿಂಗೇಶ್ವರ ಎಂದು ಕರೆಯಲ್ಪಡುವ ಎರಡು ಗರ್ಭಗೃಹಗಳು ಮಾತ್ರ ಉಳಿದುಕೊಂಡಿರುವುದನ್ನು ಗಮನಿಸಬಹುದು. ಅವುಗಳೆರಡರ ಮಧ್ಯದಲ್ಲಿದ್ದ ಗರ್ಭಗೃಹ ಹಾಗೂ ಅಂತರಾಳ ಬಹುಶಃ ಬಿದ್ದುಹೋಗಿರಬಹುದು. ಆದರೆ ಅದಕ್ಕೆ ಸಂಬಂಧಿಸಿದ ಯಾವುದೇ ಕುರುಹುಗಳೇ ಇಂದು ಇಲ್ಲದಂತಾಗಿವೆ. ಇವುಗಳನ್ನೆಲ್ಲ ಒಳಗೊಂಡ ವಿಶಾಲವಾದ ನವರಂಗ ಮಂಟಪ ಈ ದೇವಾಲಯಕ್ಕಿತ್ತು. ಆದರೆ ಅದು ಸಹ ತೃಟಿತಗೊಂಡಿರುವುದನ್ನು ಗಮನಿಸಬಹುದು. ಅಳಿದುಳಿದ ಕೆಲವು ಭಾಗಗಳು ಮಾತ್ರ ಉಳಿದುಕೊಂಡಿವೆ. ಅಂಥ ಕೆಲವು ಅವಶೇಷಗಳನ್ನು ಈವರೆಗೂ ಗುಡಿಯ ಮುಂಭಾಗದಲ್ಲಿ ಕಾಣುತ್ತೇವೆ.

ರಾಮಲಿಂಗೇಶ್ವರ ದೇವಾಲಯವೆಂದು ಕರೆಯಲ್ಪಡುವ ಗರ್ಭಗೃಹದಲ್ಲಿ ಪ್ರಾಚೀನವಾದ ಲಿಂಗ, ಮುರಿದು ಬಿದ್ದಿರುವ ವಿಷ್ಣುಶಿಲ್ಪವಿದೆ. ಅಂತರಾಳದಲ್ಲಿ ಭಗ್ನಗೊಂಡಿರುವ ನಂದಿಶಿಲ್ಪಗಳಿವೆ.

ಸಂಬಂಧಿಸಿದ ಗರ್ಭಗೃಹ ಹಾಗೂ ಅಂತರಾಳಗಳ ಬಾಗಿಲವಾಡಗಳು ಸರಳ ರಚನೆಯಿಂದ ಕೂಡಿದ್ದು ಅವುಗಳಿಗಿರುವ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಬಾಗಿಲವಾಡಗಳ ಕೆಳಭಾಗದಲ್ಲಿ ಉಬ್ಬುಶಿಲ್ಪಗಳ ಬದಲಾಗಿ ಪೂರ್ಣಕುಂಭದ ಚಿತ್ರಗಳನ್ನು ಕಂಡರಿಸಿದ್ದನ್ನು ಕಾಣುತ್ತೇವೆ. ಉತ್ತರಾಂಗ ಭಾಗವು ಮುಂಚಾಚಿದ್ದು ಅದು ಸಜ್ಜಾದಂತೆ ಕಾಣುತ್ತದೆ.

ಗರ್ಭಗೃಹ ಮತ್ತು ಅಂತರಾಳಗಳಲ್ಲಿ ಭುವನೇಶ್ವರಿಯನ್ನು ಕೆತ್ತಲಾಗಿದೆ. ಮೂರು ಗರ್ಭಗೃಹಗಳಲ್ಲಿ ಉಳಿದುಕೊಂಡಿರುವ ಇನ್ನೊಂದು ಗರ್ಭಗೃಹವೆಂದರೆ ಶಂಕರಲಿಂಗವೆಂದು ಕರೆದುಕೊಳ್ಳುತ್ತಿರುವ ದೇವಾಲಯ ಮಾತ್ರ. ಇದೊಂದು ತ್ರಿಕೂಟ ರಚನೆ ಆಗಿತ್ತು. ಆದರೆ ಅದರಲ್ಲಿದ್ದ ಒಂದು ಗರ್ಭಗೃಹ ಬಿದ್ದು ಹೋದನಂತರ ಮೊದಲಿದ್ದ ದೇವಾಲಯದ ವಿನ್ಯಾಸ ಸ್ವಲ್ಪ ಮಟ್ಟಿಗೆ ಬದಲಾದಂತೆ ಕಾಣುತ್ತದೆ. ಆದ್ದರಿಂದ ಇದು ಪ್ರತ್ಯೇಕ ದೇವಾಲಯದಂತೆ ಭಾಸವಾಗುವುದು.

ಅಲ್ಲದೇ ಇದನ್ನೇ ಶಂಕರಲಿಂಗ ಹೆಸರಿನ ಇನ್ನೊಂದು ದೇವಾಲಯವೆಂದೇ ತಿಳಿಯಲಾಗಿದೆ. ಶಂಕರಲಿಂಗ ದೇವಾಲಯವು ಗರ್ಭಗೃಹ ಮತ್ತು ಅಂತರಾಳಗಳನ್ನು ಒಳಗೊಂಡಿದ್ದು ಗರ್ಭಗೃಹದಲ್ಲಿ ಅಸ್ಪಷ್ಟವಾಗಿ ಕಾಣುತ್ತಿರುವ ಶಿಲ್ಪವೊಂದನ್ನು ಇಡಲಾಗಿದ್ದು ಅದನ್ನೇ ಶಂಕರಲಿಂಗವೆಂದು ಕರೆಯಲಾಗುತ್ತದೆ. ಈ ದೇವಾಲಯದ ಗರ್ಭಗೃಹ ಹಾಗೂ ಅಂತರಾಳಗಳಿಗಿರುವ ಬಾಗಿಲವಾಡಗಳು ರಾಮಲಿಂಗೇಶ್ವರ ದೇವಾಲಯದ ಬಾಗಿಲವಾಡದಲ್ಲಿರುವ ಲಕ್ಷಣಗಳನ್ನೇ ಹೋಲುತ್ತವೆ.

ರಾಮಲಿಂಗೇಶ್ವರ ಮತ್ತು ಶಂಕರಲಿಂಗೇಶ್ವರ ಎಂದು ಕರೆಸಿಕೊಳ್ಳುತ್ತಿರುವ ಪ್ರಸ್ತುತ ದೇವಾಲಯದ ನವರಂಗವು ಸಂಪೂರ್ಣವಾಗಿ ಕುಸಿದುಹೋಗಿದ್ದು ಅದರ ಅಧಿಷ್ಠಾನ ಭಾಗ ಮಾತ್ರ ಕಾಣುತ್ತದೆ. ಈ ಅಧಿಷ್ಠಾನದಲ್ಲಿ ಸುಂದರವಾದ ಗಜಪಟ್ಟಿಕೆಯ ಉಬ್ಬುಶಿಲ್ಪಗಳು ಹಾಗೂ ಪುಷ್ಪಪಟ್ಟಿಕೆ ಸಾಲನ್ನು ಅತ್ಯಂತ ಮನಮೋಹಕವಾಗಿ ಕೆತ್ತಲಾಗಿದೆ. ಇಂಥ ಪಟ್ಟಿಯನ್ನು ಇಡೀ ದೇವಾಲಯದ ಸುತ್ತಲೂ ಬಿಡಿಸಲಾಗಿದೆ.

ಕ್ಷೀಣಗೊಂಡಿರುವ ನವರಂಗ ಹಾಗೂ ಪ್ರವೇಶ ದ್ವಾರದಲ್ಲಿರುವ ಕಂಬಗಳನ್ನು ಗಮನಿಸಿದರೆ ಅವು ಕಲ್ಯಾಣದ ಚಾಲುಕ್ಯ ಕಾಲದ ನಿರ್ಮಿತಿಗಳೆಂದು ಹೇಳಬಹುದು. ಅಲ್ಲದೇ ಬಹುಶಃ ಅವು ಕಲ್ಯಾಣ ಚಾಲುಕ್ಯರ ಆಡಳಿತಾವಧಿಯ ಉಚ್ಛ್ರಾಯ ಕಾಲದಲ್ಲಿಯೇ ನಿರ್ಮಾಣವಾಗಿದ್ದಿರಬಹುದಾದವುಗಳೆಂದು ಅಭಿಪ್ರಾಯಿಸಬಹುದು. ಬಹುಶಃ ೧೨ನೇ ಶತಮಾನದ ಕೊನೆಯ ಪಾದದಲ್ಲಿ ಅವು ರಚನೆಗೊಂಡಿವೆ. ಗ್ರಾನೈಟ್ ಶಿಲೆಯಲ್ಲಿರುವ ಈ ಕಂಬಗಳನ್ನು ತಿರುಗಣಿಯ ಯಂತ್ರಗಳಿಂದ ರಚಿಸಲಾಗಿದ್ದು ಅವುಗಳಲ್ಲಿ ಕೆಲವು ಗಂಟೆಯ ಮಾದರಿಯವುಗಳು. ಇಂತಹ ವಿನ್ಯಾಸದ ಕಂಬಗಳು ಶಹಾಪುರ ತಾಲೂಕಿನಲ್ಲಿ ಲಭ್ಯವಿರುವ ಯಾವೊಂದು ದೇವಾಲಯಗಳಲ್ಲಿ ಕಂಡುಬಂದಿರುವುದಿಲ್ಲವೆಂದೇ ಹೇಳಬಹುದು. ಅವುಗಳಲ್ಲಿ ಕೆಲವು ಚೌಕಾಕಾರದವುಗಳಾಗಿದ್ದರೆ ಇನ್ನುಳಿದವು ದುಂಡಾಕೃತಿಯವು. ಅಲ್ಲದೇ ಇದೇ ಆವರಣದಲ್ಲಿ ಕೆಲವು ಕಂಬಗಳು ಮುರಿದು ಬಿದ್ದಿರುವ ಕೆಲವು ಕಂಬಗಳನ್ನು ಕಾಣುತ್ತೇವೆ. ಶಂಕರಲಿಂಗ

ದೇವಾಲಯಕ್ಕೆ ಎದುರಾಗಿರುವ ಗೋಡೆಯಲ್ಲಿ ಅಳವಡಿಸಲಾಗಿರುವ ನಾಗ ಅಥವಾ ಸರ್ಪಬಂಧ ಶಿಲ್ಪವು ಅತೀ ಸುಂದರವಾಗಿದೆ. ಸುಮಾರು ಎರಡು ಅಡಿ ಎತ್ತರದ ನಿಲುವುಳ್ಳ ಈ ಶಿಲ್ಪವನ್ನು ಗೋಡೆಯಲ್ಲಿ ಹೂಳಿಡಲಾಗಿದೆ. ಇಂಥದ್ದೇ ಶಿಲ್ಪವನ್ನು ಮುದನೂರಿನ ಲಕ್ಷ್ಮಣತೀರ್ಥ ಹೆಸರಿನ ಬಾವಿಯ ಬಳಿಯು ಕಾಣುತ್ತೇವೆ.

ಐತಿಹಾಸಿಕ ಮಹತ್ವವನ್ನು ಪಡೆದಿದ್ದ ಈ ಗ್ರಾಮದಲ್ಲಿ ಕೆಲವು ಪ್ರಾಚೀನ ಶಿಲ್ಪಾವಶೇಷಗಳು ಕಂಡುಬರುತ್ತವೆ. ಇಲ್ಲಿರುವ ಹನುಮಂತನ ಗುಡಿಯ ಗೋಡೆಯಲ್ಲಿ ತ್ರುಟಿತಗೊಂಡಿರುವ ಸಪ್ತಮಾತೃಕೆ ಶಿಲ್ಪವನ್ನು ಅಳವಡಿಸಲಾಗಿದೆ. ಅಲ್ಲದೇ ಇದೇ ಗುಡಿಯ ಮುಂಭಾಗದಲ್ಲಿ ಮತ್ತೊಂದು ಪ್ರಮುಖ ಬಿಡಿ ಶಿಲ್ಪವಿದ್ದು ಅದಕ್ಕೆ ಬೃಹತ್‌ಶಿಲಾ ಗೋರಿಯಂಥ ಮನೆಯನ್ನು ಮಾಡಿ ಈ ಶಿಲ್ಪವನ್ನು ಆ ಗೂಡಿನಲ್ಲಿಡಲಾಗಿದೆ. ಅದನ್ನು ಸ್ಥಳೀಯವಾಗಿ ಫಲಿಶಿಲ್ಪ ಎಂದು ಕರೆಯುತ್ತಾರೆ ಎಂದು ಅಭಿಪ್ರಾಯಿಸಲಾಗಿದೆ[31]. ವೀರಾಸನದಲ್ಲಿ ನಿಂತಿರುವ ಈ ಶಿಲ್ಪವು ಬಲಿದಾನಕ್ಕೆ ಸಂಬಂಧಪಟ್ಟಿದ್ದಾಗಿದೆ. ಬಹುಶಃ ಪರಾಕ್ರಮ ಗೈದು ವೀರಮರಣ ಅಪ್ಪಿದ ಯೋಧನ ಸ್ಮರಣಾರ್ಥ ಈ ಶಿಲ್ಪವನ್ನು ನಿರ್ಮಿಸಲಾಗಿದೆ ಎಂಬುದು ನಿರ್ವಿವಾದ. ಆದರೆ ದುರ್ದೈವದ ಸಂಗತಿಯೆಂದರೆ ಇಂಥ ಮಹತ್ವದ ಹಲವಾರು ಪ್ರಾಚ್ಯಕುರುಹುಗಳು ಸಿಗುವ ಕೋಡಾಲ ಗ್ರಾಮದಲ್ಲಿ ಗತ ಇತಿಹಾಸವನ್ನು ವಿವರಿಸುವ ಶಾಸನ ಉಲ್ಲೇಖಗಳು ಈವರೆಗೂ ಸಿಗದಿರುವುದು ದುರಂತವೇ ಸರಿ. ಆದರೆ ಸಂಗಮದಲ್ಲಿರುವ ಸಂಗಮನಾಥನ ಗುಡಿಯಲ್ಲಿರುವ ಶಾಸನದಲ್ಲಿ ಈ ಗ್ರಾಮಕ್ಕೆ ಸಂಬಂಧಿಸಿದ ಮಾಹಿತಿಯೊಂದಿದೆ. ಸಂಗಮರ ಸಂಗಮನಾಥನ ದೇವಾಲಯವಿದ್ದು ಶಾಲೆಯ(ಮಠದ)ಲ್ಲಿದ್ದ ವಿದ್ಯಾರ್ಥಿಗಳ ವಿದ್ಯಾರ್ಜನೆಗಾಗಿ ಹಾಗೂ ಕಾಳಮುಖ ಯತಿಗಳ ಮಠಕ್ಕಾಗಿ ಈ ಗ್ರಾಮವನ್ನು ದತ್ತಿಕೊಡಲಾಯಿತು ಎಂಬ ಉಲ್ಲೇಖವಿದೆ.

### ತುಮಕೂರಿನ-ರಾಮಲಿಂಗೇಶ್ವರ

ಎತ್ತರದ ಕಟ್ಟೆಯ ಮೇಲೆ ಈ ದೇವಾಲಯವು ನಿರ್ಮಾಣವಾಗಿರುವುದು. ಅದಕ್ಕೆ ಪೂರ್ವಾಭಿಮುಖ ಪ್ರವೇಶವಿದೆ. ಇದೊಂದು ತ್ರಿಕೂಟ ರಚನೆ. ದಕ್ಷಿಣ ಮತ್ತು ಉತ್ತರಾಭಿಮುಖವಾಗಿರುವ ಗರ್ಭಗೃಹಗಳನ್ನು ರಿಪೇರಿ ಮಾಡಲಾಗಿದೆ. ಅವುಗಳಿಗೆ ತೆರದ ಅಂತರಾಳಗಳು ಇವೆ. ದೇವಾಲಯವು ಎತ್ತರ ಜಗತಿಯನ್ನು ಹೊಂದಿರುವುದರಿಂದ ಅದನ್ನು ಮೆಟ್ಟಿಲುಗಳ ಸಹಾಯದಿಂದ ಏರಿಕೊಂಡು ಹೋಗಬೇಕಾಗುತ್ತದೆ. ಗರ್ಭಗೃಹ ಹಾಗೂ ತೆರೆದ ಅಂತರಾಳಗಳನ್ನು ಒಳಗೊಂಡ ನವರಂಗವೊಂದು ದೇವಾಲಯಕ್ಕಿದೆ.

ಪೂರ್ವಾಭಿಮುಖವಾಗಿರುವ ಮುಖ್ಯ ಗರ್ಭಗೃಹದಲ್ಲಿ ಲಿಂಗವನ್ನು ಇಡಲಾಗಿದೆ. ಇದು ನಿತ್ಯವು ಪೂಜೆಗೊಳ್ಳುತ್ತದೆ. ಗರ್ಭಗೃಹದ ಬಾಗಿಲವಾಡವು ತ್ರಿಪಟ್ಟಿಕೆಯನ್ನು ಹೊಂದಿದ್ದು ಅದರಲ್ಲಿ ಚಿಕ್ಕದಾದ ಅರ್ಧಕಂಬಗಳ ರಚನೆಗಳಿರುವುದನ್ನು ಗಮನಿಸಬಹುದು. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದ್ದು ಬಾಗಿಲವಾಡದ ಉತ್ತರಾಂಗ ಭಾಗವು ಸಾದಾ ರಚನೆಯಿಂದ ಕೂಡಿದೆ. ಕೆಳಭಾಗದಲ್ಲಿ ದ್ವಾರಪಾಲಕ ಶಿಲ್ಪಗಳ ಬದಲಾಗಿ ಪೂರ್ಣ ಕಂಬಗಳನ್ನು ರಚಿಸಲಾಗಿದೆ.

ಅಂತರಾಳಗಳು ಸಹ ಬರಿದಾಗಿವೆ. ಮೂರು ಗರ್ಭಗೃಹಗಳಿಗಿರುವ ಬಾಗಿಲವಾಡಗಳು ವಿನ್ಯಾಸದಲ್ಲಿ ಒಂದೇ ರೀತಿ ರಚನೆ ಹೊಂದಿರುವುದನ್ನು ಕಾಣುತ್ತೇವೆ.

ಈ ತ್ರಿಕೂಟ ದೇವಾಲಯಕ್ಕೆ ವಿಶಾಲವಾದ ನವರಂಗವಿದ್ದು ಅರಲ್ಲಿ ನಾಲ್ಕು ಕಂಬಗಳಿವೆ. ಅಲ್ಲದೇ ನವರಂಗದಲ್ಲಿ ಕೆಲವು ಬಿಡಿಶಿಲ್ಪಗಳನ್ನು ಸಹ ಇಡಲಾಗಿದೆ. ಅಲ್ಲಿರುವ ಕಂಬಗಳು ಚೌಕಾಕಾರದವುಗಳು. ಬುಡದಲ್ಲಿ ಚೌಕಾಕಾರವಾಗಿದ್ದು ದಂಡಾಗ್ರ ಭಾಗವು ವೃತ್ತಾಕಾರವಾಗಿದೆ. ಅದರ ಮಧ್ಯೆ ಅಡ್ಡ ಪಟ್ಟಿಕೆಯನ್ನು ರಚಿಸಲಾಗಿದೆ. ಘಟ ಭಾಗದಲ್ಲಿ ಅರ್ಧವೃತ್ತಾಕಾರದ ಕೆತ್ತನೆಗಳನ್ನು ಮಾಡಲಾಗಿದೆ. ಮೇಲ್ಭಾಗದಲ್ಲಿ ವೃತ್ತಾಕಾರದ ಫಲಕ ಹಾಗೂ ಚೌಕಾಕಾರದ ಬೋಧಿಗೆಗಳನ್ನು ಅಳವಡಿಸಲಾಗಿದೆ. ಅಂತರಾಳಗಳಲ್ಲಿ ಅರ್ಧಕಂಬಗಳಿದ್ದು ಅವು ಚೌಕಾಕಾರವಾಗಿವೆ. ಅಲ್ಲದೇ ಅವುಗಳ ಮೂಲೆಯ ಭಾಗಗಳನ್ನು ಕೊರೆದು ತೆಗೆದಂತಿದ್ದು ಅವು ಹಲ್ಲಿನ ಪಟ್ಟಿಯ ಆಕಾರದಂತೆ ಕಾಣುತ್ತವೆ.

ಸಮಭಂಗಿಯಲ್ಲಿರುವ ಎರಡು ಅಡಿ ಎತ್ತರದ ವಿಷ್ಣುಶಿಲ್ಪ ದೇವಾಲಯದಲ್ಲಿದೆ. ಕಿರೀಟ, ಪ್ರಭಾಮಂಡಲಿ, ಯಜ್ಞೋಪವೀತ, ನಡುಪಟ್ಟಿ ಹಾಗೂ ಕಾಲುಗಡಗಳು ಮೂರ್ತಿಯ ಅಲಂಕರಣೆಗಳಾಗಿವೆ. ಆದರೆ ಶಿಲ್ಪವು ಅಲಕ್ಷ್ಯಕ್ಕೆ ಒಳಗಾಗಿದ್ದರಿಂದ ಅದು ತುಂಬಾ ಮಾಸಿದಂತೆ ಕಾಣುತ್ತದೆ. ಶಿಲ್ಪದ ಕೆಳಭಾಗದಲ್ಲಿ ಗರುಡ ಹಾಗೂ ಲಕ್ಷ್ಮೀ ಚಿತ್ರಗಳನ್ನು ಸಹ ಬಿಡಿಸಲಾಗಿದೆ. ಗರ್ಭಗೃಹದಲ್ಲಿ ನಗ್ನ ಭೈರವನ ಶಿಲ್ಪವಿದ್ದು ಅದು ತ್ರಿಭಂಗಿಯಲ್ಲಿದೆ. ಇದು ಸಹ ಮಾಸಿದ್ದರಿಂದ ತನ್ನ ಚೆಲುವನ್ನು ಕಳೆದುಕೊಂಡಂತೆ ಭಾಸವಾಗುವುದು. ದಕ್ಷಿಣಾಭಿಮುಖ ಅಂತರಾಳದ ಉತ್ತರಾಂಗ ಭಾಗದಲ್ಲಿ ಕೈಮುಗಿದು ಕುಳಿತ ಚಿಕ್ಕದಾದ ಉಬ್ಬುಶಿಲ್ಪವೊಂದಿದ್ದು ಅದು ಯತಿಗೆ ಸಂಬಂಧಿಸಿದ್ದಾಗಿರಬಹುದೇ? ಎಂದು ತಿಳಿಯಲು ಅವಕಾಶವಿದೆ. ಚಿಕ್ಕದಾಗಿರುವ ಈ ಉಬ್ಬುಶಿಲ್ಪವು ಸವೆದು ಹೋಗಿದ್ದರಿಂದ ಅದನ್ನು ಸ್ಪಷ್ಟವಾಗಿ ಗುರುತಿಸಲು ಕಷ್ಟಕರವಾಗುತ್ತದೆ.

ಗ್ರಾಮಕ್ಕೆ ಸಂಬಂಧಿಸಿದಂತೆ ಎರಡು ಶಾಸನಗಳು ಪ್ರಕಟಗೊಂಡಿವೆ. ಅವು ಕಲ್ಯಾಣ ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಪಟ್ಟವುಗಳು. ಹೆಗ್ಗಡತಿಯಾದ ಕೇತಿಯ ಮಕ್ಕಳು ಇಲ್ಲಿನ ಕೇದಾರೇಶ್ವರ ದೇವರಿಗೆ ಹಾಗೂ ಮಲ್ಲಿಕಾರ್ಜುನ ದೇವರಿಗೆ ಎರಡು ಮತ್ತರ ಭೂಮಿಯನ್ನು ದಾನ ನೀಡಿದರು ಎಂಬ ಉಲ್ಲೇಖವನ್ನು ನೀಡುತ್ತಾರೆ[೩]. ಇನ್ನೊಂದು ಶಾಸನವು ಜಕ್ಕೇಶ್ವರ ದೇವರಿಗೆ ಅರವತ್ತು ಮತ್ತರ ಭೂಮಿ ಹಾಗೂ ಎಣ್ಣೆಯನ್ನು ದಾನ ಬಿಟ್ಟ ವಿಷಯ ತಿಳಿಸುತ್ತದೆ. ಆದರೆ ದುರ್ದೈವಶಾತ್ ಈ ಶಾಸನಗಳಲ್ಲಿ ಉಲ್ಲೇಖವಾದ ಗುಡಿಗಳು ಮಾತ್ರ ಈ ದಿನಗಳಲ್ಲಿ ಉಳಿದುಬಂದಿಲ್ಲ. ಬಹುಶಃ ತ್ರಿಕೂಟ ದೇವಾಲಯದ ಪ್ರತ್ಯೇಕ ಗರ್ಭಗೃಹಗಳಲ್ಲಿರುವ ದೇವರುಗಳೇ ಶಾಸನ ಉಲ್ಲೇಖಿತ ದೇವರುಗಳಾಗಿರಬಹುದೆಂಬ ಅನುಮಾನಗಳನ್ನು ಸಹ ವ್ಯಕ್ತಪಡಿಸಲಾಗಿದೆ[೪]. ಅಲ್ಲದೇ ಇದೊಂದು ತ್ರೈಪುರುಷ ದೇವಾಲಯುವಾಗಿದ್ದು ಶಿಕ್ಷಣ ನೀಡುವ ಕೇಂದ್ರವಾಗಿದ್ದಂತೆ ತೋರುತ್ತದೆಯೆಂದು ಅಭಿಪ್ರಾಯಿಸಲಾಗಿದೆ. ಈ ಅನುಮಾನ ಮತ್ತು ಅಭಿಪ್ರಾಯಗಳನ್ನು ಪರಿಗಣಿಸುವುದಾದರೆ ಪ್ರಸ್ತುತ ರಾಮಲಿಂಗೇಶ್ವರ ದೇವಾಲಯವೇ ಶಾಸನದಲ್ಲಿ ಉಲ್ಲೇಖವಾಗಿರುವ ತ್ರಿಕೂಟ ಮತ್ತು ತ್ರೈಪುರುಷ ದೇವಾಲಯವಾಗಿದ್ದಿರಬಹುದೆಂಬ ವಿವರಗಳು ಸರಿಯೆಂದು ಕಾಣುತ್ತವೆ.

## ಮದ್ರಕಿ–ಗೂಳಿಬಸವೇಶ್ವರ

ಬಹುಶಃ ಇದೊಂದು ಪ್ರಾಚೀನ ತ್ರಿಕೂಟ ದೇವಾಲಯವಾಗಿತ್ತು. ಆದರೆ ಗುರುತು ಸಿಗಲಾರದಷ್ಟು ಅದನ್ನು ಬದಲಾಯಿಸಿ ದುರಸ್ತಿಗೊಳಿಸಲಾಗಿದೆ. ಭವ್ಯವಾಗಿದ್ದ ಪ್ರಾಚೀನ ದೇವಾಲಯಕ್ಕೆ ಸದ್ಯ ವಿಶಾಲವಾದ ಆವರಣ ಹಾಗೂ ಮನಸೂರೆಗೊಳ್ಳುವ ಪ್ರವೇಶದ್ವಾರದ ಹೊಸದಾಗಿ ನಿರ್ಮಿಸಲಾಗಿರುವುದನ್ನು ಗಮನಿಸಬಹುದು. ಗುಡಿಯನ್ನು ಅಮೂಲಾಗ್ರವಾಗಿ ಬದಲಾಯಿಸುವ ಸಂದರ್ಭದಲ್ಲಿ ಪ್ರಾಚೀನವಾಗಿರುವ ಅಳಿದುಳಿದ ಬಿಡಿಶಿಲ್ಪಗಳನ್ನು ಹೊಸದಾಗಿ ನಿರ್ಮಿಸಿರುವ ದೇವಾಲಯದ ಗೋಡೆಯಲ್ಲಿ ಅಳವಡಿಸಲಾಗಿದೆ. ಅಲ್ಲದೇ ಉಳಿದ ಇತರೆ ಕೆಲವು ಅವಶೇಷಗಳನ್ನು ಆವರಣದಲ್ಲಿ ಇಡಲಾಗಿದೆ.

ದೇವಾಲಯವು ಹೆಚ್ಚಿನ ದುರಸ್ತಿಕಾರ್ಯಗಳಿಗೆ ಒಳಗಾಗಿದೆ. ಮೂಲಗರ್ಭ ಗೃಹದಲ್ಲಿ ಗೂಳಿಬಸವಣ್ಣನೆಂದು ಕರೆಯುವ ನಂದಿಯ ಶಿಲ್ಪವನ್ನು ಇಡಲಾಗಿದೆ. ಪ್ರಸ್ತುತ ಗರ್ಭಗೃಹವನ್ನು ಸಂಪೂರ್ಣವಾಗಿ ಅಮೃತಶಿಲೆಗಳಿಂದ ಅಲಂಕರಣೆಗೊಳಿಸಲಾಗಿದೆ. ಆದ್ದರಿಂದ ಪ್ರಸ್ತುತ ಸಂದರ್ಭದಲ್ಲಿ ಪ್ರಾಚೀನ ಕುರುಹುಗಳು ಈ ಗರ್ಭಗೃಹದಲ್ಲಿ ಕಂಡುಬರುವುದಿಲ್ಲ. ದೇವಾಲಯಕ್ಕೆ ಆಯತಾಕಾರದಲ್ಲಿರುವ ವಿಶಾಲವಾದ ನವರಂಗವಿದೆ. ಬಹುಶಃ ದಕ್ಷಿಣಾಭಿಮುಖವಾಗಿದ್ದ ಗರ್ಭಗೃಹವನ್ನು ಸಹ ಸಂಪೂರ್ಣವಾಗಿ ನವರಂಗದಲ್ಲಿಯೇ ಅಳವಡಿಸಿದ್ದರಿಂದ ಸದ್ಯ ನವರಂಗದ ಆಕಾರವು ಆಯತಾಕಾರಕ್ಕೆ ಬದಲಾಗಿದೆಯೆಂದೆನಿಸುವುದು. ಆದರೆ ಉತ್ತರಾಭಿಮುಖ ಗರ್ಭಗೃಹ ಮಾತ್ರ ಹಾಗೆ ಉಳಿದುಕೊಂಡು ಬಂದಿದೆ. ಅದಕ್ಕೆ ಹೊಂದಿಕೊಂಡಂತೆ ದೊಡ್ಡದಾದ ಕೋಷ«ಕವು ಇದೆ. ನವರಂಗವನ್ನು ಸಹ ನುಣುಪಾದ ಕಲ್ಲುಗಳಿಂದ ದುರಸ್ತಿಗೊಳಿಸಲಾಗಿದೆ. ಮುಖ್ಯಗರ್ಭಗೃಹ, ನವರಂಗದ ಗೋಡೆ ಹಾಗೂ ನೆಲಹಾಸನ್ನು ರಿಪೇರಿ ಮಾಡಿದ್ದರಿಂದ ಪ್ರಾಚೀನವೆನ್ನಬಹುದಾದ ಕುರುಹುಗಳು ದೇವಾಲಯದಲ್ಲಿ ಕಂಡುಬರುವುದಿಲ್ಲ.

ನವರಂಗದಲ್ಲಿರುವ ಕೋಷ್ಟಕ (ಗೂಡಿ)ನಲ್ಲಿ ಎರಡು ಶಿಲ್ಪಗಳಿದ್ದು ಅವುಗಳಲ್ಲಿ ಒಂದು ಸೂರ್ಯನದ್ದು ಇನ್ನೊಂದು ಮಹಿಷಾಸುರಮರ್ದಿನಿ ಶಿಲ್ಪ. ಎರಡು ಕೈಯಗಳಲ್ಲಿ ಕಮಲ ಪುಷ್ಪಗಳನ್ನು ಹಿಡಿದು ಸಮಭಂಗಿಯಲ್ಲಿ ನಿಂತಿರುವ ಸೂರ್ಯ ದೇವನನ್ನು ಕಪು‍್ಪಕಲ್ಲಿನಲ್ಲಿ ನಿರ್ಮಿಸಲಾಗಿದೆ. ಅಲ್ಲದೇ ಮಹಿಷಾಸುರಮರ್ದಿನಿಯ ಶಿಲ್ಪವನ್ನು ಸಹ ಅಂಥದ್ದೇ ಕಲ್ಲಿನಲ್ಲಿಯೇ ಕೆತ್ತಲಾಗಿದೆ. ಆದರೆ ಕಾರಣಾಂತರಗಳಿಂದ ಈ ಶಿಲ್ಪವು ಮಾಸಿದೆ. ಆದರೂ ಅದರಲ್ಲಿರುವ ಭಾಗಗಳನ್ನು ಸ್ಪಷ್ಟವಾಗಿ ಕಾಣುವುದಕ್ಕೆ ಯಾವ ಅಡತಡೆಗಳಿಲ್ಲ.

ಇದೇ ಗುಡಿಯ ಆವರಣದಲ್ಲಿ ಗೋಡೆಗೆ ತಾಕಿಸಿ ಇಡಲಾಗಿರುವ ಬಿಡಿಶಿಲ್ಪಗಳು ಅತ್ಯದ್ಭುತವಾಗಿ ಮೂಡಿಬಂದಿರುವುದನ್ನು ಗಮನಿಸಬಹುದು. ನಗ್ನಭೈರವ, ಗಜಲಕ್ಷ್ಮಿ, ಯಕ್ಷ-ಯಕ್ಷಿಯರ, ಚತುರ್ಭುಜ ವಿಷ್ಣುವಿನ ಶಿಲ್ಪ ಹಾಗೂ ನಂದಿ ಶಿಲ್ಪಗಳನ್ನು ಇಲ್ಲಿಡಲಾಗಿದೆ. ಅವುಗಳಲ್ಲಿ ವಿಷ್ಣುವಿನ ಶಿಲ್ಪದಲ್ಲಿದ್ದ ಎರಡು ಕೈಗಳು ಮುರಿದು ಹೋಗಿದ್ದು ಉಳಿದೆರಡು ಕೈಯಗಳಲ್ಲಿ ಶಂಖ ಮತ್ತು ಚಕ್ರದ ಸಂಕೇತಗಳಿವೆ. ಅಲ್ಲದೇ ಮುಖ್ಯವಾಗಿ ಈ ಶಿಲ್ಪದ ಪ್ರಭಾವಳಿಯಲ್ಲಿ ವಿಷ್ಣುವಿನ ಹತ್ತು ಅವತಾರಗಳನ್ನು ಪ್ರಕಟಪಡಿಸಲಾಗಿದೆ. ಸಂಬಂಧಿಸಿದ

ಹತ್ತು ಅವತಾರಗಳನ್ನು ತೋರಿಸಲು ಚಿಕ್ಕ ಚಿಕ್ಕ ಉಬ್ಬುಶಿಲ್ಪಗಳನ್ನು ಈ ಶಿಲ್ಪದಲ್ಲಿ ಕೆತ್ತಲಾಗಿದೆ. ಕೆಳಭಾಗದಲ್ಲಿ ಆತನ ವಾಹನ ಗರುಡ ಹಾಗೂ ಸತಿ ಲಕ್ಷ್ಮೀಗೆ ಸಂಬಂಧಿಸಿದ ಚಿಕ್ಕದಾಗಿರುವ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಅದರ ವಿಶೇಷ ಸೌಂದರ್ಯವು ಕಲಾಕಾರನ ಕಾರ್ಯಕ್ಕೆ ಹಿಡಿದ ಕನ್ನಡಿಯಂತೆ ಭಾಸವಾಗುತ್ತದೆ. ಈ ಗುಡಿಯ ಆವರಣದಲ್ಲಿ ಹನುಮಂತನ ದೇವಾಲಯವಿದ್ದು ಅದನ್ನು ಇತ್ತೀಚೆಗೆ ಕಟ್ಟಲಾಗಿದೆ. ಆದರೆ ಈ ದೇವಾಲಯದ ನವರಂಗದಲ್ಲಿಯೂ ಪ್ರಾಚೀನ ಕಂಬಗಳನ್ನೆ ಉಪಯೋಗಿಸಲಾಗಿದೆ.

ಮದ್ರಕಿ ಗ್ರಾಮದಲ್ಲಿ ಎರಡು ಪ್ರಾಚೀನ ಬಾವಿಗಳಿವೆ. ಅಟ್ಟೆ ಓಣಿಯಲ್ಲಿರುವ ಬಾವಿಯ ಹತ್ತಿರ ವೀರನ ಶಿಲ್ಪವೊಂದಿದ್ದು ಅದರ ಕೈಯಲ್ಲಿ ಖಡ್ಗ ಮತ್ತು ಡಾಲನ್ನು ಚಿತ್ರಿಸಲಾಗಿದೆ. ಅಲ್ಲದೇ ಆ ವೀರನು ಸಮಭಂಗಿಯಲ್ಲಿ ನಿಂತಿದ್ದಾನೆ. ಅವನ ಮುಖ ಭಾವದಲ್ಲಿ ಇರಬೇಕಾದ ಕಳೆಯನ್ನು ಅತ್ಯಂತ ಜಾಣ್ಮೆಯಿಂದ ಕೆತ್ತನೆಕಾರ ಮೂಡಿಸಿದ್ದಾನೆ. ಶಿಲ್ಪದ ರಚನಾ ಶೈಲಿಯನ್ನು ಗಮನಿಸಿದರೆ ಅದು ವಿಜಯನಗರ ಕಾಲದ ನಿರ್ಮಿತಿಯಾಗಿದೆ ಎಂದು ಅಭಿಪ್ರಾಯಿಸಬಹುದಾಗಿದೆ.

ಇದೇ ಗ್ರಾಮದಲ್ಲಿ ಇನ್ನೊಂದು ಪ್ರಾಚೀನ ಬಾವಿ ಇದ್ದು ಅದನ್ನು ಕಾಲಕಾಲಕ್ಕೆ ದುರಸ್ತಿ ಮಾಡಲಾಗಿದೆ. ಈ ಬಾವಿಯ ಮೆಟ್ಟಿಲುಗಳ ಮೇಲೆ ಸುಂದರವಾದ ಶಿಲ್ಪವನ್ನು ಇಡಲಾಗಿದ್ದು ಅದರ ಸೌಂದರ್ಯ ಎಂಥವರನ್ನು ಮೊದಲ ನೋಟದಲ್ಲಿಯೇ ಸೆಳೆಯುತ್ತದೆ. ಇದು ಯಕ್ಷಿ ಪದ್ಮಾವತಿಯ ಶಿಲ್ಪವಾಗಿದೆ. ಸುಮಾರು ಮೂರು ಅಡಿ ಎತ್ತರ ಮತ್ತು ಎರಡು ಅಡಿ ಅಗಲವಾಗಿರುವ ಈ ಶಿಲ್ಪವು ಅತ್ಯಂತ ಪ್ರಮಾಣಬದ್ಧವಾಗಿದೆ ಎಂಬುದು ಮೇಲ್ನೋಟದಲ್ಲಿಯೇ ತಿಳಿದುಬರುತ್ತದೆ. ಶಿಲ್ಪವನ್ನು ಕರ್ಣಕುಂಡಲ, ತೋಳುಬಂದಿ, ಕಾಲುಕಡಗಗಳಿಂದ ಅಲಂಕರಣಗೊಳಿಸಲಾಗಿದೆ. ಇವಳು ಚತುರ್ಭುಜ ಹೊಂದಿದ್ದು ಅವಳ ಕೈಯಗಳಲ್ಲಿ ಪಾಶ, ಅಂಕುಶ ಶಸ್ತ್ರಗಳಿದ್ದರೆ ಮತ್ತೊಂದು ವರದ ಹಸ್ತವನ್ನು ಹೊಂದಿದೆ. ಆದರೆ ಅವುಗಳಲ್ಲಿ ಒಂದು ಕೈಯು ತೃಟಿತವಾಗಿರುವುದನ್ನು ಗಮನಿಸಬಹುದು. ಇಂಥ ಸುಂದರ ಶಿಲ್ಪವೊಂದು ಈ ಗ್ರಾಮದಲ್ಲಿದ್ದ ಯಾವ ದೇವಾಲಯಕ್ಕೆ ಸಂಬಂಧಿಸಿದ್ದಾಗಿತ್ತು ಎಂದು ತಿಳಿಯುವುದು ಕಷ್ಟಕರ. ಜೈನ ಮತಕ್ಕೆ ಸಂಬಂಧಿಸಿದ ಇನ್ನೊಂದು ಶಿಲ್ಪವು ಗೂಳಿ ಬಸವಣ್ಣನ ಗುಡಿಯ ಆವರಣದಲ್ಲಿದ್ದು ಅದು ಪಾರ್ಶ್ವನಾಥ ತೀರ್ಥಂಕರರದ್ದು. ಅದು ಸಹ ಕಾರಣಾಂತರಗಳಿಂದ ತೃಟಿತವಾಗಿದೆ. ಈ ಗ್ರಾಮದಲ್ಲಿರುವ ಇಂಥ ಕೆಲವು ಬಿಡಿಶಿಲ್ಪಗಳನ್ನು ಗಮನಿಸಿ ಸಂಶೋಧಕರಾದ ಶ್ರೀಯುತ ಡಿ.ಎನ್.ಅಕ್ಕಿ ಅವರು ಇಲ್ಲೊಂದು ಜೈನದೇವಾಲಯ ಇದ್ದಿರಬಹುದಾದ ಶಂಕೆ ವ್ಯಕ್ತಪಡಿಸಿದ್ದಾರೆ[೩೫]. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಿ ಹೇಳುವುದಾದರೆ ಶ್ರೀಯುತರು ಪಟ್ಟಿರುವ ಅಭಿಪ್ರಾಯವು ಸರಿಯಾದ್ದಾಗಿದೆ ಎಂದು ಅಭಿಪ್ರಾಯಿಸಬಹುದು. ಅಲ್ಲದೇ ಪದ್ಮಾವತಿ ಯಕ್ಷಿಯ ಶಿಲ್ಪವಿರುವ ಬಾವಿಯ ಸಮೀಪದಲ್ಲಿಯೇ ಮುತ್ಯಾನ ಹೆಸರಿನ ಗುಡಿಯೊಂದಿದ್ದು, ಬಹುಶಃ ಅದುವೇ ಪ್ರಾಚೀನ ಬಸದಿಯು ಆಗಿದ್ದಿರಬಹುದೆಂದು ಊಹಿಸಲು ಅವಕಾಶವಿದೆ. ಇದೇ ಆವರಣದಲ್ಲಿ ಪ್ರಾಚೀನಲಿಂಗ ಹಾಗೂ ಅತೀ ಸುಂದರವಾದ ನಂದಿಶಿಲ್ಪವನ್ನು ಇಡಲಾಗಿದೆ.

ಗೂಳಿ ಬಸವಣ್ಣನ ಗುಡಿಯ ಆವರಣದ ಹಿಂಭಾಗದಲ್ಲಿ ಮುದಕಮ್ಮನ ದೇವಾಲಯವಿದೆ. ಅದರಲ್ಲಿ ನಾಗದಂಪತಿ ಶಿಲ್ಪವಿದ್ದು ಅದು ಕೈಯಲ್ಲಿ ಪಾಶ ಮತ್ತು ಅಂಕುಶವನ್ನು ಹೊಂದಿದೆ.

ಶಿಲ್ಪದ ಪ್ರಭಾವಳಿಯಾಗಿ ಅಗಲವಾದ ಹೆಡೆಯನ್ನು ರಚಿಸಲಾಗಿದೆ. ಈ ಶಿಲ್ಪದ ಪಕ್ಕ ಕುಕ್ಕಟಾಸನದಲ್ಲಿ ಕುಳಿತ ಬಿಡಿಶಿಲ್ಪವಿದ್ದು ಅದನ್ನೇ ಮುದಕಮ್ಮಳೆಂದು ಕರೆಯುತ್ತಾರೆ. ಆದರೆ ಈ ಶಿಲ್ಪವು ಪಾರ್ವತಿ ಅಥವಾ ದುರ್ಗೆಯ ಶಿಲ್ಪವಾಗಿದ್ದು ಕೈಯಲ್ಲಿ ಖಟ್ವಾಂಗ ಮತ್ತ ಖಡ್ಗ ಹಿಡಿದಿದ್ದಾಳೆ. ಇವಳು ಚತುರ್ಭುಜಧಾರಣಿಯಾಗಿದ್ದು ಮೇಲ್ಭಾಗದ ಅಕ್ಕಪಕ್ಕದಲ್ಲಿ ಚಾಮರಧಾರಣಿಯರನ್ನು ಕೆತ್ತಲಾಗಿದೆ.

ಮುದಕಮ್ಮನ ದೇವಾಲಯದ ಪಕ್ಕದಲ್ಲಿಯೇ ಇನ್ನೊಂದು ಚಿಕ್ಕ ಗುಡಿ ಇದ್ದು ಅದನ್ನು ಪಾಲಕಮ್ಮಳೆಂದು ತಪ್ಪಾಗಿ ಹೆಸರಿಸಲಾಗಿದೆ.[೬] ಆದರೆ ಪಾಲಕಮ್ಮಳೆಂದು ಕರೆಯುವ ಹೆಸರಿನ ದೇವಾಲಯ ಊರಿನಿಂದ ಸ್ವಲ್ಪ ದೂರದಲ್ಲಿರುವ ಹಳ್ಳದ ದಂಡೆಯ ಮೇಲಿದೆ. ಮುದಕಮ್ಮಳ ದೇವಾಲಯವೆಂದು ಕರೆಯುತ್ತಿರುವ ಗುಡಿಯ ಪಕ್ಕದಲ್ಲಿ ಚಿಕ್ಕದಾಗಿ ನಿರ್ಮಾಣವಾಗಿರುವ ಈ ಗುಡಿಯನ್ನು ಎಲ್ಲಮ್ಮಳಿಗೆ ಸಂಬಂಧಿಸಿದ ಗುಡಿಯೆಂದು ಕರೆಯುತ್ತಾರೆ. ಈ ಗುಡಿಯಲ್ಲಿ ಚಿಕ್ಕದಾದ ಶಿಲ್ಪವಿದ್ದು ಇದನ್ನೇ ಎಲ್ಲಮ್ಮಳೆಂದು ಪರಿಭಾವಿಸಿ ಸ್ಥಳೀಯರು ಪೂಜಿಸುತ್ತಾರೆ. ಆದರೆ ಇದು ಉಮಾಮಹೇಶ್ವರಿ ಶಿಲ್ಪ. ಅರ್ವಾಚೀನ ಶಿಲ್ಪದಲ್ಲಿ ಸ್ವಲ್ಪ ಮಾರ್ಪಾಟಮಾಡಲಾಗಿದೆ. ಪಾರ್ವತಿಯ ವಾಹನ ಸಿಂಹದ ಬದಲಾಗಿ ಮುಂಗಸಿಯನ್ನು ಕೆತ್ತಲಾಗಿದೆ. ಬಹುಶಃ ಪರಿಣಿತಿ ಹೊಂದಲಾರದ ಶಿಲ್ಪಿಯೊಬ್ಬನಿಂದ ಮಾಡಲ್ಪಟ್ಟ ಕಲಾಕೃತಿ ಇದಾಗಿದೆಯೆಂದು ಅಭಿಪ್ರಾಯಿಸಬಹುದು. ಇದೇ ಗುಡಿಯ ಮುಂಭಾಗದಲ್ಲಿ ಸಮಭಂಗಿಯಲ್ಲಿರುವ ವಿಷ್ಣುವಿನ ಶಿಲ್ಪವೊಂದಿದೆ. ಇದು ಹೆಚ್ಚಿನ ಅವಜ್ಞೆಗೆ ಒಳಗಾಗಿದ್ದರಿಂದ ಹೆಚ್ಚಿನ ಭಾಗಗಳು ಮಾಸಿದಂತೆ ಕಾಣುತ್ತವೆ.

ಗೂಳಿ ಬಸವಣ್ಣನ ಗುಡಿಯಿಂದ ಸ್ವಲ್ಪ ದೂರದಲ್ಲಿರುವ ಹಳ್ಳದ ದಂಡೆಯ ಮೇಲೆ ಇನ್ನೊಂದು ಚಿಕ್ಕದಾದ ಗುಡಿ ಇದ್ದು ಅದನ್ನು ಪಾಲಕಮ್ಮಳೆಂದು ಸ್ಥಳೀಯರು ಕರೆಯುತ್ತಾರೆ. ಮುಂಭಾಗದಲ್ಲಿ ಎರಡು ಪ್ರಾಚೀನ ಶಿಲ್ಪಗಳು ಅನಾಥವಾಗಿ ಬಿದ್ದಿವೆ. ಅವುಗಳಲ್ಲಿ ನಾಗದಂಪತಿಯ ಶಿಲ್ಪವು ಮೋಹಕವಾಗಿದೆ. ಅದರಲ್ಲಿ ಪುರುಷ ನಾಗನಿಗೆ ಏಳು ಹೆಡೆಗಳು ಹಾಗೂ ನಾಗಿಣಿಗೆ ಐದು ಹೆಡೆಗಳ ಪ್ರಭಾವಳಿಯನ್ನು ಕೆತ್ತಲಾಗಿದೆ. ಇದೇ ಸ್ಥಳದಲ್ಲಿ ಸಪ್ತಮಾತೃಕೆಯ ಶಿಲ್ಪವೊಂದಿದ್ದು ಅದನ್ನು ಜನರು ಬಾಣಂತಿಕಲ್ಲು ಎಂದು ಹೆಸರಿಸುತ್ತಾರೆ. ಬಹುಶಃ ಈ ಎರಡು ಶಿಲ್ಪಗಳು ಬೇರೆ ಕಡೆಯಿಂದ ತಂದಿಟ್ಟಿರುವ ಸಾಧ್ಯತೆಗಳಿವೆ. ಬಹುಶಃ ಪ್ರಾಚೀನ ಕಾಲದಲ್ಲಿ ಭವ್ಯವಾಗಿ ನಿರ್ಮಾಣವಾಗಿದ್ದ ಗೂಳಿಬಸವೇಶ್ವರನ ದೇವಸ್ಥಾನಕ್ಕೆ ಸಂಬಂಧಿಸಿದ ಶಿಲ್ಪಗಳು ಇವಾಗಿರಬಹುದೆಂದು ಅಭಿಪ್ರಾಯಿಸಬಹುದು.

ಅವಶೇಷಗಳಿಗೆ ಸಂಬಂಧಿಸಿದಂತೆ ಬಹುಮುಖ್ಯವಾದ ಚರ್ಚಾರ್ಹ ವಿಷಯವೆಂದರೆ ನಾಗಶಿಲ್ಪಗಳದ್ದು. ಶಾಹಾಪುರ ತಾಲೂಕಿನ ಎಲ್ಲ ಹಳ್ಳಿಗಳನ್ನು ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿ ಅಲ್ಲಿರುವ ಪ್ರಾಚ್ಯಾವಶೇಷಗಳನ್ನು ದಾಖಲೆ ಮಾಡುವ ಸಂದರ್ಭದಲ್ಲಿ ತಿಳಿದುಬರುವ ಮುಖ್ಯ ವಿಷಯವೆಂದರೆ ನಾಗಶಿಲ್ಪಗಳದ್ದು, ಬಹುತೇಕ ಎಲ್ಲಾ ದೇವಾಲಯಗಳಲ್ಲಿ ನಾಗಶಿಲ್ಪಗಳು ಕಡ್ಡಾಯವಾಗಿ ಇರಲೇಬೇಕೆಂಬ ನಿಯಮಗಳಂತೆ ಅವು ನಿರ್ಮಾಣವಾಗಿವೆ. ನಾಗಶಿಲ್ಪಗಳು

ಮಾತ್ರ ಅಲ್ಲ. ಮನುಷ್ಯರೂಪದ ಶಿಲ್ಪಗಳು ಹೆಚ್ಚಾಗಿವೆ ಎಂಬುದು ಮುಖ್ಯವಾದುದು. ಈ ಪ್ರದೇಶದಲ್ಲಿ ನಾಗಾರಾಧನೆ ಪಂಥವು ಹೆಚ್ಚಿನ ಮಹತ್ವ ಪಡೆದಿತ್ತು ಎಂಬುದರ ಸೂಚನೆಯೇ ಎಂಬುದನ್ನು ತಿಳಿಯಲು ವಿಶೇಷ ಅಧ್ಯಯನ ಮಾಡಬೇಕಾದ ಜರೂರಿದೆ. ಈ ಹಿನ್ನಲೆಯಲ್ಲಿ ಇಂಥ ಶಿಲ್ಪಗಳ ನಿರ್ಮಾಣವಾಗಿರಬಹುದಾದ ಕುತೂಹಲದ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಕ್ರಿಸ್ತಶಕ ಪ್ರಾರಂಭ ವರ್ಷಗಳಿಂದಲೂ ಈ ಪರಿಸರದಲ್ಲಿ ಬೌದ್ಧ ಪಂಥವು ಹೆಚ್ಚಿನ ವಿಸ್ತಾರ ಮತ್ತು ಮಹತ್ವ ಪಡೆದಿತ್ತು ಎಂಬುದಕ್ಕೆ ಇಲ್ಲಿ ಸಿಗುವ ಪ್ರಾಚ್ಯವಸ್ತುಗಳೇ ಸಾಕ್ಷಿಗಳಾಗಿ ನಿಂತಿವೆ. ಹೀಗಾಗಿ ಬೌದ್ಧ ತಾಂತ್ರಿಕ ಪಂಥದ ಇನ್ನೊಂದು ಕವಲಾದ ನಾಗಾರಾಧನೆಯ ಪಂಥವು ಈ ಪ್ರದೇಶದಲ್ಲಿ ಹೆಚ್ಚಿನ ವಿಸ್ತಾರ ಹೊಂದಿರಬಹುದು. ಬಹುಶಃ ಅದೇ ಪರಂಪರೆಯ ಕುರುಹುಗಳು ಮುಂದಿನ ದಿನಮಾನಗಳಲ್ಲೂ ಹೆಚ್ಚಿನ ಪ್ರಮಾಣದಲ್ಲಿ ಮುಂದುವರೆದಿರುವ ಸಾಧ್ಯತೆಗಳು ದಟ್ಟವಾಗಿವೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ವೈವಿಧ್ಯತೆಯ ರಚನಾವಿನ್ಯಾಸದಿಂದ ಕೂಡಿದ ನಾಗಶಿಲ್ಪಗಳು ನಿರ್ಮಾಣವಾಗಿರಬಹುದು. ಶೈವ, ವೈಷ್ಣವ, ಶಾಕ್ತ, ಜೈನ ಮತ್ತು ಬೌದ್ಧ ಮತಪಂಥಗಳಲ್ಲಿ ನಾಗದೇವತೆಯ ಅವತಾರ ಕಲ್ಪನೆಗಳು ಹುಟ್ಟಿಕೊಂಡಿರುವ ಸಂಗತಿಗಳು ಎಲ್ಲರಿಗೂ ತಿಳಿದಿದ್ದೇ ಆಗಿದೆ. ಈ ಹಿನ್ನೆಲೆಯಲಿಳಿಂಥ ಹಲವು ಅಭಿಪ್ರಾಯಗಳು ಬೇರೆ ಬೇರೆ ಸಂದರ್ಭಗಳಲ್ಲಿಯೂ ಮೂಡಿಬಂದಿವೆ. ಹಾಗಾಗಿ ಆ ಕುರಿತು ತಲಸ್ಪರ್ಶಿಯ ಮತ್ತು ಪ್ರತ್ಯೇಕ ಅಧ್ಯಯನ ಕೈಗೊಳ್ಳುವ ದರೂರಿಗೆ. ಈ ಮೂಲಕವೇ ಇಂಥ ಜಟಿಲತೆಗೆ ಪರಿಹಾರ ಕಂಡುಕೊಳ್ಳಬಹುದಾಗಿದೆ.

### ಶಿರವಾಳದ ಮಲ್ಲಿಕಾರ್ಜುನ ದೇವಾಲಯ

ಈ ದೇವಾಲಯವು ಗ್ರಾಮದ ಉತ್ತರ ಭಾಗದಲ್ಲಿ ಹರಿದಿರುವ ಹಳ್ಳದ ದಂಡೆಯ ಮೇಲಿದೆ. ಈ ಹಳ್ಳವು ಊರಿಗೆ ಹೊಂದಿಕೊಂಡಂತೆ ಹರಿದಿರುವುದರಿಂದ ಅದರ ಪಾತ್ರವು ಇದ್ದು ಇಲ್ಲದಂತಿರುವುದು. ಗರ್ಭಗೃಹ, ಅಂತರಾಳ, ಪ್ರವೇಶ ದ್ವಾರವುಳ್ಳ ಅರ್ಧಮಂಟಪ ಹಾಗೂ ನಕ್ಷಾತ್ರಾಕಾರದ ತಲವಿನ್ಯಾಸ ಹೊಂದಿರುವ ನವರಂಗ ಈ ದೇವಾಲಯಕ್ಕಿದೆ. ಗರ್ಭಗೃಹದಲ್ಲಿ ಲಿಂಗವಿದ್ದು ಅದು ನಿತ್ಯವು ಪೂಜೆಗೊಳಪಡುತ್ತದೆ. ಚಿಕ್ಕದಾದ ಬಾಗಿಲವಾಡವು ಅರ್ಧವೃತ್ತ ಕಂಬ ಅಲಂಕರಣೆ, ಉಬ್ಬುಶಿಲ್ಪಗಳಿಂದ ಕೂಡಿದ ಪಟ್ಟಿಕೆ, ಬಳ್ಳಿ ಪಟ್ಟಿಕೆಯ ಅಲಂಕರಣೆಗಳನ್ನು ಹೊಂದಿರುವುದು. ಇದರ ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವಿದೆ. ನೆಲಹಾಸದಲ್ಲಿ ಚಂದ್ರಶಿಲೆ ರಚನೆಯಿದ್ದು ಅದನ್ನು ಗಜಗಳಿಂದ ಕೂಡಿದ ಅಲಂಕರಣೆ ಸಹಿತ ಮಾಡಿರುವುದರಿಂದ ಅದರ ಸೌಂದರ್ಯ ಇನ್ನಷ್ಟು ಹೆಚ್ಚಾದಂತೆ ಕಾಣುತ್ತದೆ.

ತೆರದ ಅಂತರಾಳವು ಬರಿದಾಗಿದ್ದು, ಇಲ್ಲಿರುವ ಕಂಬಗಳು ಗಿಡ್ಡದಾಗಿವೆ. ಅವು ಬುಡದಲ್ಲಿ ಚೌಕಾಕಾರವಾಗಿದ್ದು, ಈ ಚೌಕಾಕಾರದ ಭಾಗದಲ್ಲಿ ಮಿಥುನ ಶಿಲ್ಪಗಳನ್ನು ಬಿಡಿಸಲಾಗಿದೆ. ಸ್ತ್ರೀಯರ ವಿವಿಧ ಭಂಗಿಯ ಶಿಲ್ಪಗಳು ಸಹ ಇಲ್ಲಿವೆ. ಕಂಬದ ದಂಡಾಗ್ರವು ಚೌಕಾಕಾರವಾಗಿದ್ದು ಅದರಲ್ಲಿಯು ಅಲಂಕರಣೆ ಮಾಡಲಾಗಿದೆ. ಯಾಳಿ ಬಾಯಿಂದ ಹೊರಟ ಅಲಂಕರಣೆಯು ಇನ್ನೊಂದು ಯಾಳಿಯ ಬಾಯಿಯಲ್ಲಿ ಕೊನೆಗೊಂಡಂತೆ ಚಿತ್ರಿಸಲಾಗಿದೆ. ಈ ರಚನೆಗಳು ಎಲ್ಲ ಕಂಬಗಳಲ್ಲಿ ಒಂದೇ ರೀತಿಯಾಗಿ ಮೂಡಿಬಂದಿದೆ.

ವಿಶಾಲವಾದ ನವರಂಗವು ತ್ರಿಕೂಟ ರಚನೆಯಂತೆ ಕಂಡುಬರುತ್ತದೆ. ಮೂರು ಕಡೆಗೆ ಗರ್ಭಗೃಹದಂತೆ ಕೋಣೆಗಳಿವೆ. ಬಹುಶಃ ಅವುಗಳಲ್ಲಿ ಬಿಡಿಶಿಲ್ಪಗಳನ್ನಿಟ್ಟು ಪೂಜಿಸಲಾಗುತ್ತಿತ್ತು ಎಂಬುದನ್ನು ತಿಳಿಯಬಹುದು. ಇಲ್ಲಿರುವ ಕಂಬಗಳು ಸಹ ಈ ಮೊದಲು ವಿವರಿಸಿದ ಕಂಬಗಳಂತೆಯೇ ಉಳಿದೆಲ್ಲ ಅಲಂಕರಣೆಗಳನ್ನು ಹೊಂದಿವೆ. ಕಂಬಗಳ ಕಲಶ ಭಾಗದಲ್ಲಿಯು ಯಾಳಿಯ ಅಲಂಕರಣೆ ಮಾಡಲಾಗಿದೆ. ತಟ್ಟೆ ಆಕಾರದ ಫಲಕ ಚೌಕಾಕಾರದ ಬೋಧಿಗೆಗಳನ್ನು ಕಂಬಗಳಲ್ಲಿ ಅಳವಡಿಸಲಾಗಿದೆ. ನವರಂಗದ ಬಾಗಿಲವಾಡವು ಸಹ ಗರ್ಭಗೃಹದ ಬಾಗಿಲವಾಡದಂತೆ ಎಲ್ಲ ರಚನೆಗಳನ್ನು ಹೊಂದಿರುವುದು. ನವರಂಗಕ್ಕೆ ಜಾಲಂಧರಗಳನ್ನು ಅಳವಡಿಸಲಾಗಿದ್ದು ಅವುಗಳಲ್ಲಿ ಯಾಳಿ, ಮಕರಗಳಿಂದ ಸುಂದರಗೊಳಿಸಲಾಗಿದೆ. ಲಲಾಟದಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ದೇವಾಲಯದ ಹೊರಗೋಡೆಯಲ್ಲಿ ಮುಂಚಾಚುಗಳಿದ್ದು ಅವು ಸುತ್ತಲೂ ಮುಂದುವರಿದಿವೆ. ಪ್ರಸ್ತರ ಭಾಗದಲ್ಲಿ ಕಪೋತವಿದ್ದು ಅದು ಇಳಿಬಿಟ್ಟಂತೆ ಕಾಣುತ್ತದೆ.

ಎತ್ತರ ಕಟ್ಟೆಯ ಮೇಲೆ ನಿರ್ಮಾಣವಾದ ಈ ದೇವಾಲಯವು ಕಾಲಕ್ರಮೇಣ ಮಣ್ಣಿನಲ್ಲಿ ಹುದುಗಿಹೋಗುವಂತೆ ಕಾಣುತ್ತದೆ. ಆದರೂ ಅದರ ಅಧಿಷ್ಠಾನದಲ್ಲಿರುವ ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ ಹಾಗೂ ಕಪೋತ ಭಾಗಗಳು ಸ್ಪಷ್ಟವಾಗಿಯೇ ಕಂಡುಬರುತ್ತವೆ. ಪ್ರವೇಶ ದ್ವಾರಗಳಿಗೆ ಸೋಪಾನಗಳನ್ನು ಅಳವಡಿಸಲಾಗಿದ್ದು ಅವುಗಳನ್ನು ಸಹ ಹಸ್ತಿಫಲಕ, ಸಿಂಹಫಲಕ ಹಾಗೂ ಯಾಳಿ ಫಲಕಗಳಿಂದ ಅಲಂಕರಣಗೊಳಿಸಲಾಗಿದೆ.

### ಶಿರವಾಳ ಸಿದ್ದೇಶ್ವರ

ಗ್ರಾಮದಲ್ಲಿರುವ ಬೃಹತಾದ ಈ ಗುಡಿಯನ್ನು ಸಿದ್ದೇಶ್ವರ ಅಥವಾ ಸಿದ್ಧಲಿಂಗೇಶ್ವರನೆಂದು ಕರೆಯಲಾಗುತ್ತದೆ. ಇದು ಪಂಚಕೂಟ ತಲವಿನ್ಯಾಸವನ್ನು ಹೊಂದಿರುವುದು. ಪೂರ್ವ ಹಾಗೂ ಉತ್ತರಾಭಿಮುಖವಾಗಿರುವ ಪ್ರವೇಶಗಳನ್ನು ಈ ದೇವಾಲಯದ ಸಂಕೀರ್ಣಕ್ಕೆ ನಿರ್ಮಿಸಲಾಗಿದೆ. ಈ ಒಂದು ದೇವಾಲಯವಲ್ಲದೇ ಇನ್ನೆರಡು ಚಿಕ್ಕ ದೇವಾಲಯಗಳು ಸಹ ಇದೇ ಆವರಣದಲ್ಲಿವೆ.

ನಾಲ್ಕು ದಿಕ್ಕುಗಳಲ್ಲೂ ಪ್ರತ್ಯೇಕ ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ನಿರ್ಮಿಸಲಾಗಿದೆ. ಅಲ್ಲದೇ ಅವುಗಳನ್ನು ಒಗ್ಗೂಡಿಸಿ ಮಧ್ಯದಲ್ಲಿ ಇನ್ನೊಂದು ಗರ್ಭಗೃಹ ರಚಿಸಲಾಗಿದೆ. ಇಂಥ ತಲವಿನ್ಯಾಸ ಹೊಂದಿರುವ ದೇವಾಲಯ ಯಾದಗಿರಿ ಜಿಲ್ಲೆಯಲ್ಲಿ ಸಿಗುವುದಿಲ್ಲ. ಸಿದ್ದೇಶ್ವರ ಗುಡಿಯ ಜೊತೆಗೆ ಈಶ್ವರ, ಶ್ರೀ ಅಘೋರ, ಶ್ರೀವಾಮದೇವ ಮತ್ತು ಶ್ರೀಸದ್ಯೋದ್ಯಜಾತ ಎಂಬ ಹೆಸರಿನ ನಾಲ್ಕು ಗುಡಿಗಳು ಸಹ ಇದೇ ಆವರಣದಲ್ಲಿವೆ. ಇಲ್ಲಿರುವ ದೇವಾಲಯಗಳು ಎಲ್ಲ ಕಡೆಗೂ ಮುಖಮಾಡಿರುವುದನ್ನು ಕಾಣುತ್ತೇವೆ. ಇಲ್ಲಿರುವ ದೇವಾಲಯಗಳ ಬಾಗಿಲವಾಡ, ಭುವನೇಶ್ವರ, ಉತ್ತರಾಂಗದ ಭಾಗ, ಭುವನೇಶ್ವರಿ, ಹೊರಭಿತ್ತಿ, ಪ್ರಸ್ತರ ಹಾಗೂ ಅಧಿಷ್ಠಾನಗಳು ಒಂದೇ ರೀತಿಯದ್ದವುಗಳಾಗಿವೆ. ಅಂದರೆ ಸಾಮಾನ್ಯವಾಗಿ ಒಂದೇ ಲಕ್ಷಣದವುಗಳಾಗಿವೆಯೆಂದು ಹೇಳಬಹುದು.

ಗರ್ಭಗೃಹಗಳ ಬಾಗಿಲವಾಡಗಳು ಚಿತ್ತಾಕರ್ಷಕವಾಗಿವೆ. ಅವು ಪಂಚಶಾಖೆಗಳಿಂದ ಕೂಡಿರುವುದನ್ನು ಗಮನಿಸಬಹುದು. ಅವುಗಳಲ್ಲಿ ಅರ್ಧಕಂಬ, ಪುಷ್ಪಪಟ್ಟಿಕೆ, ಯಾಳಿಪಟ್ಟಿಕೆ

ಹಾಗೂ ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪಗಳಿವೆ. ಅವುಗಳಲ್ಲಿರುವ ಉತ್ತರಾಂಗದ ಭಾಗವು ಮುಂಚಾಚಿದ್ದು ಅದನ್ನು ಸಹ ಅತ್ಯಾಕರ್ಷಕವಾಗಿ ಕೆತ್ತಲಾಗಿದೆ. ಅದರಲ್ಲಿ ಶಿಖರಪಟ್ಟಿಕೆಗಳಿದ್ದು ಅವುಗಳನ್ನು ಯಾಳಿ ಅಲಂಕೃತ ಚಿತ್ರಗಳಿಂದ ಸುಂದರಗೊಳಿಸಲಾಗಿದೆ. ಪೇದ್ಯಭಾಗದಲ್ಲಿರುವ ದ್ವಾರಪಾಲಕ ಉಬ್ಬುಶಿಲ್ಪಗಳು ಸಹ ಮನಮೋಹಕವಾಗಿ ಕೆತ್ತಲ್ಪಟ್ಟಿವೆ. ಅವು ಹಿಂಭಾಗದಲ್ಲಿ ಪ್ರಭಾವಳಿ ಹೊಂದಿರುವುವು. ಅಂತರಾಳ ಹಾಗೂ ನವರಂಗದ ಬಾಗಿಲವಾಡಗಳು ಸಹ ಈ ಮೊದಲು ವಿವರಿಸಿದ ವಿವರಗಳನ್ನೆಲ್ಲ ಒಳಗೊಂಡಿವೆ. ಈ ಲಕ್ಷಣಗಳು ಸಾಮಾನ್ಯವಾಗಿ ಇಲ್ಲಿರುವ ಎಲ್ಲ ದೇವಾಲಯಗಳಲ್ಲಿಯೂ ಕಂಡುಬರುತ್ತವೆ.

ನವರಂಗದಲ್ಲಿರುವ ಕಂಬಗಳು ಕೆಳಭಾಗದಲ್ಲಿ ಚೌಕಾಕಾರ, ದಂಡಾಗ್ರದಲ್ಲಿ ಸಿಲಿಂಡರಿನಾಕಾರದ ಕೆತ್ತನೆ, ಅದರ ಮೇಲ್ಭಾಗದ ಚೌಕನಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಕಲಶ, ಕಪೋತ, ವೃತ್ತಾಕಾರದ ಫಲಕ, ತಟ್ಟೆ ಆಕಾರದ ಫಲಕ ಹಾಗೂ ತರಂಗ ಮಾದರಿಯ ಚೌಕಾಕಾರದ ಬೋಧಿಗೆಗಳನ್ನು ಕಂಬಗಳಲ್ಲಿ ಅಳವಡಿಸಲಾಗಿದೆ. ನವರಂಗದಲ್ಲಿರುವ ಕೋಷ«ಕಗಳು ಶಿಖರಪಟ್ಟಿಕೆಯನ್ನು ಹೊಂದಿವೆ. ತುಂಬಾ ಸುಂದರವಾದ ಹಾಗೂ ಆಳವಾಗಿ ಕೆತ್ತಿರುವ ಭುವನೇಶ್ವರಿ ಬಹು ಆಕರ್ಷಣೀಯವಾಗಿ ಕಂಡುಬರುತ್ತದೆ. ಅದರಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಇಲ್ಲಿರುವ ಕೆಲವು ಗುಡಿಗಳ ನವರಂಗಗಳಿಗೆ ಹೊಂದಿಕೊಂಡಂತೆ ಪ್ರವೇಶ ಮಂಟಪವಿದ್ದು ಅವುಗಳಿಗೆ ಕಕ್ಷಾಸನಗಳಿವೆ. ಅವುಗಳಲ್ಲಿರುವ ಕಂಬಗಳು ಚೌಕಾಕಾರದವು. ದೇವಾಲಯದ ಅಧಿಷಾ«ನವು ಉಪಾನ, ಜಗತಿ, ಕಪೋತ ಹಾಗೂ ಗಳ ಭಾಗಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಕಕ್ಷಾಸನದ ಅಧಿಷಾ«ನ ಹಾಗೂ ಗೋಡೆಯ ಹೊರಮುಖದಲ್ಲಿ ಕೆಲವು ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಪ್ರತ್ಯೇಕವಾಗಿ ವಿವರಿಸಿದರೆ ಪ್ರತಿದೇವಾಲಯಕ್ಕೂ ಅಷ್ಟೇ ವಿವರಣೆ ನೀಡಬೇಕಾಗುತ್ತದೆ. ಆದ್ದರಿಂದ ಸಾಮಾನ್ಯವಾದ ಲಕ್ಷಣಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

### ಹಯ್ಯಾಳ ಬಿ–ರಾಮಲಿಂಗೇಶ್ವರ

ಕ್ರಿ.ಶ.೧೦-೧೧ನೇ ಶತಮಾನದಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ. ಆರೇಳು ಶತಮಾನಗಳ ಕಾಲ ಭವ್ಯವಾಗಿಯೇ ಮೆರೆದಿರುವ ಈ ದೇವಾಲಯವು ಆ ನಂತರ ಹಲವು ಕಾರಣಗಳಿಂದಾಗಿ ಅತ್ಯಂತ ಕ್ಷೀಣಸ್ಥಿತಿಗೆ ತಲುಪಿ ಐತಿಹಾಸಿಕವಾಗಿ ಮಹತ್ವದ ಸ್ಥಾನಮಾನ ಹೊಂದಿದ್ದ ಹಯ್ಯಾಳ ಬಿ.ಗ್ರಾಮದಲ್ಲಿರುವುದನ್ನು ಅಳಿದುಳಿದ ಕೆಲವು ಪ್ರಾಚೀನ ಸ್ಮಾರಕಗಳಲ್ಲಿ ಇದು ಅತೀ ಮುಖ್ಯವಾದ ದೇವಾಲಯವಾಗಿದೆ. ಸಾವುಕಾರ ಓಣಿಯಲ್ಲಿರುವ ಪ್ರಸ್ತುತ ಈ ದೇವಾಲಯವು ಗರ್ಭಗೃಹ, ಅಂತರಾಳ, ವಿಶಾಲವಾದ ನವರಂಗವನ್ನು ಹೊಂದಿರುವುದನ್ನು ಕಾಣುತ್ತೇವೆ. ನವರಂಗಕ್ಕೆ ಹೊಂದಿಕೊಂಡಂತೆ ಕಕ್ಷಾಸನ ಇದ್ದಿರಬಹುದಾದ ಕುರುಹುಗಳನ್ನು ಸಹ ಈವರೆಗೂ ಕಾಣಬಹುದು. ಪೂರ್ವಾಭಿಮುಖವಾಗಿರುವ ಈ ದೇವಾಲಯದ ಹೊರಗೋಡೆಗಳು ಬಿದ್ದಿವೆ. ಸಂಬಂಧಿಸಿದ ಶಿಲ್ಪಾವಶೇಷಗಳು ತೃಟಿತಗೊಂಡಿವೆ. ಅವುಗಳಲ್ಲಿ ಅಳಿದುಳಿದವುಗಳನ್ನು ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿ ಇಡಲಾಗಿದೆ.

ಕಲ್ಯಾಣ ಚಾಲುಕ್ಯ ಕಾಲದ ಹಾಗೂ ಆ ಶೈಲಿಯನ್ನು ಪ್ರತಿನಿಧಿಸುವ ಈ ದೇವಾಲಯದ ಗರ್ಭಗೃಹದಲ್ಲಿ ಪ್ರಾಚೀನ ಲಿಂಗಕ್ಕಿದ್ದ ದಂಡ(ರುದ್ರ) ಭಾಗ ಮಾತ್ರ ಉಳಿದುಕೊಂಡಿದೆ. ಯೋನಿ ಹಾಗೂ ಪೀಠಗಳು ಕಾರಣಾಂತರಗಳಿಂದ ಒಡೆದಿವೆ. ಗರ್ಭಗೃಹದ ಬಾಗಿಲವಾಡಿನ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಉತ್ತರಾಂಗ ಭಾಗವು ಸರಳ ರಚನೆಯದ್ದು. ಬಾಗಿಲವಾಡದಲ್ಲಿರುವ ಚೌಕಟ್ಟುಗಳು ಸಹ ಅತ್ಯಂತ ಸರಳವಾಗಿವೆ. ಅವುಗಳಲ್ಲಿ ಹೊಸದ ಹಗ್ಗದ ಅಲಂಕರಣೆ ಮಾಡಲಾಗಿದ್ದು ಕೆಳ ಭಾಗದಲ್ಲಿ ದ್ವಾರ ಪಾಲಕ ಉಬ್ಬುಶಿಲ್ಪಗಳ ಬದಲಾಗಿ ಪೂರ್ಣ ಕುಂಭಗಳನ್ನು ರಚಿಸಲಾಗಿದೆ. ಗರ್ಭಗೃಹದಲ್ಲಿರುವ ಭುವನೇಶ್ವರಿ ಭಾಗವು ವೃತ್ತಾಕಾರವಾಗಿದ್ದು ಅದು ಪುಷ್ಪ ಕೆತ್ತನೆಯಿಂದ ಕೂಡಿರುವುದು. ಗರ್ಭಗೃಹದ ಒಳಗೋಡೆಯಲ್ಲಿ ಸುತ್ತಲೂ ಚಿಕ್ಕದಾದ ಕಟ್ಟೆ ಕಟ್ಟಲಾಗಿದೆ.

ಅಂತರಾಳಕ್ಕೆ ಬಾಗಿಲವಾಡದ ಬದಲಿಗೆ ದುಂಡನೆಯ ಕಂಬಗಳಿಂದ ನಿರ್ಮಿಸಲ್ಪಟ್ಟ ತೋರಣವನ್ನು ಜೋಡಿಸಲಾಗಿದೆ. ಛತ್ತಿನಲ್ಲಿ ಭುವನೇಶ್ವರಿ ಕೆತ್ತನೆಯಿದೆ. ಇದು ವೃತ್ತಾಕಾರವಾಗಿದ್ದು ಪುಷ್ಪ ಅಲಂಕರಣೆಯನ್ನು ಹೊಂದಿರುವುದು. ತೃಟಿತಗೊಂಡ ನಂದಿ ಶಿಲ್ಪ, ಭೈರವ ಹಾಗೂ ದಂಪತಿ ಅಥವಾ ದೈವಭಕ್ತರಿಗೆ ಸಂಬಂಧಿಸಿದ ಶಿಲ್ಪಗಳು ಅಂತರಾಳದಲ್ಲಿವೆ.

ರಾಮಲಿಂಗೇಶ್ವರ ದೇವಾಲಯದ ನವರಂಗವು ತಕ್ಕಮಟ್ಟಿಗೆ ವಿಶಾಲವಾಗಿದ್ದು, ಅದರ ಹೊರಗೋಡೆಯಲ್ಲಿನ ಕೆಲವು ಭಾಗಗಳು ಮಾತ್ರ ಬಿದ್ದಿವೆ. ಹೀಗಾಗಿ ತೆರದ ಛತ್ತಿನಂತೆ ಈ ನವರಂಗವು ಕಾಣುತ್ತದೆ. ಕಲ್ಯಾಣ ಚಾಲುಕ್ಯ ಮಾದರಿಯ ನಾಲ್ಕು ಕಂಬಗಳು ನವರಂಗದಲ್ಲಿವೆ. ಇವು ಬುಡದಲ್ಲಿ ಚೌಕಾಕಾರವಾಗಿದ್ದು, ಅದರ ಮೇಲಿನ ಭಾಗದಲ್ಲಿ ಅಂದರೆ ದಂಡಾಗ್ರದಲ್ಲಿ ಮೂವತ್ತೆರಡು ಪಟ್ಟಿಕೆಗಳನ್ನು ಲಂಬವಾಗಿ ಕಂಡರಿಸಲಾಗಿದೆ. ಇದರಲ್ಲಿರುವ ಎಲ್ಲ ಪಟ್ಟಿಕೆಗಳನ್ನು ಸುತ್ತಿ ಕಟ್ಟಿದಂತೆ ಕಾಣುವ ಹಾಗೆ ಅಡ್ಡವಾಗಿ ಇನ್ನೊಂದು ಪಟ್ಟಿಯನ್ನು ಸಹ ಇದೇ ಭಾಗದಲ್ಲಿ ಕಂಡರಿಸಲಾಗಿದೆ. ಕಂಬದಲ್ಲಿರುವ ಘಟ ಮತ್ತು ಕಲಶ ಭಾಗಗಳನ್ನು ಸಿಲಿಂಡರಿಕಲ್ ಮಾದರಿಯಲ್ಲಿ ಕೆತ್ತಲಾಗಿದೆ. ದುಂಡನೆಯ ಫಲಕ ಹಾಗೂ ಚೌಕಾಕಾರದ ಬೋಧಿಗೆಯನ್ನು ಕಂಬಗಳಲ್ಲಿ ಜೋಡಿಸಲಾಗಿದೆ. ಇಂಥದ್ದೆ ಮಾದರಿಯನ್ನು ನವರಂಗದ ಗೋಡೆಯಲ್ಲಿರುವ ಅರ್ಧಕಂಬಗಳಲ್ಲಿಯೂ ಸಹ ಕಾಣಬಹುದು. ಒಳಗೊಂಡಿವೆ. ಈ ನಾಲ್ಕು ಕಂಬಗಳನ್ನು ಒಳಗೊಂಡಂತೆ ಎತ್ತರದ ಕಟ್ಟೆ ನಿರ್ಮಾಣವಾಗಿವೆ. ನವರಂಗದ ಛತ್ತಿನಲ್ಲಿ ವೃತ್ತಾಕಾರದಿಂದ ಕೂಡಿದ ಪುಷ್ಪ ಮಾದರಿಯ ಭುವನೇಶ್ವರಿಯನ್ನು ಕೆತ್ತಲಾಗಿದೆ. ಈ ದೇವಾಲಯವನ್ನು ಸ್ವಲ್ಪ ತಗ್ಗಿನಲ್ಲಿ ಕಟ್ಟಲಾಗಿದ್ದು ಅದನ್ನು ಪ್ರವೇಶಿಸಲು ಮೆಟ್ಟಿಲುಗಳ ಸಹಾಯ ಪಡೆಯಬೇಕಾಗುತ್ತದೆ.

ರಾಮಲಿಂಗೇಶ್ವರ ದೇವಾಲಯದಲ್ಲಿ ತೃಟಿತಗೊಂಡಿರುವ ಕೆಲವು ಶಿಲ್ಪಗಳನ್ನು ಕಾಣುತ್ತೇವೆ. ಮುಖ್ಯವಾಗಿ ಅಂತರಾಳದಲ್ಲಿ ಎರಡು ಶಿಲ್ಪಗಳನ್ನಿಡಲಾಗಿದ್ದು ಅವುಗಳಲ್ಲಿ ನಗ್ನ ಭೈರವ ಹಾಗೂ ದಂಪತಿಯ ಶಿಲ್ಪಗಳನ್ನು ಕಾಣಬಹುದು. ದಂಪತಿಗಳಿಗೆ ಸಂಬಂಧಿಸಿದ ಶಿಲ್ಪವನ್ನು ವಿವರಿಸಿ ಅರ್ಥೈಸುವುದು ಸ್ವಲ್ಪ ಕಷ್ಟದ ವಿಷಯವೇ ಸರಿ. ಇದರಲ್ಲಿ ತ್ರಿಭಂಗಿಯಲ್ಲಿರುವ ಪುರುಷನನ್ನು ಚಿತ್ರಿಸಲಾಗಿದ್ದು ಅವನು ದ್ವಿಭುಜದಾರಿ. ಅದರಲ್ಲಿ ಒಂದು ಕೈಯ ಅಸ್ಪಷ್ಟವಾಗಿದೆ. ಇನ್ನೊಂದು ಕೈಯಲ್ಲಿ ದಂಡ ಹಿಡಿದಿರುವನು. ಅದು ಚೌರಿಯಂತೆ ಬಾಗಿದೆ. ಈತನ

ಪಕ್ಕದಲ್ಲಿಯೇ ಸ್ತ್ರೀಯ ಚಿತ್ರವಿದ್ದು ಅದು ಕೈಯಲ್ಲಿ ಖಡ್ಗಹಿಡಿದಿರುವಂತೆ ತೋರುತ್ತದೆ. ಈ ಸ್ತ್ರೀಯ ತಲೆಕೂದಲನ್ನು ವೃತ್ತಾಕಾರವಾಗಿ ಸುತ್ತಿ ಅಲಂಕರಣ ಮಾಡಲಾಗಿದೆ. ಶಿರದ ಹಿಂಭಾಗದಲ್ಲಿ ಪ್ರಭಾವಳಿಯನ್ನು ಕೆತ್ತಲಾಗಿದೆ. ಈ ಶಿಲ್ಪದಲ್ಲಿರುವ ವ್ಯಕ್ತಿಗಳ ಮುಖಭಾವ ಹಾಗೂ ಅವುಗಳಲ್ಲಿರುವ ಅಲಂಕರಣೆಯನ್ನು ಗಮನಿಸಿದರೆ ಬಹುಶಃ ಇವರು ರಾಜ ದಂಪತಿಗಳಾಗಿರಬಹುದೇ? ಅಥವಾ ಪ್ರಸ್ತುತ ದೇವಾಲಯವನ್ನು ನಿರ್ಮಿಸಿದ ವ್ಯಕ್ತಿಗಳು ಇವರೇ ಆಗಿರಬಹುದೇ? ಅಥವಾ ವಿಶೇಷ ದಾನದತ್ತಿಗಳನ್ನು ನೀಡಿರುವ ದಾನಿಗಳಾಗಿರಬಹುದೆಂದು ಅಭಿಪ್ರಾಯಿಸಬಹುದಾದ ಅನಿಸಿಕೆಗಳಿಗೆ ಹೆಚ್ಚಿನ ಅವಕಾಶಗಳುಂಟು.

ಅಂತರಾಳದಲ್ಲಿ ಇನ್ನೊಂದು ಶಿಲ್ಪವಿದ್ದು ಅದು ನಗ್ನ ಭೈರವನಿಗೆ ಸಂಬಂಧಪಟ್ಟದ್ದು. ತ್ರಿಭಂಗಿಯಲ್ಲಿ ನಿಂತಿರುವ ಈ ಶಿಲ್ಪದಲ್ಲಿ ವಿಶೇಷವಾದ ಅಲಂಕರಣೆಗಳನ್ನು ಮಾಡಿದ್ದನ್ನು ಗಮನಿಸಬಹುದು. ಈತನು ಚತುರ್ಭುಜನಾಗಿದ್ದು ಕೈಗಳಲ್ಲಿ ಚಾಮರ, ಖಡ್ಗ, ತ್ರಿಶೂಲ ಹಾಗೂ ಬಟ್ಟಲನ್ನು ಕೆತ್ತಲಾಗಿದೆ. ಅದರ ತಲೆಗೂದಲು ಚದುರಿದಂತೆ(ಉಗ್ರಸ್ವರೂಪ ಕಾಣಲು) ಸೆಟೆದು ನಿಂತಿವೆ. ಕೊರಳಲ್ಲಿ ಸರ್ಪಗಳಿಂದ ಕೂಡಿದ ಹಾರ, ಯಜ್ಞೋಪವೀತ, ತೋಳಬಂಧಿ, ಕಾಲುಗಳಲ್ಲಿ ಕಡುಗಗಳು ಹಾಗೂ ಎರಡು ಕಾಲುಗಳಿಗೆ ಬಳ್ಳಿಯಂತೆ ಸುತ್ತಿಕೊಂಡ ಸರ್ಪಗಳನ್ನು ಈ ಶಿಲ್ಪದಲ್ಲಿ ಚಿತ್ರಿಸಲಾಗಿದೆ. ಇದು ಸುಮಾರು ಮೂರು ಅಡಿ ಎತ್ತರವಾಗಿರಬಹುದು.ಕೊಟ್ಟಿನಲ್ಲಿ ಈ ಶಿಲ್ಪವು ಅಧ್ಯಯನ ದೃಷ್ಟಿಯಿಂದ ಮಹತ್ವದ್ದೆನಿಸುತ್ತದೆ. ಅಂತರಾಳದಲ್ಲಿ ದೇವಾಲಯಕ್ಕೆ ಸಂಬಂಧಿಸಿದ ಇನ್ನೊಂದು ಪ್ರಾಚೀನವಾಗಿರುವ ನಂದಿಶಿಲ್ಪವನ್ನು ಕಾಣುತ್ತೇವೆ.

ನವರಂಗದಲ್ಲಿ ಎರಡು ಬಿಡಿ ಶಿಲ್ಪಗಳಿದ್ದು ಅದರಲ್ಲಿ ಒಂದು ಕೈಮುಗಿದು ಪದ್ಮಾಸನದಲ್ಲಿ ಕುಳಿತ ಶಿಲ್ಪ. ಇದರ ರುಂಡ ಸಂಪೂರ್ಣವಾಗಿ ಬೇರ್ಪಟ್ಟಿದ್ದು ಬಹುಶಃ ಇದು ನಾಶವಾಗಿದೆ. ಈ ಶಿಲ್ಪದ ಕೊರಳು ಮತ್ತು ತೋಳುಗಳಲ್ಲಿ ಮಣಿಸರಗಳ ಅಲಂಕರಣೆ ಇದೆ. ಈ ಶಿಲ್ಪವು ಬಹುಶಃ ದೇವಾಲಯಕ್ಕೆ ಸಂಬಂಧಿಸಿದ ಋಷಿ ಭಕ್ತನ ಶಿಲ್ಪವಾಗಿರಬಹುದು.

ರಾಮಲಿಂಗೇಶ್ವರ ದೇವಾಲಯದ ನವರಂಗದಲ್ಲಿ ವೀರಗಲ್ಲು ಶಿಲ್ಪವಿದ್ದು ಅದು ಮೂರು ಹಂತದಲ್ಲಿ ವಿವರವನ್ನು ಹೊಂದಿದೆ. ಕೆಳಭಾಗದಲ್ಲಿ ಯುದ್ಧನಿರತ ಯೋಧರ ಚಿತ್ರಗಳು ಎರಡನೆಯ ಹಂತದಲ್ಲಿ ಯುದ್ಧದಲ್ಲಿ ಮಡಿದ ವೀರನು ಸ್ವರ್ಗ ಆರೋಹಣ ಮಾಡುವ ಹಾಗೂ ಮೂರನೆಯ ಹಂತದಲ್ಲಿ ವೀರಮರಣ (ಬಲಿದಾನ)ಕ್ಕಾಗಿ ಶಿವನಲ್ಲಿ ಲೀನವಾದ ದೃಶ್ಯಗಳನ್ನು ಚಿತ್ರಿಸಲಾಗಿದೆ. ಇದರ ಮೇಲೆ ಅಕ್ಷರಗಳನ್ನು ಕೆತ್ತಿರುವುದಿಲ್ಲ. ಐತಿಹಾಸಿಕ ಮಹತ್ವವನ್ನು ಪಡೆದಿರುವ ಈ ಗ್ರಾಮದಲ್ಲಿ ಪ್ರಾಚೀನವಾದ ಸ್ಮಾರಕ ಹಾಗೂ ಶಿಲ್ಪಾವಶೇಷಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಆದರೆ ದುರ್ದೈವಶಾತ್ ಲಿಖಿತ ಶಾಸನಗಳಾವವು ಈವರೆಗೂ ಕಂಡುಬಂದಿಲ್ಲ.

ಈ ಗ್ರಾಮವು ನದಿಯ ಪರಿಸರಕ್ಕೆ ಸಮೀಪವಾಗಿದ್ದರಿಂದ ಈ ಗ್ರಾಮದ ಸುತ್ತಲಿರುವ ಹಲವು ಗ್ರಾಮಗಳಲ್ಲಿ ನಡೆಯುವ ಆಯಾ ಗ್ರಾಮ ದೇವರ ಜಾತ್ರೆ ಉತ್ಸವಗಳಿಗೆ ಸಂಬಂಧಿಸಿದ ವಿಧಿ ಆಚರಣೆಗಳನ್ನು ನೆರವೇರಿಸುವ ಸಂದರ್ಭಗಳಲ್ಲಿ ಹಯ್ಯಾಳ ಹೊಳೆ(ಕೃಷ್ಣಾನದಿ)ಗೆ ಅಥವಾ

ತೀರ್ಥದಲ್ಲಿ ಪವಿತ್ರ ಸ್ನಾನ ಮಾಡುವುದು ಕಡ್ಡಾಯ ಎಂಬ ವಾಡಿಕೆ ಇದೆ. ಈ ವಿವರವನ್ನು ಎಲ್ಲ ಗ್ರಾಮವಾಸಿಗಳು ಹೇಳುತ್ತಾರೆ(ಈ ಪರಿಸರದಲ್ಲಿ ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ಈ ವಿವರಣೆಯನ್ನು ದಾಖಲಿಸಿಕೊಳ್ಳಲಾಗಿದೆ).

**ಅರಕೇರಿ ಸಹಸ್ರಲಿಂಗೇಶ್ವರ**

ಅರಕೇರಿ ಪ್ರಾಚೀನ ಇತಿಹಾಸವನ್ನು ಹೊಂದಿರುವ ಮುಖ್ಯ ಗ್ರಾಮವಾಗಿದೆ. ಇದು ಸುರಪುರ ಆಡಳಿತಗಾರರ ಜಾಹಾಗೀರ್ ಆಗಿತ್ತು. ಹಾಗಾಗಿ ಇದನ್ನು ಜಾಗೀರ ಅರಕೇರಿ ಅಥವಾ ಅರಕೇರಿ ಜೆ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಇಲ್ಲಿರುವ ಸಹಸ್ರಲಿಂಗ ದೇವಾಲಯವು ಅಧ್ಯಯನಕಾರರ ಆಕರ್ಷಣೆಯ ಕೇಂದ್ರ. ಈ ಗುಡಿಯನ್ನು ಬಳಸಿಕೊಂಡೆ ಗರ್ಭಗೃಹದ ಮೇಲ್ಭಾಗದಲ್ಲಿಯೇ ಹುಡೇವು ಅಥವಾ ಬುರುಜೊಂದನ್ನು ಕಟ್ಟಲಾಗಿದೆ. ಅದು ಈವರೆಗೂ ಉಳಿದುಕೊಂಡಿದೆ. ಈ ದೇವಾಲಯವು ಗರ್ಭಗೃಹ, ತೆರದ ಅಂತರಾಳ ಹಾಗೂ ವಿಶಾಲವಾದ ನವರಂಗವನ್ನು ಒಳಗೊಂಡಿರುವುದನ್ನು ಗಮನಿಸಬಹುದು.

ಗರ್ಭಗೃಹದಲ್ಲಿರುವ ಲಿಂಗವು ತುಂಬಾ ಆಕರ್ಷಕವಾಗಿದೆ. ಅದರ ಬ್ರಹ್ಮಭಾಗ ಹಾಗೂ ವಿಷ್ಣುಭಾಗವು ಅಲಂಕರಣೆಯಿಂದ ಕೂಡಿರುವುದು. ಸುಮಾರು ನಾಲ್ಕು ಅಡಿ ಎತ್ತರದ ಈ ಲಿಂಗವು ಸ್ತರಗಳನ್ನು ಹೊಂದಿದೆ. ರುದ್ರ ಅಥವಾ ದಂಡಾಕಾರದ ಭಾಗದ ಮೇಲೆ ಕೆಲವು ಗೆರೆಗಳನ್ನು ಚಿತ್ರಿಸಿದ್ದಾರೆ. ಹಾಗಾಗಿಯೇ ಇದಕ್ಕೆ ಸಹಸ್ರಲಿಂಗವೆಂಬ ಹೆಸರು ಬಂದಿತೆಂದು ಸ್ಥಳೀಯರು ಅಭಿಪ್ರಾಯಿಸುತ್ತಾರೆ. ಲಿಂಗಕ್ಕಿರುವ ಯೋನಿಪೀಠವು ಅಗಲವಾಗಿದ್ದು ಅದರ ಪ್ರಣಾಳಿಯು ಸಹ ಉದ್ದವಾಗಿದೆ. ವಿಶೇಷವಾದ ಅಲಂಕರಣೆಯಿಂದ ಕೂಡಿದ ಈ ಲಿಂಗವು ಶಿಲ್ಪಿಯ ಕೈಚಳಕ್ಕೆ ಹಿಡಿದ ಕೈಗನ್ನಡಿಯಂತೆ ತೋರುತ್ತದೆ.

ಗರ್ಭಗೃಹದ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ಕೂಡಿದ್ದು ಅದರಲ್ಲಿ ಅರ್ಧಕಂಬ, ಪುಷ್ಪಪಟ್ಟಿಕೆ ಹಾಗೂ ಯಾಳಿಗಳಿಂದ ಕೂಡಿದ ಉಬ್ಬುಶಿಲ್ಪಗಳ ಪಟ್ಟಿಕೆಯನ್ನು ಬಹು ಸೊಗಸಾಗಿ ಚಿತ್ರಿಸಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಈ ದ್ವಾರಬಂಧದ ಕೆಳಭಾಗಗಳಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ಇಕ್ಕೆಲಗಳಲ್ಲಿ ಕಂಡರಿಸಲಾಗಿದೆ.

ತೆರದ ಅಂತರಾಳವು ಬರಿದಾಗಿದೆ. ಇದಕ್ಕೆ ವೃತ್ತಕಂಬಗಳಿಂದ ಕೂಡಿದ ತೋರಣವನ್ನು ನಿರ್ಮಿಸಲಾಗಿದೆ. ಈ ಮಕರ ತೋರಣದಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರನ ಸುಂದರವಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ನವರಂಗವು ವಿಶಾಲವಾಗಿದ್ದು ಅದರಲ್ಲಿ ಬೃಹದಾಕಾರದ ನಾಲ್ಕು ಕಂಬಗಳಿವೆ. ಹಗರಟಗಿಯ ಕುಂತಿಯ ಗುಡಿಯಲ್ಲಿರುವ ಕಂಬಗಳ ರಚನೆಗಳನ್ನೇ ಪ್ರತಿಬಿಂಬಿಸುವ ಇಲ್ಲಿರುವ ಕಂಬಗಳು ಬುಡಭಾಗದಲ್ಲಿ ಚೌಕಾಕಾರ ಹಾಗೂ ದಂಡ ಹಾಗೂ ಕಲಶ ಭಾಗದಲ್ಲಿ ವೃತ್ತಾಕಾರದ ರಚನೆಗಳನ್ನು ಹೊಂದಿವೆ. ಅಲ್ಲದೇ ನವರಂಗದಲ್ಲಿರುವ ಇನ್ನೂ ಕೆಲವು ಕಂಬಗಳು ವೃತ್ತಾಕಾರದವುಗಳು.

ಭುವನೇಶ್ವರಿಯ ಭಾಗ ಖಾಲಿ ಇದೆ. ನವರಂಗದ ಬಾಗಿಲವಾಡವು ಗರ್ಭಗೃಹದ ಬಾಗಿಲವಾಡದ ರಚನೆಯನ್ನೇ ಹೋಲುತ್ತದೆ. ಗುಡಿಯ ಮುಂಭಾಗದಲ್ಲಿ ತೃಟಿತಗೊಂಡಿರುವ

ಕೆಲವು ಬಿಡಿಶಿಲ್ಪಗಳನ್ನು ಇಡಲಾಗಿದೆ. ಗಣೇಶನ, ಮಹಿಷಮರ್ದಿನಿ ಮತ್ತು ಕುಳಿತ ಭಂಗಿಯಲ್ಲಿರುವ ಭಗ್ನಗೊಂಡ ಜಿನ ಶಿಲ್ಪವು ಇಲ್ಲಿರುವುದನ್ನು ಕಾಣುತ್ತೇವೆ.

ದೇವಾಲಯದ ಹೊರಗೋಡೆಯು ಮುಂಚಾಚುಗಳನ್ನು ಹೊಂದಿದ್ದು ಅದರಲ್ಲಿರುವ ಪ್ರತಿ ಮುಂಚಾಚುಗಳು ಪ್ರಸ್ತರದಲ್ಲಿ ಕೂಡಿಕೊಳ್ಳುತ್ತವೆ. ಆದರೆ ಸುಂದರವಾಗಿದ್ದ ಈ ಗೋಡೆಯ ಭಾಗವು ಸದ್ಯದ ದಿನಗಳಲ್ಲಿ ಹೆಚ್ಚಿನ ಕ್ಷೀಣಿಸುವಿಕೆಗೆ ಒಳಗಾಗುತ್ತಿದೆ. ಅಧಿಷ್ಠಾನ ಭಾಗವು ಉಪಾನ, ಜಗತಿ, ಗಳ, ಕಪೋತ ಭಾಗಗಳನ್ನು ಹೊಂದಿರುವುದು. ಅಧಿಷ್ಠಾನದಲ್ಲಿರುವ ಪ್ರತಿಭಾಗವು ಪ್ರಸ್ತರ ಭಾಗದಲ್ಲಿ ಒಡಮೂಡಿದೆ.

ಈ ಗುಡಿಯು ಹಿಂದೆ ತ್ರಿಕೂಟವಾಗಿತ್ತೆಂಬ ಸುಳಿವು ಲಭಿಸುತ್ತಿದ್ದು, ಪ್ರಧಾನ ಗರ್ಭಗೃಹದ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ನವರಂಗಕ್ಕೆ ಹೊಂದಿಕೊಂಡಂತೆ ಅಂತರಾಳ ಭಾಗವಿದ್ದಂತೆ ತೋರುತ್ತದೆ ಎಂದು ಅಭಿಪ್ರಾಯಿಸಲಾಗಿದೆ(ಪಾಟೀಲ ಎಂ.ಬಿ, ಗುಲಬರ್ಗಾ ಗ್ಯಾಜಿಟಿಯರ್, ಪುಟ.೬೮೦). ಆದರೆ ಅಂಥ ಯಾವುದೇ ಕುರುಹು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಹಾಗಾಗಿ ಇದು ತ್ರಿಕೂಟವಾಗಿತ್ತು ಎಂಬುದಕ್ಕೆ ಖಚಿತವಾದ ಸಾಕ್ಷಿಗಳು ಈ ಸ್ಮಾರಕದಲ್ಲಿ ದೊರಕುವುದಿಲ್ಲವೆಂದು ಅಭಿಪ್ರಾಯಿಸಬಹುದು.

**ಏವೂರು-ಬಾವಿ ಬಸವಣ್ಣ**

ಏವೂರು ಗ್ರಾಮದಲ್ಲಿರುವ ಸಂಗಮೇಶ್ವರ ಮತ್ತು ಸೋಮೇಶ್ವರ ದೇವಾಲಯದ ಆವರಣದಲ್ಲಿಯೇ ಐತಿಹಾಸಿಕ ಪ್ರಸಿದ್ಧ ಈ ಬಾವಿ ಬಸವಣ್ಣನ ದೇವಾಲಯವು ಇದೆ. ಇದು ಕಲಾತ್ಮಕತೆಯ ದೃಷ್ಟಿಯಿಂದ ಉಳಿದೆಲ್ಲ ದೇವಾಲಯಗಳಿಗಿಂತ ಎತ್ತರದ ಸ್ಥಾನದಲ್ಲಿ ನಿಲ್ಲುತ್ತದೆ. ಇಲ್ಲಿರುವ ಸುಂದರವಾದ ಬಾವಿಯು ಸಹ ಇದೇ ದೇವಾಲಯಕ್ಕೆ ಸಂಬಂಧಿಸಿದಂತೆ ನಿರ್ಮಾಣಗೊಂಡಿರುವುದೆಂದು ತಿಳಿಯಬಹುದು. ಅಲ್ಲದೇ ಪೂರ್ವಾಭಿಮುಖ ಪ್ರವೇಶ ಮಂಟಪವು ಸಹ ಇದೇ ದೇವಾಲಯ ಹಾಗೂ ಬಾವಿಗೆ ನೇರವಾಗಿ ಸಂಬಂಧಿಸಿದಂತೆ ರಚನೆಯಾಗಿರುವುದೆಂದು ಭಾಸವಾಗುತ್ತದೆ. ಕ್ರಿ.ಶ.೧೨ನೇ ಶತಮಾನದಲ್ಲಿಯೇ ನಿರ್ಮಾಣವಾದ ಇಲ್ಲಿನ ಬಾವಿಯಿಂದಾಗಿಯೇ ಈ ದೇವಾಲಯವನ್ನು ಸಹ ಬಾವಿ ಬಸವಣ್ಣನ ಹೆಸರಿಂದಲೇ ಕರೆಯಲಾಗುತ್ತದೆ.

ಈ ದೇವಾಲಯವು ಗರ್ಭಗೃಹ, ಆಯತಾಕಾರದಲ್ಲಿರುವ ಅಂತರಾಳ ಹಾಗೂ ಅರ್ಧ ಮಂಟಪ ಹೊಂದಿರುವುದನ್ನು ಕಾಣುತ್ತೇವೆ. ಗರ್ಭಗೃಹದಲ್ಲಿ ಲಿಂಗದ ಶಿಲ್ಪವಿದ್ದು ಅದನ್ನೇ ಬಾವಿಬಸವಣ್ಣನೆಂಬ ಹೆಸರಿನಿಂದ ಪೂಜಿಸಲಾಗುತ್ತದೆ. ಗರ್ಭಗೃಹದ ಬಾಗಿಲವಾಡವು ಪಂಚಶಾಖೆಗಳಿಂದ ಕೂಡಿದ್ದು ಅದರಲ್ಲಿ ಎಲೆಬಳ್ಳಿ ಪಟ್ಟಿಕೆ, ಅರ್ಧವೃತ್ತಕಂಬ, ಚಿಕ್ಕದಾದ ಸಿಂಹದ ಪಟ್ಟಿಕೆಯನ್ನು ತುಂಬಾ ಸೂಕ್ಷ್ಮವಾಗಿ ಕೆತ್ತನೆ ಮಾಡಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದ್ದು ಅಲ್ಲದೇ ಅದರ ಉತ್ತರಾಂಗದ ಭಾಗವು ಸಹ ವಿಶೇಷ ಅಲಂಕರಣೆಗಳಿಂದ ಕೂಡಿರುವುದನ್ನು ಗಮನಿಸಬಹುದು. ಬಾಗಿಲವಾಡದ ಪೇದ್ಯಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಹೊಸ್ತಿಲ ಭಾಗವು ಸಹ ಚಿತ್ತಾಕರ್ಷಕವಾಗಿ ಮೂಡಿಬಂದಿದೆ.

ಅಂತರಾಳದ ಛತ್ತಿನಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ಕೆತ್ತಲಾಗಿದೆ. ಅಂತರಾಳದ ಬಾಗಿಲವಾಡದ ಇಕ್ಕೆಲಗಳಲ್ಲಿ ಕೋಷ«ಕಗಳಿದ್ದು ಅವು ಬರಿದಾಗಿವೆ. ಆದರೆ ಅವುಗಳಲ್ಲಿ ಶಾಸನ ಫಲಕಗಳನ್ನು ಹೂಳಿಡಲಾಗಿದೆ. ಇಲ್ಲಿರುವ ಅರ್ಧಕಂಬಗಳು ಅಥವಾ ಗೋಡೆಯಲ್ಲಿರುವ ಅರೆ ಕಂಬಗಳ ಮೇಲೂ ಕೆಲವು ಅಲಂಕರಣೆ ಮಾಡಲಾಗಿದೆ. ಈ ದೇವಾಲಯಕ್ಕೆ ಆಯತಾಕಾರದ ಮುಖಮಂಟಪವಿದ್ದು ಅದಕ್ಕೆ ಕಕ್ಷಾಸನದ ವ್ಯವಸ್ಥೆ ಮಾಡಲಾಗಿದೆ. ಮೇಲಿನ ಛತ್ತು ಹಾಗೂ ಕಕ್ಷಾಸನ ಕಟ್ಟೆಯ ನಡುವೆ ಇನ್ನೆರಡು ಚಿಕ್ಕ ಕಂಬಗಳನ್ನು ಅಳವಡಿಸಲಾಗಿದೆ.

ಬಾವಿ ಬಸವಣ್ಣನ ದೇವಾಲಯದ ಹೊರಗೋಡೆಯ ಭಾಗವನ್ನು ತುಂಬಾ ಚಿತ್ತಾಕರ್ಷಕವಾಗಿ ಕೆತ್ತಲಾಗಿದೆ. ಬಹುಕೋನಾಕೃತಿಯ ವಿನ್ಯಾಸಹೊಂದಿರುವ ಈ ದೇವಾಲಯದ ಗೋಡೆಯ ಪ್ರತಿ ಕೂಟದಲ್ಲಿ, ಚತುಸ್ರಾಕಾರದ ಅರ್ಧ ವೃತ್ತ ಕಂಬಗಳನ್ನು ಕಂಡರಿಸಲಾಗಿದೆ. ಅವು ಬುಡದಿಂದ ಶಿಖರದವರೆಗೂ ಮುಂದುವರೆದಿವೆ. ಅಲ್ಲದೇ ಎರಡೂ ಕಂಬಗಳ ಮಧ್ಯದ ಭಾಗದಲ್ಲಿ ವಜ್ರಾಕೃತಿಯ ಶಿಖರ ಪಟ್ಟಿಕೆಗಳನ್ನು ಸುಂದರವಾಗಿ ಕೆತ್ತಲಾಗಿದೆ. ಹೊರಗೋಡೆಯ ಭಾಗದಲ್ಲಿ ದೇವಕೋಷ್ಟಕಗಳಿದ್ದು ಅವುಗಳಲ್ಲಿ ಭೈರವನ, ವಿಷ್ಣುವಿನ ಹಾಗೂ ಬ್ರಹ್ಮನ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ಅವು ಸಹ ಅಲಂಕಾರಿಕವಾಗಿ ಮೂಡಬಂದಿವೆ. ಈ ದೇವಾಲಯದ ಭಿತ್ತಿಯಲ್ಲಿ ಕಿರುಸ್ತಂಭ ಶಿಖರಗಳು, ಹೂಬಳ್ಳಿ ವಿನ್ಯಾಸ ಹಾಗೂ ಅರ್ಧಕೋಷ್ಟಕಗಳಿದ್ದು ಇಂಥ ಸುಂದರವಾದ ರಚನೆಗಳು ಎಂಥವರನ್ನು ಮನಸೂರೆಗೊಳ್ಳುತ್ತವೆ.

ದೇವಾಲಯದ ಅಧಿಷಾ«ನವು ಉಪಾನ, ಜಗತಿ, ಗಳ, ತ್ರಿಪಟ್ಟ ಕುಮುದ ಹಾಗೂ ಕಪೋತ ಭಾಗಗಳನ್ನು ಒಳಗೊಂಡಿದೆ. ಇದರಲ್ಲಿರುವ ಕಪೋತದಲ್ಲಿ ತ್ರಿಕೋನಾಕಾರದ ಪಟ್ಟಿಕೆ ಮಾಡಿ ಅದರ ಮೇಲೆ ಚಿತ್ತಾರಗಳನ್ನು ಬಿಡಿಸಲಾಗಿದೆ. ಈ ತರಹದ ಅಲಂಕರಣೆಗಳು ಈ ಭಾಗದಲ್ಲಿ ಕಂಡುಬಂದಿರುವ ದೇವಾಲಯ ಭಿತ್ತಿಗಳಲ್ಲಿ ತುಂಬಾ ವಿರಳವಾಗಿ ಕಾಣಬಹುದು. ಇಂಥದ್ದೇ ಉದಾಹರಣೆಗಳನ್ನು ಕೆಂಬಾವಿಯಲ್ಲಿರುವ ಮಲ್ಲಿಕಾರ್ಜುನ ದೇವಾಲಯದಲ್ಲಿ ಮಾತ್ರ ಕಾಣುತ್ತೇವೆ. ಪ್ರಸ್ತರ ಭಾಗದಲ್ಲಿಯು ಇದೇ ರಚನೆಗಳು ಮುಂದುವರೆದಿವೆ. ಆದರೆ ಅದರಲ್ಲಿರುವ ಕಪೋತವು ಸರಳವಾಗಿ ರಚನೆಯಾಗಿರುವಂಥದ್ದು. ಇದಕ್ಕೆ ಮೆಟ್ಟಿಲಾಕಾರದ ಶಿಖರ ರಚನೆಯಿದೆ. ಅಲ್ಲದೇ ಸುಖನಾಸವು ಇದಕ್ಕಿದ್ದು ಆದರೆ ಅದನ್ನು ಇತ್ತೀಚೆಗೆ ನವೀಕರಣಗೊಳಿಸಲಾಗಿದೆ.

ಈ ಗುಡಿಯಲ್ಲಿ ಒಟ್ಟು ನಾಲ್ಕು ಶಾಸನಗಳಿರುವುದನ್ನು ಗಮನಿಸಬಹುದು. ಆದರೆ ಅವುಗಳಲ್ಲಿ ಯಾವುವು ಈ ದೇವಾಲಯಕ್ಕೆ ಸಂಬಂಧಪಟ್ಟ ಮಾಹಿತಿ ನೀಡುವವು. ಆದರೂ ಈ ದೇವಾಲಯವು ನಾಗದೇವರಿಗೆ ಸಂಬಂಧಿಸಿದ್ದಾಗಿರಬಹುದೆಂಬ ಅಭಿಪ್ರಾಯಗಳು ದಾಖಲಾಗಿವೆ[೨]. ಇದೇ ಗುಡಿಯಲ್ಲಿರುವ ಶಾಸನವೊಂದು ಮಲ್ಲಿಕಾರ್ಜುನ ದೇವಾಲಯದ ಬಗೆಗೆ ಮಾಹಿತಿ ನೀಡುತ್ತದ್ದಾದರೆ ಸದ್ಯ ಈ ಹೆಸರಿನಿಂದ ಕರೆಯುತ್ತಿರುವ ಗರ್ಭಗೃಹ ಮಾತ್ರ ಇರುವ ದೇವಾಲಯವೊಂದಿದ್ದು ಅದರ ಉಳಿದೆಲ್ಲ ಭಾಗಗಳು ಬಿದ್ದಿರುವುದನ್ನು ಕಾಣುತ್ತೇವೆ. ಈ ದೇವಾಲಯವು ಸಹ ವಿಶಾಲವಾಗಿದ್ದಿರಬಹುದು. ಅದರ ಗರ್ಭಗೃಹದ ವಿಸ್ತಾರವನ್ನು ಸಹಜವಾಗಿ ನೋಡಿದರೂ ಈ ಅಭಿಪ್ರಾಯ ತಾಳಬಹುದು. ಉತ್ತರಾಭಿಮುಖವಾಗಿರುವ

ಗರ್ಭಗೃಹವನ್ನು ಹೊಂದಿರುವ ಈ ದೇವಾಲಯವು ಅಂತರಾಳ ಮತ್ತು ನವರಂಗವನ್ನು ಹೊಂದಿರಬಹುದು. ಆದರೆ ಸದ್ಯ ಗರ್ಭಗೃಹ ಮಾತ್ರ ಉಳಿದುಕೊಂಡಿದೆ. ಗರ್ಭಗೃಹದ ಬಾಗಿಲವಾಡವು ಸಂಗಮೇಶ್ವರ ಮತ್ತು ಸೋಮೇಶ್ವರ ದೇವಾಲಯಗಳ ಬಾಗಿಲವಾಡದ ರಚನೆಗಳನ್ನು ಹೋಲುತ್ತದೆ. ಇದರ ಛತ್ತಿನಲ್ಲಿಯು ಆಳವಾದ ಭುವನೇಶ್ವರಿಯನ್ನು ಕೆತ್ತಲಾಗಿದೆ. ಈ ಗರ್ಭಗೃಹದ ಶಿಖರ ಬಹುಶಃ ಬಿದ್ದುಹೋಗಿರಬಹುದು. ಹೊರಗೋಡೆಯು ಸರಳ ರಚನೆಯಿಂದ ಕೂಡಿರುವುದು. ಆದರೆ ಇದರ ಅಧಿಷ್ಠಾನ ಭಾಗಗಳು ಸ್ಪಷ್ಟವಾಗಿ ಈಗಲೂ ಕಂಡುಬರುತ್ತವೆ. ಅದರಲ್ಲಿ ಉಪಾನ, ಜಗತಿ, ಗಳ, ತ್ರಿಪಟ್ಟ ಕುಮುದ ಹಾಗೂ ಕಪೋತ ರಚನೆಗಳನ್ನು ಮಾಡಲಾಗಿದೆ. ಇದರ ಅಧಿಷ್ಠಾನವು ಸಂಗಮೇಶ್ವರ-ಸೋಮೇಶ್ವರ ಗುಡಿಯ ಅಧಿಷ್ಠಾನದ ಹಾಗೆಯೇ ಇದೆ.

ಮಲ್ಲಿಕಾರ್ಜುನ ಗುಡಿಯನ್ನು ಉಲ್ಲೇಖಿಸಿರುವ ಶಾಸನವೊಂದು ಬಾವಿ ಬಸವಣ್ಣನ ಗುಡಿಯಲ್ಲಿರುವುದು. ಇದು ಕಳಚೂರ್ಯರ ಚಕ್ರವರ್ತಿ ರಾಯಮುರಾರಿ ಸೋವಿದೇವ ಆಳುವ ಸಂದರ್ಭದಲ್ಲಿ ರಚಿತವಾದ ಶಾಸನ (೧೩ನೇ ಶತಮಾನ). "ಏವೂರಿನ ಮಹಾಪ್ರಭು ಹಾಗೂ ಅವರ ಮಗ ತಳವಾರ ಚಂಡೆಯ ನಾಯಕರು ರಾಜ ತ್ರಿಪುರಾನ್ತಕದೇವರನ್ನು ಭಿನ್ನವಿಸಿಕೊಂಡು ತತ್ಪೂರ್ಷ ದೇವರ ಕಾಲ್ತೊಳೆದು ಮಲ್ಲಿಕಾರ್ಜುನ ದೇವರಿಗೆ ಬಿಟ್ಟ ಭೂದತ್ತಿಯನ್ನು ತಿಳಿಸುತ್ತದೆಯೆಂದು ಉಲ್ಲೇಖಿಸಲಾಗಿದೆ(ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಪುಟ.೪೬). ಅಲ್ಲದೇ ಇದೇ ಶಾಸನದಲ್ಲಿ ಗವರೇಶ್ವರ ದೇವರ ಎಂಬ ಹೆಸರು ಸಹ ಉಲ್ಲೇಖಿತವಾಗಿದೆ. ಬಹುಶಃ ಇದೇ ಹೆಸರು ಬಾವಿಬಸವಣ್ಣನ ದೇವಾಲಯದ ಪ್ರಾಚೀನ ಹೆಸರಾಗಿದ್ದಿರಬಹುದೆಂಬ ಅಭಿಪ್ರಾಯವು ದಾಖಲಾಗಿದೆ(ಪಾಟೀಲ ಎಂ.ಬಿ, ಗುಲಬರ್ಗಾ ಗ್ಯಾಜಿಟಿಯರ್, ಪುಟ.೯೬೦). ಪ್ರಾಯಶಃ ಇದು ಸರಿಯಾದ ಊಹೆಯು ಆಗಿದೆಯೆಂದೆನಿಸುತ್ತದೆ.

ಇಲ್ಲಿರುವ ದೇವಾಲಯಗಳನ್ನೊಳಗೊಂಡಂತೆ ಹಾಗೂ ಆವರಣಕ್ಕಾಗಿಯೇ ರಚನೆಯಾಗಿರುವ ಪ್ರವೇಶ ಮಂಟಪವು ಪೂರ್ವಾಭಿಮುಖವಾಗಿರುವುದನ್ನು ಗಮನಿಸಬಹುದು. ಅಲ್ಲದೇ ಅದು ಬಹುಶಃ ಬಾವಿ ಬಸವಣ್ಣನ ಗುಡಿಗೆ ಸಂಬಂಧಿಸಿದಂತೆಯೇ ರಚನೆಗೊಂಡಿರುವಂಥದ್ದು ಎಂಬ ತಿಳುವಳಿಕೆಯು ಸಹ ಮೂಡುತ್ತದೆ. ಈ ಮಂಟಪವು ಕಂಬಗಳನ್ನು ಒಳಗೊಂಡಿರುವುದು. ಮಂಟಪದ ಎರಡೂ ಭಾಗದಲ್ಲಿ ಎರಡು ಕೋಷ್ಠಕಗಳಿದ್ದು ಒಂದರಲ್ಲಿ ಸುಮಾರು ಮೂರು ಅಡಿ ಎತ್ತರದ ನಗ್ನಭೈರವನ ಸುಂದರವಾದ ಶಿಲ್ಪವನ್ನಿಟ್ಟಿದ್ದರೆ ಇನ್ನೊಂದು ಬದಿಯಲ್ಲಿ ಸೂರ್ಯನ ಶಿಲ್ಪವನ್ನಿಡಲಾಗಿದೆ. ಅದು ತನ್ನ ಮೂಲ ಆದು ಸವೆದು ಹೋಗಿದ್ದರಿಂದ ಅದರ ಸೌಂದರ್ಯವನ್ನು ಕಳೆದುಕೊಂಡಂತೆ ತೋರುತ್ತದೆ. ಈ ಮಂಟಪದ ದ್ವಾರಬಂಧ ಅಥವಾ ಬಾಗಿಲವಾಡವು ಸಹ ಪಂಚಶಾಖೆಗಳಿಂದ ಅಲಂಕೃತಗೊಂಡಿರುವುದು. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಅಲ್ಲದೇ ಇದಕ್ಕಿರುವ ಕಕ್ಷಾಸನದಲ್ಲಿಯೂ ಸಹ ಕೆಲವು ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಆನೆ, ಕುದುರೆ, ಹಂಸ, ಮಿಥುನ ಶಿಲ್ಪಗಳು ಹಾಗೂ ಪಂಚತಂತ್ರದ ಮಂಗ-ಬೆಣೆ ಕೆತ್ತನೆಯುಳ್ಳ ಉಬ್ಬುಶಿಲ್ಪಗಳು ಗಮನಾರ್ಹವಾಗಿ ಮೂಡಿಬಂದಿವೆ. ಅಲ್ಲದೇ ಈ ಮಂಟಪದ ಹೊರಗೋಡೆಯಲ್ಲಿ ಸಮುದ್ರ ಮಂಥನದ ವಿವರ ನೀಡುವ ಸುಂದರವಾದ ಶಿಲ್ಪವನ್ನು ಹೂಳಿಡಲಾಗಿರುವುದನ್ನು ಗಮನಿಸಬಹುದು.

## ಐವೂರ-ಸೋಮೇಶ್ವರ-ಸಂಗಮೇಶ್ವರ

ಈ ದೇವಾಲಯವೇ ಈ ಗ್ರಾಮದ ಮುಖ್ಯ ಕೇಂದ್ರಬಿಂದು. ಇದಕ್ಕೆ ಪ್ರಾಚೀನ ಕಾಲದಿಂದಲೂ ಹಲವಾರು ದಾನದತ್ತಿಗಳನ್ನು ನೀಡಿರುವ ಯಥೇಚ್ಛ ಉಲ್ಲೇಖಗಳು ದಾಖಲಾಗಿವೆ. ಮೂಲತಃ ಏಕಕೂಟವಾಗಿ ಸ್ವಯಂಭು ಎಂಬ ಹೆಸರಿನಿಂದ ಹುಟ್ಟಿಕೊಂಡ ಈ ದೇವಾಲಯವು ಕ್ರಮೇಣ ಸಂಗಮೇಶ್ವರ(ಚಟ್ಟೇಶ್ವರ) ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆಯಿತು. ನಂದಿ ವಿಗ್ರಹವನ್ನಿಟ್ಟು ಪೂಜಿಸಲ್ಪಡುತ್ತಿರುವ ಇನ್ನೊಂದು ಗರ್ಭಗೃಹವು ಕಾಲಾನಂತರ ಜೋಡಣೆಗೊಂಡಿರಬಹುದೆಂದು ಭಾಸವಾಗುತ್ತದೆ. ಪ್ರಸ್ತುತ ಇದು ತ್ರಿಕೂಟ ದೇವಾಲಯದ ವಿನ್ಯಾಸ ಹೊಂದಿರುವುದು. ಪೂರ್ವಾಭಿಮುಖವಾದ ಸೋಮೇಶ್ವರ, ದಕ್ಷಿಣಾಭಿಮುಖವಾದ ಸಂಗಮೇಶ್ವರ ಹಾಗೂ ಪಶ್ಚಿಮಾಭಿಮುಖವಾಗಿರುವ ನಂದಿ ಅಥವಾ ಬಸವಣ್ಣ ವಿಗ್ರಹ ಇರುವ ಗರ್ಭಗೃಹ ಹಾಗೂ ಅಂತರಾಳ ಹಾಗೂ ಮುಖಮಂಟಪವು ಈ ದೇವಾಲಯದ ಭಾಗವೇ ಆಗಿ ಹೋಗಿವೆ. ಇದಕ್ಕೊಂದು ವಿಶಾಲವಾದ ಪ್ರಾಂಗಣವಿದ್ದು ಅದಕ್ಕೆ ಆ ಮೊದಲು ಪೂರ್ವದಲ್ಲಿ ಪ್ರವೇಶ ನಿರ್ಮಿಸಲಾಗಿತ್ತು. ಆದರೆ ಕಾರಣಾಂತರಗಳಿಂದ ಆ ಪ್ರವೇಶದ್ವಾರವು ಬದಲಾವಣೆಗೊಂಡು ಸದ್ಯ ದಕ್ಷಿಣಾಭಿಮುಖ ಪ್ರವೇಶವು ಈ ಆವರಣಕ್ಕೆ ನಿರ್ಮಾಣವಾಗಿ ಅದೇ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗವಾಗುತ್ತಿದೆ.

ಇದು ಬಹುಕೋನ ತಳವಿನ್ಯಾಸವುಳ್ಳ ಸ್ಮಾರಕವಾಗಿದೆ. ಇದಕ್ಕೆ ಮೂರು ಗರ್ಭಗೃಹ, ಮೂರು ಅಂತರಾಳ ಹಾಗೂ ಅವುಗಳನ್ನೆಲ್ಲ ಒಳಗೊಂಡಂತೆ ಒಂದು ನವರಂಗ ಅಥವಾ ರಂಗಮಂಟಪ ಹಾಗೂ ಮುಖ ಮಂಟಪ ಹೊಂದಿರುವುದನ್ನು ಕಾಣುತ್ತೇವೆ. ಸೋಮೇಶ್ವರ ದೇವಾಲಯವೇ ಇಲ್ಲಿ ಪ್ರಧಾನವಾದುದು. ಇದರ ಬಾಗಿಲವಾಡವು ಪಂಚಶಾಖೆಗಳಿಂದ ಕೂಡಿದ್ದು ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪ ಕೆತ್ತಲಾಗಿದೆ. ಉತ್ತರಾಂಗದ ಭಾಗವು ಅಗಲವಾಗಿದ್ದು ಅದರಲ್ಲಿಯೂ ಕೆಲವು ಕೆತ್ತನೆಗಳನ್ನು ಮಾಡಲಾಗಿದೆ. ಇದು ತೆರದ ಅಂತರಾಳ ಹೊಂದಿದ್ದು ಅಂತರಾಳ ಮತ್ತು ಗರ್ಭಗೃಹದಲ್ಲಿ ಭುವನೇಶ್ವರಿ ಕೆತ್ತನೆಯನ್ನು ಮಾಡಲಾಗಿದೆ.

ನವರಂಗದಲ್ಲಿರುವ ಕಂಬಗಳು ಹಾಗೂ ಭುವನೇಶ್ವರಿಯ ರಚನೆಯು ತುಂಬಾ ಕಲಾತ್ಮಕವಾಗಿ ಮೂಡಿಬಂದಿರುವುವು. ಅಲ್ಲದೇ ಅವು ವಾಸ್ತು ವಿವರಗಳ ದೃಷ್ಟಿಯಿಂದ ತುಂಬಾ ಮಹತ್ವದವುಗಳು. ಅಗಲವಾದ ಭುವನೇಶ್ವರಿ ಕಮಲ ಹೂವಿನ ಕೆತ್ತನೆಯ ಅಲಂಕರಣೆ ಹೊಂದಿರುವುದು. ಇದು ಬೆಳಗಾವಿಯಲ್ಲಿರುವ ಕಮಲ ಬಸದಿ (ಬಸ್ತಿ) ಹಾಗೂ ಹಾನಗಲ್‌ನಲ್ಲಿರುವ ತಾರಕೇಶ್ವರ ದೇವಾಲಯದ ಭುವನೇಶ್ವರಿಗಳನ್ನು ನೆನಪಿಸುತ್ತದೆ. ನವರಂಗ ಅಥವಾ ರಂಗಮಂಟಪದಲ್ಲಿರುವ ಕಂಬಗಳು, ನಾಲ್ಕು ಬಗೆಯಲ್ಲಿ ರಚನೆಗೊಂಡಿವೆ. ಅವುಗಳಲ್ಲಿ ಹದಿನೆಂಟು ಪಟ್ಟಿಕೆಯುಳ್ಳ ದುಂಡನೆಯ ಕಂಬಗಳು ವೃತ್ತಾಕಾರದ ಕಂಬಗಳು, ಚೌಕಾಕಾರದ ಕಂಬಗಳು ಹಾಗೂ ಅಲಂಕೃತ ಚೌಕಾಕಾರದ ಮತ್ತು ವೃತ್ತಾಕಾರದ ರಚನೆಗಳನ್ನು ಅವು ಹೊಂದಿವೆ.

ಕೆಲವು ಕಂಬಗಳ ಚೌಕಾಕಾರದಿಂದ ಕೂಡಿದ ಬುಡಭಾಗದಲ್ಲಿ ನಾಲ್ಕು ಕಡೆಗೂ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅವುಗಳ ಮಧ್ಯಭಾಗವು ಗಂಟೆ ಆಕಾರದ ಮಾದರಿಯ ನಯವಾದ ಕೆತ್ತನೆಯಿಂದ ಕೂಡಿದೆ. ಅದರಲ್ಲಿ ಮಣಿಸರ ಹಾಗೂ ಇತರೆ ಅಲಂಕರಣೆಗಳನ್ನು

ಮಾಡಲಾಗಿದೆ. ನವರಂಗವು ಕಕ್ಷಾಸನವನ್ನು ಹೊಂದಿದ್ದು ಅದರಲ್ಲಿರುವ ಕಂಬಗಳು ಸಹ ಅಲಂಕರಣೆಗಳಿಂದ ಕೂಡಿದವುಗಳಾಗಿವೆ. ಈ ದೇವಾಲಯವು ಆ ಮೊದಲು ಏಕಕೂಟ ಮಾದರಿಯದ್ದೇ ಆಗಿತ್ತು. ಅಲ್ಲದೇ ಅದರ ಮುಖವು ಮೂರೂ ಕಡೆಗೂ ಪ್ರವೇಶ ಹೊಂದಿತ್ತು. ಈ ಪ್ರವೇಶಗಳನ್ನೇ ಬದಲಾಯಿಸಿ ಅದು ತ್ರಿಕೂಟ ರೂಪ ಪಡೆಯುವಂತೆ ಬದಲಾಯಿಸಿರುವುದನ್ನು ಮನಗಾಣಬಹುದು.

ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿರುವ ಲಿಂಗವನ್ನು ಸಂಗಮೇಶ್ವರನೆಂದು ಕರೆಯಲಾಗುತ್ತದೆ. ಅದರ ಬಾಗಿಲವಾಡವು ಸಹ ಈ ಮೊದಲು ವಿವರಿಸಿದ ಅಲಂಕರಣೆಗಳನ್ನೇ ಹೊಂದಿರುವುದು. ಪಶ್ಚಿಮಾಭಿಮುಖ ಗರ್ಭಗೃಹದ ಬಾಗಿಲವಾಡವು ಈ ವಿವರಣೆಗಳಿಂದ ಹೊರತಾಗಿಲ್ಲ. ಸದ್ಯ ದಕ್ಷಿಣಾಭಿಮುಖವಾಗಿರುವ ಮುಖಮಂಟಪವು ಮಾತ್ರ ದೇವಾಲಯಕ್ಕಿದೆ. ಈ ಮುಖಮಂಟಪಕ್ಕೆ ಸೋಪಾನಗಳಿವೆ. ಅಲ್ಲದೇ ಕಕ್ಷಾಸನದ ಹೊರಮುಖ ಗೋಡೆಯಲ್ಲಿ ಹಲವು ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅವುಗಳಲ್ಲಿ ಮಿಥುನಶಿಲ್ಪಗಳು, ವೀರಯೋಧನ ಶಿಲ್ಪ, ಸ್ತ್ರೀ ಪುರುಷ ಶಿಲ್ಪಗಳು, ಆನೆ, ಸಿಂಹ ಪ್ರಾಣಿಗಳ ಶಿಲ್ಪಗಳನ್ನು ಇಲ್ಲಿ ಕೆತ್ತಲಾಗಿದೆ.

ಭೈರವನ ಶಿಲ್ಪ, ಕುಬೇರನ ಶಿಲ್ಪ ಹಾಗೂ ಇನ್ನೊಂದು ಶಿಲ್ಪವಿದ್ದು ಅದು ಸಹಜ ಆಸನದಲ್ಲಿ ಕುಳಿತಿದ್ದು ಬಹುಶಃ ಈ ದೇವಾಲಯದ ನಿರ್ಮಾತೃವಿನ ಅಂದರೆ ಹೆಗಡೆ ನಾಗವರ್ಮನ ಶಿಲ್ಪ ಇದಾಗಿರಬಹುದೇ? ಎಂದು ಭಾವಿಸಲು ಅಡ್ಡಿಯಿಲ್ಲ. ಆತನ ಎದುರಿಗೆ ಆನೆಯ ಮೇಲೆ ಕುಳಿತ ಇನ್ನೊಂದು ಶಿಲ್ಪವನ್ನು ಸಹ ಕೆತ್ತಲಾಗಿದೆ. ಕಕ್ಷಾಸನದ ಗೋಡೆಯ ಭಾಗದಲ್ಲಿ ವಿವಿಧ ಬಗೆಯ ಉಬ್ಬುಶಿಲ್ಪಗಳಿದ್ದರೆ ನವರಂಗದ ಅಧಿಷಾ«ನದಲ್ಲಿ ಸುತ್ತಲೂ ಗಜಪಟ್ಟಿಕೆ ಸಾಲನ್ನು ಕೆತ್ತಲಾಗಿದೆ. ಪ್ರವೇಶ ಮಂಟಪವು ಸಹ ಸಿಂಹ ಹಾಗೂ ಆನೆಯ ಶಿಲ್ಪಗಳಿಂದ ಅಲಂಕರಣಗೊಂಡಿರುವುದು.

ದೇವಾಲಯದ ಹೊರಗೋಡೆಯನ್ನು ಗಮನಿಸಿದಾಗ ತಿಳಿಯಬಹುದಾದ ಮುಖ್ಯ ಸಂಗತಿಗಳೆಂದರೆ ಅದರಲ್ಲಿರುವ ಮುಂಚಾಚುಗಳು. ಪ್ರತಿ ಮುಂಚಾಚುವಿನಲ್ಲಿ ಏಕಸ್ತಂಭ ಶಿಖರ ಪಟ್ಟಿಕೆಯನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ. ಅಲ್ಲದೇ ಇಂಥ ಪಟ್ಟಿಕೆಗಳು ದೇವಾಲಯದ ಹೊರಗೋಡೆಯಲ್ಲಿ ಸುತ್ತಲೂ ಕೆತ್ತಲ್ಪಟ್ಟಿವೆ. ಶಿಖರ ಪಟ್ಟಿಕೆಗಳಲ್ಲದೇ ಅರ್ಧ ಮಂಟಪ ರಚನೆಗಳು ಹೊರಭಾಗದ ಗೋಡೆಯಲ್ಲಿ ಕಾಣುತ್ತೇವೆ. ಆದರೆ ಅವು ಬರಿದಾಗಿವೆ.

ದೇವಾಲಯದ ಅಧಿಷಾ«ನದಲ್ಲಿರುವ ಉಪಾನ, ಜಗತಿಯ ಭಾಗಗಳು ಮಣ್ಣಿನಲ್ಲಿ ಹೂತುಹೋಗಿವೆ. ಆದರೂ ತ್ರಿಪಟ್ಟಕುಮುದ, ಗಳ, ಕೋಪತ ಭಾಗಗಳು ಈಗಲೂ ಕಂಡುಬರುತ್ತವೆ. ಹಲ್ಲಿನಾಕಾರದ ಕಪೋತ ಪಟ್ಟಿಯನ್ನು ಅಧಿಷಾ«ನದಲ್ಲಿ ಸುತ್ತಲೂ ಕೆತ್ತಲಾಗಿದೆ. ಆದರೆ ಸೋಮೇಶ್ವರ ಮತ್ತು ಸಂಗಮೇಶ್ವರ ದೇವಾಲಯದ ಅಧಿಷಾ«ನ ಭಾಗವನ್ನು ಹೋಲಿಕೆ ಮಾಡಿದಾಗ ಬಾವಿ ಬಸವಣ್ಣನ ಗುಡಿಯ ಅಧಿಷಾ«ನದ ಕಪೋತ ಭಾಗವು ಹೆಚ್ಚು ಅಲಂಕರಣೆಗಳಿಂದ ಕೂಡಿರುವುದನ್ನು ಗಮನಿಸಬಹುದು. ಪ್ರಸ್ತರ ಭಾಗದಲ್ಲಿಯು ಅಧಿಷಾ«ನದಲ್ಲಿರುವ ವಿವರಗಳೇ ಮೂಡಲ್ಪಟ್ಟಿವೆ. ಈ ದೇವಾಲಯದಲ್ಲಿರುವ ಗರ್ಭಗೃಹಗಳಿಗೆ ಯಾವ ಮಾದರಿಯ

ಶಿಖರಗಳಿದ್ದವು ಎಂಬುದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಕಾರಣ ಪ್ರಸ್ತುತ ಶಿಖರಗಳು ಜೀರ್ಣೋದ್ಧಾರಗೊಂಡಿವೆ. ಸದ್ಯ ಸೋಪಾನ ಮಾದರಿ ಅಥವಾ ಮೆಟ್ಟಿಲಾಕಾರ ಶಿಖರಗಳು ಈ ದೇವಾಲಯಕ್ಕಿವೆ.

ಸ್ವಯಂಭು ಸೋಮೇಶ್ವರ, ಮಲ್ಲಿಕಾರ್ಜುನ, ಶಾಂತಿನಾಥ ಹಾಗೂ ಕೋಟಿ ತೀರ್ಥದ ಬಗೆಗೆ ಸ್ಪಷ್ಟ ಮಾಹಿತಿಗಳು ಈ ಶಾಸನದಲ್ಲಿ ಲಭ್ಯವಾಗುತ್ತವೆ. ಆದರೆ ಗವರೇಶ್ವರ, ಚಟ್ಟೇಶ್ವರ, ನಾಗದೇವರ, ಮಮ್ಮೇಶ್ವರ, ಕಮ್ಮಟೇಶ್ವರ ಹಾಗೂ ಮಠದ ಕುರಿತು ಈ ಶಾಸನದಲ್ಲಿ ವಿವರಗಳು ಉಲ್ಲೇಖವಾಗಿದ್ದರೂ ಆದರೆ ಈ ದಿನಗಳಲ್ಲಿ ಅವುಗಳನ್ನು ಗುರುತಿಸುವುದು ಸ್ವಲ್ಪ ಕಷ್ಟಕರವೇ ಆಗಿದೆ. ಸಂಗಮೇಶ್ವರ ದೇವಾಲಯವು ಚಟ್ಟೇಶ್ವರನೆಂದು, ಬಸವಣ್ಣ ದೇವಾಲಯವು ಗವರೇಶ್ವರ ದೇವಾಲಯವೆಂದೂ ಊಹಿಸಬಹುದಾಗಿದೆ ಎಂಬ ಅಭಿಪ್ರಾಯಗಳು ಸಹ ವ್ಯಕ್ತವಾಗಿವೆ. ಕಮ್ಮಟೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಪಂಚಕರ್ಮಿಗಳ ಉಲ್ಲೇಖವು ಶಾಸನಗಳಲ್ಲಿ ಉಲ್ಲೇಖವಾಗಿದೆ. ಸೋಮೇಶ್ವರ ದೇವಾಲಯವು ವೈದ್ಯ ವಿದ್ಯಾಲಯವು ಆಗಿತ್ತು ಎಂಬ ವಿವರಗಳು ಉಲ್ಲೇಖಗೊಂಡಿರುವುದು ಗಮನಾರ್ಹ[೨೮]. ಆದರೆ ಅಲ್ಲಿ ಯಾವ ಬಗೆಯ ವೈದ್ಯ ಚಿಕಿತ್ಸೆ ನಡೆಯುತ್ತಿತ್ತು ಎಂಬ ಸ್ಪಷ್ಟ ಉಲ್ಲೇಖಗಳು ಮಾತ್ರ ನಮೂದಾಗಿಲ್ಲ. ಒಟ್ಟಾರೆ ಅಭಿಪ್ರಾಯಪಡಬಹುದಾದ ಸಂಗತಿಗಳೆಂದರೆ ಸಗರನಾಡಿನಲ್ಲಿಯೇ ಅತ್ಯಂತ ಮಹತ್ವದ ಸ್ಥಾನಪಡೆದಿದ್ದ ಏವೂರು ಗ್ರಾಮವು ಈ ಹಿಂದೆ ಭತ್ತಗ್ರಾಮ. ಅಗ್ರಹಾರ ಹಾಗೂ ಬ್ರಹ್ಮಪುರಿ ಆಗಿತ್ತಲ್ಲದೇ ಆ ದಿನದಲ್ಲಿ ರಾಜರಿಗೂ ಪ್ರಿಯವಾದ ಪ್ರಸಿದ್ಧ ಪಟ್ಟಣವಾಗಿತ್ತೆಂಬುದು ಅಷ್ಟೇ ಮುಖ್ಯವಾದ ಸಂಗತಿಗಳಾಗಿದ್ದವು ಎಂಬುದು ವಿಚಾರಾರ್ಹ ವಿಷಯವಾಗಿದೆ.

**ಕೆಂಬಾವಿ–ರೇವಣಸಿದ್ದೇಶ್ವರ**

ಅತ್ಯಂತ ಭವ್ಯವಾಗಿ ನಿರ್ಮಾಣವಾಗಿದ್ದ ಈ ದೇವಾಲಯವು ಕಾರಣಾಂತರಗಳಿಂದ ಕ್ಷೀಣಿಸುತ್ತಾ ಬಂದಿದೆ. ಇದು ಚತುಷ್ಕೂಟ ಮಾದರಿಯದ್ದು. ಇಂಥ ತಲವಿನ್ಯಾಸದ ದೇವಾಲಯಗಳು ಈ ಜಿಲ್ಲೆಯಲ್ಲಿ ಅಪರೂಪವಾಗಿ ನಿರ್ಮಾಣವಾಗಿವೆ. ಪೂರ್ವಾಭಿಮುಖ ಹೊಂದಿರುವ ಈ ಗುಡಿಯನ್ನು ಪ್ರಸ್ತುತ ದಿನಮಾನಗಳಲ್ಲಿ ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಲಾಗಿದೆ. ನಾಲ್ಕು ಗರ್ಭಗೃಹಗಳು ಹಾಗೂ ಅಂತರಾಳಗಳು ಇಲ್ಲಿದ್ದವು. ಆದರೆ ಸದ್ಯ ಅದರಲ್ಲಿ ಕೆಲವು ಇಲ್ಲದಂತಾಗಿವೆ.

ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು ಅದರಲ್ಲಿದ್ದ ಪ್ರಾಚೀನ ಲಿಂಗದ ರುದ್ರ ಭಾಗವು ಮಾತ್ರ ಉಳಿದುಬಂದಿದೆ. ತೆರದ ಅಂತರಾಳವು ದೇವಾಲಯಕ್ಕಿದ್ದು ಅದರಲ್ಲಿ ದುಂಡಾಕೃತಿಯ ನಾಲ್ಕು ಕಂಬಗಳನ್ನು ಅಳವಡಿಸಲಾಗಿದೆ. ಅಲ್ಲದೇ ಇತ್ತೀಚೆಗೆ ನಿರ್ಮಾಣವಾದ ನಂದಿಶಿಲ್ಪವನ್ನು ಅದರಲ್ಲಿಡಲಾಗಿದೆ. ಎಲ್ಲ ಗರ್ಭಗೃಹ ಹಾಗೂ ಅಂತರಾಳಗಳನ್ನೊಳಗೊಂಡು ಒಂದು ಒಳಗೊಂಡು ವಿಶಾಲವಾದ ನವರಂಗ ನಿರ್ಮಾಣ ಮಾಡಲಾಗಿದೆ. ಅಲ್ಲದೇ ಸಭಾಮಂಟಪ ಹಾಗೂ ಮುಖಮಂಟಪದ ರಚನೆಗಳು ದೇವಾಲಯಕ್ಕಿದ್ದವು. ಆದರೆ ಅವುಗಳಾವುವು ಪ್ರಸ್ತುತ ಸಂದರ್ಭದಲ್ಲಿ ಕಂಡುಬರುವುದಿಲ್ಲ.

ಗರ್ಭಗೃಹದ ಬಾಗಿಲವಾಡವು ಪಂಚಶಾಖೆಯಿಂದ ಕೂಡಿದ್ದು ಅದನ್ನು ಅತೀ ಆಕರ್ಷಕವಾಗಿ ಕೆತ್ತಲಾಗಿದೆ. ಅದರಲ್ಲಿರುವ ಪ್ರತಿಶಾಖೆಯನ್ನು ಬೇರೆ ಬೇರೆ ಅಲಂಕರಣಗಳಿಂದ ರಚಿಸಲಾಗಿದೆ. ಮುಖ್ಯವಾಗಿ ಪುಷ್ಪ ಮತ್ತು ಬಳ್ಳಿ ಪಟ್ಟಿಕೆ, ಅರ್ಧ ವೃತ್ತ ಕಂಬ ಹಾಗೂ ಸಿಂಹ ಯಾಳಿಯನ್ನು ಯೋಧರಿಬ್ಬರು ಹೊತ್ತುಕೊಂಡು ನಿಂತಂತಿರುವ ಪಟ್ಟಿಯು ಮನಮೋಹಕವಾಗಿದೆ. ಲಲಾಟದಲ್ಲಿ ಸುಂದರವಾದ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ದ್ವಾರಬಂಧವು ಮುಂಚಾಚಿದೆ. ಬಾಗಿಲವಾಡದಲ್ಲಿ ಎರಡೂ ಕಡೆಗೂ ದ್ವಾರಶಿಲ್ಪಗಳನ್ನು ಕಂಡರಿಸಲಾಗಿದೆ. ಈ ದ್ವಾರವು ಸಹ ಎತ್ತರ ನಿಲುವಿನದ್ದು.

ಮುಖ್ಯ ಗರ್ಭಗೃಹದ ಅಂತರಾಳಕ್ಕೆ ಗಜತೋರಣವನ್ನು ಆಕರ್ಷಕವಾಗಿ ಅಳವಡಿಸಲಾಗಿದೆ. ಈ ಗಜ ತೋರಣಪಟ್ಟಿಕೆಯು ಸುಮಾರು ಎರಡು ಅಡಿ ಅಗಲವಾಗಿರುವುದು. ಅದರಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶನ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿದೆ. ಅವು ತುಂಬಾ ಸುಂದರವಾಗಿವೆ. ಇಲ್ಲಿರುವ ಗಜಪಟ್ಟಿಕೆಯಲ್ಲಿ ಎರಡೂ ಗಜಗಳ ಬಾಯಿಯಿಂದ ಹೊರಟ ಈ ತೋರಣ ತುಂಬಾ ಅಲಂಕಾರಿಕವಾಗಿ ಮೂಡಿಬಂದಿದೆ. ಅಲ್ಲದೇ ಈ ಗಜಗಳ ಬೆನ್ನಿನ ಮೇಲೆಯು ಕುಳಿತ ಶಿಲ್ಪಗಳು ಇಲ್ಲಿವೆ. ಅಂತರಾಳದಲ್ಲಿರುವ ಅರ್ಧಕಂಬಗಳು ಚೌಕಾಕಾರವಾಗಿವೆ. ಬುಡದಲ್ಲಿ ಚೌಕಾಕಾರ ಮತ್ತು ಮಧ್ಯಭಾಗದಲ್ಲಿಯೂ ಸಹ ಅವು ಚೌಕಾಕಾರವಾಗಿರುವುದನ್ನು ಗಮನಿಸಬಹುದು. ಮೂಲೆಯ ಭಾಗಗಳನ್ನು ಕತ್ತರಿಸಿ ತೆಗೆಯಲಾಗಿದೆ. ಕಂಬಗಳ ಮೇಲೆ ತ್ರಿಕೋನಪಟ್ಟಿ ಹಾಗೂ ಚೌಕಾಕಾರದ ಫಲಕಗಳನ್ನು ಅಳವಡಿಸಲಾಗಿರುವುದು.

ಅಂತರಾಳದ ಬಾಗಿಲವಾಡಿನ ಇಕ್ಕೆಲಗಳಲ್ಲಿ ಸುಮಾರು ಹತ್ತು ಅಡಿ ಎತ್ತರದ ದ್ವಾರಪಾಲಕ ಶಿಲ್ಪಗಳು ಸುಂದರವಾಗಿ ಅವು ಕಿರೀಟ, ತೋಳಬಂಧ, ನಡುಪಟ್ಟಿ, ಕೊರಳಲ್ಲಿ ಸರಗಳ ಕೆತ್ತನೆ ಹೊಂದಿರುವುದನ್ನು ಕಾಣುತ್ತೇವೆ. ಆದರೆ ಸದ್ಯ ಈ ಎರಡೂ ಶಿಲ್ಪಗಳ ಕೈಗಳು ತುಂಡಾಗಿ ಹೋಗಿವೆ.

ಈ ಮೇಲೆ ವಿವರಿಸಿದ ಲಕ್ಷಣವುಳ್ಳ ಬಾಗಿಲವಾಡಗಳೇ ಬಹುಶಃ ಉಳಿದೆಲ್ಲ ಗರ್ಭಗೃಹ ಹಾಗೂ ಅಂತರಾಳಗಳ ಬಾಗಿಲವಾಡಗಳಲ್ಲಿಯೂ ಇದ್ದಿರುವ ಸಾಧ್ಯತೆಗಳಿವೆ. ಅಂತಹ ತುಂಡಾದ ಹಲವು ಕುರುಹುಗಳು ಆವರಣದಲ್ಲಿರುವುದನ್ನು ಕಾಣುತ್ತೇವೆ. ಅಲ್ಲದೇ ಕೆಲವು ತುಂಡುಗಳನ್ನು ಹೊಸದಾಗಿ ಕಟ್ಟಿರುವ ಗೋಡೆಯ ಭಾಗಗಳಲ್ಲಿ ಅಳವಡಿಸಿರುವುದನ್ನು ಕಾಣಬಹುದು.

ದೇವಾಲಯದ ಅಧಿಷ್ಠಾನ ಭಾಗವು ಉಪಾನ, ಜಗತಿ, ಕುಮುದ ಹಾಗೂ ಕಪೋತ ಭಾಗಗಳನ್ನು ಹೊಂದಿರುವುದು. ಆದರೆ ಪ್ರಸ್ತುತ ಸಂದರ್ಭದಲ್ಲಿ ಈ ಅಧಿಷ್ಠಾನವು ತೃಟಿತಗೊಂಡು ಅದರ ಕೆಲವು ಭಾಗಗಳು ಮಾತ್ರ ಕಂಡುಬರುತ್ತವೆ. ಅದರಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಿರುವುದನ್ನು ಕಾಣುತ್ತೇವೆ. ತೃಟಿತಗೊಂಡ ಶಿಲ್ಪಗಳುಳ್ಳ ದ್ವಾರಪಟ್ಟಿಕೆ, ತೋರಣ ಪಟ್ಟಿಕೆ ಹಾಗೂ ಪ್ರಾಚೀನ ಲಿಂಗದ ಅವಶೇಷಗಳನ್ನು ದೇವಾಲಯದ ಆವರಣದಲ್ಲಿಯೇ ಇಡಲಾಗಿದೆ. ಹೊರಗಿನ ಗೋಡೆಗಳನ್ನು ಬಹುತೇಕ ಇತ್ತೀಚೆಗೆ ನವೀಕರಿಸಲಾಗಿದೆ. ಪ್ರಾಚೀನ ದೇವಾಲಯದಲ್ಲಿದ್ದ ಕೆಲವು ಶಿಲ್ಪಗಳನ್ನು ಗೋಡೆಗಳಲ್ಲಿ ಅಳವಡಿಸಲಾಗಿದೆ. ಮುಖ್ಯವಾಗಿ ಇಲ್ಲಿರುವ ಚಾಮುಂಡಿ ಶಿಲ್ಪವು ತುಂಬಾ ಆಕರ್ಷಕವಾಗಿದೆ. ಅದರ ಮೈಮಾಟವನ್ನು ಅಳತೆಬದ್ಧವಾಗಿ ಕೆತ್ತಿರುವುದರಿಂದ

ಪ್ರಸ್ತುತ ಶಿಲ್ಪವು ಈವರೆಗೂ ತನ್ನ ಆಕರ್ಷಣೆಯನ್ನು ಉಳಿಸಿಕೊಂಡು ಬಂದಿರುವುದನ್ನು ಗಮನಿಸಬಹುದು. ಗಜಪಟ್ಟಿಕೆ, ಕುದುರೆ ಸವಾರನಾಗಿರುವ ವೀರಯೋಧನ ಶಿಲ್ಪವನ್ನು ಇನ್ನು ಉಳಿದುಕೊಂಡಿರುವ ತೃಟಿತ ದ್ವಾರಪಟ್ಟಿಕೆ, ತೋರಣ ಪಟ್ಟಿಕೆ ಹಾಗೂ ಪ್ರಾಚೀನ ಲಿಂಗದ ಅವಶೇಷಗಳನ್ನು ದೇವಾಲಯದ ಆವರಣದಲ್ಲಿಯೇ ಇಡಲಾಗಿದೆ.

ಈ ಗ್ರಾಮದಿಂದ ಒಟ್ಟು ಎಂಟು ಶಾಸನಗಳು ವರದಿಯಾಗಿರುವ ಮಾಹಿತಿಗಳಿವೆ. ಅವುಗಳಲ್ಲಿ ಎರಡು ಯಾಳಗಿ ಗ್ರಾಮಕ್ಕೆ ಸಂಬಂಧಿಸಿದವುಗಳಾಗಿದ್ದರೆ ಇನ್ನೆರಡು ಪರ್ಶಿಯನ್ ಭಾಷೆಯಲ್ಲಿರುವ ಶಾಸನಗಳು. ಉಳಿದ ನಾಲ್ಕು ಈ ಗ್ರಾಮ ಕುರಿತು ಮಾಹಿತಿ ನೀಡುತ್ತವೆ. ಕ್ರಿ.ಶ.೧೦೫೪ರ ತೇದಿವುಳ್ಳ ಈ ಶಾಸನವು ಕಲ್ಯಾಣದ ಚಾಲುಕ್ಯರ ಅರಸ ಒಂದನೆಯ ಸೋಮೇಶ್ವರನ ಕಾಲದ್ದಾಗಿದ್ದು ಇವನ ಮಹಾಮಂಡಳೇಶ್ವರನಾಗಿದ್ದ ದೇವರಸನ ರಾಣಿ ಮಾಳಿಯಬ್ಬರಸಿಯು ಮಾಳಿಬೇಶ್ವರ ದೇವಾಲಯವನ್ನು ನಿರ್ಮಿಸಿ ಆ ದೇವರ ಪೂಜಾವಿಧಿಗೆ ಅಲ್ಲಿಯ ಮಠದಲ್ಲಿ ಓದುವ ವಿದ್ಯಾರ್ಥಿಗಳಿಗೆ ಹಾಗೂ ತಪೋಧನರ ಜೀವಿತಕ್ಕೆಂದು ರಾಜಧಾನಿ ಕೆಂಭಾವಿಯ ಮೂಡಲ ಹೋದಲ್ಲಿ ೧೦೦೦ ಮತ್ತರು ಭೂಮಿಯನ್ನು ಹಾಗೂ ಅಲ್ಲಿಯ ಬನದೇವರ ನೈವೇದ್ಯಕ್ಕೆಂದು ನಾಲ್ಕು ಮತ್ತರ ಭೂಮಿಯನ್ನು ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಲ್ಲದೇ ಸಗರ-೩೦೦ರ ನಗನೂರು ಹಾಗೂ ಕೆಂಭಾವಿ-೨೪ಕ್ಕೆ ಸೇರಿದ ಕರಡಿಕಲ್ಲು ಮತ್ತು ಕೂಡಲಗೆಗಳನ್ನು ಮನ್ನೆಯ ಸಾಮ್ಯಸಹಿತ ದತ್ತಿಬಿಟ್ಟ ವಿಷಯವನ್ನು ಈ ಶಾಸನವು ಉಲ್ಲೇಖಿಸುತ್ತದೆ[೯]. ಇಲ್ಲಿದ್ದ ಮಾಳಿಬೇಶ್ವರ ದೇವಾಲಯವು ಆ ದಿನಗಳಲ್ಲಿ ತುಂಬಾ ಪ್ರಸಿದ್ಧಿ ಪಡೆದಿತ್ತು. ಬಹುಶಃ ಶಾಸನೋಕ್ತ ಮಾಳಿಬೇಶ್ವರ ದೇವಾಲಯವೇ ಪ್ರಸ್ತುತ ರೇವಣಸಿದ್ದೇಶ್ವರ ಎಂಬ ಹೆಸರಿನ ದೇವಾಲಯವೇ ಆಗಿರಬಹುದೆಂದು ತೋರುತ್ತದೆ ಎಂಬ ಅಭಿಪ್ರಾಯಗಳಿವೆ. ಈ ಅಭಿಪ್ರಾಯವು ಸರಿಯಾದುದಾಗಿದೆಯೆಂದು ತಿಳಿಯಬಹುದು. ಹಾಗಾದರೆ ಇದು ಯಾವ ಕಾಲಘಟ್ಟದಲ್ಲಿ ಇಂಥ ಬದಲಾವಣೆಗೆ ಒಳಗಾಗಿದೆ ಎಂಬುದನ್ನು ಮಾತ್ರ ಹೆಚ್ಚಿನ ಅಧ್ಯಯನಗಳಿಂದ ಮಾತ್ರ ತಿಳಿಯಲು ಸಾಧ್ಯ.

**ಹಗರಟಗಿ–ಧರ್ಮರಾಜನಗುಡಿ**

ಗ್ರಾಮದ ಬಸ್ ನಿಲ್ದಾಣದ ಬಳಿ ಇರುವ ಈ ದೇವಾಲಯವು ಪ್ರಾಚೀನ ದಿನಗಳಲ್ಲಿ ತುಂಬಾ ವಿಶಾಲವಾದ ದೇವಾಲಯವಾಗಿತ್ತೆಂದು ಅಭಿಪ್ರಾಯಿಸಬಹುದು. ಆದರೆ ಕಾರಣಾಂತರಗಳಿಂದ ಅದು ಹಲವು ಮಾರ್ಪಡುಗಳಿಗೆ ಒಳಗಾಗಿ ತನ್ನ ಮೂಲ ರೂಪದಲ್ಲಿ ಹಲವು ಬದಲಾವಣೆ ಕಾಣುವಂತಾಗಿದೆ. ಸದ್ಯ ಈ ದೇವಾಲಯವು ದಕ್ಷಿಣಾಭಿಮುಖ ಪ್ರವೇಶವನ್ನು ಹೊಂದಿದ್ದು ಪ್ರವೇಶದ ಮೊದಲೇ ಇದಕ್ಕೊಂದು ಎತ್ತರವಾದ ಕಟ್ಟೆಯನ್ನು ಕಟ್ಟಲಾಗಿದೆ. ಈ ಕಟ್ಟೆಗೆ ಜೋಡಿಸಿರುವ ಮೆಟ್ಟಲುಗಳಿಗೆ ಪ್ರಾಚೀನ ಹಸ್ತಿಫಲಕಗಳನ್ನು ಅಳವಡಿಸಲಾಗಿದೆ. ಇದೊಂದು ತ್ರಿಕೂಟ ದೇವಾಲಯವಾಗಿದ್ದು ಸದ್ಯ ಪೂರ್ವ ಮತ್ತು ಪಶ್ಚಿಮಾಭಿಮುಖ ಗರ್ಭಗೃಹಗಳ ಭಾಗಗಳು ಮಾತ್ರ ಉಳಿದುಕೊಂಡಿವೆ. ಅದರಲ್ಲೂ ಪೂರ್ವಾಭಿಮುಖ ಗರ್ಭಗೃಹದ ಬಾಗಿಲವಾಡವು ಸಹ ಹಾಳಾಗಿರುವುದನ್ನು ಗಮನಿಸಬಹುದು. ಹಾಗಾಗಿ ಅಂಥ ಕೊರತೆಯನ್ನು ನೀಗಿಸಲು ಅಂತರಾಳದ ತೋರಣ ಕಂಬಗಳನ್ನೇ ಇದಕ್ಕೆ

ಜೋಡಿಸಲಾಗಿರುವುದನ್ನು ನೋಡಬಹುದು. ಹೀಗಾಗಿ ಇದು ಪಶ್ಚಿಮಾಭಿಮುಖವಾದ ಗರ್ಭಗೃಹಕ್ಕೆ ಎದುರಾಗಿರುವ ನಂದಿಮಂಟಪದಂತೆ ಭಾಸವಾಗುತ್ತದೆ.

ಪೂರ್ವಾಭಿಮುಖವಾಗಿರುವ ಅಂತರಾಳಕ್ಕೆ ಅಳವಡಿಸಿರುವ ಈ ತೋರಣ ಕಂಬವು ತುಂಬಾ ಆಕರ್ಷಕವಾಗಿದ್ದು ಸುಮಾರು ಹದಿನೈದು ಅಡಿಗಳಿಗಿಂತ ಹೆಚ್ಚಿನ ಎತ್ತರವನ್ನು ಹೊಂದಿರುವುದು. ತೋರಣ ಕಂಬಗಳು ಬುಡದಲ್ಲಿ ಚೌಕಾಕಾರವಾಗಿದ್ದು ಅದರ ಮೇಲ್ಭಾಗದ ಅಂದರೆ ದಂಡಾಗ್ರ ಭಾಗವು ವೃತ್ತಾಕಾರವಾಗಿದೆ. ಅದರಲ್ಲಿ ವೃತ್ತಾಕಾರದ ಬಳೆಗಳನ್ನು ಒಂದರಮೇಲೆ ಒಂದು ಇಟ್ಟು ಜೋಡಿಸಿದಂತೆ ಕಾಣುತ್ತದೆ. ಅಲ್ಲದೇ ಇದೇ ತೋರಣ ಕಂಬಗಳಲ್ಲಿ ಪಿಂಗಾಣಿ ಬಟ್ಟಲನ್ನು ಉಲ್ಟಾ ಇಟ್ಟಾಗ ಕಾಣುವ ಚಿತ್ರದಂತೆ ಇರುವ ರಚನಾ ವಿನ್ಯಾಸಗಳನ್ನು ಸಹ ಇದರಲ್ಲಿ ರಚಿಸಲಾಗಿದೆ.

ಪಶ್ಚಿಮಾಭಿಮುಖ ಗರ್ಭಗೃಹವು ವಿಶಾಲವಾಗಿದ್ದು ಅದರಲ್ಲಿ ಎತ್ತರವಾದ ಲಿಂಗಪೀಠ ಹಾಗೂ ಎತ್ತರದ ದಂಡ (ರುದ್ರ) ಭಾಗಗಳಿವೆ. ಅವುಗಳಿಗೆ ಕಪು ̈Œ ಬಣ್ಣಬಳಿಯಲಾಗಿದೆ. ಬಲಕ್ಕೆ ಪ್ರಣಾಳಿಯನ್ನು ನಿರ್ಮಿಸಲಾಗಿದೆ. ಈ ಗರ್ಭಗೃಹದ ಬಾಗಿಲವಾಡವು ಚಿತ್ತಾಕರ್ಷಕವಾಗಿದ್ದು ಅದು ಸಪ್ತಶಾಖೆಗಳನ್ನು ಹೊಂದಿರುವುದನ್ನು ಗಮನಿಸಬಹುದು. ಅದರಲ್ಲಿ ಬಳ್ಳಿ, ಎಲೆಯ, ಚಿಕ್ಕಮಣಿಸರಗಳ, ಹೊಸೆದ ಹಗ್ಗದ ರಚನೆಗಳನ್ನು ಬಿಡಿಸಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪ ಹಾಗೂ ಉತ್ತರಾಂಗದ ಭಾಗದಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರನ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಪೇದ್ಯ (ಕೆಳ) ಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ರಚಿಸಲಾಗಿದೆ. ಇಡೀ ಬಾಗಿಲವಾಡಕ್ಕೆ ಕಪು ̈Œ ಬಣ್ಣ ಬಳೆಯಲಾಗಿದ್ದರಿಂದ ಅದರ ಮೂಲ ಸೌಂದರ್ಯ ಮಾಸಿದಂತಾಗಿದೆ.

ಪಶ್ಚಿಮಾಭಿಮುಖ ಗರ್ಭಗೃಹಕ್ಕೆ ಅಂತರಾಳವಿದ್ದು ಅದನ್ನು ತೋರಣದಿಂದ ಅಲಂಕರಣೆಗೊಳಿಸಲಾಗಿದೆ. ಅದು ಸಹ ಸುಮಾರು ಹನ್ನೆರಡು ಅಡಿ ಎತ್ತರವಾಗಿದ್ದು ಅದನ್ನು ಯಾಳಿಯಿಂದ ಸುಂದರಗೊಳಿಸಲಾಗಿದೆ. ಈ ತೋರಣದ ಮಧ್ಯಭಾಗದಲ್ಲಿ ತ್ರಿಮೂರ್ತಿಗಳ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಅಂತರಾಳಕ್ಕೆ ತೋರಣವಲ್ಲದೇ ಇದಕ್ಕೊಂದು ಬಾಗಿಲವಾಡವು ಇದೆ. ಅದು ತ್ರಿಪಟ್ಟಿಕೆಯ ರಚನೆಯಿಂದ ಕೂಡಿರುವುದನ್ನು ಗಮನಿಸಬಹುದು. ಇದರಲ್ಲಿ ಅರ್ಧಕಂಬ, ಪುಷ್ಪಪಟ್ಟಿಕೆ ಹಾಗೂ ಹೊಸೆದ ಹಗ್ಗದಂತೆ ಕಾಣುವ ರಚನೆಗಳು ಈ ಬಾಗಿಲವಾಡದಲ್ಲಿರುವುದನ್ನು ನೋಡಬಹುದು. ಅಂತರಾಳದ ದ್ವಾರಬಂಧಕ್ಕೆ ಹೊಂದಿಕೊಂಡಂತೆ ಇಕ್ಕೆಲುಗಳಲ್ಲಿ ಗೋಡೆಗಂಬಗಳಿದ್ದು ಅವುಗಳ ಮೇಲೆ ಚಾಮರಧಾರಣೀಯರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ.

ಅಂತರಾಳದ ತೋರಣದ ಉತ್ತರಾಂಗದ ಮೇಲ್ಭಾಗದಲ್ಲಿರುವ ನಟರಾಜನ ಶಿಲ್ಪವನ್ನು ಗೋಡೆಯ ಭಾಗದಲ್ಲಿ ಸುಂದರವಾದ ನಟರಾಜನ ಶಿಲ್ಪವನ್ನು ಅಳವಡಿಸಲಾಗಿದೆ. ಸುಮಾರು ಮೂರು ಅಡಿ ಎತ್ತರ ಹಾಗೂ ಎಂಟು ಅಡಿ ಅಗಲವಾಗಿರುವ ಫಲಕದಲ್ಲಿ ಈ ನಟರಾಜನ ಉಬ್ಬುಶಿಲ್ಪ ಕೆತ್ತಲಾಗಿದೆ. ಅಲ್ಲದೇ ಈ ಫಲಕವನ್ನು ಮಂಟಪದಂತೆ ಕಂಡರಿಸಲಾಗಿದೆ. ಇದಕ್ಕೆ

ಘಂಸಾನ ಮಾದರಿಯ ಶಿಖರವನ್ನು ಸಹ ರಚಿಸಲಾಗಿದೆ. ಇದೇ ಫಲಕದಲ್ಲಿ ಗಜಶಿಲ್ಪಗಳಿಂದ ಕೂಡಿದ ಅಲಂಕರಣೆಯನ್ನು ಸಹ ಮಾಡಲಾಗಿದೆ.

ನವರಂಗವು ವಿಶಾಲವಾಗಿದ್ದು ಅದಕ್ಕೆ ಪೂರ್ವ-ಪಶ್ಚಿಮ ಪ್ರವೇಶವನ್ನು ನಿರ್ಮಿಸಲಾಗಿದೆ. ಇದಕ್ಕೆ ಕಕ್ಷಾಸನ ವ್ಯವಸ್ಥೆಯನ್ನು ಮಾಡಲಾಗಿದೆ. ನವರಂಗದ ಎರಡು ಪ್ರವೇಶಗಳಿಗೆ ಜಾಲಂಧರಗಳನ್ನು ಅಳವಡಿಸಲಾಗಿದೆ. ಅದು ವಜ್ರಾಕೃತಿಯ ಪಟ್ಟಿಕೆ ಹಾಗೂ ಬಾದಾಮ ಆಕೃತಿಯ ಪಟ್ಟಿಕೆಗಳನ್ನು ಹೊಂದಿರುವುದನ್ನು ಗಮನಿಸಬಹುದು. ಗರ್ಭಗೃಹಗಳು, ಅಂತರಾಳಗಳು ಹಾಗೂ ನವರಂಗವನ್ನು ಒಳಗೊಂಡಂತೆ ದಕ್ಷಿಣಾಭಿಮುಖವಾಗಿ ಇಡೀ ದೇವಾಲಯಕ್ಕೆ ಒಂದೇ ಒಂದು ಪ್ರವೇಶ ದ್ವಾರವನ್ನು ನಿರ್ಮಿಸಲಾಗಿದೆ.

ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ ಹಾಗೂ ಕಪೋತ ಭಾಗಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಹೊರಗೋಡೆಯ ಭಾಗವು ಸರಳ ರಚನೆಯಿಂದ ಕೂಡಿದೆ. ದೇವಾಲಯದ ಪ್ರಸ್ತರ ಭಾಗದಲ್ಲಿ ಅಧಿಷ್ಠಾನದಲ್ಲಿರುವ ಭಾಗಗಳನ್ನೇ ಮತ್ತೆ ಪುನರಾವರ್ತಿಸಲಾಗಿದೆ. ಈ ದೇವಾಲಯಕ್ಕಿರುವ ಅಧಿಷ್ಠಾನದ ಭಾಗಗಳು ಅತ್ಯಂತ ಸ್ಪಷ್ಟವಾಗಿ ಕಾಣುತ್ತವೆ. ಆದರೆ ಅದನ್ನು ಹೊರತುಪಡಿಸಿ ಉಳಿದ ಯಾವ ದೇವಾಲಯಗಳಲ್ಲಿಯೂ ಇಷ್ಟು ಸ್ಪಷ್ಟವಾಗಿ ಅಧಿಷ್ಠಾನದ ಭಾಗಗಳು ಕಂಡು ಬರುವುದಿಲ್ಲ.

ಈ ಗುಡಿಯಲ್ಲಿ ಮುಖ್ಯವಾಗಿ ಸೂರ್ಯ, ಭೈರವ, ಉಮಾಮಹೇಶ್ವರ ಹಾಗೂ ನಾಗಶಿಲ್ಪಗಳನ್ನು ಇಡಲಾಗಿದೆ. ಪ್ರಾಚೀನ ದೇವಾಲಯದ ಹಸ್ತಿಫಲಕ, ತ್ರುಟಿತ ಯಾಳಿ ಫಲಕಗಳು ಸಹ ಇದೇ ಆವರಣದಲ್ಲಿ ಬಿದ್ದಿರುವುದನ್ನು ನೋಡಬಹುದು. ಒಟ್ಟಾರೆ ಈ ದೇವಾಲಯವು ಸಹ ಹಲವು ಬದಲಾವಣೆಗೆ ಒಳಗಾಗಿರುವುದರಿಂದ ತನ್ನ ಮೂಲ ಸೌಂದರ್ಯ ಕಳೆದುಕೊಂಡಿದೆಯೆಂದೇ ಅಭಿಪ್ರಾಯಿಸಬಹುದು. ಪ್ರಾಚೀನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಈ ತ್ರಿಕೂಟ ದೇವಾಲಯವನ್ನು ಶಾಸನಗಳಲ್ಲಿ ತ್ರಿಪುರಾಂತಕ ದೇವಾಲಯವೆಂದು ಉಲ್ಲೇಖಿಸಲಾಗಿದೆಯೆಂದು ಅಭಿಪ್ರಾಯಿಸಲಾಗಿದೆ[೦]. ಬಹುಶಃ ಈ ಸಮೀಕರಣವೇ ಒಪ್ಪಬಹುದಾದ ವಿಚಾರವಾಗಿಯೆಂದು ಅಭಿಪ್ರಾಯಿಸಬಹುದು.

### ಹಗರಟಗಿ–ಭೀಮರಾಯನ ಗುಡಿ

ಗ್ರಾಮದ ಪಶ್ಚಿಮ ಭಾಗದಲ್ಲಿ ವಿಶಾಲವಾಗಿ ಹರಡಿರುವ ಜಮೀನಿನಲ್ಲಿ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಊರಿನ ಬಸ್ ನಿಲ್ದಾಣದಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿರುವ ಈ ದೇವಾಲಯವನ್ನು ತಲುಪಲು ಕಾಲುದಾರಿಯನ್ನೇ ಬಳಸಬೇಕು. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಪ್ರಸ್ತುತ, ಗ್ರಾಮದಲ್ಲಿ ಅಳಿದುಳಿದ ಎಲ್ಲ ದೇವಾಲಯಗಳಿಗಿಂತ ವಿಸ್ತಾರದಲ್ಲಿ ದೊಡ್ಡದಾಗಿದೆ. ಬಹುಶಃ ಇದಕ್ಕಿಂತಲೂ ಗ್ರಾಮದಲ್ಲಿರುವ ಧರ್ಮರಾಜನ ಗುಡಿಯು ದೊಡ್ಡದ್ದಾಗಿರಬಹುದು. ಆದರೆ ಅದು ಅನೇಕ ಮಾರ್ಪಡುಗಳಿಗೆ ಒಳಗಾಗಿರುವುದರಿಂದ ಅದು ತನ್ನ ಮೊದಲ ನೈಜತೆಯನ್ನು ಹಾಗೂ ವಿಸ್ತಾರವನ್ನು ಕಳೆದುಕೊಂಡಂತಿದೆ. ಆದ್ದರಿಂದ ಸದ್ಯದ ಸ್ಥಿತಿಯಲ್ಲಿ ಭೀಮನೆಂಬ ಹೆಸರಿನ ದೇವಾಲಯವೇ ವಿಸ್ತಾರದಲ್ಲಿ ಅತೀ ದೊಡ್ಡ ದೇವಾಲಯವಾಗಿದೆಯೆಂದು ಅಭಿಪ್ರಾಯಿಸಬಹುದು. ಇದು

ಗರ್ಭಗೃಹ, ತೆರದ ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಪೂರ್ವಾಭಿಮುಖವಾದ ಮುಖಮಂಟಪಕ್ಕೆ ಮೂರು ಕಡೆಗೂ ಪ್ರವೇಶವನ್ನು ನಿರ್ಮಿಸಲಾಗಿದೆ. ಅಲ್ಲದೇ ನವರಂಗಕ್ಕೂ ಸಹ ಉತ್ತರಾಭಿಮುಖ ಇನ್ನೊಂದು ಪ್ರವೇಶ ಹಾಗೂ ಅದಕ್ಕೊಂದು ಚಿಕ್ಕ ಮುಖಮಂಟಪವನ್ನು ರಚಿಸಲಾಗಿದೆ. ಹೀಗಾಗಿ ನವರಂಗದ ಉತ್ತರಾಭಿಮುಖ ಪ್ರವೇಶದ ಮೂಲಕವು ಈ ಗುಡಿಯನ್ನು ಪ್ರವೇಶಿಸಬಹುದಾಗಿದೆ.

ದೇವಾಲಯದ ಗರ್ಭಗೃಹದಲ್ಲಿ ವೃತ್ತಾಕಾರದ ಲಿಂಗಪೀಠವಿದ್ದು ಅದರ ದಂಡ (ರುದ್ರ)ಭಾಗವು ಎತ್ತರವಾಗಿದೆ. ತೆರೆದ ಅಂತರಾಳದ ಭಾಗದಲ್ಲಿ ಯಾವುದೇ ಶಿಲ್ಪಾವಶೇಷಗಳಿರುವುದಿಲ್ಲ. ಅಂತರಾಳದ ಇಕ್ಕೆಲಗಳಲ್ಲಿರುವ ಅರ್ಧಕಂಬ (ಗೋಡೆಕಂಬ)ಗಳು ವಿಶೇಷ ಅಲಂಕರಣೆಯನ್ನು ಹೊಂದಿವೆ. ಕಂಬಗಳ ಮೇಲೆ ಎಲೆ ಬಳ್ಳಿಗಳ ಹಾಗೂ ಕಂಬಗಳ ಕೆತ್ತನೆಯನ್ನು ಮಾಡಲಾಗಿದೆ. ವಿಶಾಲವಾದ ನವರಂಗವು ಉತ್ತರಾಭಿಮುಖವಾದ ಪ್ರವೇಶವನ್ನು ಸಹ ಹೊಂದಿದೆ. ಇದರಲ್ಲಿರುವ ಕಂಬಗಳು ಚೌಕಾಕಾರವಾಗಿದ್ದು ಅವು ಕೆಳಭಾಗದಲ್ಲಿ ಉಪಾನ, ಉಪಾನದ ನಾಲ್ಕು ಭಾಗದ ಮೇಲೆ ತ್ರಿಕೋನ ಪಟ್ಟಿಕೆಯ ರಚನೆಯನ್ನು ಮಾಡಲಾಗಿದೆ. ಈ ತ್ರಿಕೋನ ಆಕೃತಿಗಳಲ್ಲಿ ಚಿಕ್ಕದಾಗಿರುವ ಬದಾಮ ರಚನೆಯನ್ನು ಸಹ ರಚಿಸಲಾಗಿದೆ. ಕಂಬದಲ್ಲಿರುವ ಉಪಾನದ ಮೇಲಿನ ಭಾಗವು ಚೌಕಾಕಾರದ್ದಾಗಿದ್ದು, ಅದರ ಮೇಲಿನ ಭಾಗವು ಸಹ ಚೌಕಾಕಾರವಾಗಿದೆ. ಈ ಚೌಕಾಕಾರದ ಭಾಗದಲ್ಲಿ ಚಿಕ್ಕ ಚಿಕ್ಕ ಅಲಂಕರಣೆಗಳನ್ನು ಸುಂದರವಾಗಿ ಕೆತ್ತಲಾಗಿದೆ. ಅಲ್ಲದೇ ನವರಂಗದಲ್ಲಿರುವ ಮಧ್ಯದ ನಾಲ್ಕು ಅಲಂಕರಣೆಗಳನ್ನು ಕಂಬಗಳಲ್ಲಿ ಕೆತ್ತಲಾಗಿದೆ. ಇಲ್ಲಿರುವ ಕಂಬಗಳು ಕಲ್ಯಾಣ ಚಾಲುಕ್ಯರ ಕಾಲದ ನಿರ್ಮಿತಿಗಳು ಎಂಬುದನ್ನು ವಿನ್ಯಾಸದ ಮೇಲೆ ತಿಳಿಯಬಹುದಾಗಿದೆ. ನವರಂಗದಲ್ಲಿರುವ ಗೋಡೆಗಂಬಗಳ ಮೇಲೆಯೂ ಸಹ ಚಿಕ್ಕ ಪುಟ್ಟ ಅಲಂಕರಣೆಗಳನ್ನು ಮಾಡಲಾಗಿದೆ.

ಚೌಕಾಕಾರದ ಕಂಬಗಳು ನವರಂಗದಲ್ಲಿದ್ದರೆ, ತಿರುಗಣಿಯ ಯಂತ್ರದಿಂದ ನಿರ್ಮಿಸಲ್ಪಟ್ಟ ವೃತ್ತಾಕಾರದ ಕಂಬಗಳು ಮುಖಮಂಟಪದಲ್ಲಿವೆ. ಇವು ನವರಂಗದಲ್ಲಿರುವ ಕಂಬಗಳಿಗಿಂತ ಸುಂದರವಾಗಿ ಕಾಣುತ್ತವೆ. ಶಹಾಬಾದ್‌ಕಲ್ಲಿನಲ್ಲಿ ನಿರ್ಮಾಣವಾಗಿದ್ದರು ಅವುಗಳು ಮಾಸಿ ಕಪು1ಬಣ್ಣಕ್ಕೆ ತಿರುಗಿವೆ. ಮುಖಮಂಟಪದಲ್ಲಿರುವ ಕಂಬಗಳು ಬುಡಭಾಗದಲ್ಲಿ ಚೌಕಾಕಾರದ ಎತ್ತರ ಭಾಗವನ್ನು (ಉಪಾನ) ಹೊಂದಿದ್ದು ಅದರ ಮೇಲಿನ ಭಾಗವು ಚೌಕಾಕಾರವಾಗಿದೆ. ಕಂಬದ ದಂಡಾಗ್ರ (ಮಧ್ಯ) ಭಾಗವು ವೃತ್ತಾಕಾರದ ಬಳೆಗಳನ್ನು ಒಂದರ ಮೇಲೆ ಒಂದು ಜೋಡಿಸಿಟ್ಟಂತೆ ಕಂಡುಬರುತ್ತದೆ. ಇವುಗಳಲ್ಲದೆ ಗಂಟೆ ಆಕಾರವನ್ನು ಪ್ರತಿನಿಧಿಸುವ ಹಾಗೂ ದಂಡಾಗ್ರ ಭಾಗದಲ್ಲಿ ಹದಿನಾರು ವೃತ್ತಪಟ್ಟಿಕೆಗಳ ರಚನೆ ಹೊಂದಿರುವ ಕಂಬಗಳು ಸಹ ಮುಖಮಂಟಪದಲ್ಲಿವೆ. ದಂಡಾಗ್ರ ಭಾಗದಲ್ಲಿ ಸರಪಳಿ ಹಾಗೂ ಹೂಮಾಲೆಯ ಕೆತ್ತನೆಯ ಅಲಂಕರಣೆಗಳನ್ನು ಮಾಡಲಾಗಿದೆ. ಈ ಕಂಬಗಳಲ್ಲಿ ವೃತ್ತಾಕಾರದ ಹಾಗೂ ತಟ್ಟೆಆಕಾರದ ಫಲಕ ಹಾಗೂ ಬೋಧಿಗೆಗಳನ್ನು ಅಳವಡಿಸಲಾಗಿದೆ.

ಮುಖಮಂಟಪವು ಕಕ್ಷಾಸನವನ್ನು ಹೊಂದಿದ್ದು ಅದರಲ್ಲಿರುವ ಗಿಡ್ಡನೆಯ ಕಂಬಗಳು ವೃತ್ತಾಕಾರದವುಗಳಾಗಿವೆ. ಚೌಕಾಕರದ ಉಪಾನ ಭಾಗದ ಮೂಲೆಗಳನ್ನು ಬದಾಮ ಆಕೃತಿಯ

ರಚನೆಯಂತೆ ಕಾಣುವ ಹಾಗೆ ಮಾಡಲಾಗಿದೆ. ಆದರೆ ವೃತ್ತ, ತಟ್ಟೆ ಆಕಾರದ ಫಲಕ ಹಾಗೂ ಬೋಧಿಗೆಗಳನ್ನು ಈ ಕಂಬಗಳಲ್ಲಿ ಅಳವಡಿಸಲಾಗಿದೆ.

ನವರಂಗದ ಉತ್ತರಾಭಿಮುಖ ಪ್ರವೇಶದ ಬಾಗಿಲವಾಡವು ಅತ್ಯಂತ ಮನಮೋಹಕವಾಗಿ ಕೆತ್ತಲ್ಪಟ್ಟಿದೆ. ಇದು ಪಂಚಪಟ್ಟಿಕೆಗಳಿಂದ ಕೂಡಿದ್ದು ಪ್ರತಿ ಪಟ್ಟಿಕೆಯು ವಿಶೇಷ ಅಲಂಕರಣೆಗಳನ್ನು ಹೊಂದಿದೆ. ಮುಖ್ಯವಾಗಿ ಇದರಲ್ಲಿ ವಜ್ರಾಕೃತಿ, ವೃತ್ತಬಳ್ಳಿ, ನಂತರ ಅರ್ಧಕಂಬ ಪಟ್ಟಿಕೆ ಹಾಗೂ ಅವುಗಳ ಮೇಲೆ ವೃತ್ತಾಕಾರದ ಬಳೆಯ ಅಲಂಕರಣೆಗಳನ್ನು ಪೋಣಿಸಿದಂತೆ ಅಲಂಕರಣೆಗೊಳಿಸಲಾಗಿದೆ. ಇಂಥ ಸುಂದರವಾದ ಪಟ್ಟಿಕೆ ಬಾಗಿಲವಾಡದಲ್ಲಿ ಸುತ್ತಲೂ ರಚನೆಯಾಗಿದೆ. ಸಿಂಹ ಅಥವಾ ಯಾಳಿ ಆಕಾರದಂತೆ ಕಾಣುವ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಒಂದರ ಮೇಲೆ ಒಂದು ಜೋಡಿಸಿಟ್ಟಂತೆ ಕಾಣುವ ಇನ್ನೊಂದು ಪಟ್ಟಿಕೆಯನ್ನು ಸಹ ಬಾಗಿಲವಾಡದಲ್ಲಿ ಸುತ್ತಲೂ ರಚಿಸಲಾಗಿದೆ. ಬಾಗಿಲವಾಡದ ಕೆಳಭಾಗದಲ್ಲಿ ಉಬ್ಬು ದ್ವಾರಶಿಲ್ಪಗಳಿದ್ದು ಅವು ಕೈಯಲ್ಲಿ ಚಕ್ರ, ಶಂಖ, ಗದೆ ಮತ್ತು ತ್ರಿಶೂಲಗಳನ್ನು ಧರಿಸಿವೆ. ಇದೇ ಶಿಲ್ಪದಲ್ಲಿ ಛತ್ರಚಾಮರಣಿಧಾರಿಯರ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಸಹ ಕೆತ್ತಲಾಗಿದೆ. ಈ ದ್ವಾರ ಶಿಲ್ಪದ ಸುತ್ತಲೂ ಹೂಬಳ್ಳಿಗಳಿಂದ ಅಲಂಕರಣೆ ಮಾಡಲಾಗಿದೆ.

ಬಾಗಿಲವಾಡದ ಉತ್ತರಾಂಗದ ಭಾಗವು ಮುಂಚಾಚಿದೆ. ಮುಂಚಾಚಿದ ಭಾಗದ ಮೇಲಿನ ಭಾಗದಲ್ಲಿ ನಾಗರ ಮಾದರಿಯ ಮೂರು ಶಿಖರಗಳನ್ನು ಕೆತ್ತಲಾಗಿದೆ. ಚಿಕ್ಕದಾಗಿರುವ ಶಿಖರಗಳು ಸ್ತೂಪಿ ಮತ್ತು ಕಲಶಗಳ ಅಲಂಕರಣೆಗಳನ್ನು ಹೊಂದಿವೆ. ಈ ದೇವಾಲಯದ ನವರಂಗಕ್ಕಿರುವ ಉತ್ತರಾಭಿಮುಖ ಅಲಂಕೃತ ದ್ವಾರ ಶಾಖೆಯಂತೆಯೇ ಉಳಿದೆಲ್ಲ ಬಾಗಿಲವಾಡಗಳು ಸಹ ಇದೇ ಅಲಂಕರಣೆಗಳನ್ನು ಹೊಂದಿವೆ. ಗರ್ಭಗೃಹದ ಬಾಗಿಲವಾಡವು ಸಹ ನವರಂಗದ ಬಾಗಿಲವಾಡದಂತೆ ಸುಂದರವಾಗಿಯೇ ರಚನೆಯಾಗಿರುವುದು. ಆದರೆ ಉತ್ತರಾಂಗದಲ್ಲಿ ಶಿಖರಪಟ್ಟಿಕೆಯ ಬದಲಾಗಿ ಕೈಪಿಡಿಗಳನ್ನು ರಚಿಸಲಾಗಿದೆ. ಅಲ್ಲದೇ ಅವುಗಳಲ್ಲಿ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಉಳಿದಂತೆ ನವರಂಗದ ಉತ್ತರಾಭಿಮುಖ ಬಾಗಿಲವಾಡದ ಎಲ್ಲ ರಚನಾ ವಿನ್ಯಾಸಗಳು ಈ ಬಾಗಿಲವಾಡದಲ್ಲಿಯು ಇವೆ. ನವರಂಗದ ಪೂರ್ವಾಭಿಮುಖ ಪ್ರವೇಶದ್ವಾರವು ಸಹ ಉಳಿದೆಲ್ಲ ಬಾಗಿಲವಾಡಗಳಂತೆ ಹೆಚ್ಚಿನ ಅಲಂಕರಣೆ ಹೊಂದಿರುವುದನ್ನು ಗಮನಿಸಬಹುದು. ಇದಕ್ಕೆ ಉಳಿದೆಲ್ಲ ಬಾಗಿಲವಾಡಗಳಿರುವ ಹೊಸ್ತಿಲುಗಳಿಗಿಂತ ಭಿನ್ನವಾಗಿರುವ ಅಂದರೆ ಜಿಗ್‌ಜಾಗ್ ಮಾದರಿಯ ಹೊಸ್ತಿಲನ್ನು ಜೋಡಿಸಲಾಗಿದೆ. ಇಂಥ ಅಲಂಕರಣೆಯು ಈ ಹೊಸ್ತಿಲಿನ ಸೌಂದರ್ಯವನ್ನು ಇನ್ನಷ್ಟು ಹೆಚ್ಚಿಸಿದೆ.

ನವರಂಗ ಹಾಗೂ ಮುಖಮಂಟಪದಲ್ಲಿ ಭವನೇಶ್ವರಿಯ ಕೆತ್ತನೆಗಳನ್ನು ಮಾಡಲಾಗಿದೆ. ನವರಂಗದಲ್ಲಿರುವ ಭುವನೇಶ್ವರಿಯಂತೂ ತುಂಬಾ ಸುಂದರವಾಗಿದೆ. ಮಧ್ಯಭಾಗದಲ್ಲಿ ನಟರಾಜ (ಶಿವ ತಾಂಡವ) ನೃತ್ಯಮಾಡುತ್ತಿರುವ ಉಬ್ಬುಶಿಲ್ಪ ಹಾಗೂ ಅದರ ಸುತ್ತಲೂ ಎಂಟು ದಿಕ್ಕುಗಳಲ್ಲಿ ದಿಕ್ಪಾಲಕರ ಉಬ್ಬುಶಿಲ್ಪಗಳನ್ನು ನಯವಾಗಿ ಕಾಣುವಂತೆ ಕೆತ್ತಲಾಗಿದೆ. ಮುಖಮಂಟಪದಲ್ಲಿರುವ ಭುವನೇಶ್ವರಿಯು ಕಮಲಪುಷ್ಪ ಕೆತ್ತನೆಯ ರಚನೆಯಾಗಿದೆ.

ಮುಖಮಂಟಪಕ್ಕೆ ಕಕ್ಷಾಸನದ ವ್ಯವಸ್ಥೆ ಇದೆ. ಅದರ ಹೊರ ಭಾಗದಲ್ಲಿ ಸುತ್ತಲೂ ಪುಷ್ಪ ಪಟ್ಟಿಕೆಯ ಸಾಲನ್ನು ಕೆತ್ತಲಾಗಿದೆ. ಅಲ್ಲದೇ ಒರಗಿಕೊಳ್ಳಲು ಜೋಡಿಸಿರುವ ಶಿಲಾಫಲಕದ ಹಿಂಭಾಗದಲ್ಲಿ ವಿವಿಧ ಮಾದರಿಯ ಶಿಖರಪಟ್ಟಿಕೆಗಳನ್ನು ಕಂಡರಿಸಲಾಗಿದೆ. ಮುಖಮಂಟಪಕ್ಕೆ ಮುಂಚಾಚಿದ ಮುಂಜೂರಿನ ಭಾಗವನ್ನು ಸಹ ನಿರ್ಮಿಸಲಾಗಿದೆ. ಅಲ್ಲದೇ ಕಕ್ಷಾಸನದಲ್ಲಿರುವ ಅರ್ಧ ಕಂಬಗಳು ವೃತ್ತಾಕಾರವಾಗಿದ್ದು ಅವು ಸರಳ ರಚನೆಯಿಂದ ಕೂಡಿವೆ.

ದೇವಾಲಯದ ಅಧಿಷ್ಠಾನವು ಉಪಾನ ಮತ್ತು ಜಗತಿ ಭಾಗಗಳನ್ನು ಮಾತ್ರ ಹೊಂದಿದ್ದು ಉಳಿದಂತೆ ಕಪೋತ ಮತ್ತು ಗಳದಂತ ಸಾಮಾನ್ಯ ರಚನೆಯ ಭಾಗಗಳು ಸಹ ಈ ಅಧಿಷ್ಠಾನದಲ್ಲಿರದೇ ಅತ್ಯಂತ ಸರಳ ರಚನೆಯಂತೆ ಈ ಅಧಿಷ್ಠಾನವು ಕಾಣುತ್ತದೆ. ಹೊರಗೋಡೆಯು ಹೆಚ್ಚಿನ ಅಲಂಕರಣೆ ಹೊಂದಿರುವುದಿಲ್ಲ. ಆದರೆ ಹೊರಗೋಡೆಯ ಮಧ್ಯಭಾಗದಲ್ಲಿ ಅಲಂಕರಣೆಯ ಪಟ್ಟಿಕೆಯೊಂದು ಸುತ್ತಲೂ ಮುಂದುವರಿದಿದೆ.

ಪ್ರಸ್ತರ ಭಾಗವು ಗಳ, ವೃತ್ತ ಹಾಗೂ ಇನ್ನೊಂದು ಪಟ್ಟಿ ಆಕಾರದ ಕೆತ್ತನೆಯನ್ನು ಒಳಗೊಂಡಿದೆ. ಇವು ದೇವಾಲಯದ ಪ್ರಸ್ತರ ಭಾಗದಲ್ಲಿ ಸುತ್ತಲೂ ಮುಂದುವರಿದಿವೆ. ಶಿಖರ ಭಾಗವು ಸಂಪೂರ್ಣವಾಗಿ ಬಿದ್ದುಹೋಗಿದ್ದು ಬಹುಶಃ ಈ ದೇವಾಲಯವು ಸಹ ಫಂಸಾನ (ಕದಂಬ-ನಾಗರ) ಮಾದರಿಯ ಶಿಖರವನ್ನು ಹೊಂದಿದ್ದಿರಬಹುದು ಎಂದು ಊಹಿಸಬಹುದಾಗಿದೆ.

ದೇವಾಲಯದ ಮುಖಮಂಟಪದಲ್ಲಿ ಕೆಲವು ಬಿಡಿಶಿಲ್ಪಗಳನ್ನು ಇಡಲಾಗಿದೆ. ಅವುಗಳಲ್ಲಿ ಎರಡು ವೀರಗಲ್ಲುಗಳಿವೆ. ಅವುಗಳ ಮೇಲಿರುವ ಚಿತ್ರ ಅಲಂಕರಣೆಗಳನ್ನು ನೋಡಿದರೆ ಇವು ಗೋಗ್ರಹಣಕ್ಕೆ (ತುರು ಕಾಳಗ) ಸಂಬಂಧಿಸಿದವುಗಳೆಂದು ಹೇಳಬಹುದಾಗಿದೆ. ಇನ್ನೊಂದು ಶಿಲ್ಪವು ಕುರೂಪಿಯಂತೆ ಕಾಣುತ್ತದೆ. ವೀರಗಲ್ಲು ಶಿಲ್ಪಗಳಲ್ಲದೇ ವಿಷ್ಣುವಿಗೆ ಸಂಬಂಧಪಟ್ಟ ಮುರಿದು ಬಿದ್ದ ಶಿಲ್ಪವು ಸಹ ಮುಖಮಂಟಪದಲ್ಲಿದೆ.

ಈ ಗುಡಿಗೆ ಸಂಬಂಧಪಟ್ಟ ಶಾಸನ ಉಲ್ಲೇಖ ವಿವರಗಳು ಪ್ರಕಟವಾಗಿವೆ. ಹಗರಟಗಿ ಗ್ರಾಮದಿಂದ ವರದಿಯಾಗಿರುವ ಒಂದು ಶಾಸನದಲ್ಲಿ ಸ್ವಯಂಭು ಭೀಮೇಶ್ವರನೆಂದು ಉಲ್ಲೇಖಿಸಲಾಗಿದೆ. ಆದ್ದರಿಂದ ಶಾಸನ ಉಲ್ಲೇಖಿತ ಭೀಮೇಶ್ವರ ದೇವಾಲಯ ಇದೆ ಎಂಬುದರಲ್ಲಿ ಅನುಮಾನವಿಲ್ಲ. ಭೀಮೇಶ್ವರ ಎಂಬ ಹೆಸರಿನ ದೇವಾಲಯಗಳು ಈ ಭಾಗದಲ್ಲಿ ಅತ್ಯಂತ ವಿರಳ. ಈ ದೇವಾಲಯವನ್ನು ಬಹುಶಃ ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ನಿರ್ಮಿಸಿರುವ ಸಾಧ್ಯತೆಗಳಿವೆ. ಇದಕ್ಕೆ ಪುಷ್ಠಿ ಎಂಬಂತೆ ಗುಡಿಯ ರಚನಾ ವಿಧಾನದಲ್ಲಿ ಬಳಕೆಯಾಗಿರುವ ಲಕ್ಷಣಗಳ ಮೂಲಕ ಗುರುತಿಸಬಹುದು.

**ಸಂಗಮ–ಸಂಗಮನಾಥ**

ಶಹಾಪುರ ತಾಲೂಕಿನ ಆಗ್ನೇಯಕ್ಕೆ ಕೇಂದ್ರಿಕೃತವಾಗಿರುವ ಸಂಗಮ ಸ್ಥಳವು ತಾಲೂಕಾ ಕೇಂದ್ರದಿಂದ ಸುಮಾರು ೫೦ ಕಿಲೋಮೀಟರ ಅಂತರದಲ್ಲಿದೆ. ಮುಖ್ಯವಾಗಿ ಈ ಸ್ಥಳದಲ್ಲಿ ದಕ್ಷಿಣ ಭಾರತದ ಎರಡು ಪ್ರಮುಖ ನದಿಗಳು ಒಂದಕ್ಕೊಂದು ಕೂಡಿಕೊಳ್ಳುತ್ತವೆ. ಕೃಷ್ಣೆ

ಮತ್ತು ಭೀಮಾ ನದಿಯು ಸೇರಿಕೊಳ್ಳುವ ಈ ಸ್ಥಳವನ್ನು ಸಂಗಮವೆಂದು ಕರೆಯಲಾಗಿದೆ. ವಿಶಾಲವಾಗಿ ಹರಡಿಕೊಂಡಿರುವ ಸಮತಟ್ಟಾದ ಈ ಪ್ರದೇಶದಲ್ಲಿ ನದಿಗಳ ಸಂಗಮಿಸುವುದನ್ನು ನೋಡುವುದೇ ಮನಸ್ಸಿಗೆ ರೋಮಾಂಚನ ಉಂಟುಮಾಡುತ್ತದೆ. ಎಲ್ಲ ಕಾಲಕ್ಕೂ ಜನಮಾನಸದಲ್ಲಿ ಪವಿತ್ರ ಭಾವನೆ ಪಡೆದಿರುವ ಈ ಎರಡು ನದಿಗಳು ಸೇರುವ ಇಂಥ ಸ್ಥಳ(ಸಂಗಮ)ದಲ್ಲಿ ಸಹಜವಾಗಿಯೇ ಬೃಹತ್ತಾದ ದೇವಾಲಯವೊಂದನ್ನು ೧೧-೧೨ನೇ ಶತಮಾನದಲ್ಲಿಯೇ ಕಟ್ಟಲಾಗಿರುವುದನ್ನು ಗಮನಿಸಬಹುದು. ಭಾರತೀಯ ಸಂಸ್ಕೃತಿಗಳಲ್ಲಿ ಇಂಥ ಸಂಗಮ ಸ್ಥಾನಗಳು ಅತ್ಯಂತ ಹೆಚ್ಚಿನ ಪಾವಿತ್ರ್ಯವನ್ನು ಪಡೆದಿವೆ. ಸ್ಥಳಗಳು ಕೇವಲ ದೇವಾಲಯ ನಿರ್ಮಾಣ ಕಾರ್ಯಕ್ಕೆ ಮಾತ್ರ ಸೀಮಿತವಾದಂಥವುಗಳಲ್ಲ. ಅವು ಲೌಕಿಕ ಮತ್ತು ಅಲೌಕಿಕ ಕಾರ್ಯಚಟುವಟಿಕೆಳನ್ನು ಕೈಗೊಳ್ಳುವ ಪ್ರಮುಖ ಕೇಂದ್ರಗಳಾಗಿರುವುದುಂಟು. ಉದಾ. ಅಲಹಾಬಾದ ತ್ರಿವೇಣಿ ಸಂಗಮ, ಕೂಡಲ ಸಂಗಮ, ತಿರುಮಲಕೂಡು ನರಸಿಂಹಪುರದ ಹತ್ತಿರ ಇರುವ ಸಂಗಮ, ತುಂಗಾ ಮತ್ತು ಭದ್ರಾ ಸೇರುವ ಕೂಡಲಿ ಹಾಗೂ ಕೃಷ್ಣಾ ಮತ್ತು ತುಂಗಭದ್ರಾ ನದಿಗಳು ಸೇರುವ ಮುಂತಾದ ಸ್ಥಳಗಳನ್ನು ಉಲ್ಲೇಖಿಸಬಹುದು. ಕೃಷ್ಣೆ ಭೀಮಾ ನದಿಗಳು ಸೇರುವ ಈ ಸ್ಥಳವು ಎಲ್ಲ ಕಾಲಕ್ಕೂ ಮಹತ್ವ ಪಡೆದ ಸ್ಥಳವಾಗಿತ್ತು. ಹಾಗಾಗಿ ಈ ಸ್ಥಳದಲ್ಲಿಯೇ ದೇವಾಲಯವನ್ನು ಕಟ್ಟಲಾಗಿದೆ. ಇದು ಮಧ್ಯಕಾಲ ಸಂದರ್ಭದಲ್ಲಿಯೂ ಪ್ರಮುಖ ಧಾರ್ಮಿಕ ಚಟುವಟಿಕೆಯ ಕೇಂದ್ರವು ಆಗಿತ್ತು ಎಂಬುದು ವಿಚಾರಾರ್ಹ ಸಂಗತಿಯಾಗಿದೆ. ಕಲ್ಯಾಣದ ಚಾಲುಕ್ಯರ ಆಡಳಿತಾವಧಿಯಿಂದ ಹಿಡಿದು ವಿಜಯನಗರದ ಆಡಳಿತದವರೆಗೂ ಈ ಸ್ಥಳದಲ್ಲಿ ಅಲೌಕಿಕ ಮತ್ತು ಲೌಕಿಕ ಚಟುವಟಿಕೆಗಳು ನಿರಂತರವಾಗಿ ಜರುಗುತ್ತಲೇ ಬಂದಿವೆ. ಅವುಗಳ ಕುರಿತು ಶಾಸನ ಉಲ್ಲೇಖಗಳು ಸಹ ದಾಖಲಗೊಂಡಿವೆ.ವೆ.

ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗವನ್ನು ಈ ದೇವಾಲಯವು ಹೊಂದಿದೆ. ತೆರದ ನವರಂಗಕ್ಕೆ ಮೂರು ಕಡೆಯಲ್ಲಿಯೂ ಪ್ರವೇಶ ನಿರ್ಮಿಸಲಾಗಿದೆ. ಪ್ರಧಾನ ಪ್ರವೇಶವು ಪೂರ್ವಾಭಿಮುಖವಾಗಿರುವುದು. ಅಲ್ಲದೇ ಈ ದೇವಾಲಯದ ಬಹುತೇಕ ಭಾಗಗಳನ್ನೆಲ್ಲ ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಲಾಗಿದ್ದರಿಂದ ಹೊರ ಗೋಡೆ ಹಾಗೂ ಶಿಖರ ಭಾಗಗಳು ಹೊಚ್ಚ ಹೊಸದೆಂಬುವಂತೆ ಭಾಸವಾಗುತ್ತವೆ. ದೇವಾಲಯದ ಮುಂಭಾಗದಲ್ಲಿರುವ ದೀಪಸ್ತಂಭವು ಸಹ ಕೆಲವು ದಶಕಗಳ ಹಿಂದೆಯೇ ನಿರ್ಮಾಣವಾದಂತದ್ದು. ಇದೇ ಗುಡಿಯ ಪಕ್ಕದಲ್ಲಿ ಕಾಳಮ್ಮ ಅಥವಾ ಚಾಮುಂಡಿಯ ಚಿಕ್ಕ ಗುಡಿಯಿದೆ. ಅಲ್ಲದೇ ನಾಗ ಹಾಗೂ ಶಾಸನ ಶಿಲ್ಪಗಳನ್ನು ಗುಡಿಯ ಆವರಣದಲ್ಲಿ ಇಡಲಾಗಿದೆ. ಈ ದೇವಾಲಯವನ್ನು ಪುನರ್‌ನಿರ್ಮಿಸಲಾಗಿದ್ದರೂ ಅದು ತನ್ನ ಪ್ರಾಚೀನ ಸೌಂದರ್ಯವನ್ನು ಮಾತ್ರ ಕಳೆದುಕೊಂಡಿಲ್ಲವೆಂದೇ ಅಭಿಪ್ರಾಯಿಸಬಹುದು.

ಗರ್ಭಗೃಹವನ್ನು ದುರಸ್ತಿಗೊಳಿಸಿ ಅದರಲ್ಲಿ ಪ್ರಾಚೀನ ಲಿಂಗವನ್ನಿಡಲಾಗಿದೆ. ಉಳಿದಂತೆ ಗರ್ಭಗೃಹದ ಒಳಗೋಡೆಯನ್ನು ಇತ್ತೀಚೆಗೆ ಬಳಪದ ಕಲ್ಲಿನಿಂದ ಅಲಂಕಾರಗೊಳಿಸಲಾಗಿರುವುದನ್ನು ಗಮನಿಸಬಹುದು. ಗರ್ಭಗೃಹದ ಬಾಗಿಲವಾಡವು ಪಂಚ ಪಟ್ಟಿಕೆಗಳಿಂದ ಕೂಡಿದ್ದು ಈ ಪಟ್ಟಿಕೆಗಳಲ್ಲಿರುವ ಮಧ್ಯದ ಪಟ್ಟಿಕೆಯು ಮಾತ್ರ ವೃತ್ತಾಕಾರದ ಅರ್ಧಕಂಬಗಳ ರಚನೆಯಿಂದ

ಕೂಡಿದೆ. ಉಳಿದಂತೆ ಅಗಲವಾಗಿರುವ ಬಾಗಿಲವಾಡದಲ್ಲಿ ಚೌಕಾಕಾರದ ಪಟ್ಟಿಕೆಗಳನ್ನು ಕೊರೆಯಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಬಾಗಿಲವಾಡದ ಉತ್ತರಾಂಗ ಭಾಗವು ಮುಂಚಾಚಿದೆ. ಅಲ್ಲದೇ ಅದೇ ಭಾಗದಲ್ಲಿ ರಚನೆಯಾಗಿರುವ ನಾಗರ ಮಾದರಿಯ ಶಿಖರ ಪಟ್ಟಿಕೆಗಳನ್ನು ನೋಡಬಹುದು. ಬಾಗಿಲವಾಡದ ಕೆಳಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳ ಬದಲಾಗಿ ಪೂರ್ಣಕುಂಭಗಳ ರಚನೆಗಳಿವೆ. ಈ ಕುಂಭಗಳನ್ನು ವಿಶೇಷ ಅಲಂಕರಣೆಗಳಿಂದ ಸುಂದರಗೊಳಿಸಲಾಗಿದೆ. ಗರ್ಭಗೃಹದಲ್ಲಿ ಆಳವಾದ ಪುಷ್ಪ ಮಾದರಿಯ ಭುವನೇಶ್ವರಿಯ ರಚನೆಯಿರುವುದು.

ದೇವಾಲಯಕ್ಕೆ ಬರಿದಾದ ಅಂತರಾಳವಿದೆ. ಬಾಗಿಲವಾಡದ ಇಕ್ಕೆಲಗಳಲ್ಲಿ ಅರ್ಧಕಂಬಗಳಿವೆ. ಹಲ್ಲಿನ ಪಟ್ಟಿಯ ಹಾಗೆ ಕಂಬಗಳ ಅಂಚನ್ನು ಕೊರೆದು ತೆಗೆಯಲಾಗಿದೆ. ಅಲ್ಲದೇ ಅದೇ ಕಂಬಗಳಲ್ಲಿ ತ್ರಿಕೋನ ಆಕೃತಿಯ ರಚನೆಗಳನ್ನು ಸಹ ಮಾಡಲಾಗಿದೆ. ಕಂಬಗಳಲ್ಲಿ ಅಳವಡಿಸಿರುವ ಚೌಕಾಕಾರದ ಬೋಧಿಗೆಗಳು ಸಾದಾ ರಚನೆಯಿಂದ ಕೂಡಿದವುಗಳು. ಅಂತರಾಳದ ಛತ್ತಿನಲ್ಲಿರುವ ಭುವನೇಶ್ವರಿಯ ಕೆತ್ತನೆ ಮನಮೋಹಕವಾಗಿದೆ.

ವಿಶಾಲವಾದ ನವರಂಗಕ್ಕೆ ಮೂರೂಕಡೆಯಿಂದಲೂ ಪ್ರವೇಶವಿದೆ. ಈ ಭಾಗವನ್ನು ಸಹ ಸಂಗಮವರಿ (ಮಾರ್ಬಲ್) ಶಿಲೆಗಳಿಂದ ದುರಸ್ತಿ ಮಾಡಿ ಅಲಂಕರಣಗೊಳಿಸಲಾಗಿದೆ. ಇಲ್ಲಿರುವ ಕಂಬಗಳಿಗೆ ಕಪು]Œಬಣ್ಣಬಳಿಯಲಾಗಿದ್ದು ಹೀಗಾಗಿ ಅವುಗಳ ಮೂಲ ಸೌಂದರ್ಯವನ್ನು ಸವಿಯಲು ಸಾಧ್ಯವಾಗುವುದಿಲ್ಲ. ನವರಂಗದಲ್ಲಿರುವ ಕಕ್ಷಾಸನವು ಸಹ ದುರಸ್ತಿ ಕ್ರಿಯೆಗೆ ಒಳಗಾಗಿದೆ. ಅದರಲ್ಲಿರುವ ಬೃಹತ್ತಾದ ನಾಲ್ಕು ಕಂಬಗಳು ಕಲ್ಯಾಣದ ಚಾಲುಕ್ಯ ಕಾಲದ ನಿರ್ಮಿತಿಗಳು ಎಂಬುದರಲ್ಲಿ ಯಾವ ಅನುಮಾನಗಳಿಲ್ಲ. ಗಾತ್ರದಲ್ಲಿ ದೊಡ್ಡದಾಗಿರುವ ಈ ಕಂಬಗಳು ಬುಡದಲ್ಲಿ ಚೌಕಾಕಾರದ್ದಾಗಿವೆ. ದಂಡಾಗ್ರ ಭಾಗದಲ್ಲಿ ಮೂವತ್ತೆರಡು ಪಟ್ಟಿಕೆಗಳನ್ನು ರಚಿಸಲಾಗಿದೆ. ಅಲ್ಲದೇ ಆ ಪಟ್ಟಿಕೆಗಳನ್ನೆಲ್ಲ ಕೂಡಿಕಟ್ಟಿದಂತೆ ಅವುಗಳ ಮೇಲ್ಭಾಗದಲ್ಲಿ ಇನ್ನೊಂದು ಪಟ್ಟಿಯನ್ನು ರಚಿಸಲಾಗಿದೆ. ವೃತ್ತಾಕಾರದ ರಚನೆ ನಂತರ ಮತ್ತೆ ಚೌಕಾಕಾರದ ಭಾಗ ಹಾಗೂ ಅದರ ಮೇಲ್ಭಾಗದಲ್ಲಿ ಮತ್ತೆ ವೃತ್ತಾಕಾರದ ಫಲಕ ಚೌಕಾಕಾರದ ತಟ್ಟೆ ಫಲಕ ಮತ್ತು ಚೌಕಾಕಾರದ ಬೋಧಿಗೆಗಳನ್ನು ಈ ಕಂಬಗಳಲ್ಲಿ ಅಳವಡಿಸಲಾಗಿದೆ. ನವರಂಗದಲ್ಲಿರುವ ನಾಲ್ಕು ಕಂಬಗಳಲ್ಲಿ ಒಂದೇ ಒಂದು ಕಂಬದಲ್ಲಿರುವ ಚೌಕಾಕಾರದ ಭಾಗದಲ್ಲಿ ಮಾತ್ರ ಉಬ್ಬುಶಿಲ್ಪದ ರಚನೆಯಿದ್ದು ಅದು ಭೈರವನ ಉಬ್ಬುಶಿಲ್ಪವಾಗಿದೆ. ಕೊರಳಲ್ಲಿ ರುಂಡಮಾಲೆ, ಕೈಯಲ್ಲಿ ಖಡ್ಗ ಹಾಗೂ ತ್ರಿಶೂಲ, ಯಜ್ಞೋಪವೀತದ ಹಾಗೆ ಕಾಣುವ ರುಂಡಮಾಲೆಯ ಅಲಂಕರಣೆಗಳು ಈ ಉಬ್ಬುಶಿಲ್ಪದಲ್ಲಿವೆ. ಗುಂಗರ ಜಡೆಯು ಶಿಲ್ಪದ ರೌದ್ರತನಕ್ಕೆ ಮತ್ತಷ್ಟು ಮೆರಗು ನೀಡಿದೆ. ಶಿಲ್ಪದ ಇಕ್ಕೆಲಗಳಲ್ಲಿ ಸ್ತ್ರೀಯರ ಚಿಕ್ಕ ಶಿಲ್ಪಗಳನ್ನು ಸಹ ರಚಿಸಲಾಗಿದೆ.

ನವರಂಗದ ಛತ್ತಿನ ಒಂಭತ್ತು ಅಂಕಣಗಳಲ್ಲಿಯೂ ಭುವನೇಶ್ವರಿ ಕೆತ್ತಲಾಗಿದೆ. ಅಲ್ಲದೇ ನಾಲ್ಕು ಕಂಬಗಳನ್ನೊಳಗೊಂಡು ರಚನೆಯಾಗಿರುವ ಮಧ್ಯದ ಭುವನೇಶ್ವರಿ ಭಾಗವು ಇನ್ನು ಹೆಚ್ಚಿಗೆ ಆಳವಾಗಿದ್ದು ಅದು ಸುಂದರವಾದ ಕೆತ್ತನೆಯಿಂದ ಕೂಡಿರುವುದನ್ನು ಗಮನಿಸಬಹುದು. ನವರಂಗಕ್ಕೆ ಕಕ್ಷಾಸನವಿದ್ದು ಅದರಲ್ಲಿ ಅರ್ಧಕಂಬಗಳನ್ನು ಅಳವಡಿಸಲಾಗಿದೆ. ಈ ಕಂಬಗಳು

ಈ ಹಿಂದೆ ವಿವರಿಸಿದ (ನವರಂಗದಲ್ಲಿರುವ) ಕಂಬಗಳಲ್ಲಿನ ರಚನೆಯನ್ನೇ ಹೊಂದಿವೆ. ಕಕ್ಷಾಸನದ ಹೊರಗೋಡೆಯಲ್ಲಿರುವ ಗಳ ಭಾಗದಲ್ಲಿ ಪುಷ್ಪ ಪಟ್ಟಿಕೆಯನ್ನು ರಚಿಸಲಾಗಿದೆ. ಇದು ನವರಂಗಕ್ಕಿರುವ ಕಕ್ಷಾಸನದಲ್ಲಿಯೂ ಸಹ ಮುಂದುವರಿದಿದೆ.

ನವರಂಗದ ಪೂರ್ವ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಗಜ ಶಿಲ್ಪಗಳನ್ನಿಡಲಾಗಿದ್ದು ಅವುಗಳಿಗೂ ಸಹ ಬಣ್ಣ ಬಳಿಯಲಾಗಿದೆ. ಮುಂಭಾಗದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಶಾಸನ ಫಲಕವಿದ್ದು ಅದು ಪ್ರಕಟವಾಗಿದೆ. ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದರೂ ಮೂಲ ಸೌಂದರ್ಯಕ್ಕೆ ತಕ್ಕಮಟ್ಟಿಗೆ ಧಕ್ಕೆ ಆಗದಂತೆ ಎಚ್ಚರವಹಿಸಲಾಗಿದೆ. ಪ್ರಾಚೀನ ಗುಡಿಗೆ ಸಂಬಂಧಿಸಿದ ಶಿಲ್ಪಾವಶೇಷಗಳನ್ನು ಆವರಣದಲ್ಲಿಡಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ನಾಗಶಿಲ್ಪಗಳನ್ನೂ ಕಾಣಬಹುದು. ಅವು ವಿವಿಧ ಭಂಗಿಯಲ್ಲಿರುವ ನಾಗದೇವತೆಗಳ ಶಿಲ್ಪಗಳಾಗಿವೆ. ಅವುಗಳಿಗೆ ಕೆಂಪು ಬಣ್ಣ ಬಳಿದು ಆವರಣದಲ್ಲಿಡಲಾಗಿದೆ.

ದೇವಾಲಯದ ಅಧಿಷಾ«ನವು ಉಪಾನ, ಜಗತಿ, ಕುಮುದ, ಗಳ ಹಾಗೂ ಕಪೋತವನ್ನು ಒಳಗೊಂಡಿದೆ. ಅಧಿಷಾ«ನ ಭಾಗದಲ್ಲಿರುವ ಕುಮುದ ಭಾಗವು ಸ್ವಲ್ಪ ಚೂಪಾಗುತ್ತಾ ಹೋಗುತ್ತದೆ. ಈ ಬದಲಾವಣೆಗಳನ್ನು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ವಿಶೇಷವಾಗಿ ಗುರುತಿಸಬಹುದು. ಅಲ್ಲದೇ ಈ ದೇವಾಲಯದಲ್ಲಿರುವ ಗಳ ಭಾಗವು ಬಾದಾಮಿ ಚಾಲುಕ್ಯರ ಕಾಲದ ದೇವಾಲಯಗಳ ಅಧಿಷಾ«ನದಲ್ಲಿ ಆಳವಾಗಿ ರಚನೆಯಾದಂತೆ ಪ್ರಸ್ತುತ ದೇವಾಲಯದ ಅಧಿಷಾ«ನದಲ್ಲಿಯೂ ಆಳವಾಗಿ ರಚನೆಯಾಗಿರುವುದನ್ನು ಕಾಣುತ್ತೇವೆ. ಇಂಥ ಸಂಗತಿಗಳಿಂದ ತಿಳಿಯಬಹುದಾದ ವಿಷಯವೆಂದರೆ ಬಹುಶಃ ಪ್ರಾಚೀನ ಕೆತ್ತನೆಯ ಅನುಕರಣೆಗಳೇ ಮುಂದಿನ ದಿನಗಳಲ್ಲಿಯೂ ಮುಂದುವರೆದಿವೆ ಎಂಬುದು. ದೇವಾಲಯಕ್ಕಿರುವ ಶಿಖರ ಹಾಳಾದ ನಂತರ ದ್ರಾವಿಡ ಶೈಲಿಯನ್ನು ಪ್ರತಿನಿಧಿಸುವ ಚೌಕಾಕಾರ ಮಾದರಿಯಲ್ಲಿ ಹೊಸದಾಗಿ ಶಿಖರವನ್ನು ನಿರ್ಮಿಸಲಾಗಿದೆ.

ಬಹುಶಃ ೧೧-೧೨ನೇ ಶತಮಾನದಲ್ಲಿ ಈ ದೇವಾಲಯವು ಹೆಚ್ಚಿನ ಪ್ರಸಿದ್ಧಿ ಪಡೆದಿರಬಹುದು. ಸಂಗಮನಾಥ ಎಂಬ ಹೆಸರಿನ ಈ ದೇವಾಲಯವು ಆ ಮೊದಲು ಭೈರವನಿಗೆ ಸಂಬಂಧಿಸಿದ್ದಾಗಿರಬಹುದು. ಇಂಥ ಅಭಿಪ್ರಾಯಗಳಿಗೆ ಪುಷಿ«ದಾಯಕ ಆಧಾರವೆಂಬಂತೆ ಈ ದೇವಾಲಯದಲ್ಲಿರುವ ಕೆಲವು ಶಿಲ್ಪಗಳು ಮತ್ತು ಶಾಸನಗಳನ್ನು ಉದಾಹರಿಸಬಹುದು. ನವರಂಗದಲ್ಲಿರುವ ಕಂಬೊಂದರ ಮೇಲೆ ಮಹಾಕಾಳ ಅಥವಾ ಭೈರವನ ಉಬ್ಬುಶಿಲ್ಪ ಬಿಡಿಸಲಾಗಿದೆ. ಇಂಥದ್ದನ್ನು ಬಿಟ್ಟು ಯಾವೊಂದು ಬೇರೆ ಬಗೆಯ ಶಿಲ್ಪವು ಇಲ್ಲಿರುವ ಕಂಬಗಳಲ್ಲಾಗಲಿ ಅಥವಾ ಗೋಡೆಗಳಲ್ಲಾಗಲಿ ಕಂಡುಬರುವುದಿಲ್ಲ. ಅಲ್ಲದೇ ಇದು ಭೈರವನದ್ದೇ ದೇವಾಲಯವಾಗಿತ್ತೆಂಬುದಕ್ಕೆ ಮತ್ತೊಂದು ಪ್ರಬಲ ಸಾಕ್ಷಿ ಎಂದರೆ ಇದೇ ದೇವಾಲಯದ ಬಲಭಾಗದಲ್ಲಿರುವ ಕಾಳಮ್ಮ ಅಥವಾ ಚಾಮುಂಡಿಯ ಗುಡಿ. ಭೈರವನ ಸಂಗಾತಿ ಹಾಗೂ ಮಡದಿಯಾಗಿದ್ದ ಭದ್ರಕಾಳಿ ದೇವತೆಗಾಗಿಯೇ ಚಿಕ್ಕದಾದ ದೇವಾಲಯವೊಂದನ್ನು ನಿರ್ಮಿಸಲಾಗಿದೆ. ಆದರೆ ಅದು ಕಾಲಾ ಕಳೆದಂತೆ ಕ್ಷೀಣಗೊಂಡಿದ್ದರಿಂದ ಮತ್ತೆ ಅದನ್ನು ಇತ್ತೀಚೆಗೆ ಪುನರ್ ಕಟ್ಟಲಾಗಿದೆ. ಇದರಲ್ಲಿದ್ದ ಪ್ರಾಚೀನ ಶಿಲ್ಪದ ಬದಲಾಗಿ ಹೊಸದಾದ ಮೂರ್ತಿಯನ್ನು

ಸ್ಥಾಪಿಸಲಾಗಿದೆ. ಮಹಾಕಾಳ ಭೈರವನ ಪ್ರಮುಖ ಕೇಂದ್ರವಾಗಿದ್ದ ಈ ಸ್ಥಳವು ನಾಥ ಪರಂಪರೆಯನ್ನು ಮೇಳೈಸಿಕೊಂಡು ಮುಂಚೂಣಿಗೆ ಬಂದಿರಬಹುದು. ಹಾಗಾಗಿಯೇ ಸಂಗಮ ಹೆಸರಿನ ಜೊತೆಗೆ ನಾಥವು ಸೇರಿ ಸಂಗಮನಾಥನಾಗಿ ಹೆಚ್ಚಿನ ಪ್ರಸಿದ್ಧಿ ಪಡೆದಿರಬಹುದೇ ಎಂಬ ಊಹೆಗೆ ಹೆಚ್ಚಿನ ಇಂಬು ದೊರಕುತ್ತದೆ.

ಮಹಾಕಾಳನನ್ನು ಆರಾಧಿಸುತ್ತಿದ್ದ ನಾಥಪರಂಪರೆಯ ವಾರಸ್ಸುಧಾರರಾದ ಪಾಶುಪತ ಮತ್ತು ಕಾಳಾಮುಖ ಪರಂಪರೆಗೆ ಸಂಬಂಧಿಸಿದ ಗುರುಗಳು ಮತ್ತು ಅವರವರ ಪ್ರಶಿಷ್ಯರು ಈ ದೇವಾಲಯಕ್ಕೆ ಸಂಬಂಧಿಸಿದಂಥ ಚಟುವಟಿಕೆಗಳಲ್ಲಿ ಭಾಗವಹಿಸಿರುವ ಸೂಚನೆಗಳು ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು. ಈ ದೇವಾಲಯವು ಪ್ರಾರಂಭದಲ್ಲಿ ನಾಥಸಂಪ್ರದಾಯ ಪರಂಪರೆಗೂ ಕಾಲಾನಂತರ ಕಾಳಾಮುಖ ರೀತಿ ನೀತಿಗಳಿಗೆ ಒಗ್ಗಿಕೊಂಡಿದೆಯೆಂದು ತೋರುತ್ತದೆ. ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ರಂಗದಲ್ಲಿ ಇಂಥ ಬದಲಾವಣೆಗಳು ಅಗಣಿತ ಸಂಖ್ಯೆಯಲ್ಲಿ ಆಗಿರುವುದನ್ನು ನಾವು ಅನೇಕ ಆಧಾರಗಳಿಂದ ತಿಳಿಯಬಹುದು.

ದಕ್ಷಿಣ ಭಾರತದ ಎರಡು ಪ್ರಮುಖ ನದಿಗಳು ಸೇರುವ ಈ ಸ್ಥಳವು ಹೆಚ್ಚಿನಾಂಶ ಹೆಚ್ಚಿನ ಪಾವಿತ್ರ್ಯತೆಯನ್ನು ಪಡೆದಿರುವ ಸಂಗತಿ ತುಂಬಾ ವಿಶೇಷವಾದುದು. ಇಂಥ ಸ್ಥಳವು ಹಲವಾರು ಧಾರ್ಮಿಕ ವಿಧಿ ಆಚರಣೆಗಳಿಗೆ ಹೇಳಿ ಮಾಡಿಸಿದಂತಿತ್ತು. ಇದೊಂದು ನಿರ್ಜನ ಪ್ರದೇಶವಾಗಿದ್ದರೂ ಇಲ್ಲೊಂದು ಗುಡಿಯನ್ನು ಕಟ್ಟಿದ್ದರಿಂದ ಇದಕ್ಕೆ ವಿಶೇಷ ಮಹತ್ವ ಬಂತು. ಆ ಸಂದರ್ಭದಲ್ಲಿದ್ದ ಕಾಳಾಮುಖ ಆಚರಣೆಯ ಅನುಯಾಯಿಗಳು ಸಹಜವಾಗಿ ಈ ಗುಡಿಯನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು ಇದನ್ನೊಂದು ವಿದ್ಯಾಕೇಂದ್ರವನ್ನಾಗಿ ಮಾಡಿದ್ದಿರಬಹುದು. ಇಂಥ ಆಚಾರ್ಯರರಿಗೆ ಹಾಗೂ ಅವರು ನಿರ್ವಹಿಸುತ್ತಿದ್ದಿರುವ ಆಚರಣೆಗಳಿಗೆ ಬೆನ್ನಲುಬಾಗಿ ನಿಂತ ಕಲ್ಯಾಣ ಚಾಳುಕ್ಯ ಅರಸರು ಹೇರಳವಾದ ದಾನದತ್ತಿಗಳನ್ನು ನೀಡಿ ಪೋಷಿಸಿದರು.

೧೨ನೇ ಶತಮಾನದ ವಚನ ಚಳುವಳಿಯ ಹರಿಕಾರ ಸಮಾಜ ಸುಧಾರಕ ಬಸವಣ್ಣನವರು ತಮ್ಮ ವಚನದಲ್ಲಿ ಸಂಬೋಧಿಸುವ ಕೂಡಲಸಂಗಮದೇವ ಎಂಬ ಸ್ಥಳವು ಇದೇ ಆಗಿತ್ತು ಎಂಬ ಅನುಮಾನಗಳು ಬಹಳ ವರ್ಷಗಳ ಕಾಲ ಜನಸಾಮಾನ್ಯ ವಲಯದಲ್ಲಿತ್ತು. ಕಾರಣ ಬಸವಣ್ಣನವರು ತಮ್ಮ ವಚನಗಳಲ್ಲಿ ಕೊಡುವ ವಿವರಗಳು ಹಾಗೂ ಭೌತಿಕವಾಗಿ ಸಂಗಮ ಸ್ಥಳದಲ್ಲಿರುವ ಸಂಗತಿಗಳು ಒಂದಕ್ಕೊಂದು ಹೆಚ್ಚಿನ ತಾಳೇ ಆಗುತ್ತಿದ್ದವು. ಹೀಗಾಗಿ ಬಹಳ ವರ್ಷಗಳ ಕಾಲ ಇದೇ ಸಂಗಮನಾಥನನ್ನು ಬಸವಣ್ಣನವರು ತಮ್ಮ ಆರಾಧ್ಯ ದೈವವನ್ನಾಗಿ ಮಾಡಿಕೊಂಡಿದ್ದಿರಬಹುದೆಂಬ ಅನುಮಾನಗಳಿದ್ದವು. ಅಲ್ಲದೇ ಇಂಥ ಅಭಿಪ್ರಾಯಗಳು ಕೆಲವು ದೃಷ್ಟಿಕೋನದಲ್ಲಿ ಸರಿಯೇನೋ ಎಂಬ ಜಿಜ್ಞಾಸೆಯು ಸಹ ಉಂಟಾಗಿತ್ತು. ಇಂಥ ಅನುಮಾನಕ್ಕೆ ಬಹುಮುಖ್ಯ ಆಧಾರವೆಂದರೆ ಬಸವಣ್ಣನವರು ಕೊಡುವ ಅಂದಿನ ಸಾಮಾಜಿಕ ಚಿತ್ರಣವು ಸಗರ ನಾಡಿನಲ್ಲಿ ಸಿಕ್ಕಿರುವ ಶಾಸನಗಳಲ್ಲಿ ಯಥಾವತ್ತಾಗಿ ದಾಖಲಾದಂತಿದೆ. ಅಲ್ಲದೇ ವಚನ ಚಳವಳಿಯಲ್ಲಿ ಭಾಗವಹಿಸಿದ್ದ ಹೆಚ್ಚಿನ ಸಂಖ್ಯೆಯ ಶಿವಶರಣರು ಇದೇ ಪರಿಸರದಲ್ಲಿದ್ದವರು. ಹಾಗಾಗಿ ಬಹುಶಃ ಅವರಿಗೆ ಆ ಮೊದಲು ಸಗರನಾಡು ಪ್ರಮುಖ ಕೇಂದ್ರವಾಗಿತ್ತು. ಈ

ಹಿನ್ನಲೆಯಲ್ಲಿಯೇ ಬಸವಣ್ಣನು ನೆನದ ಕೂಡಲ ಸಂಗಮವು ಇದೇ ಸ್ಥಳವಾಗಿರಬಹುದೆಂಬ ಅನುಮಾನಗಳು ಹುಟ್ಟಿಕೊಂಡಿರಬಹುದು. ಸ್ಥಳೀಯರು ಸಹ ಇಂಥ ಅಭಿಪ್ರಾಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ವ್ಯಕ್ತಪಡಿಸುತ್ತಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಇನ್ನು ವಿಶೇಷ ಮತ್ತು ತಲಸ್ಪರ್ಷಿಯಾದ ಸಂಶೋಧನೆಗಳ ಮೂಲಕ ಇಂಥ ಕುತೂಹಲದ ಪ್ರಶ್ನೆಗಳಿಗೆ ಸಮಾಧಾನಕರವಾದ ಉತ್ತರ ಕಂಡುಕೊಳ್ಳಬಹುದಾಗಿದೆ. ಬಸವಣ್ಣನವರು ಸ್ಮರಿಸಿಕೊಂಡ ಸಂಗಮನಾಥನು ಬಸವನ ಬಾಗೇವಾಡಿ ತಾಲೂಕಿನಲ್ಲಿರುವ ಕೂಡಲಸಂಗಮನಾಥನು ಎಂಬ ನಂಬಿಕೆ ಸದ್ಯ ಹೆಚ್ಚು ಬಲವಾಗಿ ದಾಖಲುಗೊಂಡು ಚಾಲ್ತಿಯಲ್ಲಿದೆ.

**ಮಸೀದಿ**

**ಗೋಗಿ-ಬುಡಿಕಾಫರ್**

ಗೋಗಿಯ ಚಂದಾಹುಸೇನಿದರ್ಗಾದ ಆವರಣದಲ್ಲಿಯೇ ಇರುವ ಈ ಸ್ಮಾರಕವು ಹಲವು ಕಾರಣಗಳಿಂದ ಬದಲಾವಣೆಗೆ ಒಳಪಟ್ಟಿರುವುದು. ಈ ದಿನಗಳಲ್ಲಿ ಅದು ಲೌಕಿಕ ಕಾರ್ಯಗಳಿಗಾಗಿ ಬಳಕೆಯಾಗುತ್ತಿದೆ. ಇಲ್ಲಿರುವ ಕಂಬಗಳು ಕಲ್ಯಾಣದ ಚಾಲುಕ್ಯರ ಕಾಲದವು ಎಂಬುದರಲ್ಲಿ ಅನುಮಾನಗಳಿಲ್ಲ. ಅವು ಬುಡದಲ್ಲಿ ಚೌಕಾಕಾರ ಹಾಗೂ ದಂಡಾಗ್ರ ಭಾಗದಲ್ಲಿ ಹದಿನಾರು ಪಟ್ಟಿಕೆಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ತೆರದ ಮಂಟಪದಂತೆ ಕಾಣುವ ಈ ಸ್ಮಾರಕದಲ್ಲಿ ಸದ್ಯ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ.

ಇಲ್ಲಿರುವ ಮುಖ್ಯ ಆಕರ್ಷಣೆಯೆಂದರೆ ಚಂದಾಹುಸೇನಿ ದರ್ಗಾ, ಮತ್ತು ಖಾಲಿ ಮಸೀದಿ. ಇವುಗಳಲ್ಲದೇ ಸಂತಭೈರಿದರ್ಗಾ, ಮುಜ್ನಾಖಾದರಿ ದರ್ಗಾ ಮೋತಿಮಹಲ ಹಾಗೂ ಬಾರಾದರಿ ಎಂಬ ಹೆಸರಿನ ಪ್ರಾಚೀನ ಸ್ಮಾರಕಗಳು ಈ ಗ್ರಾಮದಲ್ಲಿವೆ. ಖಾಲಿ ಮಸೀದಿಯು ವಾಸ್ತುಶೈಲಿ ಅಧ್ಯಯನದ ದೃಷ್ಟಿಯಿಂದ ತುಂಬಾ ಮಹತ್ವದ್ದಾಗಿದೆ. ಕಪುïŒ ಕಲ್ಲಿನಲ್ಲಿಯೇ ರಚನೆಯಾಗಿರುವ ಈ ಮಸೀದಿಗೆ ಅನ್ವರ್ಥವಾಗಿ ಖಾಲಿ(ಕಪುïŒ) ಹೆಸರು ಬಂದಿರಬಹುದು. ಇಸ್ಲಾಮಿಕ್ ಶೈಲಿಯ ಈ ಕಟ್ಟಡ ಎತ್ತರವಾಗಿದೆ. ಆಲಿ ಆದಿಲ್‌ಷಾನ ಮಗಳಾದ ಫಾತಿಮಾ ಅಕಾಲಿಕ ಮರಣ ಹೊಂದಿದ್ದರಿಂದ ಅವಳ ನೆನಪಿಗಾಗಿ ಈ ಮಸೀದಿ ನಿರ್ಮಿಸಲಾಗಿದೆ ಎಂಬ ವಿವರಗಳು ದಾಖಲಾಗಿವೆ. ಅಲ್ಲದೇ ಅದರ ಬಗೆಗೆ ಕೆಲವು ವಿವರಗಳುಂಟು. ಫಾತಿಮಾಳನ್ನು ಅಹಮದ್ ನಗರದ ಅರಸನಿಗೆ ಮದುವೆಮಾಡಿಕೊಡಲಾಗಿತ್ತು. ಆದರೆ ಅವಳು ಅಕಾಲಿಕ ಮರಣಹೊಂದಿದಳು. ಅವಳನ್ನು ಗೋಗಿಯಲ್ಲಿ ಧಪನ ಮಾಡಲಾಯಿತು. ಅವಳ ಸ್ಮರಣಾರ್ಥವಾಗಿ ಕಟ್ಟಿದ ಈ ಸ್ಮಾರಕವನ್ನು ಅಹಮದ್‌ನಗರ ಶಿಲ್ಪಿಗಳೆ ಕಟ್ಟಿದರು ಎಂಬ ಅಭಿಪ್ರಾಯಗಳಿವೆ. ಹಾಗಾಗಿ ಅದು ಭಿನ್ನವಾಗಿ ತೋರುವುದು ಎಂಬ ಅನಿಸಿಕೆ ಸ್ಥಳೀಯರದ್ದು.

ಗೋಗಿ ಪಟ್ಟಣದಲ್ಲಿರುವ ಇನ್ನೊಂದು ಮುಖ್ಯವಾದ ಸ್ಮಾರಕವೆಂದರೆ ಚಂದಾಹುಸೇನಿ ದರ್ಗಾ. ಚಂದಾಹುಸೇನಿ ಒಬ್ಬ ಸೂಫಿಸಂತ. ಅವರು ವಿಜಾಪುರ ಆದಿಲ್‌ಷಾಹಿ ದೊರೆಗಳ ಮೇಲೆ ವಿಶೇಷ ಪ್ರಭಾವ ಬೀರಿದ್ದರು. ಅಲ್ಲದೇ ಅವರು ಮದೀನಾದಿಂದ ಬಂದವರು ಎಂಬ ಪ್ರತೀತಗಳಿವೆ. ಅವರು ಇಲ್ಲಿಯೇ ಕಾಲವಾದರು. ಹಾಗಾಗಿ ಅವರಿಗೆ ಇಲ್ಲೊಂದು

ದರ್ಗಾ ನಿರ್ಮಾಣವಾಯಿತು. ಅಲ್ಲದೇ ಇದೊಂದು ಪವಿತ್ರ ಸ್ಥಳ ಎಂಬ ನಂಜಿಕೆಯ ಮೇಲೆ ಕೆಲವು ರಾಜರುಗಳನ್ನು ಸಹ ಈ ದರ್ಗಾದ ಸುತ್ತಲಿನ ಜಾಗದಲ್ಲಿ ಹೂಳಲಾಯಿತು. ಗೋಗಿ ಪಟ್ಟಣಕ್ಕೆ ವಿಸ್ತಾರವಾದ ಇತಿಹಾಸವಿದೆ.

**ಕಡೇಚೂರು ಜುಮ್ಮಾ ಮಸೀದಿ**

ಈ ಪ್ರದೇಶದಲ್ಲಿ ಸಿಗುವ ಅಪರೂಪದ ಕಟ್ಟಡ ಇದಾಗಿದೆ. ನೋಡಲು ಬಹು ಸೊಗಸಾಗಿ ಕಂಡುಬರುವುದು. ಬಹುಶಃ ಇದು ಬಹಮನಿಯರ ಕಾಲದಲ್ಲಿಯೇ ನಿರ್ಮಾಣವಾಗಿರಬಹುದು. ವಿಶಾಲವಾದ ಪ್ರಾಂಗಣ ಇದಕ್ಕಿದೆ. ಮಸೀದಿಯನ್ನು ಎತ್ತರದ ಕಟ್ಟೆಯ ಮೇಲೆ ಕಟ್ಟಲಾಗಿದೆ. ಮೂರು ಕಮಾನಗಳು ಈ ಮಸೀದಿಗಿವೆ. ಅಲ್ಲದೇ ಮೇಲಿನ ನಾಲ್ಕೂ ಮೂಲೆಗಳಲ್ಲಿ ಮಿನಾರ್‌ಗಳನ್ನು ರಚಿಸಲಾಗಿದೆ. ಈ ಕಟ್ಟಡವನ್ನು ಗಾರೆ-ಗಚ್ಚಿನಿಂದ ನಿರ್ಮಿಸಲಾಗಿದ್ದು ಅದರಲ್ಲಿ ಕಲ್ಲುಗಳನ್ನು ಸಹ ಉಪಯೋಗ ಮಾಡಿರುವುದನ್ನು ಗಮನಿಸಬಹುದು. ಈ ಮಸೀದಿಯು ಈ ಪ್ರದೇಶದಲ್ಲಿ ನಿರ್ಮಾಣದ ಇಸ್ಲಾಮಿಕ್ ಶೈಲಿಯ ಕಟ್ಟಡಗಳಿಗೆ ಆದ್ಯ ಅಥವಾ ಮೊದಲನೆಯದ್ದು ಎಂಬ ಪ್ರತೀತ ಸ್ಥಳೀಯರಲ್ಲಿದೆ. ಬಹುಶಃ ಈ ಅಭಿಪ್ರಾಯವನ್ನು ಒಪ್ಪಬಹುದಾಗಿದೆ. ಯಾದಗಿರಿ ತಾಲೂಕಿನ ಕೊನೆಯ ಹಳ್ಳಿಗಳಲ್ಲಿ ಕಡೇಚೂರು ಗ್ರಾಮವು ಒಂದು. ಆದ್ದರಿಂದ ಈ ಹಳ್ಳಿಗೆ ಕಡೆಯ (ಕೊನೆಯ)ಚೂರು (ಸ್ಥಳ) ಎಂಬ ಅಂರ್ಥದ ಹಿನ್ನೆಲೆಯಲ್ಲಿ ಈ ಹೆಸರು ಬಂದಿದೆ ಎಂಬ ಮೌಖಿಕ ಹೇಳಿಕೆಗಳಿವೆ. ಈ ಗ್ರಾಮದಿಂದ ಕೆಲವೇ ಕಿಲೋಮೀಟರ್ ದೂರದಲ್ಲಿ ರಾಯಚೂರು ನಗರವು ಕಂಡುಬರುತ್ತದೆ. ಬಹುಶಃ ಅದನ್ನು ಅನುಲಕ್ಷಿಸಿಕೊಂಡು ಇದಕ್ಕೆ ಕಡೇಚೂರು ಎಂಬ ಹೆಸರು ಬಂದಿರುವ ಸಾಧ್ಯತೆಗಳು ಹೆಚ್ಚಾಗಿವೆ.

**ಕೊನೆ ಟಿಪ್ಪಣಿಗಳು**


೧. ಅಪರ್ಣ ಸಿ.ಎಸ್, ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ.೫೦

೨. ಪ್ರಭಾಕರ್ ಎಂ.ಎನ್, ದೇವಾಲಯ ವಾಸ್ತು, ಪುಟ.೧೭

೩. ರಾಜಶೇಖರ್ ಎಸ್, ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪುಟ.೪

೪. ಪಾಟೀಲ ಎಂ.ಬಿ.(ಸಂ). ಗುಲಬರ್ಗಾ ಗ್ಯಾಜಿಟಿಯರ್, ಪುಟ.೪೩

೫. ಅಕ್ಕಿ ಡಿ.ಎನ್, ಸಗರನಾಡಿನ ಸಿರಿ, ಪುಟ.೧೬

೬. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಪುಟ.೨೨೫

೭. ಪಾಟೀಲ ಎಂ.ಬಿ(ಸಂ). ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೦೯

೮. ಅದೇ ಪುಟ.೭೯೮

೯. ಅದೇ ಪುಟ.೮೦೨

೧೦. ರಾಜಶೇಖರ ಎಸ್, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪುಟ.೧೦

೧೧. ಹೆಚ್ಚಿನ ವಿವರಗಳಿಗೆ ನಾಯಕ ರಮೇಶ, ಕರ್ನಾಟಕ ದೇವಾಲಯ ಕೋಶ ಯಾದಗಿರಿ ಜಿಲ್ಲೆ. ಕವಿವಿ, ಹಂಪಿ, ಅಪ್ರಕಟಿತ ಯೋಜನೆ

೧೨. ಪಾಟೀಲ ಎಂ.ಬಿ(ಸಂ) ಗುಲಬರ್ಗಾ ಗ್ಯಾಜಿಟಿಯರ್, ಪುಟ.೪೫

೧೩, ಅರುಣಿ ಎಸ್.ಕೆ., ಸುರಪುರ ಪಾಳೇಗಾರರು, ಕಲಾ ಪ್ರಕಾಶನ, ದೆಹಲಿ

೧೪. ಸು.ತಾ.ಶಾ.ಶಾ.ಸಂ.೫(ಅನುಬಂಧ) ಏವೂರು

೧೫. ಅಕ್ಕಿ ಡಿ.ಎನ್., ಸಗರನಾಡು ಸಿರಿ, ಪುಟ.೩೫

೧೬. ಅದೇ ಶಾ.ಸಂ.೭೫, ರಾಜನಕೋಳೂರು

೧೭. ಅದೇ ಶಾ.ಸಂ.೧೧, ಏವೂರು

೧೮. ಶಾ.ಸಂ.೭೧, ಮುದನೂರು

೧೯. ಶಾ.ಸಂ.೮೮, ಹಗರಟಗಿ

೨೦. ಅದೇ ಶಾ.ಸಂ.೯೪, ಹುಣಸಗಿ

೨೧. ಅದೇ ಶಾ.ಸಂ.೭೩, ಯಾಳಗಿ

೨೨. ಅದೇ ಶಾ.ಸಂ.೧೯, ಏವೂರು

೨೩. ಅದೇ ಶಾ.ಸಂ.೯೩, ಹಿರಿಯ ಹೆಬ್ಬಾಳ

೨೪. ಶಾಸಂ.೮, ಏವೂರು

೨೫. ಅದೇ ಶಾ.ಸಂ.೮೧–೯೧ ಹಗರಟಗಿ

೨೬. ಅದೇ ಶಾ.ಸಂ.೩೧, ಕೆಂಬಾವಿ, ಶಾಸನದಲ್ಲಿ ಇದನ್ನು ಮಾಳಿಬ್ಬೇಶ್ವರನೆಂದು ಉಲ್ಲೇಖಿಸಲಾಗಿದೆ

೨೭. ಕ.ಜಿ.ಶಾ.ಶಾ.ಸಂ.೩೩, ಸಿರಿವಾಳ, ಶಹಾಪುರ ತಾಲೂಕು

೨೮. ಅದೇ ಶಾ.ಸಂ.೩೩, ಸಂಗಮ, ಶಹಾಪುರ ತಾಲೂಕು

೨೯. ಸು.ತಾ.ಶಾ.ಶಾ.ಸಂ.೮೧–೯೧, ಹಗರಟಗಿ

೩೦. ಅಕ್ಕಿ ಡಿ.ಎನ್, ಸಗರನಾಡ ಸಿರಿ, ಪುಟ.೩೫.

೩೧. ಗೋಗಿ ಹನುಮಾಕ್ಷಿ, ಸುರಪುರ ತಾಲೂಕಿನ ಶಾಸನಗಳು, ಪುಟ.೨೨೧

೩೨. ಅಕ್ಕಿ ಡಿ.ಎನ್, ಸಗರನಾಡು ಸಿರಿ, ಪುಟ.೪೭.

೩೩. ಗೋಗಿ ಹನುಮಾಕ್ಷಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಪುಟ.೪೦೨-೦೪.

೩೪. ಪಾಟೀಲ ಎಂ.ಬಿ, ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೨೬

೩೫. ಅಕ್ಕಿ ಡಿ.ಎನ್., ಸಗರನಾಡ ಸಿರಿ, ಪುಟ.೩೧

೩೬. ಅದೇ, ಪುಟ.೩೨

೩೭. ಪಾಟೀಲ ಎಂ.ಬಿ, ಗುಲಬರ್ಗಾ ಜಿಲ್ಲಾ ಗ್ಯಾಜಿಟಿಯರ್, ಪುಟ.೬೯೦

೩೮. ಪಾಟೀಲ ಎಂ.ಬಿ., ಗುಲಬರ್ಗಾ ಗ್ಯಾಸೆಟಿಯರ್, ಪುಟ.೬೮೭

೩೯. ಪಾಟೀಲ ಎಂ.ಬಿ., ಗುಲ್ಬರ್ಗಾ ಗ್ಯಾಜಿಟಿಯರ್, ಪುಟ.೭೦೦

೪೦. ಪಾಟೀಲ ಎಂ.ಬಿ., ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೯೩

# ಅಧ್ಯಾಯ ೬

## ಸಾಂಸ್ಕೃತಿಕ ಆಚರಣೆಯ ನೆಲೆಗಳು

ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು ಬಹುಶ್ರುತ ನೆಲೆಯಲ್ಲಿ ರೂಪಗೊಂಡಾಗ ಅವುಗಳ ವಿಸ್ತಾರ ಮತ್ತು ಮಹತ್ವ ಇಮ್ಮಡಿಗೊಳ್ಳುತ್ತವೆ. ಅಂಥ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು ರೂಪಿಸಲಾಗಿದೆ. ನಿರ್ದಿಷ್ಟಪಡಿಸಿದ ಭೌಗೋಳಿಕ ಕ್ಷೇತ್ರದಲ್ಲಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿವರಗಳು ವಿಜೃಂಭಿಸಿದರೂ ಅದರಾಚೆಯ ಹಲವಾರು ವಿಷಯಗಳು ಹಾಗೆಯೇ ಉಳಿದುಕೊಂಡು ಬಿಡುತ್ತವೆ. ಆ ಬಗೆಯಲ್ಲಿ ಸೃಷ್ಟಿಗೊಳ್ಳುವ ಕೊರತೆಗಳನ್ನು ತಕ್ಕಮಟ್ಟಿಗಾದರೂ ನಿವಾರಿಸಿಕೊಳ್ಳಲು ಯತ್ನ ಇದಾಗಿದೆ. ಆದರೆ ಇಂಥ ಸಂದರ್ಭದಲ್ಲಿ ಸಾಕ್ಷಿಗಳನ್ನೇ ಪ್ರಧಾನವಾಗಿ ಬೇಡುವ ಅಧ್ಯಯನಗಳಿಂದ ಸ್ವಲ್ಪಮಟ್ಟಿಗೆ ಬಿಡಿಸಿಕೊಳ್ಳುವ ಅನಿವಾರ್ಯ ಪ್ರಸಂಗವು ಉಂಟಾಗುತ್ತದೆ. ಇಂಥ ಕ್ರಮಗಳು ಇತಿಹಾಸ–ಪುರಾತತ್ವ ಅಧ್ಯಯನಗಳಿಗೆ ವ್ಯತಿರಿಕ್ತವಾಗಿ ಕಂಡುಬಂದರೂ ಅಂಥ ಕಥನಗಳಲ್ಲಿ ಆದಿ ಮತ್ತು ಅಂತ್ಯವಿಲ್ಲದ ಸಂಗತಿಗಳು ಅಮೂರ್ತರೂಪದಲ್ಲಿ ನೆಲೆಗೊಂಡಿರುವುದನ್ನು ಈ ಹೊತ್ತಿನ ಇತಿಹಾಸ–ಪುರಾತತ್ವ ಅಧ್ಯಯನ ಕ್ರಮಗಳು ಸಾರಾಸಗಟಾಗಿ ತಿರಸ್ಕರಿಸುವುದಕ್ಕೆ ಸಾಧ್ಯವಿಲ್ಲ. ಸಾಂಸ್ಕೃತಿಕ ಆಚರಣೆಯ ನೆಲೆಗಳ ವಿವರಗಳು ಹೆಚ್ಚಾಗಿ ಮೌಖಿಕ ಪರಂಪರೆಗಳಲ್ಲಿಯೇ ನೆಲೆಗೊಂಡಿರುತ್ತವೆ. ಅವುಗಳಲ್ಲಿ ಚಾರಿತ್ರಿಕ ತಥ್ಯ ಇದ್ದರೂ ಅದು ಕಾಲಾನುಕ್ರಮದ ಬದ್ಧತೆಯಲ್ಲಿ ರೂಪಗೊಂಡಿರುವುದಿಲ್ಲ. ಹಾಗಾಗಿ ಭೂತದಿಂದ ಭವಿಷ್ಯಕ್ಕೊ, ವರ್ತಮಾನದಿಂದ ಭೂತಕ್ಕೊ ಪಯಣಿಸಿದ ಹೆಜ್ಜೆ ಗುರುತುಗಳನ್ನು ನಿರ್ದಿಷ್ಟವಾಗಿ ಗುರುತಿಸುವುದು ಸಹ ತುಂಬಾ ಕಷ್ಟ.

ಪ್ರಸ್ತುತ ಈ ಅಧ್ಯಾಯವು ಯಾದಗಿರಿ ಜಿಲ್ಲೆಯ ಪರಿಧಿಯಲ್ಲಿರುವಂಥ ಸಾಂಸ್ಕೃತಿಕ ಆಚರಣೆ ನೆಲೆಯಲ್ಲಿ ರೂಪಗೊಂಡಿರುವ ಕೆಲವು ಮಹತ್ವದ ನೆಲೆಗಳ ಕುರಿತು ಚರ್ಚಿಸುವ ಉದ್ದೇಶ ಹೊಂದಲಾಗಿದೆ. ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಮಿತಿಗಳ ಹಿನ್ನೆಲೆಯಲ್ಲಿ ಇತಿಹಾಸ ಮತ್ತು ಪುರಾತತ್ವ ಸಂಗತಿಗಳಿಗೆ ಹೆಚ್ಚಿನಾಂಶ ಸಂಬಂಧಪಡಬಹುದಾದ ನೆಲೆಗಳ ಕುರಿತು ಮಾತ್ರ ವಿವೇಚಿಸಲಾಗಿದೆ. ಬಹು ವಿಸ್ತಾರವನ್ನು ಪಡೆದಿರುವ ಜಾತ್ರೆ–ಉತ್ಸವ–ಆಚರಣೆ, ನಂಬಿಕೆಗಳ ಬಗೆಗೆ ಸಾಹಿತ್ಯ ಮತ್ತು ಜಾಪದ ಅಧ್ಯಯನಗಳು ನಿಷ್ಕರ್ಷಿಸಬಹುದಾದ ನೆಲೆಯಲ್ಲಿ ವಿವರಿಸುವ ಉದ್ದೇಶವನ್ನು ಸಹ ಹೊಂದಲಾಗಿಲ್ಲ. ಇಲ್ಲಿ ಪ್ರಕಟಿಸಿರುವ ನೆಲೆಗಳ ಕುರಿತು ಜಾನಪದ ಅಧ್ಯಯನ ಶಿಸ್ತುಗಳ ಹಿನ್ನೆಲೆಯಲ್ಲಿ ಚರ್ಚೆಗೆ ಒಳಪಡಿಸಬಹುದಾದ ಸನ್ನಿವೇಶಗಳಿದ್ದರೂ ಆ ತರಹದ ಪ್ರಯತ್ನವು ಸಹ ಈ ಅಧ್ಯಾಯದ ಉದ್ದೇಶವಲ್ಲ.

ಬಹುಸಂಖ್ಯಾತ ಹಾಗೂ ವಿವಿಧ ಜಾತಿ-ಜನಾಂಗಗಳ ಗಡಿಗಳಿಲ್ಲದೇ ಆಚರಣೆಗೊಳ್ಳುತ್ತಿರುವ ಮೈಲಾರ, ವೀರಭದ್ರ, ತಿಂಥಣಿ ಮೋನಪ್ಪಯ್ಯ, ಕೊಡೇಕಲ್ಲು ಹಾಗೂ ಸಗರದ ಎಲ್ಲಮನ ಪರಂಪರೆಗಳಿಗೆ ಸಂಬಂಧಿಸಿದ ಆಚರಣೆಯ ನೆಲೆಗಳು ಈ ಪ್ರದೇಶದಲ್ಲಿ ಹೆಚ್ಚಿನ ಪ್ರಸಿದ್ಧಿ ಪಡೆದಿವೆ. ಅಂಥ ಪ್ರಮುಖ ವಿವರಗಳ ಕುರಿತು ಹಾಗೂ ಆ ಸ್ಥಳಗಳಲ್ಲಿ ನಿರ್ಮಾಣಗೊಂಡ ಇತಿಹಾಸ-ಪುರಾತತ್ವ ಆಕರಗಳನ್ನು ಪರಿಗಣಿಸಿ ಪ್ರಸ್ತುತ ವಿವರಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಸಂಬಂಧಿಸಿದ ವಿವರಗಳನ್ನು ಬಿಡಿ ಬಿಡಿಯಾಗಿ ನೋಡದೇ ಒಟ್ಟು ಸಮಗ್ರತೆಯಿಂದ ಕೂಡಿರುವ ಹಾಗೂ ಅವೆಲ್ಲವು ಸೇರಿಯೋ ಹೊರಡಿಸಬಹುದಾದ ಧ್ವನಿಯನ್ನು ಒಟ್ಟಾರೆ ರೂಪದಲ್ಲಿ ಇಲ್ಲಿ ಪ್ರಸ್ತಾಪಿಸಲಾಗಿದೆ. ಆಚರಣೆಯ ನೆಲಗಳಲ್ಲಿರುವ ಭೌತಿಕ ಆಕರಗಳ ಹಿನ್ನೆಲೆಯಲ್ಲಿ ಕೆಲವು ವಿವರಗಳನ್ನು ಸೀಮಿತ ಚೌಕಟ್ಟಿನಲ್ಲಿ ಮಾತ್ರ ವಿವೇಚಿಸಲಾಗಿದೆ. ಬಹುಶಃ ಇದೊಂದು ಕೊರತೆಯು ಅನಿಸಬಹುದು.

## ಮೈಲಾರ ಪರಂಪರೆ

ಮೈಲಾರ ಒಬ್ಬ ಪ್ರಸಿದ್ಧ ಜನಪದ ದೈವ. ದಕ್ಷಿಣ ಭಾರತದ ರಾಜ್ಯಗಳಲ್ಲಿ ಈ ದೈವತ್ವದ ಪ್ರಭಾವವು ಸೀಮಾತೀತವಾಗಿ ವಿಸ್ತರಿಸಿಕೊಂಡಿದೆ. ವಿಶೇಷವಾಗಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಮತ್ತು ಗೋವಾ ರಾಜ್ಯಗಳಲ್ಲಿ ಈ ಸಂಪ್ರದಾಯಕ್ಕೆ ಸಂಬಂಧಿಸಿದ ಹೆಚ್ಚಿನ ವಿಧಿ ಆಚರಣೆಗಳು ಎಲ್ಲಾ ಸಮುದಾಯಗಳಲ್ಲೂ ಬೇರೂರಿವೆ. ಮೈಲಾರ ದೈವತ್ವಕ್ಕೆ ಸಂಬಂಧಿಸಿದ ಆಚರಣೆಗಳು ವಿಶೇಷವಾಗಿ ಹಬ್ಬ ಹರಿದಿನಗಳಲ್ಲಿ ಮದುವೆ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ವ್ಯಕ್ತಗೊಳ್ಳುತ್ತಿರುತ್ತವೆ. ಬೇರೆ ಬೇರೆ ಸ್ಥಳಗಳಲ್ಲಿರುವ ಮೈಲಾರನ ಕ್ಷೇತ್ರಗಳಲ್ಲಿ ನಡೆಯುವ ಜಾತ್ರೆ ಮತ್ತು ಉತ್ಸವಗಳಲ್ಲಿ ಆತನಿಗೆ ಸಂಬಂಧಿಸಿದ ವಿಶೇಷ ಆಚರಣೆಗಳು ನಡೆಯುತ್ತವೆ.

ಭಕ್ತರು ತಮ್ಮ ಭಕ್ತಿಯ ಪರಾಕಾಷ್ಠೆಯನ್ನು ವ್ಯಕ್ತಪಡಿಸಿ ತಮ್ಮ ದೇಹಗಳನ್ನು ದಂಡಿಸಿಕೊಳ್ಳುತ್ತ ಹಿಂಸಾತ್ಮಕ ಉಗ್ರ ಆಚರಣೆಗಳನ್ನು ಯಾವ ಭಯವಿಲ್ಲದೆ ತೋರ್ಪಡಿಸುತ್ತಾರೆ. ಬಾಯಿ, ಬೆನ್ನು, ಕಾಲು ಮತ್ತು ನಾಲಿಗೆಗಳಲ್ಲಿ ಚೂಪಾದ ಶಸ್ತ್ರಗಳನ್ನು ಚುಚ್ಚಿಕೊಳ್ಳುವ ಕಾರ್ಯಾಚರಣೆಗಳ ಮೂಲಕ ತಮ್ಮ ಭಕ್ತಿಯನ್ನು ಪ್ರದರ್ಶಿಸಿಕೊಳ್ಳುತ್ತಾರೆ. ಈ ಎಲ್ಲಾ ಕ್ರಿಯೆಗಳು ದೇವರಿಗಾಗಿ ತೀರಿಸುವ ಹರಿಕೆಯ ಭಾಗಗಳಾಗಿರುತ್ತವೆ.

ಒಬ್ಬ ಸಾಮಾನ್ಯ ಗ್ರಾಮದೇವತೆಯಾಗಿ ಹುಟ್ಟಿಕೊಂಡ ಮೈಲಾರ ಎಲ್ಲಾ ಸಮುದಾಯಗಳ ಜನಸಾಮಾನಸಗಳಲ್ಲಿ ನೆಲೆಯೂರಿ ತನ್ನ ಭಕ್ತಿ ಮಾರ್ಗದ ಮಹತ್ವವನ್ನು ವಿಸ್ತರಿಸಿಕೊಂಡಿದ್ದಾನೆ. ಆಯಾ ಕಾಲಘಟ್ಟದಲ್ಲಿ ಅಸ್ತಿತ್ವದಲ್ಲಿದ್ದ ವಿಧಿ ಆಚರಣೆಗಳಲ್ಲಿ ತಾನೂ ಸಹ ಮುಕ್ತವಾಗಿ ಪ್ರವೇಶಿಸುತ್ತ ಕೆಲವೊಮ್ಮೆ ಅಂತಹ ಆಚರಣೆಗಳನ್ನೇ ತನ್ನ ಅಧೀನಕ್ಕೊಳಪಡಿಸಿಕೊಳ್ಳುತ್ತಾ ನೆಲೆಗೊಳ್ಳುತ್ತಾನೆ. ಉಳಿದ ಸಂಪ್ರದಾಯಗಳ ಮತಪಂಥಗಳ ಮೇಲೂ ಪ್ರಭಾವ ಬೀರುತ್ತ ವಿರಾಟವಾಗಿ ಬೆಳೆದಿರುವ ಸಂಗತಿ ತುಂಬಾ ಸೋಜಿಗವನ್ನುಂಟುಮಾಡುತ್ತದೆ. ಯಾವ ತರಹದ ಹಂಗಿಲ್ಲದ ಈ ಪರಂಪರೆಯು ಈವರೆಗೂ ಐತಿಹ್ಯ ಮತ್ತು ಪುರಾಣಗಳ ನೆಲೆಯಲ್ಲಿ ಬಲಗೊಳ್ಳುತ್ತಾ ವ್ಯಾಪಕತೆಯನ್ನು ವಿಸ್ತರಿಸಿಕೊಂಡಿದೆ. ಹಾಗಾಗಿ ಮೈಲಾರ ಕುರಿತ ಮತ್ತು ಸಂಬಂಧಿಸಿದ ಸಂಪ್ರದಾಯವನ್ನು ಇತಿಹಾಸ ಮತ್ತು ಪುರಾತತ್ವದ ಚೌಕಟ್ಟಿನಲ್ಲಿ ಒಳಪಡಿಸಿ ಪುನರ್‌ರೂಪಿಸುವುದು ತುಂಬಾ ಕಷ್ಟದ ಕೆಲಸವೇ ಸರಿ. ಈ ದೈವತ್ವಕ್ಕೆ ಸಂಬಂಧಪಟ್ಟ ಈ ಜಿಲ್ಲೆಯಲ್ಲಿ ಹಲವಾರು ನೆಲೆಗಳಿದ್ದು ಅವುಗಳ ಕುರಿತು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

## ಮೈಲಾಪುರ

ಮೈಲಾರನಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಹಲವಾರು ಕ್ಷೇತ್ರಗಳಿವೆ. ಅವುಗಳಲ್ಲಿ ಹಿರೇಮೈಲಾರ(ಬಳ್ಳಾರಿ) ದೇವರಗುಡ್ಡ(ಹಾವೇರಿ) ಹಿಪ್ಪರಗಿ(ವಿಜಾಪುರ) ಮಂಗಸೂಳಿ (ಬೆಳಗಾವಿ) ಗೂಡೂರು(ಬಾಗಲಕೋಟೆ) ಕಾರಿಮನಿ(ಬೆಳಗಾವಿ) ಪೆಂಬರೆ (ಬೀದರ) ಹೊಸದುರ್ಗ (ಚಿತ್ರದುರ್ಗ) ನಾಗಮಂಗಲ (ಮಂಡ್ಯ) ಸಿರಗುಪ್ಪ (ಬಳ್ಳಾರಿ), ಮೀನಾಗುಂದಿ (ಆಂಧ್ರ) ಮತ್ತು ಮೈಲಾಪುರ ಅಥವಾ ಏತಗಿರಿ (ಯಾದಗಿರಿ)ಗಳನ್ನು ಹೆಸರಿಸಬಹುದು. ಜನಪ್ರಸಿದ್ಧಿಯಾದ ಇಂಥ ಕ್ಷೇತ್ರಗಳಲ್ಲದೇ ನೂರಾರು ಸಂಖ್ಯೆಯ ಚಿಕ್ಕಪುಟ್ಟ ಕ್ಷೇತ್ರಗಳು ನಮ್ಮ ನಾಡಿನಲ್ಲಿವೆ. ಅವೆಲ್ಲವುಗಳಲ್ಲಿ ಯಾದಗಿರಿ ಜಿಲ್ಲೆಯಲ್ಲಿರುವ ಯಾತಗಿರಿ (ಯಾದಗಿರಿ) ಅಥವಾ ಮೈಲಾಪುರ ಮಲ್ಲಯ್ಯ ಹೆಚ್ಚಿನ ಪ್ರಸಿದ್ಧಿ ಹಾಗೂ ಮಹತ್ವ ಪಡೆದ ಕ್ಷೇತ್ರವಾಗಿದೆಯೆಂದು ಅಭಿಪ್ರಾಯಿಸಬಹುದು. ಕಾರಣ ಎಪ್ಪತ್ತೇಳು ಮಲಯ(ಬೆಟ್ಟ ಅಥವಾ ಗುಡ್ಡ)ಗಳಲ್ಲಿ ಮೈಲಾಪುರ ಕ್ಷೇತ್ರವು ಕಟ್ಟಕಡೆಯ ಕ್ಷೇತ್ರವೆಂಬ ಪ್ರತೀತ ಜನರಲ್ಲಿದೆ. ಮೈಲಾರನು ಜಗತ್ತಿನ ತುಂಬೆಲ್ಲಾ ಅಲೆದಾಡಿ ಕೊನೆಯದಾಗಿ ಈ ಯಾತಗಿರಿ ಗುಡ್ಡದಲ್ಲಿ ಶಾಶ್ವತವಾಗಿ ನೆಲೆನಿಲ್ಲುತ್ತಾನೆಂಬ ಸಂಗತಿಗಳು ಈ ಪ್ರದೇಶದ ಜನರಲ್ಲಿವೆ. ಹಾಗಾಗಿ ಮೈಲಾರದೈವ ನೆಲಗೊಂಡ ಈ ಬೆಟ್ಟವನ್ನೇ ಮೈಲಾಪುರವೆಂದು ಕರೆಯಲಾರಂಭಿಸಿದರು.

ಯಾದಗಿರಿ-ಸೈದಾಪುರ ರಸ್ತೆಯಲ್ಲಿರುವ ಈ ನೆಲಯು ನೈಸರ್ಗಿಕ ಬೆಟ್ಟಗಳಿಂದ ಆವೃತಗೊಂಡಿದೆ. ಅವುಗಳನ್ನು ತಿಮ್ಮಪ್ಪನಬೆಟ್ಟ, ಮೈಲಾರ(ಶಿವ)ನ ಬೆಟ್ಟ ಹಾಗೂ ಪಶ್ಚಿಮಭಾಗದಲ್ಲಿರುವ ಗುಡ್ಡವನ್ನು ಬ್ರಹ್ಮನ ಬೆಟ್ಟಗಳೆಂದು ಹೆಸರಿಸಲಾಗಿದೆ. ಅಲ್ಲದೇ ಈ ಪ್ರದೇಶವನ್ನು ರಜತಾಗ್ರಹ, ಮಣಿಚೂಡ, ಮೈಲಾರ ಪರ್ವತವೆಂತಲೂ ಕರೆಯಲಾಗುತ್ತದೆ. ಸುಮಾರು ೧೫೦ ಅಡಿ ಎತ್ತರವಾಗಿರುವ ಇಲ್ಲಿರುವ ಬೆಟ್ಟದ ಮೇಲ್ಭಾಗದ ಸಮತಟ್ಟಾದ ಪ್ರದೇಶದಲ್ಲಿ ಮೈಲಾರನ ಕ್ಷೇತ್ರವು ಸ್ಥಾಪಿತವಾಗಿದೆ. ಈ ಬೆಟ್ಟವನ್ನು ಏರಿಕೊಂಡು ಹೋಗಲು ಮೆಟ್ಟಿಲು ಏರಿಕೊಂಡು ಹೋಗುವ ದಾರಿಯಲ್ಲಿಯೇ ವೀರಭದ್ರನ ಗುಡಿಯು ಇದೆ. ಅಲ್ಲದೇ ಇತ್ತೀಚೆಗೆ ನಿರ್ಮಾಣವಾದ ವಿನಾಯಕನ ಗುಡಿಯು ಸಹ ಸಮೀಪದಲ್ಲಿದೆ. ಇಲ್ಲೊಂದು ಕೈಮುಗಿದು ನಿಂತಿರುವ ಶಿಲಾಫಲಕವೊಂದಿದ್ದು ಅದು ಮೈಲಾರನ ಭಕ್ತಸಮೂಹಕ್ಕೆ ಸಂಬಂಧಿಸಿದ್ದಾಗಿರಬಹುದೆಂದು ಹೇಳಲಾಗುತ್ತದೆ.

ಕಲ್ಲಿನಿಂದ ಆವೃತಗೊಂಡಿರುವ ಗುಹೆಯಲ್ಲಿ ಮೈಲಾರನು ಸ್ಥಾಪಿತನಾಗಿದ್ದಾನೆ. ವಾಸ್ತುಶಿಲ್ಪ ಅಧ್ಯಯನ ದೃಷ್ಟಿಯಿಂದ ಅಂಥ ಮಹತ್ವದ ಸ್ಮಾರಕ ಇದಲ್ಲ. ಆದರೆ ಸಾಂಸ್ಕೃತಿಕ ಆಚರಣೆಗಳ ಹಿನ್ನೆಲೆಯಲ್ಲಿ ತುಂಬಾ ಉಪಯುಕ್ತ ಕ್ಷೇತ್ರ ಇದಾಗಿದೆ. ನೈಸರ್ಗಿಕವಾಗಿ ನಿರ್ಮಾಣಗೊಂಡಿರುವ ಗುಹೆಗಳನ್ನೇ ಐದಾರು ದೇವಾಲಯಗಳನ್ನಾಗಿ ಪರಿವರ್ತಿಸಲಾಗಿದೆ. ಮುಖ್ಯವಾಗಿ ಮೈಲಾರ, ತುರಂಗದ ಬಾಲಮ್ಮ, ಗಂಗೆಮಾಳಮ್ಮ, ಹೆಗ್ಗಣ ಪ್ರಧಾನಿ ಮತ್ತು ಇತ್ತೀಚೆಗೆ ನಿರ್ಮಿಸಿದ ಅಕ್ಕಮಹಾದೇವಿ ಮತ್ತು ಗಣಪತಿಯ ಶಿಲ್ಪಗಳನ್ನು ಇದೇ ಆವರಣದಲ್ಲಿ ಕಾಣಬಹುದು. ಇವೆಲ್ಲವು ಅರ್ವಾಚೀನವಾದವುಗಳು. ಆದರೆ ಮೈಲಾರನ ದೇವಾಲಯದ ಮುಂಭಾಗದಲ್ಲಿರುವ ಕಟ್ಟೆಯ ಮೇಲೆ ಪ್ರಾಚೀನ ನಂದಿಶಿಲ್ಪ ಹಾಗೂ ಭಗ್ನಗೊಂಡಿರುವ ಕಂಬದ ಅವಶೇಷಗಳಿದ್ದು ಅವುಗಳ ಬಗೆಗೆ ಸ್ಪಷ್ಟ ವಿವರಗಳಿರುವುದಿಲ್ಲ. ಅವುಗಳನ್ನು ಬಹುಶಃ ಬೇರೊಂದು ಸ್ಥಳದಿಂದ

ತಂದು ಇಟ್ಟಿರಬಹುದಾಗಿದೆ ಎಂಬ ಸಂಶಯಗಳು ಮೂಡುತ್ತವೆ. ಓತ್ತಾಳೆ ಲೋಹದಲ್ಲಿ ನಿರ್ಮಿಸಿರುವ ಮೈಲಾರ ಹಾಗೂ ಅವನ ಪರಿವಾರಕ್ಕೆ ಸಂಬಂಧಿಸಿದ ಮೂರ್ತಿಗಳು ಇಲ್ಲಿವೆ. ಮೈಲಾರ ಅಶ್ವಾರೂಢನಾಗಿದ್ದಾನೆ. ಆತನ ಕುದುರೆಯನ್ನು ಸ್ಥಳೀಯರು ಮಲ್ಲಾಸುರನೆಂದು ಕರೆಯುತ್ತಾರೆ. ಅಲ್ಲದೇ ಮೈಲಾರನ ಪರಿವಾರಕ್ಕೆ ಸಂಬಂಧಪಟ್ಟ ಇನ್ನಿತರೆ ಮೂರ್ತಿಗಳು ಸಹ ಇಲ್ಲಿವೆ. ಆದರೆ ಅವುಗಳೆಲ್ಲವು ಇತ್ತೀಚೆಗೆ ನಿರ್ಮಾಣವಾದವುಗಳು.

ತುರಂಗದ ಬಾಲಮ್ಮ ಮತ್ತು ಗಂಗೆಮಾಳಮ್ಮರ ಗುಡಿಗಳು ಚಿಕ್ಕದಾಗಿವೆ. ಅವು ಸಹ ನೈಸರ್ಗಿಕ ಗುಹೆಯಲ್ಲಿ ರಚನೆಗೊಂಡಿರುವಂಥವು. ಆದರೆ ಹೆಗ್ಗಣ ಪ್ರಧಾನಿಯ ಗುಡಿಯಲ್ಲಿ ಕೆಲವು ಸ್ತಂಭಗಳನ್ನು ಅಳವಡಿಸಿಲಾಗಿದ್ದು ಅವು ಪ್ರಾಚೀನವಾದವುಗಳೆಂಬಂತೆ ಭಾಸವಾಗುತ್ತವೆ. ಆದರೆ ಬಹುಶಃ ಅವು ಸಹ ಆಧುನಿಕ ಘಟ್ಟದಲ್ಲಿಯೇ ನಿರ್ಮಾಣಗೊಂಡಿರುವಂಥವುಗಳು. ಈ ಗುಡಿ ಮಾತ್ರ ಪೂರ್ವಾಭಿಮುಖವಾಗಿದೆ. ಹೆಗ್ಗಣ ಪ್ರಧಾನಿಯ ಬಗೆಗೆ ಈ ಸ್ಥಳದಲ್ಲೊಂದು ಐತಿಹ್ಯವಿದೆ. "ಮಲ್ಲಯ್ಯನು ಹಳಗೇರಿ ಸೀಮೆಯ 'ಪಿಲಿಗುಂಡು' ಹತ್ತಿರ ವಾಸ್ತವ್ಯ ಹೂಡಿ, ಹೆಗ್ಗಣ ಪ್ರಧಾನಿಗೆ ಸೂಕ್ತ ಸ್ಥಳ ನೋಡಿಕೊಂಡು ಬಾ ಎಂದು ಮೈಲಾಪುರಕ್ಕೆ ಕಳಿಸಿದನಂತೆ. ಆಗ ಹೆಗ್ಗಣ ಪ್ರಧಾನಿಯು ತನ್ನ ಒಡೆಯನ (ಗೆಳೆಯ) ಮಾತಿಗೆ ಓಗೊಟ್ಟು ಮೈಲಾಪುರಕ್ಕೆ ಹೋದನಂತೆ. ಆಗ ಅಲ್ಲೊಂದು ಸೂಕ್ತ ಸ್ಥಳ ಕಂಡು ಬಂದಿದ್ದರಿಂದ ಹೆಗ್ಗಣನು ಅಲ್ಲಿಯೇ ತಳವೂರಿದ. ಬಹಳ ದಿನಗಳ ಕಾಲ ಪ್ರಧಾನಿಯು ಬರದೇ ಇರುವುದನ್ನು ಮನಗಂಡು ಆಗ ಮಲ್ಲಯ್ಯನೇ ಅಲ್ಲಿಗೆ ಹೋಗಿ ನೋಡುತ್ತಾನೆ. ಆದರೆ ಆವಾಗಲೇ ಹೆಗ್ಗಣ ಪ್ರಧಾನಿ ಒಳ್ಳೆಯ ಜಾಗ ಹಿಡಿದು ಕುಳಿತಿದ್ದನ್ನು ಗಮನಿಸಿ, ಕುಪಿತನಾದ ಮಲ್ಲಯ್ಯನು ಅವನನ್ನು ಮೇಲೇಳು ಹೇಳಿದರೂ ಅವನು ಏಳಲಿಲ್ಲ. ಆವಾಗ ಸ್ವತಃ ಮಲ್ಲಯ್ಯನು ಹೆಗ್ಗಣ ಪ್ರಧಾನಿಯ ಕಿವಿ ಹಿಡಿದು ಕಿತ್ತರೂ ಕಿವಿನೇ ಬಂತು ಹೊರತು ಹೆಗ್ಗಣ ಪ್ರಧಾನಿ ಮೇಲೇಳಲಿಲ್ಲ ಎಂಬ ಐತಿಹ್ಯಗಳಿವೆ. ಆದರೆ ಈ ವಿವರದಲ್ಲಿರುವ ಚಾರಿತ್ರಿಕ ವಾಸ್ತವವನ್ನು ಬೇರೆ ರೀತಿಯಲ್ಲಿ ಬಿಡಿಸಿ ನೋಡುವ ಅಗತ್ಯವಿದೆ. ಇಂಥ ಕಥೆಗಳನ್ನು ಜನರು ತಾವೇ ಕಟ್ಟಿಕೊಂಡ ನಂಬಿಕೆಗಳಾಗಿವೆ ಹೊರತು ಅದಕ್ಕೊಂದು ಚಾರಿತ್ರಿಕ ಮಹತ್ವ ಇರಲಾರದು ಎಂದು ಪರಿಭಾವಿಸಬಹುದು.

ಕರ್ನಾಟಕದಲ್ಲಿ ಮೈಲಾರ ಪಂಥವು ಹತ್ತನೆಯ ಶತಮಾನದಿಂದಲೇ ರೂಪಗೊಳ್ಳುತ್ತಾ ಬಂದಿರುವುದನ್ನು ಹಲವು ವಿದ್ವಾಂಸರು ಪ್ರಕಟಿಸಿದ್ದಾರೆ. ಆದರೆ ಆ ಸಂಪ್ರದಾಯ ಕುರಿತು ರಾಚನಿಕವಾದ ದೇವಾಲಯಗಳ ನಿರ್ಮಾಣ ಕ್ವಚಿತ್‌ವೆಂದೆ ಹೇಳಬಹುದು. ವಾಸ್ತುಶಿಲ್ಪದ ದೃಷ್ಟಿಯಿಂದ ಅಭಿಪ್ರಾಯಿಸುವುದಾದರೆ ಅವು ವ್ಯವಸ್ಥಿತವಾಗಿ ಬೆಳೆದು ಬರಲಿಲ್ಲ. ಆದರೆ ಅದಕ್ಕೆ ಸಂಬಂಧಿಸಿದದ ಇತಿಹಾಸದ ಮೌಖಿಕ ವಿವರಗಳು ಅತ್ಯಂತ ಭವ್ಯವಾಗಿ ರೂಪಗೊಂಡಿರುವುದನ್ನು ಕಾಣಬಹುದು. ಮೈಲಾರನಿಗೆ ಸಂಬಂಧಿಸಿದ ಪ್ರತಿಕ್ಷೇತ್ರದಲ್ಲೂ ಭಿನ್ನ ಬಗೆಯ ಆಚರಣೆಗಳು, ಕಥೆಗಳು ಮತ್ತು ಹಲವು ಬಗೆಯ ಐತಿಹ್ಯಗಳು ನಿರ್ಮಾಣವಾಗಿವೆ. ಇಂಥ ಚಟುವಟಿಕೆಗಳಿಂದ ಈ ಕ್ಷೇತ್ರವು ಸಹ ಹೊರತಾಗಿಲ್ಲ. ಹಲವಾರು ವಿವರಗಳನ್ನು ಹೇಳುವ ಐತಿಹ್ಯಗಳು ಈ ಕ್ಷೇತ್ರದಲ್ಲಿಯೂ ಕಂಡುಬರುತ್ತವೆ.

ಸ್ಥಳ ಮಹಿಮೆಯಂತೆ ದಾಖಲಾದ ಮುಖ್ಯ ವಿವರಗಳಲ್ಲಿ ಈ ಮುಂದೆ ದಾಖಲಿಸಿರುವ ಕಥೆಯು ಹೆಚ್ಚಿನ ವಿಸ್ತಾರ ಪಡೆದಿದೆಂದು ಹೇಳಬಹುದು. ಮೈಲಾರನು(ಮಲ್ಲಯ್ಯ)ಮೂರು ರಾಕ್ಷಸರ ಜೊತೆಗೆ ಯುದ್ಧ ಮಾಡುತ್ತಾನೆ. ಅವರಲ್ಲಿ ಮಲ್ಲಾಸುರನೆಂಬುವನು ಸೋತು ಮಲ್ಲಯ್ಯನ ಕುದುರೆ ಆಗುತ್ತಾನೆ. ಹದ್ದಾಸುರನು ಸೋತು ಮೈಲಾರನಿಗೆ ಶರಣಾಗಿ 'ನಾನು ನಿತ್ಯವು ನಿನ್ನ ತಲೆಯ ಮೇಲೆ ತುಪ್ಪದ ದೀಪವಾಗಿ ಉಳಿದು ನಿನ್ನ ಸೇವೆ ಮಾಡಲು ಅವಕಾಶಕೊಡುವೆಂದು ಭಿನ್ನಯಿಸಿಕೊಂಡು ತುಪ್ಪದ ಬಂಡೆಹತ್ತಿರ ಹೋಗಿ ಸ್ಥಾಪಿತವಾಗುತ್ತಾನೆ. ಈ ಹದ್ದಾಸುರನ ವಂಶೀಕರೆಂದು ಸಂಬೋಧಿಸಿಕೊಳ್ಳುತ್ತಿರುವ ಛಲವಾದಿ ಅಥವಾ ಹೊಲೆಯ ಜಾತಿಗೆ ಸಂಬಂಧಿಸಿದ ಕೆಲವರು ಬಂಡೆಯ ಮೇಲಿನ ತುಪ್ಪದ ದೀಪವನ್ನು ಬೆಳಗಿಸುವ ಕಾರ್ಯವನ್ನು ಈಗಲೂ ಮಾಡುತ್ತಾರೆ. ಈ ಬಂಡೆಯ ಮೇಲೆ ಹಗ್ಗದ ಸಹಾಯದಿಂದ ಏರಿ ಹೋಗುವುದೇ ತುಂಬಾ ಸಾಹಸಮಯ ಕೆಲಸವಾಗಿದೆ. ಈ ಸೇವಾಕರ್ತರ ಬಗೆಗೆ ಹೇಳಬಹುದಾದ ಇನ್ನೊಂದು ಸಂಗತಿ ಎಂದರೆ ಶಿರಾವಳ ಗ್ರಾಮದಲ್ಲಿರುವ ಮಲ್ಲಿಕಾರ್ಜುನ ಗುಡಿಗೆ(ಛಲವಾದಿ ಓಣಿ) ಸಂಬಂಧಿಸಿದ ನಿತ್ಯದ ಪೂಜಾಕಾರ್ಯಗಳನ್ನು ಸಹ ಇವರ ಸಂಬಂಧಿಕರೆ ತಲಾತಲಾಂತರದಿಂದ ನಿರ್ವಹಿಸಿಕೊಂಡು ಬರುತ್ತಿದ್ದಾರೆ ಎಂಬುದು. ಇಲ್ಲಿರುವ ಮಲ್ಲಿಕಾರ್ಜುನನ್ನು ಸಹ ಅವರು ಮಲ್ಲಯ್ಯನೆಂದೆ ಪೂಜಿಸುತ್ತಾರೆ.

ಮಸ್ಗಾಸುರನೆಂಬ ಮೂರನೆಯ ರಾಕ್ಷಸನು ಮೈಲಾರನಿಂದ ತಪ್ಪಿಸಿಕೊಂಡು ಓಡಿಹೋಗಲು ಸತತ ಪ್ರಯತ್ನ ಪಡುತ್ತಲೇ ಇರುತ್ತಾನೆ. ಆದರೆ ಮೈಲಾರನು ಸಹ ಅವನನ್ನು ಬಿಡದೆ ಬೆನ್ನಟ್ಟಿ ಆತನ ರುಂಡವನ್ನು ಚೆಂಡಾಡುವ ಧಾವಂತದಲ್ಲಿದ್ದಾಗ ಮಸ್ಗಾಸುರನೇ ಸ್ವಯಂ ತನ್ನ ಶಿರವನ್ನು ಕಡೆದುಕೊಂಡು ಮೈಲಾರ ದೈವನಿಗೆ ಪ್ರೀತಿಪಾತ್ರವಾಗುತ್ತಾನೆ. ಅಂಥ ಪವಾಡ ಮೆರೆದ ರಾಕ್ಷಸನ ವಂಶೀಕರೇ ಪ್ರತಿವರ್ಷ ಇಲ್ಲಿ ನಡೆಯುವ (ಸಂಕ್ರಮಣದ ದಿನ) ಮೈಲಾರನ ಜಾತ್ರೆಯಲ್ಲಿ ಶಿರಸ್ಸು ಪವಾಡ ಕಾರ್ಯವನ್ನು ನೆರವೇರಿಸುವರು. ಅವರು ಈ ಆಚರಣೆಯನ್ನು ಇಂದಿಗೂ ಆಚರಿಸುತ್ತಾ ಬರುತ್ತಿದ್ದಾರೆ. ದೈವವನ್ನು ಮೆಚ್ಚಿಸಲು ಸಶಸ್ತ್ರ ಪವಾಡವನ್ನು ಯಾವ ಭಯವಿಲ್ಲದೇ ಮಾಡುತ್ತಾರೆ. ಮಸ್ಗಾಸುರನ ವಂಶಸ್ಥರಾದ ಇವರನ್ನು ಕಾಂಚಾವೀರರೆಂದು ಸಹ ಕರೆಯಲಾಗುತ್ತದೆ. ಪ್ರಸ್ತುತ ಮಾದಿಗ ಜಾತಿಗೆ ಸಂಬಂಧಿಸಿದ ವ್ಯಕ್ತಿಗಳು ತಮ್ಮನ್ನು ಮಸ್ಗಾಸುರನ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ.

ಯಾದಗಿರಿ–ರಾಯಚೂರು ಮುಖ್ಯರಸ್ತೆಯಿಂದ ಮೈಲಾಪುರವನ್ನು ತಲುಪುವ ದಾರಿಯಲ್ಲಿ ಒಂದು ಕಟ್ಟೆ ಇದೆ. ಅದರಲ್ಲಿ ಮಸ್ಗಾಸುರನ ವಂಶಸ್ಥರು ಶಿರಸ್ಸು ಪವಾಡದಿಂದ ಬಲಿದಾನರಾಗಿರುವ ವಿವರವುಳ್ಳ ಫಲಕವನ್ನು ನೋಡಬಹುದು. ಕಪ್ಪ್. ಕಲ್ಲಿನಲ್ಲಿರುವ ಈ ಶಾಸನವನ್ನು ಅಲ್ಲಿರುವ ಕಟ್ಟೆಯಲ್ಲಿ ಅಳವಡಿಸಲಾಗಿದೆ. ಪುರಾತನ ಕಾಲದಲ್ಲಿ ಮಸ್ಗಾಸುರನ ವಂಶಿಕರು ಶಿರಸ್ ಪವಾಡ ಮಾಡಿಕೊಂಡ ಮಹಾಪುರುಷನ ಗದ್ದಿಗೆ ಎಂಬ ವಿವರವಿದೆ. ಈ ವಂಶಿಕರು ಈ ಹಿಂದೆ ತಮ್ಮ ಶಿರವನ್ನೇ ತೆಗೆದು ಶಿವನಿಗೆ ಬೆಳಗಿ ಮತ್ತೆ ಶಿವನ ವರದಿಂದ ಪುನರ್ಜನ್ಮ ಪಡೆಯುತ್ತಿದ್ದರು. ಅಂತಹ ಮಹಾಪುರುಷನ ಗದ್ದಿಗೆ ಇದಾಗಿದೆ ಎಂದು ಉಲ್ಲೇಖಿಸಿದ ವಿವರ ಇಲ್ಲಿದೆ. ಆದರಂತೆ ಆ ಸಮುದಾಯವು ಸಾಂಕೇತಿಕವಾಗಿ

ಇಂದಿಗೂ ಅಂಥ ಶಸ್ತ್ರಪವಾಡ ಆಚರಣೆಯನ್ನು ನಡೆಸುತ್ತಾ ಬರುತ್ತಿದ್ದಾರೆ ಎಂಬ ಅಭಿಪ್ರಾಯಗಳಿವೆ. ಆದರೆ ಬಲಿದಾನಗೊಂಡಿರುವ ವ್ಯಕ್ತಿಯ ಹೆಸರು ಮತ್ತು ಆ ಕಾಲದ ಬಗೆಗೆ ಸ್ಪಷ್ಟವಾಗಿ ಈ ಫಲಕದಲ್ಲಿ ನಮೂದಿಸಿಲ್ಲ. ಮೈಲಾರ ದೈವವನ್ನು ಸಂಪ್ರೀತಗೊಳಿಸಲು ಅಗಣಿತ ಸಂಖ್ಯೆಯಲ್ಲಿ ತಮ್ಮನ್ನೇ ತಾವು ಆತ್ಮಾಹುತಿ ಮಾಡಿಕೊಂಡಿರುವ ಹಲವು ಉದಾಹರಣೆಗಳು ಸಾಹಿತ್ಯ ಮತ್ತು ಮೌಖಿಕ ಐತಿಹ್ಯಗಳಲ್ಲಿ ದಾಖಲಾಗಿರುವುದನ್ನು ಕಾಣುತ್ತೇವೆ. ಅದೇ ಬಗೆಯ ಸಂಗತಿಯು ಸಹ ಈ ಕ್ಷೇತ್ರದಲ್ಲಿಯೂ ನಡೆದಿರಬಹುದು. ಸಂಕ್ರಮಣದ ಸಂದರ್ಭದಲ್ಲಿ ಲಕ್ಷಾಂತರ ಜನರು ಈ ಸ್ಥಳದಲ್ಲಿ ಮೈಲಾರ ಜಾತ್ರೆ ನಿಮಿತ್ತ ಸೇರುತ್ತಾರೆ. ಬೇರೆ ಬೇರೆ ರಾಜ್ಯಗಳಿಂದಲೂ ಭಕ್ತಾದಿಗಳು ಇಲ್ಲಿ ಮೇಳೈಸುತ್ತಾರೆ.

**ಕಡೇಚೂರು ಸೋಮೇಶ್ವರ**

ಊರಿನ ಕೆರೆಯ ದಂಡೆಯ ಮೇಲಿರುವ ಈ ದೇವಾಲಯವು ಮೈಲಾರನಿಗೆ ಸಂಬಂಧಿಸಿದ್ದು. ಪ್ರಾಚೀನವಾಗಿದ್ದ ಗುಡಿಯು ಸಂಪೂರ್ಣವಾಗಿ ನವೀಕರಣಗೊಂಡಿದೆ. ಗರ್ಭಗೃಹ, ಆಯತಾಕಾರದ ನವರಂಗ ಹಾಗೂ ಹೊಸದಾಗಿ ನಿರ್ಮಿಸಿದ ಶಿಖರವು ದೇವಾಲಯಕ್ಕಿರುವುದನ್ನು ಕಾಣುತ್ತೇವೆ. ಅಲ್ಲದೇ ಭಿತ್ತಿಯ ಭಾಗಗಳು ಪೂರ್ಣಪ್ರಮಾಣದಲ್ಲಿ ಹೊಸ ರೂಪತಾಳಿವೆ. ಪ್ರಾಚೀನ ಕಾಲದಲ್ಲಿ ಭವ್ಯವಾಗಿ ನಿರ್ಮಾಣವಾಗಿದ್ದ ಈ ದೇವಾಲಯದ ಹಲವು ಭಾಗಗಳು ಇಂದಿಗೂ ಅವಶೇಷಗಳಾಗಿ ಇದೇ ಆವರಣದಲ್ಲಿಯೇ ಅನಾಥವಾಗಿ ಉಳಿದುಕೊಂಡಿರುವುದನ್ನು ಗಮನಿಸಬಹುದು. ಪ್ರಾಚೀನ ಸ್ಮಾರಕದ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ಕೂಡಿದ್ದು ಅದರಲ್ಲಿ ಅರ್ಧಕಂಬಪಟ್ಟಿಕೆ, ಬಳ್ಳಿಯ ಪಟ್ಟಿಕೆ ಹಾಗೂ ಚಿಕ್ಕದಾಗಿರುವ ಉಬ್ಬುಶಿಲ್ಪಗಳ ಪಟ್ಟಿಕೆಯ ರಚನೆಗಳಿವೆ. ಅವು ನೋಡಲು ತುಂಬಾ ಮನೋಹರವಾಗಿವೆ. ಬಾಗಿಲವಾಡದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ಸಹ ಕಂಡರಿಸಲಾಗಿದೆ. ವಿವರಿಸಿರುವ ಅವಶೇಷಗಳಲ್ಲದೇ ಕಮಲಪುಷ್ಪ ಮಾದರಿಯ ಭುವನೇಶ್ವರಿ, ಕೆಳ ಹೊಸ್ತಿಲ ಭಾಗ ಹಾಗೂ ನಂದಿಯ ಬಿಡಿಶಿಲ್ಪಗಳನ್ನು ಇಲ್ಲಿಯೇ ಇಡಲಾಗಿದೆ.

ಮೈಲಾರನೆಂದು ಕರೆಯಲ್ಪಡುವ ಸೋಮೇಶ್ವರ ಅವನ ಹೆಂಡತಿಯರು ಹಾಗೂ ಈ ಪರಿವಾರಕ್ಕೆ ಸಂಬಂಧಿಸಿದ ಬಿಡಿಶಿಲ್ಪಗಳು ಸದ್ಯ ದೇವಾಲಯದಲ್ಲಿ ಪೂಜೆಗೊಳ್ಳಲ್ಪಡುತ್ತವೆ. ಅಲ್ಲದೇ ಪ್ರತಿ ವರ್ಷವೂ ಈ ಊರಲ್ಲಿ ವಿಜೃಂಭಣೆಯಿಂದ ಮೈಲಾರ(ಸೋಮೇಶ್ವರ)ನ ಜಾತ್ರೆ ಆಗುತ್ತದೆ. ಅಶ್ವಾರೂಢನಾದ ಸೋಮೇಶ್ವರ(ಮೈಲಾರ)ನು ಕೈಯಲ್ಲಿ ತ್ರಿಶೂಲ, ಬಾಲೆ ಹಾಗೂ ಬಿಲ್ಲು ಬಾಣಗಳನ್ನು ಹಿಡಿದಿದ್ದಾನೆ. ಕೆಳಭಾಗದಲ್ಲಿ ಇನ್ನೆರಡು ಚಿಕ್ಕದಾದ ಸ್ತ್ರೀ ಶಿಲ್ಪಗಳಿವೆ. ಅವು ಗಂಗಮ್ಮ ಮತ್ತು ಮಾಳಮ್ಮ ಎಂಬ ಹೆಸರಿನ ಶಿಲ್ಪಗಳಾಗಿವೆ. ಆದರೆ ಅವುಗಳೆಲ್ಲವು ಕಾಷವಿಶಿಲ್ಪಗಳು.

ಈ ಸ್ಮಾರಕದ ಬಗೆಗೆ ತಿಳಿಯಬಹುದಾದ ಸಂಗತಿಯೆಂದರೆ ಅಶ್ವಾರೂಢನಾದ ಸೋಮೇಶ್ವರ ಅಲ್ಲಿದ್ದಿರಬಹುದು. ಅಲ್ಲದೇ ಅವನ ಹೆಂಡತಿಯರು ಹಾಗೂ ಪರಿವಾರದ ದೇವತೆಗಳ ಶಿಲಾಮೂರ್ತಿಗಳು ಅಥವಾ ಉತ್ಸವ ಮೂರ್ತಿಗಳು ಸಹ ಈ ಮೊದಲು ಇದೇ ದೇವಾಲಯದಲ್ಲಿದ್ದಿರಬಹುದು. ಅಥವಾ ಶಿವನ ಪ್ರತಿರೂಪವಾದ ಲಿಂಗ ಮಾತ್ರ ಇಲ್ಲಿತ್ತೆ

ಎಂಬುದು ಸ್ಪಷ್ಟವಾಗುವುದಿಲ್ಲ. ಆದರೆ ಅವೆಲ್ಲವೂ ಕ್ಷೀಣಗೊಂಡ ನಂತರ ಇತ್ತೀಚಿಗೆ ನಿರ್ಮಿಸಿದ ಕಾಷವಿಶಿಲ್ಪಗಳನ್ನೇ ಮೈಲಾರನಿಗೆ ಮೂರ್ತಿಗಳೆಂದು ತಿಳಿದು ಅವುಗಳಿಗೆ ದಿನನಿತ್ಯವು ಪೂಜೆಕೈಂಕರ್ಯಗಳು ಕೈಗೊಳ್ಳಲಾಗುತ್ತದೆ. ಅಲ್ಲದೇ ಪ್ರತಿವರ್ಷ ನಡೆಯುವ ಜಾತ್ರೆಯ ಉತ್ಸವಮೂರ್ತಿಗಳು ಸಹ ಇವೆ ಆಗಿವೆ. ಸೋಮೇಶ್ವರನ್ನನ್ನೇ ಮೈಲಾರನ ರೂಪದಲ್ಲಿ ಪೂಜಿಸುವ ಪರಿಪಾಠ ನಮ್ಮ ನಾಡಿನಲ್ಲಿದೆ. ಅಂಥ ವಿವರಗಳೂ ಸಹ ಕಡೇಚೂರು ಗ್ರಾಮದಲ್ಲಿವೆ.

ಎಲ್ಲಕ್ಕಿಂತ ಮುಖ್ಯವಾಗಿ ತಿಳಿಯಬಹುದಾದ ಸಂಗತಿಗಳೆಂದರೆ ಗುಡಿಯ ಮುಂಭಾಗದಲ್ಲಿರುವ ಕೆಲವು ಬಿಡಿಶಿಲ್ಪಗಳು. ಅವುಗಳನ್ನು ಶಿಲೆಯ ಫಲಕಗಳಲ್ಲಿ ರಚಿಸಲಾಗಿದೆ. ಅಲ್ಲದೇ ಅಶ್ವಾರೂಢನಾದ ಒಂದು ಪ್ರತ್ಯೇಕ ಶಿಲ್ಪವು ಸಹ ಇಲ್ಲುಂಟು. ಇನ್ನುಳಿದ ಉಳಿದ ಮೂರು ಫಲಕಗಳು ಬಲಿದಾನ ಅಥವಾ ಆತ್ಮಾರ್ಪಣೆಗೆ ಸಂಬಂಧಿಸಿದವುಗಳಾಗಿವೆ. ಇವು ಬಹಳ ಮುಖ್ಯವಾದ ವಿಷಯವನ್ನು ತಿಳಿಸಿಕೊಡುತ್ತವೆ. ಒಬ್ಬ ವ್ಯಕ್ತಿ ತನ್ನ ರುಂಡವನ್ನು ಕತ್ತರಿಸಿಕೊಂಡು ತನ್ನನ್ನೆ ಆತ್ಮಾರ್ಪಣೆ ಮಾಡಿಕೊಂಡಿದ್ದಾನೆ. ಅದರ ಪಕ್ಕದಲ್ಲಿಯೇ ದಂಡವನ್ನು ಹಿಡಿದು ನಿಂತಿರುವ ಇನ್ನೊಂದು ಚಿಕ್ಕ ಶಿಲ್ಪ ಮೇಲ್ಭಾಗದಲ್ಲಿ ಧ್ಯಾನಕ್ತನಾಗಿ ಕುಳಿತ ವ್ಯಕ್ತಿಯ ಇಕ್ಕೆಲಗಳಲ್ಲಿ ಚಾಮರಧಾರಣಿಯರು ನಿಂತಿರುವುದನ್ನು ಚಿತ್ರಿಸಲಾಗಿದೆ. ಇಂಥದ್ದೇ ವಿವರಣೆಯುಳ್ಳ ಮೂರು ಬಿಡಿಶಿಲ್ಪಗಳು ಇದೇ ಸ್ಥಳದಲ್ಲಿ ಇವೆ. ಬಹುಶಃ ಅವು ಮೈಲಾರನಿಗಾಗಿ ಆತನ ಭಕ್ತನೊಬ್ಬ ಆತ್ಮಸಮರ್ಪಣೆ ಮಾಡಿಕೊಂಡಿರಬಹುದಾದ ಸಾಕ್ಷಿಯ ಕುರುಹುಗಳಾಗಿ ಉಳಿದುಕೊಂಡಿರಬಹುದು. ಮಧ್ಯಕಾಲೀನ ಸಂದರ್ಭದಲ್ಲಿ ಬಲಿದಾನದ ಇಂಥ ಅನೇಕ ಪ್ರಕರಣಗಳು ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗಿವೆ. ಅದರಲ್ಲೂ ವಿಶೇಷವಾಗಿ ಶಿವನಿಗೆ ಭಕ್ತಿ ಸೇವೆ ರೂಪದಲ್ಲಿ ಈ ರೀತಿಯ ಆಚರಣೆಗಳು ನಡೆಯುತ್ತಿದ್ದವು. ಬಹುಮುಖ್ಯ ಇಂಥ ಸಾಕ್ಷಿಯೊಂದು ಈ ಸ್ಥಳದಲ್ಲಿ ಕಂಡುಬರುತ್ತದೆ. ಮೈಲಾರನ ಭಕ್ತಿಗೆ ಮನಸೋತ ಭಕ್ತಸಮೂಹ ತಮ್ಮನ್ನು ಸಾಮೂಹಿಕವಾಗಿ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ಸಂಗತಿಗಳು ಸಾಹಿತ್ಯ ಮತ್ತು ಮೌಖಿಕ ಆಕರಗಳಲ್ಲಿ ದಾಖಲಾಗಿವೆ. ಅಂಥ ವಿವರಗಳನ್ನು ಇಲ್ಲಿರುವ ಶಿಲ್ಪಗಳಲ್ಲಿ ಕಾಣುತ್ತೇವೆ ಎಂಬುದು ಬಹುಮುಖ್ಯ. ಆದರೆ ಇಂಥ ಶಿಲ್ಪಗಳು ಯಾದಗಿರಿ ಜಿಲ್ಲೆಯ ಬೇರಾವ ಸ್ಥಳಗಳಲ್ಲಿ ಕಂಡುಬರುವುದಿಲ್ಲ.

### ದೋರನಹಳ್ಳಿ ಮಲ್ಲಯ್ಯನ ಗುಡಿ

ಗ್ರಾಮದ ನಡುವೆ ಇರುವ ಮಲ್ಲಯ್ಯನ ಗುಡಿಯನ್ನು ಮೈಲಾರನ ದೇವಾಲಯವೆಂದು ಕರೆಯಲಾಗುತ್ತದೆ. ಇದು ಬಹಳ ವರ್ಷಗಳ ಹಿಂದೆಯೇ ಸಂಪೂರ್ಣವಾಗಿ ನವೀಕರಣ ಪ್ರಕ್ರಿಯೆಗೆ ಒಳಗಾಗಿರುವುದು. ಗರ್ಭಗೃಹ ಹಾಗೂ ಆಯಾತಕಾರ ನವರಂಗವನ್ನು ಹೊಂದಿದೆ. ನವರಂಗದಲ್ಲಿ ಪ್ರಾಚೀನ ಕಂಬಗಳಿವೆ. ಅವುಗಳಲ್ಲಿ ಪಾದ, ದಂಡಾಗ್ರ ಹಾಗೂ ಸಿಲಿಂಡರಿನಾಕಾರದ ಭಾಗ, ಕಂಠ, ಘಟ, ತಟ್ಟೆ ಆಕಾರದ ಫಲಕಗಳನ್ನೊಳಗೊಂಡಿದೆ. ದಂಡಾಗ್ರ ಭಾಗವು ಹದಿನಾರು ಪಟ್ಟಿಕೆಗಳಿಂದ ಕೂಡಿದ್ದು ಅದು ವೃತ್ತಕಾರದ್ದಾಗಿದೆ. ಅಲ್ಲದೇ ಈ ಎಲ್ಲ ಪಟ್ಟಿಕೆಗಳನ್ನು ಒಳಗೊಂಡು ಅದರ ಮೇಲೆ ಅಡ್ಡಲಾಗಿ ಬಿಗಿದು ಕಟ್ಟಿದಂತೆ ಇನ್ನೊಂದು ವೃತ್ತಪಟ್ಟಿಕೆಯ ರಚನೆ ಇರುವುದು. ದೇವಾಲಯವನ್ನು ನವೀಕರಣ ಪ್ರಕ್ರಿಯೆಗೆ ಒಳಪಡಿಸಿದ್ದರೂ ಅದರ ಪ್ರಾಚೀನ ಗೋಡೆಯ ಭಾಗಗಳು ಕಾಣುತ್ತವೆ.

ದೇವಾಲಯದ ಮುಂಭಾಗದಲ್ಲಿರುವ ರಾಷ್ಟ್ರಕೂಟ ಕಾಲದ ಶಾಸನ ಸುಮಾರು ೯-೧೦ನೇ ಶತಮಾನಕ್ಕೆ ಸೇರಿದ್ದಾಗಿದೆ ಎಂದು ಅಭಿಪ್ರಾಯಿಸಲಾಗಿದೆ. ಗಡಿಕಲ್ಲಿನಂತೆ ಕಾಣುವ ಈ ಶಿಲೆಯ ಮೇಲೆ ಅಸ್ಪಷ್ಟವಾಗಿರುವ ಅಕ್ಷರಗಳು ದಾಖಲಾಗಿವೆ. ಆದರೆ ಓದಿ ಅರ್ಥೈಸುವುದು ಕಷ್ಟದ ಕಾರ್ಯವೇ ಆಗಿದೆ. ಆದರೂ ಕಲ್ಲಿನಲ್ಲಿರುವ ಅಕ್ಷರಗಳ ವಿನ್ಯಾಸದ ಮೇಲೆ ಅದನ್ನು ರಾಷ್ಟ್ರಕೂಟ ಕಾಲಕ್ಕೆ ಸೇರಿಸಲಾಗಿದೆ[೧]. ಇಂಥ ಅಭಿಪ್ರಾಯ ವ್ಯಕ್ತಪಡಿಸಿರುವ ಈ ವಿವರವು ಸರಿಯಾದುದೇ ಆಗಿದೆ. ಮಲ್ಲಯ್ಯನ ಗುಡಿಯಲ್ಲಿರುವ ಕಂಬಗಳನ್ನು ಗಮನಿಸಿದರೆ ಈ ಗ್ರಾಮದಲ್ಲಿರುವ ಉಳಿದೆಲ್ಲ ದೇವಾಲಯಗಳಿಗಿಂತ ಇದು ಮೊದಲೇ ನಿರ್ಮಾಣವಾಗಿದೆ ಎಂಬುದನ್ನು ಖಚಿತಪಡಿಸಬಹುದು. ಮಲ್ಲಯ್ಯ ಅಥವಾ ಮೈಲಾರ ಅಥವಾ ಸೋಮೇಶ್ವರ ಎಂಬ ಹೆಸರಿನ ಗುಡಿಗಳು ಯಾದಗಿರಿ ಜಿಲ್ಲಾ ಪರಿಸರದಲ್ಲಿ ಹೆಚ್ಚಿನ ಸಂಖ್ಯೆಯ ಗ್ರಾಮಗಳಲ್ಲಿ ಈಗಲೂ ಕಂಡುಬರುತ್ತವೆ.

**ತಿಂಥಣಿ ಸೋಮೇಶ್ವರ**

ಗ್ರಾಮದ ಪಶ್ಚಿಮ ಭಾಗದಲ್ಲಿರುವ ಈ ಚಿಕ್ಕದೇವಾಲಯವು ಕೇವಲ ಒಂದು ಗರ್ಭಗೃಹವನ್ನು ಮಾತ್ರ ಹೊಂದಿರುವುದು. ಗ್ರಾಮದಿಂದ ಮೋನಪ್ಪನ ಗುಡಿಗೆ ಹೋಗುವ ಮಾರ್ಗದಲ್ಲಿರುವ ಹೊಲದಲ್ಲಿ ಈ ಗುಡಿಯು ಕಾಣುತ್ತದೆ. ವಾಸ್ತು ಅಧ್ಯಯನ ದೃಷ್ಟಿಯಿಂದ ಇದೊಂದು ಮಹತ್ವದ ಸ್ಮಾರಕವಲ್ಲವೆಂದೆನಿಸಿದರೂ ಬಹುಶಃ ಇಲ್ಲೊಂದು ದೇವಾಲಯ ಇದ್ದಿರಬಹುದಾದ ಕುರುಹುಗಳಂತೂ ಈಗಲೂ ಕಂಡುಬರುತ್ತವೆಂಬುದು ಮುಖ್ಯವಾದ ಸಂಗತಿ. ಅದಕ್ಕಿದ್ದ ಅಧಿಷ್ಠಾನಕ್ಕೆ ಸಂಬಂಧಿಸಿದ ಪ್ರಾಚ್ಯಾವಶೇಷಗಳಂತೂ ಅಲ್ಲಲ್ಲಿ ಬಿದ್ದಿರುವುದನ್ನು ಈಗಲೂ ಕಾಣಬಹುದು. ಆದರೆ ಪೂರ್ಣವಾದ ದೇವಾಲಯ ಮತ್ತು ಅಧಿಷ್ಠಾನ ಮಾತ್ರ ಕಂಡುಬರುವುದಿಲ್ಲ.

ಈ ಗುಡಿಯ ಪ್ರವೇಶದಲ್ಲಿ(ಶ್ರೀ ಈಶ್ವರಪ್ಪ ಬೇವಿನಹಾಳ ಅವರ ಹೊಲ) ತ್ರೈಪುರುಷ ಪೀಠವೊಂದು ಕಂಡು ಬಂದಿರುವ ಮಾಹಿತಿ ದಾಖಲಾಗಿದೆ. ಹಾಗೂ ಅದರ ಪೀಠದಲ್ಲಿ ಯಾದವ ಸಿಂಗಣದೇವನ ಕಾಲದ ತ್ರುಟಿತ ಶಾಸನವೊಂದಿರುವುದನ್ನು ಗುರುತಿಸಲಾಗಿದೆ[೨]. ಆದರೆ ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಅಂಥ ಯಾವ ಕುರುಹುಗಳು ಕಂಡು ಬಂದಿರುವುದಿಲ್ಲ. ಬಹುಶಃ ಸದ್ಯ ಮಸಕಾಗಿ ಕಾಣುವ ಅಧಿಷ್ಠಾನವಿದ್ದ ಜಾಗದಲ್ಲಿಯೇ ಈ ಹಿಂದಣ ತ್ರೈಪುರುಷ ದೇವಾಲಯ ಇದ್ದಿರಬಹುದಾದ ಸಾಧ್ಯತೆಗಳುಂಟು ಎಂದು ಅಭಿಪ್ರಾಯಿಸಬಹುದು.

ಉತ್ತರಾಭಿಮುಖವಾಗಿರುವ ಸೋಮೇಶ್ವರ ಗುಡಿಯು ಚಿಕ್ಕದಾಗಿದ್ದು ಅಲ್ಲಿರುವ ಶಿಲ್ಪವು ಅಧ್ಯಯನ ದೃಷ್ಟಿಯಿಂದ ಮಹತ್ವದ್ದು ಎಂದೆನಿಸುತ್ತದೆ. ಇದನ್ನು ಸ್ಥಳೀಯರು ಸೋಮನಾಥನೆಂದು ಪೂಜಿಸುತ್ತಾರೆ. ಈ ಶಿಲ್ಪವನ್ನು ಗಮನಿಸಿದಾಗ ನಮಗೆ ಬೇರೆಯದೇ ಆದ ವಿವರಗಳು ತೋರುತ್ತವೆ. ಈ ಶಿಲ್ಪವು ಬಹುಶಃ ಮೈಲಾರನಿಗೆ ಸಂಬಂಧಿಸಿದ್ದಾಗಿದೆ. ಕುದುರೆ ಸವಾರನಾದ ಈ ಶಿಲ್ಪವು ಅತ್ಯಂತ ರಾಜಠೀವಿಯಿಂದ ತೋರುವುದನ್ನು ಕಾಣಬಹುದು. ಕೆಳಭಾಗದಲ್ಲಿ ನಾಯಿ(ಶ್ವಾನ)ಯ ಚಿತ್ರವು ಸ್ಪಷ್ಟವಾಗಿ ಕಂಡುಬರುತ್ತದೆ. ಅಕ್ಕ ಪಕ್ಕದಲ್ಲಿ ಚಾಮರಣಿಧಾರಣಿಯರ

ಶಿಲ್ಪಗಳಿವೆ. ಛತ್ರಿ ಮತ್ತು ಚಾಮರ ಹಿಡಿದ ಇನ್ನೆರಡು ಚಿಕ್ಕ ಚಿಕ್ಕ ಉಬ್ಬುಶಿಲ್ಪಗಳಿವೆ. ಕಾಲಮಾನ ದೃಷ್ಟಿಯಿಂದ ಗಮನಿಸಿದಾಗ ಇದನ್ನು ೧೨ನೇ ಶತಮಾನಕ್ಕೆ ಸೇರಿಸಬಹುದಾಗಿದೆ. ಇದೇ ಗುಡಿಯ ಮುಂಭಾಗದಲ್ಲಿ ಚಾಮುಂಡಿ ಶಿಲ್ಪವಿದ್ದು ಅದು ಕೈಯಲ್ಲಿ ಖಡ್ಗ, ಡಮರು, ತ್ರಿಶೂಲಗಳನ್ನು ಹೊಂದಿದ್ದು ಆಸೀನ ಭಂಗಿಯಲ್ಲಿ ಇದೆ. ಇವಳು ಶಿವನ ಹೆಂಡತಿ ಹಾಗಾಗಿ ಇದು ಮೈಲಾರನ ಅಥವಾ ಶಿವನ ಪರಿವಾರಕ್ಕೆ ಸಂಬಂಧಿಸಿದ ಶಿಲ್ಪವಾಗಿರಬಹುದೆಂದು ತಿಳಿಯಬಹುದು.

ಈ ಶಿಲ್ಪವನ್ನು ಗಮನಿಸಿದಾಗ ತಿಳಿಯಬಹುದಾದ ಮುಖ್ಯ ಸಂಗತಿ ಏನೆಂದರೆ, ಇದು ಮೈಲಾರನಿಗೆ ಸಂಬಂಧಿಸಿದ ಶಿಲ್ಪವಾಗಿದೆ ಎಂಬುದು. ಈ ಪ್ರದೇಶದಲ್ಲಿ ಸಂಬಂಧಿಸಿದ ಈ ಪರಂಪರೆಯು ಹೆಚ್ಚು ವಿಸ್ತಾರಗೊಂಡಿತ್ತು ಎಂಬುದನ್ನು ಗಮನಿಸಬಹುದು. ಆದರೆ ಆ ಕುರಿತು ಹೆಚ್ಚಿನ ವಿವರ ನೀಡುವ ಶಾಸನ ಉಲ್ಲೇಖಗಳು ಮಾತ್ರ ಕಂಡುಬರುವುದಿಲ್ಲ.

**ಹುಣಸಗಿ ಮಲ್ಲಯ್ಯ**

ಮಲ್ಲಯ್ಯ ಅಥವಾ ಮಲ್ಲಿಕಾರ್ಜುನ ದೇವಾಲಯವೆಂದು ಕರೆಯಲ್ಪಡುವ ಈ ದೇವಾಲಯವು ಸಹ ಪ್ರಾಚೀನ ಕಾಲದ ನಿರ್ಮಿತಿ. ಆದರೆ ಅದು ಹಲವಾರು ಸುಧಾರಣೆಗಳಿಗೆ ಒಳಗಾಗಿ ಮೂಲ ರೂಪವನ್ನು ಕಳೆದುಕೊಂಡಿರಬಹುದೆಂದು ಅಭಿಪ್ರಾಯಿಸಬಹುದು. ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾಗಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಸದ್ಯ ಗರ್ಭಗೃಹ ಹಾಗೂ ಮಂಟಪ ಅಥವಾ ನವರಂಗದ ಭಾಗಗಳು ಮಾತ್ರ ಉಳಿದುಕೊಂಡಿವೆ. ಉಳಿದಂತೆ ಶಿಖರ, ಗೋಡೆಯ ಭಾಗಗಳು ಹಾಗೂ ಛತ್ತನ್ನು ಇತ್ತೀಚೆಗೆ ನವೀಕರಿಸಲಾಗಿದೆ.

ಗರ್ಭಗೃಹದ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ಕೂಡಿದ್ದು ಅದರಲ್ಲಿ ಅರ್ಧಕಂಬ, ಪುಷ್ಪಪಟ್ಟಿಕೆ, ಬಳ್ಳಿಯ ರಚನೆ ಹಾಗೂ ವೃತ್ತಾಕಾರದ ರಚನೆಯುಳ್ಳ ಅರ್ಧಕಂಬಗಳು, ಸಿಂಹಯಾಳಿ ಪಟ್ಟಿಕೆಯು ಬಾಗಿಲವಾಡದ ಎರಡು ಪಟ್ಟಿಕೆಯಲ್ಲಿ ರಚನೆಗೊಂಡಿರುವುದನ್ನು ಗಮನಿಸಬಹುದು. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಬಾಗಿಲವಾಡದಲ್ಲಿ ಎರಡು ಕಡೆಗೂ ದ್ವಾರಪಾಲಕ ಉಬ್ಬುಶಿಲ್ಪಗಳಿರುವುದನ್ನು ಕಾಣುತ್ತೇವೆ.

ಮಂಟಪದಲ್ಲಿರುವ ಕಂಬಗಳು ಕಲ್ಯಾಣದ ಚಾಲುಕ್ಯ ಕಾಲದವು. ಅವು ಬುಡಭಾಗದಲ್ಲಿ ಚೌಕಾಕಾರ ಮಧ್ಯಭಾಗದಲ್ಲಿ ವೃತ್ತಾಕಾರದ ಪಟ್ಟಿಕೆ ಮತ್ತೆ ಆ ಭಾಗದ ಮೇಲ್ಭಾಗದಲ್ಲಿ ವೃತ್ತಾಕಾರದ ಪಟ್ಟಿಕೆಗಳನ್ನು ಕಂಡರಿಸಲಾಗಿದೆ. ಚೌಕಾಕಾರದ ಬೋಧಿಗೆಗಳು ಕಂಬಗಳಲ್ಲಿವೆ. ಗೋಡೆಯ ಭಾಗದಲ್ಲಿ ಕಾಣುವ ಅರ್ಧಕಂಬಗಳು ಸಹ ಈ ಹಿಂದೆ ವಿವರಿಸಿದ ಲಕ್ಷಣಗಳನ್ನೇ ಹೊಂದಿವೆ.

ಇಲ್ಲಿರುವ ಮಂಟಪದಲ್ಲಿ ಸಪ್ತಮಾತೃಕೆ ಶಿಲ್ಪವನ್ನು ಅದರ ಗೋಡೆಯ ಭಾಗದಲ್ಲಿ ಅಳವಡಿಸಲಾಗಿರುವುದನ್ನು ಕಾಣುತ್ತೇವೆ. ಶಿಖರ ಹಾಗೂ ಗೋಡೆಯನ್ನು ಇತ್ತೀಚೆಗೆ ನವೀಕರಿಸಿ ಕಟ್ಟಲಾಗಿದೆ. ಅಲ್ಲದೇ ಈ ಮಂಟಪದಲ್ಲಿ ವೀರಗಲ್ಲು ಶಾಸನ ಶಿಲ್ಪವನ್ನು ಗೋಡೆಯ ಭಾಗದಲ್ಲಿ ಅಳವಡಿಸಲಾಗಿದೆ. ಆದರೆ ಅದು ಅಸ್ಪಷ್ಟವಾಗಿರುವುದರಿಂದ ಹೆಚ್ಚಿನ ವಿಷಯ ತಿಳಿದು ಬಂದಿಲ್ಲ.

## ವೀರಭದ್ರನ ಸಂಪ್ರದಾಯ

ವೀರಭದ್ರನ ಸಂಪ್ರದಾಯವು ಕರ್ನಾಟಕದಲ್ಲಿ ಕ್ರಿಸ್ತಶಕ ಪೂರ್ವದಲ್ಲಿಯೇ ಪ್ರವೇಶಿಸಿದ ಎಂಬ ಅಭಿಪ್ರಾಯಗಳಿವೆ.[೩] ಪ್ರಸ್ತುತ ಯಾದಗಿರಿ ಜಿಲ್ಲಾ ಪರಿಸರದಲ್ಲಿ ವೀರಭದ್ರನಿಗೆ ಸಂಬಂಧಿಸಿದ ಕೆಲವು ನೆಲಗಳು ಕಂಡುಬಂದಿವೆ. ಆ ಕುರಿತು ಸಂಬಂಧಿಸಿದ ವಿವರಗಳಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

## ಕಾಳಬೆಳಗುಂದಿ– ಬನದೇಶ್ವರ

ವಿಶಾಲ ಪ್ರಾಂಗಣವನ್ನು ಹೊಂದಿರುವ ಈ ದೇವಾಲಯವು ಗ್ರಾಮದಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿದೆ. ಗರ್ಭಗೃಹ, ನವರಂಗ ಹಾಗೂ ಸುತ್ತಲೂ ಸಾಲಾದ ಮಂಟಪಗಳನ್ನು ನಿರ್ಮಿಸಲಾಗಿದೆ. ಇವೆಲ್ಲ ರಚನೆಗಳು ೧೭ನೇ ಶತಮಾನದ ನಂತರಾವಧಿಯಲ್ಲಿ ಕಟ್ಟಲ್ಪಟ್ಟಿರುವಂಥವು. ಚೌಕಾಕಾರದ ಕಂಬಗಳು ನವರಂಗದಲ್ಲಿವೆ. ಶಿಖರ, ಮಹಾದ್ವಾರ ಹಾಗೂ ಗುಡಿಯನ್ನು ಕಟ್ಟಿರುವ ಕಾಲಮಾನ ಕುರಿತಾಗಿರುವ ಫಲಕಗಳನ್ನು ದೇವಾಲಯದ ಪ್ರವೇಶ ಗೋಡೆಯಲ್ಲಿಯೇ ಅಳವಡಿಸಲಾಗಿದೆ.

ದೇವಾಲಯದ ಸ್ಥಾಪನೆ ಉದ್ದೇಶ ದೇವರ ಬಗೆಗಿನ ಪುರಾಣ ಮತ್ತು ಐತಿಹ್ಯದ ಉಲ್ಲೇಖಗಳು ಅತ್ಯಂತ ರೋಚಕವಾಗಿ ಸೃಷ್ಟಿಯಾಗಿವೆ. ಅವು ಹಲವು ಕಥನಕಗಳನ್ನು ಕಟ್ಟಿಕೊಡುವಲ್ಲಿ ಸಫಲವಾಗಿರುವುವು. ಅಲ್ಲದೇ ಇಂಥ ಐತಿಹ್ಯಗಳಲ್ಲಿ ಚಾರಿತ್ರಿಕ ಅಂಶಗಳು ಮೇಳೈಸಿವೆ. ಹಾಗಾಗಿ ಅವು ಮಾತ್ರ ಇತಿಹಾಸಕಾರರಿಗೆ ದೊರಕಬಹುದಾದ ಮುಖ್ಯ ದಾಖಲೆಗಳಾಗುತ್ತವೆ. ಮುಖ್ಯವಾಗಿ ಈ ಪರಿಸರದಲ್ಲಿ ವೀರಭದ್ರನ ಸಂಪ್ರದಾಯ ೧೫–೧೬ನೇ ಶತಮಾನದ ನಂತರಾವಧಿಯಲ್ಲಿ ವಿಸ್ತರಿಸಿಕೊಂಡಿತು. ವೀರಶೈವ ಮತಪಂಥದಲ್ಲಿಯೇ ಕವಲೊಡೆದ ವೀರಭದ್ರ ಪರಂಪರೆ ಹಾಗೂ ಆಚರಣೆಗಳು ಇನ್ನೊಂದು ಬಗೆಯ ತತ್ವಸಿದ್ಧಾಂತಗಳಿಗೆ ಎಡೆಮಾಕೊಟ್ಟವು. ಅದರಲ್ಲೂ ಈ ಪ್ರದೇಶದಲ್ಲಿ ಆಂಧ್ರಪ್ರದೇಶದ ಕಡಪಾ ಜಿಲ್ಲೆಯಲ್ಲಿರುವ ರಾಚೋಟಿ ಎಂಬ ಸ್ಥಳದಲ್ಲಿರುವ ವೀರಭದ್ರನ ಪರಂಪರೆಯ ಮೂಲಕ ಹುಟ್ಟಿಕೊಂಡ ಸಂಪ್ರದಾಯವು ಹೆಚ್ಚು ಜನಪ್ರಿಯಗೊಂಡಿತು. ಅಲ್ಲದೇ ಈ ಸಂಪ್ರದಾಯದ ಜೊತೆ ಜೊತೆಯಾಗಿಯೇ ಅದೇ ಕಾಲಕ್ಕೆ ಬಹುಶಃ ಆ ಭಾಗಗಳಿಂದ ಹಲವು ಜನವಸತಿಗಳು ಸಾಗರೋಪಾದಿಯಲ್ಲಿ ಯಾದಗಿರಿ ಜಿಲ್ಲಾ ಪರಿಸರದಲ್ಲಿಯು ಹರಡಿಕೊಂಡಿರಬಹುದು. ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬಹುದಾದ ವಿಷಯ ಏನೆಂದರೆ ಬೇರೆ ಬೇರೆ ಸ್ಥಳಗಳಿಂದ ಬರುವ ವಲಸಿಗರು ತಮ್ಮ ಜೊತೆಗೆ ತಮ್ಮ ತಮ್ಮ ಆಚಾರ–ವಿಚಾರಗಳ ಸಂಸ್ಕೃತಿಯನ್ನು ಹಾಗೂ ತಮ್ಮ ಕುಲದೈವಗಳನ್ನು ಅವುಗಳಿಗೆ ಸಂಬಂಧಿಸಿದ ಕಥೆ, ಪುರಾಣ ಹಾಗೂ ಐತಿಹ್ಯಗಳನ್ನು ಇನ್ನೊಂದು ರೂಪದಲ್ಲಿ ತಾವು ಇರುವ ಸ್ಥಳದಲ್ಲಿಯೇ ಸ್ಥಾಪಿಸಿಕೊಳ್ಳುತ್ತಾರೆ. ಇದು ಸಹಜ ಪ್ರಕ್ರಿಯೆ. ಅಂಥ ಸಂಗತಿಗಳೇ ಈ ಪರಿಸರಕ್ಕೆ ಸಂಬಂಧಿಸಿದ ಪರಂಪರೆಯಲ್ಲಿಯು ನಡೆದಿರಬಹುದಾದ ಸಾಧ್ಯತೆಗಳಿವೆ. ಅಲ್ಲದೇ ರಾಚೋಟಿ ವೀರಭದ್ರ ಪರಂಪರೆ ವಲಸೆಗಾರ ಕುಲಸಮುದಾಯಕ್ಕೆ ಸಂಬಂಧಪಟ್ಟಂತೆ ಮಾತ್ರ ಉಳಿದುಕೊಳ್ಳದೇ ಹಲವು ಜಾತಿ ಸಂಪ್ರದಾಯಗಳಿಗೆ ಸಂಬಂಧಿಸಿದ ಜನರ ಮೇಲೂ ಅದರ ಪ್ರಭಾವ ಆಗಿರುವುದು.

ಆ ಹಿನ್ನೆಲೆಯಲ್ಲಿಯೇ ವೀರಭದ್ರನನ್ನು ತಮ್ಮ ಕುಲದೇವರು ಅಥವಾ ಮನೆದೈವವೆಂದು ಸ್ವೀಕರಿಸಿರುವ ರೂಪಾಂತರಗಳು ಈ ಪ್ರದೇಶಗಳಲ್ಲಿ ಈ ಮೊದಲೇ ವಾಸಿಸುತ್ತಿದ್ದ ಜನರಲ್ಲಿಯೂ ಯಾವ ಅಡತಡೆ ಇಲ್ಲದೇ ವ್ಯಾಪಿಸಿಕೊಂಡಿರುವ ಸಾಧ್ಯತೆಗಳಿವೆ. ಹಾಗಾಗಿ ಇದರ ಪ್ರಭಾವ ಹೆಚ್ಚಿನ ಜನಸಮುದಾಯಗಳಲ್ಲಿ ಬಲಗೊಂಡಿರುವುದು. ಇಂಥ ಅಭಿಪ್ರಾಯಗಳಿಗೆ ಇಂಬು ಕೊಡಬಹುದಾದ ಮಾಹಿತಿಗಳನ್ನು ಈ ಪ್ರದೇಶದಲ್ಲಿ ಈಗಲೂ ಗಮನಿಸಬಹುದು.

ರಾಚೋಟಿ ವೀರಭದ್ರ ಪರಂಪರೆ ಅಥವಾ ಸಂಪ್ರದಾಯವು ಮೊದಮೊದಲಿಗೆ ಈ ಪ್ರದೇಶದ ಕಾಳೇಬೆಳಗುಂದಿ ಪರಿಸರದಿಂದಲೇ ಪ್ರವೇಶ ಪಡೆದಿರಬಹುದು. ಈ ಸ್ಥಳಕ್ಕೆ ಸಂಬಂಧಿಸಿದ ಪರಂಪರೆಯು ಹೆಚ್ಚಿನ ಜನಪ್ರಿಯತೆ ಪಡೆಯುವುದರ ಜೊತೆಗೆ ಅವರ ಆರಾಧ್ಯ ದೈವವಾದ ವೀರಭದ್ರನು ಸಹ ಬೇರೆ ಬೇರೆ ಹೆಸರುಗಳಿಂದ ಉಲ್ಲೇಖಿಸಲ್ಪಟ್ಟಿದ್ದಾನೆ. ಉದಾಹರಣೆಗೆ ಹುತ್ತಯ್ಯ, ಶರಭಯ್ಯ, ಬಂಡೆರಾಚಪಯ್ಯ, ವೀರಭದ್ರಯ್ಯ ಮತ್ತು ಬನದಯ್ಯ ಎಂಬ ಹೆಸರನ್ನು ಪಡೆದು ನಂತರಾವಧಿಯಲ್ಲಿ ಬನದೇಶ್ವರನಾಗಿ ಈ ಪರಿಸರದಲ್ಲಿ ನೆಲೆನಿಂತಿರುವನು. ಬನದೇಶ್ವರ ಅಥವಾ ವೀರಭದ್ರ ಪರಂಪರೆಯು ಈ ಪ್ರದೇಶದಲ್ಲಿ ಪ್ರವೇಶಿಸಿರುವ ಬಗೆಗೆ ಪುರಾಣ ಮತ್ತು ಐತಿಹ್ಯಗಳು ಮಾತ್ರ ಉಲ್ಲೇಖಿಸುತ್ತವೆ(ಶ್ರೀ ಬನದೇಶ್ವರ ಚರಿತ್ರೆ, ಪುಟ.೧-೨೫) ಹೊರತು ಗಟ್ಟಿಯಾದ ಚಾರಿತ್ರಿಕ ಅಂಶಗಳು ನಮೂದಾಗಿರುವ ದಾಖಲೆಗಳಿಲ್ಲ.

ಕಾಳೇಬೆಳಗುಂದಿಯಲ್ಲಿ ನೆಲೆನಿಂತ ರಾಚೋಟಿ ವೀರಭದ್ರ ಸಂಪ್ರದಾಯ ಮುಂದಿನ ದಿನಗಳಲ್ಲಿ ಯಾದಗಿರಿ ಪರಿಸರದಲ್ಲಿ ತೀವ್ರವಾಗಿ ವಿಸ್ತರಿಸಿಕೊಂಡಿದೆ. ಮುಖ್ಯವಾಗಿ ಯಾದಗಿರಿ ಪಟ್ಟಣ, ಅರಕೇರಾ(ಕೆ), ಗುರುಮಿಟ್ಕಲ್ ಮತ್ತು ಶಹಾಪುರ ತಾಲೂಕಿನ ವಿವಿಧ ಸ್ಥಳಗಳಲ್ಲಿ ರಾಚೋಟಿ ವೀರಭದ್ರನು ಸ್ಥಾಪನೆಯಾಗಿರುವ ಐತಿಹ್ಯಗಳು ಪ್ರಚಲಿತದಲ್ಲಿವೆ. ಇದೇ ರೀತಿಯ ಪರಂಪರೆಯು ಬೇರೆ ಬೇರೆ ಹೆಸರಿನಲ್ಲಿ ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ವಿಸ್ತರಿಸಿಕೊಂಡಿರುವ ಚಾರಿತ್ರಿಕ ಸಂಗತಿಗಳು ಈಗಾಗಲೇ ದಾಖಲಾಗಿರುವುದನ್ನು ಕಾಣಬಹುದು. ಅವುಗಳಲ್ಲಿ ಮುಖ್ಯವಾಗಿರುವ ಉದಾಹರಣೆಗಳೆಂದರೆ ಬೆಳಗಾವಿ ಜಿಲ್ಲೆಯಲ್ಲಿರುವ ಗೊಡಚಿ(ರಾಮದುರ್ಗ ತಾಲೂಕು) ಹಾಗೂ ಎಡೂರು(ಚಿಕ್ಕೋಡಿ ತಾಲೂಕು) ಈರಣ್ಣ ಸಂಪ್ರದಾಯಗಳು ಆ ಭಾಗದಲ್ಲಿ ಜನಜನಿತವಾಗಿವೆ. ಅದರಂತೆ ಕಾರಟಗಿ (ಸವಣೂರು ತಾಲೂಕು) ಶಿಂಗಟಾಲೂರು (ಹಡಗಲಿ ತಾಲೂಕು) ಹರಪನಹಳ್ಳಿ, ಹೊಸಪೇಟೆ ಹಾಗೂ ಹಂಪಿ ಸ್ಥಳಗಳಲ್ಲಿ ವೀರಭದ್ರ ಪರಂಪರೆಗೆ ಸಂಬಂಧಿಸಿದ ಪ್ರಮುಖ ಗುಡಿಗಳನ್ನು ಕಾಣಬಹುದು

ಯಾದಗಿರಿ ಪರಿಸರದಲ್ಲಿ ರಾಚೋಟಿ ವೀರಭದ್ರನ ಸಂಪ್ರದಾಯವು ಮುಂಚೂಣಿಗೆ ಬರಲು ಸ್ಪಷ್ಟವಾಗಿರುವ ಕಾರಣಗಳನ್ನು ವಿಶ್ಲೇಷಿಸಬೇಕಾಗಿರುವ ಜರೂರಿದೆ. ಪ್ರಸ್ತುತ ದೇವರಿಗೆ ಆತ್ಮಾರ್ಪಣೆ ಮಾಡಿಕೊಂಡು ತಮ್ಮ ಭಕ್ತಿಯ ಪರಾಕಾಷ್ಠೆಯನ್ನು ತೋರಿರುವ ಭಕ್ತರ ಬಗೆಗೆ ಕೆಲವು ಉಲ್ಲೇಖಗಳಿವೆ. ಜನಮಾನಸದಲ್ಲಿ ನೆಲೆಗೊಂಡ ಇಂಥ ಸಂಪ್ರದಾಯಗಳು ಕೇವಲ ಪುರಾಣ ಮತ್ತು ಐತಿಹ್ಯದ ಭಾಗಗಳಾಗಿ ಮಾತ್ರ ಉಳಿಯದೇ ಅದರ ಸಾಕ್ಷಿಗಳು ಶಾಸನ, ದೇವಾಲಯ ಮತ್ತು ಮೂರ್ತಿಶಿಲ್ಪಗಳಲ್ಲಿ ಒಡಮೂಡಿರುವುವು. ಆದರೆ ಅವುಗಳ ಲಭ್ಯತೆ ಕಡಿಮೆ ಪ್ರಮಾಣದ್ದು.

## ಯಾದಗಿರಿ ವೀರಭದ್ರ

ಬೆಟ್ಟದಲ್ಲಿರುವ ಈ ದೇವಾಲಯವನ್ನು ತಲುಪಬೇಕಾದರೆ ಮೆಟ್ಟಿಲುಗಳ ಸಹಾಯ ಪಡೆಯಬೇಕಾಗುತ್ತದೆ. ನೈಸರ್ಗಿಕವಾಗಿ ರಚನೆಯಾಗಿರುವ ಗವಿಯ ಕಲ್ಲಾಸರೆ(ಗುಹೆ)ಯನ್ನೇ ದೇವಾಲಯವನ್ನಾಗಿ ಪರಿವರ್ತಿಸಲಾಗಿದೆ. ಅದು ನಿರ್ದಿಷ್ಟ ರಚನೆಗಳನ್ನೇನು ಒಳಗೊಂಡಿಲ್ಲ. ಹೀಗಾಗಿ ಅದು ಅವ್ಯವಸ್ಥಿತವಾಗಿ ಕಂಡುಬರುತ್ತದೆ. ಗರ್ಭಗೃಹ ಒಂದು ಕಡೆಗೆ ಇದ್ದರೆ ಅದರ ನವರಂಗವು ಮತ್ತೊಂದು ಕಡೆಗೆ ರಚನೆಯಾಗಿರುವುದು. ಉದ್ಭವಗೊಂಡಿರುವ ಶಿಲೆಯನ್ನೇ ವೀರಭದ್ರನೆಂದು ತಿಳಿದು ಪೂಜಿಸಲಾಗುತ್ತದೆ. ಇತ್ತೀಚೆಗೆ ರಚನೆಯಾಗಿ ಸೇರ್ಪಡೆಗೊಂಡಿರುವ ಚಿಕ್ಕಚಿಕ್ಕ ಶಿಲ್ಪಗಳು ಈ ಗುಹಾಂತರದಲ್ಲಿವೆ. ಈ ಕ್ಷೇತ್ರವು ರಾಮಾಯಣ ಕಾಲದಲ್ಲಿ ನಿರ್ಮಾಣಗೊಂಡಿದ್ದು ಈ ಸ್ಥಳದಲ್ಲಿ ದೇವಾನುದೇವತೆಗಳು ಹೇಗೆಲ್ಲಾ ವಾಸವಾಗಿದ್ದರು ಎಂಬ ಪ್ರತೀತಗಳನ್ನು ಸ್ಥಳೀಯರು ಅಭಿಪ್ರಾಯಿಸುತ್ತಾರೆ. ಆದರೆ ಅದೊಂದು ಐತಿಹ್ಯ ಮಾತ್ರವೆಂದೆನಿಸುತ್ತದೆ. ಈ ದೈವವು ಬೇರೆ ಬೇರೆ ಜಿಲ್ಲೆಗಳಲ್ಲಿರುವ ವೀರಶೈವ ಹಾಗೂ ಇತರೆ ಜಾತಿ ಕುಲಗಳಿಗೂ ಕುಟುಂಬ ದೈವವಾಗಿ ನಿರ್ಮಾಣವಾಗೊಂಡು ಪ್ರಸಿದ್ಧಯಾಗಿದೆಯೆಂಬುದನ್ನು ಅಲ್ಲಿ ಸೇರುವ ಜನರಿಂದ ತಿಳಿದುಕೊಳ್ಳಬಹುದು. ಪ್ರತಿದಿನ ನೂರಾರು ಸಂಖ್ಯೆಯಲ್ಲಿ ಭಕ್ತರು ಈ ದೇವಾಲಯಕ್ಕೆ ಭೇಟಿ ನೀಡಿ ತಮ್ಮ ಹರಕೆ ತೀರಿಸುತ್ತಾರೆ. ವರ್ಷಕ್ಕೊಮ್ಮೆ ಬೃಹತ್ತಾದ ಜಾತ್ರೆಯು ನಡೆಯುತ್ತದೆ.

ವೀರಭದ್ರ ಸಂಪ್ರದಾಯ ಕುರಿತು ಒಂದೆರಡು ವಿಚಾರಗಳನ್ನು ಹೇಳುವುದು ಉಚಿತವೆಂದೆನಿಸುತ್ತದೆ. ವಿಜಯನಗರೋತ್ತರ ಕಾಲಾವಧಿಯಲ್ಲಿ ಯಾದಗಿರಿ ಪ್ರದೇಶದಲ್ಲಿ ವೀರಭದ್ರನ ಆರಾಧನೆಗೆ ಸಂಬಂಧಿಸಿದ ಕೆಲವು ಕೇಂದ್ರಗಳು ಸೃಷ್ಟಿಗೊಂಡಿರುವುದನ್ನು ಆದರೆ ಸ್ಥಳೀಯವಾಗಿ ಅವುಗಳ ಬಗೆಗೆ ಜನರು ಕಟ್ಟಿಕೊಂಡಿರುವ ಪುರಾಣಗಳ ಹಿನ್ನಲೆಯೇ ಬೇರೆಯಾದದು. ಅವರ ಪ್ರಕಾರ ಆ ಸಂಪ್ರದಾಯವು ಪ್ರಾರಂಭಗೊಂಡಿರುವ ಅದರ ಕಾಲಮಾನಕ್ಕೆ ಸಂಬಂಧಿಸಿದ ಇತಿಹಾಸ ಸಹಸ್ರಾರು ವರ್ಷಗಳ ಕಾಲ ಹಿಂದೋಡುತ್ತದೆ. ಆದರೆ ಅಲ್ಲಿರುವ ವಾಸ್ತು ರಚನಾ ಮಾದರಿಗಳನ್ನು ಗಮನಿಸಿದಾಗ ಅವೆಲ್ಲವುಗಳು ಹೆಚ್ಚು ಕಡಿಮೆ ೧೬ನೇ ಶತಮಾನದ ನಂತರವೇ ಹುಟ್ಟಿಕೊಂಡಿರುವಂಥವುಗಳು ಎಂಬುದನ್ನು ಗಮನಿಸಬಹುದು. ಆಂಧ್ರರಾಜ್ಯದ ಕಡಪಾ ಜಿಲ್ಲೆಯು ರಾಚೋಟಿ ಗ್ರಾಮವು ಈ ದೈವದ ಮೂಲಸ್ಥಾನ. ಆದರೆ ಈ ವೀರಭದ್ರನ ಸಂಪ್ರದಾಯ ಯಾದಗಿರಿ ತಾಲೂಕು ಪರಿಸರದಲ್ಲಿ ಹೆಚ್ಚಿನ ಮಹತ್ವ ಪಡೆದು ಬೆಳೆದು ಬಂದಿರುವುದಕ್ಕೆ ಹಲವಾರು ಕಥೆಗಳು ಸೃಷ್ಟಿಯಾಗಿವೆ. ಅವುಗಳ ಕುರಿತು ಪ್ರಸ್ತಾವನೆಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಉದಾಹರಣೆಗೆ ಕಾಳೇಬೆಳಗುಂದಿಯಲ್ಲಿರುವ ಬನದೇಶ್ವರ, ಗುರುಮಿಟ್ಕಲ್‌ನಲ್ಲಿರುವ ವೀರಭದ್ರ ಹಾಗೂ ಯಾದಗಿರಿ ಪಟ್ಟಣಕ್ಕೆ ಸ್ವಲ್ಪ ದೂರದಲ್ಲಿರುವ ರಾಚೋಟಿ ವೀರಭದ್ರನೆಂದು ಕರೆಯಲ್ಪಡುತ್ತಿರುವ ಈ ದೇವಾಲಯಗಳೆಲ್ಲವೂ ೧೬ನೇ ಶತಮಾನದ ನಂತರ ಪ್ರವರ್ಧಮಾನಕ್ಕೆ ಬಂದಿರುವುವು. ಇವೆಲ್ಲವು ರಾಚೋಟಿ ವೀರಭದ್ರನ ಪರಂಪರೆಗೆ ಸಂಬಂಧಿಸಿದವು. ಅವು ಬೇರೆ ಬೇರೆ ಹೆಸರಿನಿಂದ ಸಂಬೋಧಿಸಲ್ಪಡುತ್ತಿದ್ದರೂ ಅವುಗಳ ಮೂಲ ಹೆಸರು ರಾಚೋಟಿ ವೀರಭದ್ರನೆಂಬುದು ಮುಖ್ಯವಾದುದು. ಈ ಸಂಪ್ರದಾಯವು ಯಾದಗಿರಿ ಪ್ರದೇಶದಲ್ಲಿ ಹೆಚ್ಚಿನ ವ್ಯಾಪಕತೆ ಹಾಗೂ ಮಹತ್ವ ಪಡೆದಿರುವ ಕುರಿತು ಇನ್ನು

ಹೆಚ್ಚಿನ ಅಧ್ಯಯನಗಳ ಅವಶ್ಯಕತೆ ಮಾತ್ರ ಇದ್ದೇ ಇದೆ. ಅಲ್ಲದೇ ಇದೇ ಸಂಪ್ರದಾಯಕ್ಕೆ ಸಂಬಂಧಿಸಿದ ಹಲವು ಸ್ಮಾರಕಗಳು ಈ ಜಿಲ್ಲೆಯಲ್ಲಿ ನಿರ್ಮಾಣವಾಗಿರುವುದುಂಟು.

**ಚಂಡರಕಿ ವೀರಭದ್ರ**

ಪ್ರಾಚೀನವಾಗಿದ್ದ ಈ ದೇವಾಲಯ ಕಾಲಾನಂತರ ಜೀರ್ಣೋದ್ಧಾರಕ್ಕೆ ಒಳಗಾಗಿದೆ. ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾಗಿರುವ ಈ ಸ್ಮಾರಕವು ಗರ್ಭಗೃಹ ಮತ್ತು ತೆರದ ಅಂತರಾಳವನ್ನು ಹೊಂದಿರುವುದನ್ನು ಗಮನಿಸಬಹುದು. ಇದಕ್ಕೆ ಪ್ರದಕ್ಷಿಣಾ ಪಂಥವು ಇದೆ. ದೇವಾಲಯದ ಗರ್ಭಗೃಹದಲ್ಲಿರುವ ವೀರಭದ್ರ, ಲಿಂಗ ಮತ್ತು ನಂದಿಶಿಲ್ಪಗಳು ಮಾತ್ರ ಪ್ರಾಚೀನವಾದವುಗಳು ಎಂಬುದರಲ್ಲಿ ಅನುಮಾನಗಳಿಲ್ಲ. ಉಳಿದಂತೆ ಎಲ್ಲ ಭಾಗಗಳು ಇತ್ತೀಚಿನ ವರ್ಷಗಳಲ್ಲಿ ನವೀಕರಣಕ್ಕೆ ಒಳಗಾಗಿವೆ. ಈ ಪ್ರದೇಶದಲ್ಲಿ ಬಹುಶಃ ರಾಚೋಟಿ ವೀರಭದ್ರ ಸಂಪ್ರದಾಯದ ಹೆಚ್ಚಿನ ಪ್ರಭಾವವು ಆಗಿದ್ದರಿಂದ ಪ್ರತಿ ಗ್ರಾಮದಲ್ಲಿಯೂ ವೀರಭದ್ರನ ಗುಡಿಗಳು ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಅಂಥ ಪ್ರಕ್ರಿಯೆಗೆ ಚಂಡರಕಿ ಗ್ರಾಮವು ಒಳಗಾಗಿರಬಹುದು. ಇವುಗಳಲ್ಲದೇ ವಿಠಲ ಮತ್ತು ನೀಲಕಂಠನ ಗುಡಿಗಳಿವೆ. ಆದರೆ ಅವು ಪ್ರಾಚೀನ ನಿರ್ಮಿತಿಗಳಲ್ಲ. ಗ್ರಾಮಕ್ಕೆ ಸಂಬಂಧಿಸಿದ ಶಾಸನಾಧಾರಗಳು ಸಹ ಕಂಡುಬದಿಲ್ಲ.

**ತಿಂಥಣಿ ವೀರಭದ್ರ**

ಗ್ರಾಮದಲ್ಲಿಯೇ ಇರುವ ಈ ದೇವಾಲಯವನ್ನು ಸ್ಥಳೀಯವಾಗಿ ಶಿವದೇವಾಲಯವೆಂತಲೂ ಕರೆಯಲಾಗುತ್ತದೆ. ಮೂಲತಹ ಇದೊಂದು ದ್ವಿಕೂಟವಾಗಿರುವ ಸಾಧ್ಯತೆಗಳು ಗೋಚರಿಸುತ್ತವೆ. ಸದ್ಯ ಸಮಾನಾಂತರವಾಗಿರುವ ಎರಡು ಗರ್ಭಗೃಹಗಳು ಹಾಗೂ ಅವುಗಳಿಗೆ ಹೊಂದಿಕೊಂಡಂತಿರುವ ಅಂತರಾಳಗಳನ್ನು ಕಾಣುತ್ತೇವೆ. ಅಲ್ಲದೇ ಸಂಪೂರ್ಣವಾಗಿ ಬಿದ್ದಿದ್ದು ನವರಂಗವನ್ನು ಮತ್ತು ಅದರ ಛತ್ತಿನ ಭಾಗವನ್ನು ಮಾತ್ರ ಇತ್ತೀಚೆಗೆ ನಿರ್ಮಿಸಲಾಗಿದೆ.

ಎರಡೂ ಗರ್ಭಗೃಹಗಳು ಪೂರ್ವಾಭಿಮುಖವಾಗಿವೆ. ಒಂದರಲ್ಲಿ ಲಿಂಗವಿದ್ದರೆ ಇನ್ನೊಂದರಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ವೀರಭದ್ರನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿರುವ ಗರ್ಭಗೃಹಗಳ ಬಾಗಿಲವಾಡಗಳು ಸರಳ ರಚನೆಯಿಂದ ಕೂಡಿರುವುವು. ಅವುಗಳಲ್ಲಿ ತ್ರಿಪಟ್ಟಿಕೆಯ ಅಲಂಕರಣೆಗಳನ್ನು ಮಾಡಲಾಗಿದೆ. ಬಾಗಿಲವಾಡಕ್ಕಿರುವ ಕೆಳ ಹೊಸ್ತಿಲವು ತರಂಗ ಮಾದರಿಯದ್ದು.

ಅಂತರಾಳದ ಬಾಗಿಲವಾಡಗಳು ಸಹ ತ್ರಿಪಟ್ಟಿಕೆಗಳಿಂದ ಕೂಡಿವೆ. ಪೇದ್ಯ ಭಾಗಗಳಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅಂತರಾಳಗಳ ಬಾಗಿಲವಾಡದ ಇಕ್ಕೆಲುಗಳಲ್ಲಿ ಕೋಷವಿಕಗಳಿದ್ದು ಅವು ಬರಿದಾಗಿವೆ. ಅವುಗಳನ್ನು ವೇಸರ ಮಾದರಿಯ ಶಿಖರ ಪಟ್ಟಿಕೆಗಳಿಂದ ಅಲಂಕರಣೆಗೊಳಿಸಿ ನಿರ್ಮಿಸಲಾಗಿದೆ. ಈ ದೇವಾಲಯದ ನವರಂಗವು ಸಂಪೂರ್ಣವಾಗಿ ಬಿದ್ದಿದೆ. ಅಧಿಷ್ಠಾನವು ಉಪಾನ, ಜಗತಿ, ಗಳ ಮತ್ತು ಕಪೋತ ಭಾಗಗಳನ್ನು ಹೊಂದಿರುವುದು. ಶಿಖರ ಭಾಗವು ಇಲ್ಲ.

ದೇವಾಲಯದ ಮುಂಭಾಗದಲ್ಲಿ ಪ್ರಾಚೀನ ಶಿಲ್ಪಾವಶೇಷಗಳು ಬಿದ್ದಿವೆ. ಇದೇ ದೇವಾಲಯದ ಮುಂಭಾಗದಲ್ಲಿ ಬಸವಣ್ಣನ ದೇವಾಲಯವು ಇದ್ದು ಅದು ಸಹ ಸಂಪೂರ್ಣ ಹಾಳಾಗಿದೆ.

ಇಲ್ಲಿರುವ ಅಳಿದುಳಿದ ಅವಶೇಷಗಳನ್ನು ಗಮನಿಸಿದಾಗ ಬಹುಶಃ ಇದು ಸಹ ಹನ್ನೆರಡನೆಯ ಶತಮಾನಕ್ಕೆ ಸಂಬಂಧಿಸಿದವುಗಳಾಗಿವೆಯೆಂದು ಅಭಿಪ್ರಾಯಿಸಬಹುದು.

**ತಿಂಥಣಿ ಮೋನಪ್ಪಯ್ಯ ಪರಂಪರೆ**

ಹದಿನೆಂಟನೆಯ ಶತಮಾನದಲ್ಲಿ ಬಾಳಿ ಬದುಕಿದ್ದ ಮೋನಪ್ಪಯ್ಯ ಎಂಬ ಸಂತನಿಗಾಗಿ ಕಟ್ಟಿದ ದೇವಾಲಯ ಇಲ್ಲಿದೆ. ಜನರೂಢಿಯಾಗಿ ಈತನನ್ನು ತಿಂಥಣಿ ಮೋನಪ್ಪಯ್ಯನೆಂದೇ ಕರೆಯುವಷ್ಟು ಜನಪ್ರಿಯನಾಗಿದ್ದಾನೆ. ಮೂಲತಹ ಅವರು ಸುರಪುರ ತಾಲೂಕಿನ ಗೋನಾಳ ಗ್ರಾಮದಲ್ಲಿ ಹುಟ್ಟಿ ಬೆಳೆದರೂ ಮುಂದಿನ ದಿನಗಳಲ್ಲಿ ಅವರು ತಮ್ಮ ಭಕ್ತಿ ಸಾಹಸಗಳನ್ನು ಉತ್ತರ ಕರ್ನಾಟಕದ ತುಂಬೆಲ್ಲಾ ಮೂಡಿಸಿದ್ದನ್ನು ಲಭ್ಯವಿರುವ ಹತ್ತಾರು ಆಕರಗಳಿಂದ ತಿಳಿಯಬಹುದಾಗಿದೆ. ದೇಶ ಪರ್ಯಟನೆ ಮಾಡಿ ತಮ್ಮ ಮುಪ್ಪಿನ ಕಾಲದಲ್ಲಿ ಇದೇ ತಾಲೂಕಿನ ತಿಂಥಣಿ ಈ ಸ್ಥಳದಲ್ಲಿ ಐಕ್ಯರಾದರು ಎಂಬ ಪ್ರತೀತಗಳಿವೆ. ಇಂಥ ಕಾಲಜ್ಞಾನಿ ಪುರುಷನಿಗಾಗಿ ಹಲವು ಸ್ಮಾರಕಗಳನ್ನು ನಿರ್ಮಾಣ ಮಾಡಿರುವ ಉದಾಹರಣೆಗಳು ಈ ಪರಿಸರದಲ್ಲಿವೆ. ಅಂಥದ್ದೇ ಸ್ಮಾರಕವನ್ನು ೧೮ನೇ ಶತಮಾನದಲ್ಲಿ ಇವರಿಗಾಗಿಯೇ ಇದೇ ಸ್ಥಳದಲ್ಲಿ ನಿರ್ಮಾಣ ಮಾಡಲಾಗಿದೆ.

ತಮ್ಮ ಪೂರ್ವಾಶ್ರಮದಲ್ಲಿ ಅವರು ವಿಶ್ವಕರ್ಮ ಸಮುದಾಯಕ್ಕೆ ಸೇರಿದ್ದವರಾಗಿದ್ದರು. ಆದರೂ ಅವರಿಗೆ ಜಾತಿ ಮತ ಭೇದಗಳಿಲ್ಲದೇ ಜನರು ತಮ್ಮ ಹರಕೆ ತೀರಿಸುತ್ತಾರೆ. ಆದರೆ ಈ ಸಂತರು ಇದೇ ಜಾಗದಲ್ಲಿ ಯಾಕೆ? ಐಕ್ಯರಾದರು ಎಂಬುದು ಚರ್ಚಾರ್ಹ ಸಂಗತಿ. ಬಹುಶಃ ಇದು ಗ್ರಾಮದಿಂದ ದೂರದಲ್ಲಿದ್ದ ಸ್ಥಳವಾಗಿತ್ತು. ಅಥವಾ ಈ ಕೃಷ್ಣಾ ತಟವು ಅವರಿಗೆ ಬಹುಯೋಗ್ಯವಾದ ಭೂಮಿಯಾಗಿ ಕಂಡಿರಬಹುದು. ಅಲ್ಲದೇ ತಮ್ಮ ಜೀವಿತಾವಧಿಯ ಉದ್ದಕ್ಕೂ ಸುರಪುರ ಬೇಡ ಪಾಳೆಯಗಾರರ ಆಡಳಿತ ವ್ಯಾಪ್ತಿಯಲ್ಲಿ ಹೆಚ್ಚಿನ ಸಮಯ ಸವೆಸಿದರು. ಹಾಗಾಗಿ ಅವರನ್ನು ಮೆಚ್ಚುವ ಹಲವಾರು ಮಾತುಗಳು ಅವರ ವಚನದಲ್ಲಿ ದಾಖಲಾಗಿವೆ. ಹಿಂದೂ-ಮುಸ್ಲಿಂ ತತ್ವಗಳ ಭಾವೈಕ್ಯದ ನೆಲೆಯಾಗಿ ಈ ಪರಿಸರ ಆ ಕಾಲಕ್ಕಾಗಲಿ ರೂಪುಗೊಂಡಿತ್ತು. ಸಗರನಾಡಿನಲ್ಲಿ ಹುಟ್ಟಿ ಅಲ್ಲಿರುವ ಪರಂಪರೆಯನ್ನು ತೀಕ್ಷ್ಣವಾಗಿ ಗಮನಿಸಿದ್ದ ಮೋನಪ್ಪಯ್ಯ ಬಹುಶಃ ತಮ್ಮ ಜೀವಾವಧಿಯ ಕೊನೆಯ ದಿನಗಳನ್ನು ಸಹ ಸಗರ ನಾಡಿನ ಅಂಚಿನ ಭಾಗವಾಗಿದ್ದ ತಿಂಥಣಿಯಲ್ಲಿಯೇ ಕಳೆಯುವ ಸಂಕಲ್ಪ ಮಾಡಿರಬಹುದು. ಅವರು ತೊಂಬತ್ತು ವರ್ಷಕ್ಕಿಂತ ಹೆಚ್ಚಿನ ಕಾಲಾವಧಿ ಬಾಳಿಬದುಕಿದ್ದರೆಂದು ಜನರ ಪ್ರತೀತವಾಗಿದೆ. ಅಲ್ಲದೇ ಈ ಹೇಳಿಕೆಯನ್ನು ಸಾಕ್ಷಿಗಳು ಪುಷ್ಟೀಕರಿಸುತ್ತವೆ.

ಸುರಪುರ ಆಡಳಿತಗಾರರ ಕಾಲಾವಧಿಯಲ್ಲಿಯೇ ರಚಿಸಲ್ಪಟ್ಟಿರುವ ಈ ದೇವಾಲಯವು ಕಾಲಕಾಲಕ್ಕೆ ನವೀಕರಣದ ಹಲವು ಪ್ರಕ್ರಿಯೆಗಳು ಒಳಗಾಗಿರುವುದನ್ನು ಕಾಣಬಹುದು. ನೈಸರ್ಗಿಕ ಗುಹೆಯಲ್ಲಿ ಇರುವ ಮೋನಪ್ಪನ ಸಮಾಧಿಯ ಮೇಲೆ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಮಜಾರನ್ನು ನಿರ್ಮಿಸಲಾಗಿದೆ. ಹಾಗಾಗಿ ಎರಡೂ ಮತ ಪಂಥಗಳ ಆಚರಣೆಗಳಿಗೆ ಸಂಬಂಧಿಸಿದ ಪೂಜಾ ಪದ್ಧತಿಗಳು ಈ ಸ್ಥಳದಲ್ಲಿ ನಿರ್ವಹಿಸಲ್ಪಡುತ್ತವೆ. ಈ ಎರಡು ಅಂತಸ್ತುಗಳನ್ನು ಸೇರಿಸಿ ದೊಡ್ಡದಾದ ಗುಡಿಯನ್ನು ಕಟ್ಟಲಾಗಿದೆ. ನಾಲ್ಕು ಮೂಲೆಗಳಲ್ಲಿ ಮಿನಾರ್‌ಗಳನ್ನು

ಹಾಗೂ ಪ್ರಸ್ತರ ಭಾಗದಲ್ಲಿ ಚಿಕ್ಕಚಿಕ್ಕ ಗೂಡಿನಂತೆ ಕಾಣುವ ಕೈಪಿಡಿಗಳನ್ನು ರಚಿಸಲಾಗಿದೆ. ಕೆಂಪು ಮರಳು ಮಿಶ್ರಿತ ಕಲ್ಲಿನಲ್ಲಿ ಗೋಡೆಗಳನ್ನು ಕಟ್ಟಲಾಗಿದ್ದರೇ ಗಾರೆ ಮತ್ತು ಗಚ್ಚಿನಿಂದ ಶಿಖರವನ್ನು ರೂಪಿಸಲಾಗಿದೆ. ಸದ್ಯ ಈ ಗುಡಿಯು ನವರಂಗ ಹಾಗೂ ಮಹಾಮಂಟಪ ಹಾಗೂ ಪ್ರವೇಶದ್ವಾರವನ್ನು ಹೊಂದಿರುವುದನ್ನು ಕಾಣುತ್ತೇವೆ. ಮಹಾಮಂಟಪ ಹಾಗೂ ಪ್ರವೇಶ ದ್ವಾರಗಳು ಇತ್ತೀಚೆಗೆ ನಿರ್ಮಾಣವಾದವುಗಳು.

ಈ ದೇವಾಲಯವನ್ನು ಕಟ್ಟಿರುವ ಕಾಲ ಹಾಗೂ ವ್ಯಕ್ತಿಗಳ ಬಗೆಗೆ ಸ್ಪಷ್ಟವಾದ ಉಲ್ಲೇಖಗಳು ದಾಖಲಾಗಿವೆ. ಸುರಪುರದ ನಾಯಕರ ಆಸ್ಥಾನದಲ್ಲಿದ್ದ(೧೭೫೨-೧೮೦೨) ನಿಷವಿ ಕಡೆಲಪ್ಪ ಮತ್ತು ನಿಷವಿ ವೀರಪ್ಪಯ್ಯ ಹಾಗೂ ಪ್ರಮುಖನಾದ ಶೆಟ್ಟಿ ಸೊಲಬಣ್ಣ ಈ ಗುಡಿಯನ್ನು ನಿರ್ಮಿಸಿದ್ದಾರೆ ಎಂಬ ಅಭಿಪ್ರಾಯಗಳಿವೆ[೫]. ಶಾಸನ ತಜ್ಞರಾದ ಡಾ.ವಿ.ಶಿವಾನಂದ ಅವರು ಈ ವಿವರಕ್ಕೆ ಸಂಬಂಧಿಸಿದ ತಾಮ್ರ ಶಾಸನವೊಂದನ್ನು ಪ್ರಕಟಿಸಿದ್ದಾರೆ. ತಿಂಥಿಣಿ ಮೌನೇಶ್ವರ ಮಠದ ದೊಡ್ಡಯ್ಯ ಮತ್ತು ಈರಯ್ಯರು ಸುರಪುರದ ಮಡಿಕೇಶ್ವರ ಸಂಸ್ಥಾನದ ಒಡೆಯ ಸೊಲಬಣ್ಣನಿಗೆ ಒಂದು ತಾಮ್ರಶಾಸನ ಹಾಕಿಕೊಟ್ಟಿದ್ದಾರೆ. ಈ ಸೊಲಬಣ್ಣ ಶಕೆ ೧೬೪೯ ಪ್ಲವರಿಗನಾಮ ಸಂವತ್ಸರ ಮಾರ್ಗಶಿರ ಶುದ್ಧ ಗುರುವಾರ ಮೂರರಂದು ಮೌನೆಶ್ವರ ದೇವಸ್ಥಾನ ರಚಿಸಿದ್ದಾನೆ ಎಂಬ ಉಲ್ಲೇಖವಿದೆ. ಇದಲ್ಲದೇ ಮೌನೇಶ್ವರ ಮಠಕ್ಕೆ ಬಂದು ರತ್ನ, ಎರಡು ಚಿಂತನಾಮ ಹಾಗೂ ಒಂದು ಕಂಠಿ ಆಭರಣವನ್ನು ಭಕ್ತಿಯಿಂದ ಕೊಟ್ಟು ಸಂಸ್ಥಾನದಿಂದ ಗೌರವ, ಮರ್ಯಾದೆ ಸಲ್ಲಿಸಿದ್ದಾನೆ ಎಂದು ದಾಖಲಾಗಿದೆ[೬]. ಅಂದರೆ ಶೆಟ್ಟಿ ಸೋಲಬಣ್ಣನು ಈ ಗುಡಿಯನ್ನು ಕಟ್ಟಿರಬೇಕು ಎಂಬ ಅರ್ಥ ಉಂಟಾಗುತ್ತದೆ. ಶ್ರೀಯುತ ಕಪಟರಾಳ ಕೃಷ್ಣರಾಯರು ಪಡುವ ಅಭಿಪ್ರಾಯವೆಂದರೆ ಸೊಲಬಣ್ಣನು ಮೂಲ ಮಂದಿರವನ್ನು ಕಟ್ಟಿಸಿರಬೇಕು. ನಂತರ ನಿಷವಿ ವೀರಪ್ಪನವರು ಅದನ್ನು ವಿಸ್ತಾರಗೊಳಿಸಿರಬೇಕು ಎಂದು ಹೇಳುತ್ತಾರೆ.[೭]

ಒಟ್ಟಾರೆ ಅಭಿಪ್ರಾಯಿಸಬಹುದಾದ ಸಂಗತಿಗಳೆಂದರೆ ಸುರಪುರ ಸಂಸ್ಥಾನದ ಪ್ರಾರಂಭಕ್ಕೆ ಬೆಂಬಲ ಹಾಗೂ ಪ್ರೋತ್ಸಾಹ ನೀಡಿ ರಾಜರ ಪರವಾಗಿ ಆಶೀರ್ವದಿಸಿದ ಮೋನಪ್ಪಯ್ಯನವರು ಕಾಲವಾದ ನಂತರ ಸಹಜವಾಗಿ ಆ ಸಂಸ್ಥಾನದ ಪೀಳಿಗೆಯವರು ಇಂಥ ಸಂತನೊಬ್ಬನಿಗೆ ಗುಡಿ ಕಟ್ಟಿರುವುದು ಸಹಜವಾದ ಸಂಗತಿಯಾಗಿ ಮೂಡಿ ಬಂದಿದೆ. ೧೮ನೇ ಶತಮಾನದ ಕಾಲಾವಧಿಯಲ್ಲಿಯೇ ಬೇರೆ ಬೇರೆ ಸ್ಥಳಗಳಲ್ಲಿ ಮೋನಪ್ಪಯ್ಯನಿಗಾಗಿಯೇ ಸ್ಮಾರಕಗಳು ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಗೋನಾಳ(ಸುರಪುರ ತಾಲೂಕು) ಲಿಂಗನಬಂಡಿ (ಲಿಂಗಸೂರು ತಾಲೂಕು) ವರವಿ (ಶಿರಹಟ್ಟಿ ತಾಲೂಕು) ಮತ್ತು ಕನಕಗಿರಿ(ಗಂಗಾವತಿ ತಾಲೂಕು) ಸ್ಥಳಗಳಲ್ಲಿ ಈ ಸೂಫಿ-ಸಂತನಿಗಾಗಿ ಕಟ್ಟಿಸಿದ ಗುಡಿಗಳು ಈವರೆಗೂ ಕಂಡು ಬರುತ್ತವೆ. ತಿಂಥಿಣಿಯಲ್ಲಿರುವ ಮೋನಪ್ಪಯ್ಯನ ಗುಡಿಯ ಆವರಣದ ಪರಿಸರದಲ್ಲಿಯೇ ಇನ್ನು ಕೆಲವು ಚಿಕ್ಕಪುಟ್ಟ ಗುಡಿಗಳು ಈವರೆಗೂ ಕಂಡು ಬರುತ್ತವೆ. ಪ್ರತಿವರ್ಷ ಭಾರತ ಹುಣ್ಣಿಮೆಯಿಂದು ಇಲ್ಲಿ ಬೃಹತ್ ಪ್ರಮಾಣದ ಜಾತ್ರೆ-ಜಂಗುಳಿ ಜರುಗುತ್ತದೆ.

### ದೇವರಗೋನಾಳ ಮೋನಪ್ಪಯ್ಯ

ಹದಿನೆಂಟನೆಯ ಶತಮಾನದಲ್ಲಿದ್ದ ಸಂತ-ಮೋನಪ್ಪಯ್ಯ ಇದೇ ಗ್ರಾಮದಲ್ಲಿ ಜನಿಸಿದನೆಂದು ಅಭಿಪ್ರಾಯಿಸಲಾಗುತ್ತದೆ. ಅಲ್ಲದೇ ಅವರು ಜನಿಸಿದ ಮನೆಯನ್ನು ಈ ಗ್ರಾಮದಲ್ಲಿ ಈವರೆಗೂ

ತೋರಿಸಲಾಗುತ್ತದೆ. ಈ ಗ್ರಾಮದಲ್ಲಿ ಹುಟ್ಟಿದ್ದರೂ ಅವರ ಕ್ಷೇತ್ರಕಾರ್ಯ ಮಾತ್ರ ಊರು ಹೊರತುಪಡಿಸಿಯೇ ಇತ್ತು. ಬಹುಶಃ ಅವರು ಇಲ್ಲಿ ಹುಟ್ಟಿರುವ ಕಾರಣಕ್ಕಾಗಿಯೇ ಇಲ್ಲೊಂದು ಸ್ಮಾರಕವನ್ನು ಅವರಿಗಾಗಿಯೇ ನಿರ್ಮಿಸಲಾಗಿದೆ. ಅದನ್ನು ಸುರಪುರ ಅರಸರ ಕಾಲಾವಧಿಯಲ್ಲಿ ಕಟ್ಟಲಾಯಿತೆಂಬ ಅಭಿಪ್ರಾಯಗಳಿವೆಯ ಇದನ್ನು ಸುಮಾರು ೧೮ನೇ ಶತಮಾನದ ಮಧ್ಯಾವಧಿಯಲ್ಲಿ ಕಟ್ಟಿರಬಹುದೆಂದು ಊಹಿಸಬಹುದಾಗಿದೆ.

ಇಂಡೋ-ಇಸ್ಲಾಮಿಕ್ ಶೈಲಿಯನ್ನು ಪ್ರತಿನಿಧಿಸುವ ಈ ಸ್ಮಾರಕವು ಗರ್ಭಗೃಹ ಹಾಗೂ ಕಮಾನುಗಳಿಂದ ಕೂಡಿದ ಮಂಟಪ ಹೊಂದಿರುವುದನ್ನು ಕಾಣುತ್ತೇವೆ. ಗರ್ಭಗೃಹದಲ್ಲಿ ಮೋನಪ್ಪಯ್ಯನಿಗೆ ಸಂಬಂಧಿಸಿದ ಗದ್ದುಗೆ ಇದೆ. ಹೊರಗೋಡೆಯ ಭಾಗದಲ್ಲಿರುವ ಮಾಡಣೆ(ಗೂಡು)ಗಳು ಮಸೀದಿಯಲ್ಲಿರುವ ರಚನೆಯನ್ನು ಹೋಲುತ್ತವೆ. ಪ್ರಸ್ತರ ಭಾಗದಲ್ಲಿ ನಾಲ್ಕು ಕಡೆಗೆ ಮಿನಾರುಗಳನ್ನು ಜೋಡಿಸಲಾಗಿದೆ. ಗೋಲಾಕಾರದ ಶಿಖರವು ಈ ಗುಡಿಗೆ ಇದೆ. ಇತ್ತೀಚೆಗೆ ಗುಡಿಯು ಆವರಣವನ್ನು ವಿಸ್ತರಿಸಲಾಗಿರುವುದಲ್ಲದೇ ಅದರ ಒಳಾಂಗಣ ಹಾಗೂ ಗೋಡೆಯ ಭಾಗಗಳನ್ನು ಬಳಪದ ಕಲ್ಲಿನಿಂದ ಸುಂದರಗೊಳಿಸಲಾಗಿರುವುದನ್ನು ಗಮನಿಸಬಹುದು.

**ಕೊಡೇಕಲ್ಲ ಪರಂಪರೆ**

ಹಿಂದೂ-ಇಸ್ಲಾಮಿಕ್ ಭಾವೈಕ್ಯತೆಯ ಪ್ರತೀಕವಾಗಿ ಬಿಂಬಿತಗೊಂಡಿರುವ ಈ ದೇವಾಲಯವು ೧೭ನೇ ಶತಮಾನದ ನಂತರವೇ ನಿರ್ಮಾಣವಾಗಿರುವಂಥದ್ದು. ವಾಸ್ತು ಅಧ್ಯಯನದ ದೃಷ್ಟಿಯಿಂದ ಅಂಥ ಮಹತ್ವದ ರಚನೆ ಇದಲ್ಲ. ಆದರೆ ಬಹು ಸಾಂಸ್ಕೃತಿಕ ಆಯಾಮವುಳ್ಳ ಮಹತ್ವದ ಇತಿಹಾಸ ಇದಕ್ಕಿದೆ. ಕಾಲಜ್ಞಾನ ರಚಿಸಿದ ಬಸವಣ್ಣನಿಂದಾಗಿ ಇದು ಹೆಚ್ಚಿನ ಪ್ರಸಿದ್ಧಿ ಪಡೆದಿದೆ.

ಪ್ರಸ್ತುತ ಗುಡಿಯನ್ನು ಎತ್ತರದ ಕಟ್ಟೆಯ ಮೇಲೆ ನಿರ್ಮಿಸಲಾಗಿದ್ದು ಹಾಗಾಗಿ ಮೆಟ್ಟಿಲುಗಳನ್ನು ಏರಿಕೊಂಡು ಹೋಗಬೇಕಾಗುತ್ತದೆ. ಈ ದೇವಾಲಯವು ಗರ್ಭಗೃಹ ಮತ್ತು ನವರಂಗವನ್ನು ಮಾತ್ರ ಹೊಂದಿದ್ದು ಅದರ ಗರ್ಭಗೃಹದಲ್ಲಿ ಬಸವಣ್ಣನವರು ಐಕ್ಯವಾದ ಗದ್ದುಗೆ ಇದೆ. ಇದಕ್ಕೆ ಭಕ್ತರು ಭಕ್ತಿಭಾವನೆಗಳಿಂದ ನಡೆದುಕೊಳ್ಳುತ್ತಾರೆ. ದೇವಾಲಯದ ಒಳಭಾಗವನ್ನು ಸುಣ್ಣ-ಬಣ್ಣ ಹಾಗೂ ಹಾಸುಕಲ್ಲುಗಳಿಂದ ದುರಸ್ತಿ ಮಾಡಲಾಗಿದೆ. ಗುಮ್ಮಟ(ಗೋಳಾ)ಕಾರದ ಶಿಖರವಿದ್ದು ಅದು ಕಲಶ ಮತ್ತು ಸ್ತೂಪಿಗಳನ್ನು ಒಳಗೊಂಡಿರುವುದನ್ನು ಗಮನಿಸಬಹುದು. ಈ ಗುಡಿಯ ಆವರಣದಲ್ಲಿ ಈರೊಡ್ಡಿ ಶಿಲ್ಪವಿದ್ದು ಅದು ಭೂತ ಮತ್ತು ಕಷ್ಟಕಾರ್ಪಣ್ಯಗಳನ್ನು ಹೋಗಲಾಡಿಸುವ ಶಕ್ತಿಹೊಂದಿದೆ ಎಂಬ ಪ್ರತೀತವಿದೆ. ಮುಖ್ಯವಾಗಿ ಇದೇ ಜಾಗದಲ್ಲಿಯೇ ಬಸವಣ್ಣನವರು ಕಾಲಜ್ಞಾನವನ್ನು ಬರೆದರೆಂಬ ನಂಬಿಕೆ ಇದೆ.

ಗ್ರಾಮದಲ್ಲಿ ಇನ್ನೊಂದು ಬಸವಣ್ಣನ ಗುಡಿಯಿದ್ದು ಅದು ಪೂರ್ವಾಭಿಮುಖವಾಗಿದೆ. ಇದು ಸಹ ಇಂಡೋ-ಇಸ್ಲಾಮಿಕ್ ಮಾದರಿಯ ರಚನೆಯಾಗಿರುವುದು. ಅಲ್ಲದೇ ಇದು ಗುಮ್ಮಟಾಕಾರದ ಶಿಖರ ಹಾಗೂ ಮಿನಾರಗಳ ರಚನೆ ಹೊಂದಿರುವುದು. ಈ ಸ್ಮಾರಕವನ್ನು

ಸಹ ಕೊಡೇಕಲ್ಲು ಬಸವಣ್ಣನವರು ಐಕ್ಯ ಹೊಂದಿದ ಸ್ಥಳವೆಂದು ಪರಿಭಾವಿಸಿ ಜನಸ್ತೋಮ ತಮ್ಮ ಭಕ್ತಿಯನ್ನು ಮೆರೆಯುತ್ತಾರೆ. ಇದನ್ನು ಅಮರ ಕಲ್ಯಾಣವೆಂದು ಸಹ ಕರೆಯಲಾಗುತ್ತದೆ.[೮] ಕೊಡೇಕಲ್ ಗ್ರಾಮ ಪರಿಸರವು ಇತಿಹಾಸಪೂರ್ವ ನೆಲೆಗೆ ಸಂಬಂಧಿಸಿದ ಪ್ರಮುಖ ತಾಣವಾಗಿತ್ತು.

ಕೊಡೇಕಲ್ಲು ಪರಿಸರವು ಇತಿಹಾಸಪೂರ್ವ ಮಹತ್ವದ ನೆಲೆಯಾಗಿದ್ದರೂ ಚರಿತ್ರೆಯಲ್ಲಿ ಗುರುತಿಸಿಕೊಂಡಿರುವುದು ಮಾತ್ರ ೧೭ನೇ ಶತಮಾನದಲ್ಲಿ ಬಾಳಿ ಬದುಕಿದ ಬಸವಣ್ಣನವರಿಂದ ಎಂಬುದು ಮಾತ್ರ ದಿಟ. ಇವರ ಕುರಿತು ವಿವರ ನೀಡುವ ಬಹುಮುಖ್ಯ ಆಕರವೆಂದರೆ ವೀರಸಂಗಯ್ಯ ಎಂಬ ಕವಿಯು ಬರೆದಿರುವ 'ನಂದಿಯಾಗಮಲೀಲೆ' ಎಂಬ ಗ್ರಂಥ. ಕೊಡೇಕಲ್ಲು ಬಸವಣ್ಣನವರು ಮೂಲತಹ ಹಂಪಿಯಲ್ಲಿದ್ದವರು. ನಂತರ ದಿನಗಳಲ್ಲಿ ಆರೂಢ ಪ್ರಭಾವದಿಂದ ಲೋಕಕಲ್ಯಾಣಕ್ಕಾಗಿ ಪರ್ಯಟನೆ ಕೈಗೊಂಡರು. ಕೊನೆಗೆ ಅವರು ಸುರಪುರ ತಾಲೂಕಿನ ಕೊಡೇಕಲ್ಲು ಗ್ರಾಮದಲ್ಲಿ ನೆಲೆನಿಂತು 'ಕಾಲಜ್ಞಾನ'ವನ್ನು ರಚಿಸಿದರು. ಅಲ್ಲದೇ ಅದೇ ಗ್ರಾಮದಲ್ಲಿ ಐಕ್ಯರಾದರು ಎಂಬ ವಿವರಗಳು ಪ್ರಕಟವಾಗಿವೆ[೯].

ಪ್ರಾರಂಭದಲ್ಲಿ ಈ ಗ್ರಾಮಕ್ಕೆ ಹೆಣ್ಣು ದೇವತೆಯಾದ ಬಳರಿ ಎಂಬ ಹೆಸರಿನಿಂದ ಈ ಗ್ರಾಮವು ಪ್ರಸಿದ್ಧಿ ಪಡೆದಿರಬಹುದೆಂಬ ಅಭಿಪ್ರಾಯಗಳಿವೆ. ಬಳರಿಯ ಕಲ್ಲು>ಬಳಾರಕಲ್ಲು>ಬಟಾರಕಲ್ ಆಗಿರುವ ಸಾಧ್ಯತೆಗಳಿವೆ. ಸಾಹಿತ್ಯ ಕೃತಿಗಳಲ್ಲಿ ಬೇರೆ ಬಗೆಯ ಅರ್ಥ ವಿವರಗಳು ಪ್ರಕಟಿತವಾಗಿವೆ. ಸಂಸ್ಕೃತ ರೂಪವಾದ ಛತ್ರಶಿಲಾಪುರವೆಂದೂ ಮುಂದಿನ ದಿನಗಳಲ್ಲಿ ಇದರ ವಿಕೃತ ರೂಪವಾದ ಕ್ಷೇತ್ರಶಿಲಾಪುರ ಎಂಬ ಪ್ರಯೋಗಗಳೇ ಇಲ್ಲಿಯ ಸಾಹಿತ್ಯದಲ್ಲಿ ಹೆಚ್ಚಾಗಿ ಸಿಗುತ್ತವೆ. ಬಹಳ ಹಿಂದಿಣ ದಿನಗಳಲ್ಲಿ ಈ ಕೊಡೇಕಲ್ಲದಲ್ಲಿ ಕೊಡೆಯನ್ನು ಹಿಡಿಯುತ್ತಿದ್ದ ಒಬ್ಬ ಕಲ್ಲಪ್ಪ ಇದ್ದನೆಂತಲೂ ಈ ಕೊಡೆಯ ಕಲ್ಲಪ್ಪನ ಕಾರಣವಾಗಿಯೇ ಕೊಡೆಯಕಲ್ಲಪ್ಪ>ಕೊಡೆಯಕಲ್ಲ>ಕೊಡೇಕಲ್ ರೂಪ ಸಿದ್ಧಿಸಿರಬೇಕು ಎಂದು ಹೇಳುವವರೂ ಇದ್ದಾರೆ. ಅಲ್ಲದೇ ಕೊಡೇಕಲ್ಲು ಎತ್ತರವಾದ ಬಂಡೆಕಲ್ಲುಗಳಿಂದ ತುಂಬಿರುವ ಊರಾದುದರಿಂದ ಕೋಡುಂಗಲ್ಲು>ಕೋಡುಗಲ್ಲು>ಎಂಬ ಬೆಳವಣಿಗೆಯಲ್ಲಿ ಹಾದು ಕೊಡೇಕಲ್ ಬಂದಿರುವ ಸಂಭವವೂ ಇದೆ ಎಂಬ ಅಭಿಪ್ರಾಯಗಳು ದಾಖಲಾಗಿವೆ[೧೦].

## ಸಗರ ಎಲ್ಲಮ್ಮನ ಪರಂಪರೆ

ಸಗರ ಪ್ರದೇಶವು ಪ್ರಾಚೀನ ಕಾಲದಿಂದಲೂ ತನ್ನದೇ ಮಹತ್ವವನ್ನು ಗುರುತಿಸಿಕೊಂಡು ಬೆಳೆದಿರುವ ವಿವರಗಳು ಶಾಸನಗಳಲ್ಲಿ ದಾಖಲಾಗಿವೆ. ಪುರಾಣ ಪುರುಷ ಸಗರ ಮಹಾರಾಜನಿಂದ ಪ್ರಾರಂಭವಾದ ಈ ಸಗರ ಎಲ್ಲ ಕಾಲಕ್ಕೂ ತನ್ನ ಮಹತ್ವವನ್ನು ಪ್ರಚುರಪಡಿಸುತ್ತಾ ಬಂದಿದೆ. ಅದು ಕೇವಲ ಪೌರಾಣಿಕ ಮತ್ತು ಐತಿಹಾಸಿಕ ಸಂಗತಿಗಳನ್ನಲ್ಲದೇ ಜನಪದ ಪರಂಪರೆಯ ದೃಷ್ಟಿಯಿಂದಲೂ ತನ್ನದೇ ಆದ ಮಹತ್ವವನ್ನು ಉಳಿಸಿಕೊಂಡಿದೆ ಪ್ರಸ್ತುತ ದಿನಮಾನಗಳಲ್ಲಿ ಸಗರವು ಎಲ್ಲಮ್ಮನ ಪ್ರಸಿದ್ಧ ಕ್ಷೇತ್ರವಾಗಿ ಹೆಚ್ಚಿನ ಜನರಿಗೆ ಚಿರಪರಿಚಿತವಾಗಿರುವುದು.

ಸಗರ ಗ್ರಾಮದಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿರುವ ಗುಡ್ಡದ ಮೇಲೆ ಎಲ್ಲಮ್ಮಳಿಗೆ ಸಂಬಂಧಿಸಿದ ಎರಡು ಗುಡಿಗಳಿದ್ದು ಅವುಗಳಲ್ಲಿರುವ ಒಂದು ಗುಡಿಯಲ್ಲಿನ

ದೇವತೆಯನ್ನು ಅಸ್ಪೃಶ್ಯರು ಮಾತ್ರ ಪೂಜಿಸಿದರೆ ಇನ್ನೊಂದು ಗುಡಿಯಲ್ಲಿರುವ ದೇವತೆಯನ್ನು ಸ್ಪೃಶ್ಯರು ಮಾತ್ರ ಪೂಜೆ ಪುನಸ್ಕಾರ ಮಾಡುವ ವಾಡಿಕೆಯಿದೆ. ಇದಕ್ಕೆ ನಿರ್ದಿಷ್ಟ ಕಾರಣಗಳು ತಿಳಿದುಬಂದಿಲ್ಲ. ಕೆಲವು ವರ್ಷಗಳ ಹಿಂದೆ ಈ ದೇವತೆಗೆ ವಿಶೇಷವಾಗಿ ಪ್ರಾಣಿಬಲಿ ಹಾಗೂ ಬಸವಿ(ದೇವದಾಸಿ)ಯರನ್ನು ಬಿಡುವ ಪದ್ಧತಿ ಹೆಚ್ಚಿನ ಜನಪ್ರಿಯತೆಯನ್ನು ಪಡೆದಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಅದು ಪ್ರಾಯಶಃ ಸ್ಥಗಿತಗೊಂಡಿದೆ. ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿರುವ ಕೆಳಜಾತಿ ಮತ್ತು ಪರಿಶಿಷ್ಟ ಜನಾಂಗಗಳಿಗೆ ಇದೊಂದು ಅತಿ ಪಾವಿತ್ರ್ಯ ಪಡೆದಿರುವ ಮಹತ್ವದ ಕ್ಷೇತ್ರವಾಗಿ ಪರಿಣಮಿಸಿದೆ. ಈ ದೇವರಿಗೆ ಪ್ರಾಣಿಬಲಿ ಮತ್ತು ಹರಕೆಗಳನ್ನು ಭೇದವಿಲ್ಲದೇ ನಡೆಸಿಕೊಂಡು ಬರುತ್ತಿದ್ದರು. ಇಂಥ ಆಚರಣೆಗಳನ್ನು ಭಾಗಶಃ ಪರಿಶಿಷ್ಟರು ಮತ್ತು ಹಿಂದುಳಿದ ಜನಾಂಗಗಳೇ ಅನುಸರಿಸಿಕೊಂಡು ಬರುತ್ತಿದ್ದಾರೆ. ಆದರೆ ಪ್ರಸ್ತುತ ದಿನಗಳಲ್ಲಿ ಕಾನೂನು ರೀತ್ಯ ಇಂಥ ಹೇಯ ಚಟುವಟಿಕೆಗಳನ್ನು ಸಂಪೂರ್ಣವಾಗಿ ತಡೆ ಹಿಡಿಯುವ ಪ್ರಯತ್ನಗಳು ಸರಕಾರ ಮತ್ತು ಪ್ರಗತಿಪರ ಸಂಘಟನೆಗಳಿಂದ ಸಾಕಷ್ಟು ನಡೆದಿವೆ.

ಎತ್ತರದ ಗುಡ್ಡದ ಮೇಲೆ ಕಾಲ ಕಾಲಕ್ಕೆ ಅವ್ಯವಸ್ಥಿತವಾಗಿ ಕಟ್ಟಿದ ಕಟ್ಟಡದಲ್ಲಿಯೇ ಈ ದೇವತೆಗಳಿವೆ. ಗುಡಿಯ ಕೆಲವು ಭಾಗಗಳಲ್ಲಿ ನೈಸರ್ಗಿಕವಾಗಿ ನಿರ್ಮಾಣವಾದ ಕಂದರವನ್ನೇ ಬಳಸಿಕೊಳ್ಳಲಾಗಿದೆ. ಈ ದೇವಾಲಯವು ವಾಸ್ತು ವಿವರಗಳಿಗಿಂತ ಹೆಚ್ಚಾಗಿ ಜನಪದರ ಆಚಾರ ವಿಚಾರಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಮಹತ್ವವನ್ನು ಪಡೆದಿರುವುದನ್ನು ಗಮನಿಸಬಹುದು. ಹಾಗಾಗಿ ಸಗರ ಎಲ್ಲಮ್ಮನ ಕ್ಷೇತ್ರವು ಜನಪದ ಪರಂಪರೆಯ ಬಹುಮುಖ್ಯ ಕೇಂದ್ರವಾಗಿ ರೂಪಗೊಂಡಿರುವುದು. ಈ ಕ್ಷೇತ್ರವು ವರ್ಷಕ್ಕೊಮ್ಮೆ ಜನಸಾಗರದಿಂದ ತುಂಬಿತುಳುಕುತ್ತದೆ.

**ಸೂಫಿ ಪರಂಪರೆ**

ಈ ಸ್ಮಾರಕವನ್ನು ೧೪ನೇ ಶತಮಾನದಲ್ಲಿ ಎರಡನೆಯ ಮಹಮದ್ ಷಾ ಕೊತ್ವಾಲ್ ಮುಬಾರಕನೆಂಬ ಅಧಿಕಾರಿಯು ಕಟ್ಟಿಸಿದನೆಂಬ ಉಲ್ಲೇಖವಿದೆ. ಸರ್ಮಸ್ತರ ದರ್ಗಾದ ಬಾವಿಯ ಗೋಡೆಯಲ್ಲಿ ಅಳವಡಿಸಿರುವ ಶಾಸನದಲ್ಲಿ ಈ ವಿವರವು ದಾಖಲಾಗಿದೆ[೧೧]. ಇದು ಮಾತ್ರವಲ್ಲದೇ ಸಗರದಲ್ಲಿ ಸದ್ಯ ಕಂಡು ಬರುತ್ತಿರುವ ಅಳಿದುಳಿದು ನಿಂತಿರುವ ಸ್ಮಾರಕಗಳನ್ನು ಸಹ ಕೊತ್ವಾಲ ಮುಬಾರಕನೆ ಕಟ್ಟಿರುವ ಉಲ್ಲೇಖಗಳು ಪ್ರಕಟವಾಗಿವೆ. ಸೂಫಿ ಸಂತ ತಾಜುದ್ದೀನ್ ಷೇಕ್ ಮುನಾವರ್ ಬಾದ್‌ಷಾನ ದರ್ಗಾ, ಕೋಟೆ-ಕೊತ್ತಲಗಳು, ತೃಟಿತ ಮಸೀದಿಗಳು ಹಾಗೂ ಅಸೂರ್‌ಖಾನಗಳನ್ನು ಈತನೇ ಕಟ್ಟಿಸಿದನೆಂಬ ಮಾಹಿತಿವುಳ್ಳ ಪರ್ಶಿಯನ್ ಶಾಸನಗಳಲ್ಲಿ ಈ ಬಗೆಗಿನ ವಿವರಗಳು(ಗುಲಬರ್ಗಾ ಗ್ಯಾಜಿಟಿಯರ್‌ನಲ್ಲಿ) ದಾಖಲಾಗಿವೆ.

ಸೂಫಿ ಸಂತ ಹಜರತ್ ಸರ್ಮಸ್ತರನು ಖಿಲ್ಜಿಯ ಸೈನ್ಯದೊಂದಿಗೆ ಸಾಮಾನ್ಯ ಸೈನಿಕನಾಗಿ ಈ ಪ್ರದೇಶಕ್ಕೆ ಬಂದವನು. ಅಪ್ರತಿಮಶೂರನಾಗಿದ್ದ ಮಲ್ಲಿಕಾಫರನ ನೇತೃತ್ವದಲ್ಲಿ ಖಿಲ್ಜಿಯರ ಭಾರೀ ಸೈನ್ಯವು ದಕ್ಷಿಣ ದಂಡೆಯಾತ್ರೆ ಕೈಗೊಂಡಿತ್ತು. ಯುದ್ಧದ ಸಮಾರೋಪಾದಿಯ

ದಿನಗಳಲ್ಲಿ ಆ ಸೈನ್ಯವು ಸಗರದಲ್ಲಿಯೇ ನೆಲೆನಿಂತಿತ್ತು. ಅವನ ಪದಾತಿ ದಳವು ಇಚ್ಛಾನುಸಾರ ಕಾರ್ಯಗೈದು ಮೂಲಸ್ಥಾನಕ್ಕೆ ಮರಳಿದರೂ ಸರ್ಮಸ್ತರನು ಮಾತ್ರ ಇಲ್ಲಿಯೇ ಶಾಶ್ವತವಾಗಿ ನೆಲೆನಿಂತನು. ಕಾರಣ ಅವನಿಗೆ ಆಗಲೇ ಅರ್ಥವಿಲ್ಲದ ಇಂಥ ನಿರಂತರ ಜಗಳಗಳ ಬಗೆಗೆ ಜಿಗುಪ್ಸೆಯುಂಟಾಗಿತ್ತು. ಯುದ್ಧ ಕೀರ್ತಿಯನ್ನು ತಿರಸ್ಕರಿಸಿ ದೇವರ ಪ್ರೀತಿಯನ್ನು ಪುರಸ್ಕರಿಸಿ ದೈವತ್ವದ ಕಲ್ಪನೆಗಳಿಗೆ ಮುಖಮಾಡಿದ್ದನು. ವಿರಸದಿಂದ ವಿಮುಖಗೊಂಡು ಸಮನ್ವಯತೆಯ ಕಡೆಗೆ ವಾಲಿದ್ದ. ಅನುಭಾವ ಕಡೆಗೆ ತಿರುಗಿದ ಈತನೇ ನಮ್ಮ ನಾಡಿನ ಮೊದಲ ಸೂಫಿ ಸಂತ ಎಂದು ವಿದ್ವಾಂಸ್ ಈಟನ್ ದಾಖಲಿಸಿದ್ದಾರೆ. ಆದರೆ ಈತನಗಿಂತ ಮೊದಲೇ ವಿಜಾಪುರ ನಗರಕ್ಕೆ ಹಾಜಿ ರೂಮಿ ಬಾಬಾ (ಕ್ರಿ.ಶ.೧೧೬೦) ಎಂಬ ಹೆಸರಿನ ಸೂಫಿಯೊಬ್ಬ ಬಂದು ಹೋಗಿದ್ದ ಎಂಬ ವಿವರಗಳು ದಾಖಲಾಗಿವೆ[೨].

ಇಂಥ ಸಂಗತಿಗಳ ಸತ್ಯಾಸತ್ಯತೆ ಏನೇ ಇರಲಿ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಹೊಸ ಬಗೆಯ ಧರ್ಮ ಸಂಚಲನಗಳನ್ನು ಈ ಸೂಫಿಸಂತರು ಹುಟ್ಟುಹಾಕಿದರು. ಮೂಲತಹ ಯುದ್ಧೋತ್ಸಾಹದ ಸೈನಿಕ ಮನೋಭಾವನೆಗಳನ್ನು ಹೊಂದಿದ್ದ ಮಹಮದೀಯ ಸೈನ್ಯದಲ್ಲಿ ಈ ಸೂಫಿಗಳು ಬದಲಾವಣೆಯ ತಂಗಾಳಿಯನ್ನು ಸೃಷ್ಟಿಸಿದರು. ಅವರು ಯುದ್ಧಪಿಪಾಸೆಯ ಬದಲಾಗಿ ಪ್ರೀತಿಯ ಸೆಲೆಯನ್ನು ಹರಿಸಿದರು. ಕೇಡಿನ ಗುಣಗಳಿಗೆ ವ್ಯತಿರಿಕ್ತವಾಗಿ ಸಮನ್ವಯದ ಹಾದಿಯಲ್ಲಿ ಸೂಫಿ ಸಂತರು ನಮ್ಮ ಪ್ರದೇಶಗಳಲ್ಲಿ ನೆಲಿನಿಂತು ಮಾರ್ಗದರ್ಶನ ನೀಡಿ ಹೊಸ ಧರ್ಮಸಮನ್ವಯದ ಮನ್ವಂತರಕ್ಕೆ ಸಾಕ್ಷಿಯಾಗಿ ನಿಂತರು. ಸೂಫಿ ಸಂತ ಸರಮಸ್ತರನ ದರ್ಗಾ ೧೫ನೇ ಶತಮಾನದ ಪ್ರಾರಂಭದಲ್ಲಿ ನಿರ್ಮಾಣವಾಯಿತು. ಇದು ವಿಶಾಲವಾದ ಆವರಣ ಹೊಂದಿದ್ದು ಅದಕ್ಕೆ ದ್ವಾರಬಾಗಿಲವನ್ನು ನಿರ್ಮಿಸಲಾಗಿದೆ. ಅದರಲ್ಲಿ ಕಮಾನುಕೃತಿಯ ರಚನೆಗಳು ಎರಡು ಬದಿಗಳಲ್ಲಿ ನಿರ್ಮಿಸಲ್ಪಟ್ಟ ಎತ್ತರವಾದ ಮಿನಾರ್‌ಗಳು ಹಾಗೂ ಮಧ್ಯದಲ್ಲಿ ಇನ್ನೆರಡು ಚಿಕ್ಕ ಮಿನಾರ್‌ಗಳು ಇಂಡೋ ಇಸ್ಲಾಮಿಕ್ ಲಕ್ಷಣಗಳಿಂದ ಕೂಡಿದವುಗಳೆಂದು ಅಭಿಪ್ರಾಯಿಸಬಹುದು. ದ್ವಾರ ಬಾಗಿಲಿನ ಪ್ರಸ್ತರ ಭಾಗದಲ್ಲಿ ಕೆಲವು ಚಿತ್ರಗಳನ್ನು ರಚಿಸಲಾಗಿದ್ದು ಆದರೆ ಅವು ಸ್ಪಷ್ಟವಾಗಿ ಕಾಣುವುದಿಲ್ಲ. ವಿಶಾಲ ಆವರಣದಲ್ಲಿ ಸರಮಸ್ತರನ ಗೋರಿ ಇದ್ದು ಗದ್ದುಗೆಗೆ ಜಾತಿ–ಮತ–ಪಂಥ ಎಂಬ ಬೇಧ ಭಾವಗಳಿಲ್ಲದೇ ಎಲ್ಲ ಕೋಮಿನ ಭಕ್ತರು ತುಂಬಾ ಭಕ್ತಿ ಭಾವನೆಯಿಂದ ನಡೆದುಕೊಳ್ಳುತ್ತಾರೆ.

ಗ್ರಾಮದಲ್ಲಿರುವ ತಾಜುದ್ದೀನ್ ಷೇಕ್ ಮುನಾವರ್ ಬಾದ್‌ಷಾನ ದುರ್ಗಾ ಬಯಲಿನಲ್ಲಿರುವುದು. ಇದಕ್ಕೂ ಸಹ ವಿಶಾಲವಾದ ಆವರಣವಿದೆ. ದರ್ಗಾದ ಮುಂಭಾಗದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ನಿರ್ಮಾಣಗಳೆನ್ನಬಹುದಾದ ತೃಟಿತಗೊಂಡ ಕಂಬಗಳ ಅವಶೇಷಗಳು ಬಿದ್ದಿವೆ. ಅವು ನಕ್ಷತ್ರಾಕಾರದ ರಚನೆ ಹೊಂದಿದ್ದು ಅದರ ಮೇಲೆ ಅಡ್ಡಪಟ್ಟಿಕೆಯನ್ನು ಕೆತ್ತಲಾಗಿದೆ. ಅಲ್ಲದೇ ತೃಟಿತಗೊಂಡಿರುವ ಶಿಲ್ಪಾವಶೇಶಗಳು ಈ ದರ್ಗಾದ ಸುತ್ತಲೂ ಅಲ್ಲಲ್ಲಿ ಬಿದ್ದಿರುವುದನ್ನು ಕಾಣುತ್ತೇವೆ. ಮುನಾವರ್ ಬಾದ್‌ಷಾನ ದರ್ಗಾವನ್ನು ಸಹ ಕೊತ್ವಾಲ್ ಮುಬಾರಕ್‌ನೇ ಕಟ್ಟಿರುವ ಬಗೆಗೆ ಶಾಸನ ಉಲ್ಲೇಖವಿದೆ.

## ಅನ್ಪುರ ಅಲ್ಲಾವುದ್ದೀನ ದರ್ಗಾ

ಇದು ಸೂಫಿಸಂತನೊಬ್ಬನ ಗೋರಿ. ಈತನ ಬಗೆಗೆ ಹೆಚ್ಚಿನ ಉಲ್ಲೇಖಗಳಿಲ್ಲ. ವಿಶಾಲವಾದ ಪ್ರಾಂಗಣದಲ್ಲಿ ಚಿಕ್ಕದಾದ ಸ್ಮಾರಕ ನಿರ್ಮಿಸಲಾಗಿದೆ. ಹಲವು ಬಗೆಯ ಪವಾಡಗಳನ್ನು ಸೃಷ್ಟಿಸಿದ ಈತನ ಬಗೆಗೆ ಎಲ್ಲ ಸಮುದಾಯದ ಜನವರ್ಗವು ಧರ್ಮ, ಜಾತಿ ಭೇದಗಳಿಲ್ಲದೇ ವಿಶಾಲಭಾವನೆಯನ್ನಿಟ್ಟುಕೊಂಡು ಪೂಜೆ ಸಲ್ಲಿಸುತ್ತದೆ. ಬಹಳ ದೂರದ ಊರುಗಳಿಂದಲೂ ಜನರು ಬಂದು ತಮ್ಮ ಹರಕೆಗಳನ್ನು ತೀರಿಸುತ್ತಾರೆ. ಈತನು ಅಸಹಾಯಕರ, ದೀನದಲಿತರ ಮತ್ತು ಕಡು ಬಡವರ ಆರಾಧ್ಯ ದೈವನಾಗಿ ಈ ಭಾಗದಲ್ಲಿ ಪ್ರಸಿದ್ಧಿ ಹೊಂದಿದ್ದಾನೆ.

ಇದೇ ದರ್ಗಾದ ಪಕ್ಕದಲ್ಲಿಯೇ ನೆಲಸಮವಾಗಿದ್ದ ಇನ್ನೊಂದು ಕಟ್ಟಡವಿತ್ತು. ಅದನ್ನು ಅಗೆಯಲಾಗಿದ್ದರಿಂದ ಅಲ್ಲಿ ಕೆಲವೊಂದು ಅವಶೇಷಗಳು ಕಂಡುಬಂದಿವೆ. ಆದರೆ ಅವು ಯಾವ ದೇವಾಲಯಕ್ಕೆ ಸಂಬಂಧಿಸಿದವುಗಳೆಂಬುದರ ಬಗೆಗೆ ಹೆಚ್ಚಿನ ವಿವರಗಳಿಲ್ಲ. ಆದರೆ ಅದನ್ನು ಇತ್ತೀಚೆಗೆ ಈಶ್ವರ ದೇವಾಲಯವೆಂದು ಹೆಸರಿಸಿದ್ದಾರೆ. ಅದು ಆಕಸ್ಮಿಕವಾಗಿ ಸಿಕ್ಕಿರುವಂಥದ್ದು. ಅಧಿಷ್ಠಾನದ ಭಾಗಗಳು, ತ್ರುಟಿತ ಅವಶೇಷಗಳು, ಲಿಂಗ, ಯೋನಿಪೀಠ ಹಾಗೂ ಇತರೆ ಕೆಲವು ಅವಶೇಷಗಳು ಉತ್ಖನನ ಸಂದರ್ಭದಲ್ಲಿ ಕಂಡುಬಂದಿವೆ. ಅಲ್ಲದೇ ಇಲ್ಲೊಂದು ಶಾಸನವು ದೊರಕಿರುವುದು ಪ್ರಮುಖ ಸಂಗತಿ. ದೇವಾಲಯಗಳಿಗೆ ಸಂಬಂಧಿಸಿದ ಕುರುಹುಗಳು ಕಂಡುಬಂದ ಹಿನ್ನೆಲೆಯಲ್ಲಿ ಇತ್ತೀಚೆಗೆ ದಿಢೀರಾಗಿ ಅಲ್ಲೊಂದು ಚಿಕ್ಕ ದೇವಾಲಯವು ನಿರ್ಮಾಣವಾಗಿದೆ. ಇಲ್ಲಿ ದೊರೆತಿರುವ ಶಾಸನವು ಪ್ರಕಟವಾಗಿದ್ದು ಅದು ಕಲ್ಯಾಣದ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು.

ಇವುಗಳಲ್ಲದೇ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಕೆಂಬಾವಿಯಲ್ಲಿ ಜಚಾಮಸಾಬ್ಬಿ ದರ್ಗಾ ಬಹುಜನರ ಆಕರ್ಷಣೆಯ ಕೇಂದ್ರ. ಅವಳು ಸಹ ಬಾಗ್ದಾದನಿಂದ ಬಂದವಳೆಂದು ಪ್ರತೀತಿ ಇದೆ. ಅವಳಿಗಾಗಿ ಕಟ್ಟಿರುವ ಸಣ್ಣ ದರ್ಗಾವು ಸಹ ಇಲ್ಲಿದೆ. ಮತಭೇದಗಳಿಲ್ಲದೇ ಜನರು ಈ ಸ್ಥಳಕ್ಕೆ ಭೇಟಿ ನೀಡುತ್ತಾ. ಪ್ರತಿ ವರ್ಷವೂ ಸಂಬಂಧಿಸಿದ ಉರುಸ್ ವಿಜೃಂಭಣೆಯಿಂದ ಜರುಗುತ್ತದೆ.

ಶಹಾಪುರ ತಾಲೂಕಿನ ಅಗ್ನಿ ಗ್ರಾಮದಲ್ಲಿರುವ ಶಹಾಪತಿ ಶಲಾಲ್ ಪೀರನ್ ದರ್ಗಾವು ಸಹ ಹೆಚ್ಚಿನ ಜನರ ಆಕರ್ಷಣೆಯ ಕೇಂದ್ರವಾಗಿ ಗ್ರಾಮದ ಹೊರಭಾಗದಲ್ಲಿರುವ ಈ ದರ್ಗಾವು ಇಂಡೋ ಇಸ್ಲಾಮಿಕ್ ಶೈಲಿಯ ಗುಮ್ಮಟಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಈ ಸೂಫಿ ಸಂತರು ಬಹುಶಃ ಆದಿಲ್ ಶಾಹಿಗಳ ಕಾಲದಲ್ಲಿ ಗೋಗಿಯ ಮೂಲಕ ಬಂದಿರಬಹುದೆಂದು ಅಭಿಪ್ರಾಯಿಸಲಾಗುತ್ತದೆ.

ಇದೇ ತಾಲೂಕಿನ ಗೋಗಿ ಗ್ರಾಮದಲ್ಲಿರುವ ಸೂಫಿಸಂತ ಚಂದಾಹುಸೇನಿಯ ಪ್ರಭಾವ ಸುಮಾರು ಎರಡಮೂರು ಜಿಲ್ಲೆಗಳಿಗೆ ವ್ಯಾಪಿಸಿದೆ ಎಂದರೆ ತಪ್ಪಾಗಲಾರದು. ಅವರು ವಿಜಾಪುರ ಆದಿಲ್‌ಶಾಹಿಗಳಿಗೆ ರಾಜಗುರುಗಳಾಗಿದ್ದವರು. ಹಾಗಾಗಿ ಅವರ ಪ್ರಭಾವದಿಂದಾಗಿ ಆದಿಲ್‌ಶಾಹಿ ಅರಸರಲ್ಲಿಯೇ ಶ್ರೇಷ್ಠವೆನಿಸಿದ ಯೂಸೂಫ್ ಇಸ್ಮಾಯಿಲ್ ಹಾಗೂ ಇಬ್ರಾಹಿಂ ಆದಿಲ್‌ಷಾರು

ಸಹ ಈ ಸಂತನ ಗೋರಿಯ ಪಕ್ಕದಲ್ಲಿಯೇ ತಮ್ಮ ಗೋರಿಗಳನ್ನು ನಿರ್ಮಿಸಿಕೊಂಡರು. ಅವುಗಳನ್ನು ಈವರೆಗೂ ನೋಡಬಹುದು.

**ಕೊನೆ ಟಿಪ್ಪಣಿ**

೧. ಪಾಟೀಲ ಎಂ.ಬಿ, ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೩೨.

೨. ಪಾಟೀಲ ಎಂ.ಬಿ., ಗುಲಬರ್ಗಾ ಗ್ಯಾಜೆಟಿಯರ್, ಪುಟ.೭೨೬

೩. ನಾಗರಾಜ ಎಂ.ಜಿ., ಮಹಾವೀರಭದ್ರ, ಶ್ರೀಜಗದ್ಗುರು ರಂಭಾಪುರಿ ವೀರಸಿಂಹಾಸನ ಮಹಾಸಂಸ್ಥಾನಮಠ, ಬಾಳೇಹೊನ್ನೂರು, ೨೦೧೦, ಹೆಚ್ಚಿನ ವಿವರಗಳಿಗೆ ಗಮನಿಸಬಹುದು).

೪. ಶ್ರೀ ಕೆ.ವೀರೇಶ, ಬನದೇಶ್ವರ ಚರಿತ್ರೆ, ಪುಟ.೧-೨೫

೫. ಪಾಟೀಲ ಎಂ.ಬಿ., ಗುಲ್ಬರ್ಗಾ ಗ್ಯಾಜಿಟಿಯರ್, ಪುಟ.೭೨೫

೬. ಸೊಪ್ಪಿಮಠ ಬಸಲಿಂಗಯ್ಯ, ತಿಂಥಿಣಿ ಮೋನಪ್ಪಯ್ಯ: ಒಂದು ಅಧ್ಯಯನ, ಪುಟ.೧೯೬-೮೭

೭. ಪೂರ್ವೋಕ್ತ, ಪುಟ.೧೮೭

೮. ಪಾಟೀಲ ಎಂ.ಬಿ., ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೦೪

೯. ಸೊಪ್ಪಿಮಠ ಬಸಲಿಂಗಯ್ಯ, ಕೊಡೇಕಲ್ಲು ಬಸವಣ್ಣ ಒಂದು ಅಧ್ಯಯನ, ಶ್ರೀ ಕೊಡೇಕಲ್ಲ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್ಲು

೧೦. ಪೂರ್ವೋಕ್ತ, ಪುಟ.೧೯-೨೦

೧೧. ಪಾಟೀಲ ಎಂ.ಬಿ, ಗುಲಬರ್ಗಾ ಗ್ಯಾಜಿಟಿಯರ್, ಪುಟ.೭೮೨

೧೨. ತರೀಕೆರೆ ರಹಮತ್, ಕರ್ನಾಟಕದ ಸೂಫಿಗಳು, ಪುಟ.೪೦

# ಅಧ್ಯಾಯ ೭

# ಸಮಾರೋಪ

ಪ್ರಸ್ತುತ ಅಧ್ಯಯನದ ಪ್ರಾರಂಭದಲ್ಲಿಯೇ ವಿಷಯದ ಉದ್ದೇಶ ವ್ಯಾಪ್ತಿ ಹಾಗೂ ಮಹತ್ವದ ಕುರಿತು ಸಮಗ್ರವಾದ ರೂಪರೇಷೆಗಳನ್ನು ರಚಿಸಿಕೊಳ್ಳಲಾಗಿದೆ. ಪ್ರತಿಯೊಂದು ಪ್ರದೇಶದ ಬಗೆಗೂ ಬಿಡಿ ವಿಚಾರಗಳು ಪ್ರಾಸಂಗಿಕವಾಗಿ ವ್ಯಕ್ತವಾಗಿದ್ದರೂ ಅವು ಒಟ್ಟಾರೆ ಸಮಗ್ರತೆಯನ್ನು ತಂದುಕೊಡುವುದಿಲ್ಲ. ಅಂಥ ಕೊರತೆಯನ್ನು ಬಹುಮಟ್ಟಿಗೆ ನಿವಾರಿಸಿಕೊಳ್ಳಲು ನಿರ್ದಿಷ್ಟಪಡಿಸಿದ ಭೌಗೋಳಿಕ ಚೌಕಟ್ಟಿನಲ್ಲಿರುವ ಅಮೂಲಾಗ್ರ ವಿವರಗಳನ್ನು ವಿಭಾಗಿಸಿಕೊಂಡು ಚರ್ಚಿಸಿ ವಿಶ್ಲೇಷಿಸುವ ಅವಶ್ಯಕತೆ ಇರುತ್ತದೆ. ಅಂಥ ಪ್ರಯತ್ನವನ್ನು ಪ್ರತಿಶತ ಅಲ್ಲದಿದ್ದರೂ ಬಹು ಪ್ರಾಣದಲ್ಲಿ ಯಶಸ್ವಿಯಾಗಿ ಪೂರೈಸಲಾಗಿದೆ ಎಂಬ ನಂಬಿಕೆ ಇದೆ. ಸಾಂಸ್ಕೃತಿಕ ಅಧ್ಯಯನಗಳನ್ನು ಕಟ್ಟಿಕೊಳ್ಳುವಾಗ ಬಹು ಆಯಾಮಗಳುಳ್ಳ ತೊಡಕುಗಳು ಸೃಷ್ಟಿಯಾಗುತ್ತವೆ. ಅವುಗಳನ್ನು ಆ ಪ್ರದೇಶದಲ್ಲಿ ಲಭ್ಯವಿರುವ ಆಕಾರಗಳ ಮೂಲಕವೇ ಸಾಧ್ಯವಾದ ಮಟ್ಟಿಗೆ ಬಗೆಹರಿಸಿಕೊಳ್ಳಬೇಕಾಗುತ್ತದೆ. ಅದಕ್ಕೆ ಪೂರಕವಾಗಿ ದೀರ್ಘಕಾಲದ ಕ್ಷೇತ್ರಕಾರ್ಯಗಳನ್ನು ಪೂರೈಸಬೇಕಾಗುತ್ತದೆ. ಅಂಥ ಕಾರ್ಯವನ್ನು ತಕ್ಕಮಟ್ಟಿಗೆ ಪೂರೈಸಲಾಗಿದೆ.

ಇತಿಹಾಸ ಮತ್ತು ಪುರಾತತ್ವ ಆಕರಗಳಲ್ಲದೇ ಮೌಖಿಕ ಆಕರ ಹಾಗೂ ಐತಿಹ್ಯಗಳು ಸಾಂಸ್ಕೃತಿಕ ಅಧ್ಯಯನಗಳ ವಿಷಯದ ವಿಸ್ತಾರಕ್ಕೆ ಹೆಚ್ಚಿನ ಇಂಬು ನೀಡುತ್ತವೆ. ಅಂಥ ಆಕರಗಳನ್ನು ಸದುಪಯೋಗಪಡಿಸಿಕೊಂಡು ಆಯಾ ನಾಡಿನ ಇತಿಹಾಸ ಮತ್ತು ಭೂಗೋಳವನ್ನು ಕಟ್ಟಬೇಕಾಗುತ್ತದೆ. ಅಂಥ ಎಲ್ಲ ವಿವರಗಳನ್ನು ಒಳಗುಮಾಡಿಕೊಂಡು ಈ ಅಧ್ಯಯನ ಪೂರೈಸಲಾಗಿದೆ. ಒಂದು ನಾಡು ಕಟ್ಟಲು ಯಾರೆಲ್ಲ ಶ್ರಮಿಸಿದ್ದಾರೆ ಎಂಬ ತಿಳುವಳಿಕೆಯು ರೂಪಗೊಳ್ಳಲು ಈ ಬಗೆಯಲ್ಲಿ ಏನೆಲ್ಲಾ ವಿಷಯಗಳ ಕುರಿತು ದೀರ್ಘವಾದ ಚರ್ಚೆಗಳು ಬೇಕಾಗುತ್ತವೆ. ಅಂಥ ಕೆಲಸವನ್ನು ಸಾಧ್ಯವಾದ ಮಟ್ಟಿಗೆ ಪೂರೈಸಿರುವ ಸಮಾಧಾನವಿದೆ.

ರಾಜರಿಗೆ ತಮ್ಮ ಸಾಮ್ರಾಜ್ಯದ ಭೌಗೋಳಿಕ ಕ್ಷೇತ್ರವನ್ನು ಹಿಗ್ಗಿಸಿಕೊಂಡು ಕುಳಿತರೇ ಸಾಲದು ಅದರ ನಿರ್ವಹಣೆಗೊಳ್ಳುವ ಮೇಲೆಯೇ ಅದು ಕಲ್ಯಾಣಕಾರಿ ರಾಜ್ಯವಲ್ಲವೊ ಎಂಬುದು ಸಾಬೀತಾಗುತ್ತದೆ. ಅಂಥ ಚಟುವಟಿಕೆಗಳಲ್ಲಿ ಯಾರೆಲ್ಲ ಅಧಿಕಾರಗಳು ದುಡಿದಿದ್ದಾರೆ ಎಂದು ತಿಳಿಯುವ ವಿವರಗಳನ್ನು ತುಸು ದೀರ್ಘವಾಗಿ ಕಟ್ಟಿಕೊಡಲಾಗಿದೆ. ಅಧಿಕಾರದ ಹಂಚಿಕೆ, ಅದರ ನಿಜವಾದ ನಿರ್ವಾಹಕ ಹಾಗೂ ನಿರ್ಮಾಪಕರು ಯಾರೆಲ್ಲ ಇದ್ದರು ಹಾಗೂ ಅವರಿಂದಾದ ಪರಿಣಾಮಗಳ ಕುರಿತು ಆಡಳಿತಕ್ಕೆ ಸಂಬಂಧಿಸಿದ ಅಧ್ಯಾಯ ವಿವರಗಳಲ್ಲಿ ಚರ್ಚಿಸಲಾಗಿದೆ.

ಸಾಂಸ್ಕೃತಿಕ ಅಧ್ಯಯನವೆಂದು ಹೇಳಿದ ಕೂಡಲೇ ಮುಖ್ಯವಾಗಿ ಆ ಪ್ರದೇಶದ ಆ ದಿನಗಳಲ್ಲಿದ್ದ ಸಮಾಜೋ-ಧಾರ್ಮಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ವಿವರಗಳು ಹರಳುಗಟ್ಟಲೇಬೇಕು. ಲಭ್ಯವಿರುವ ಆಕಾರಗಳನ್ನು ಸಮಗ್ರವಾಗಿ ಕಣ್ತೆರುದು ನೋಡಿದಾಗ ಬಹು ಸೋಜಿಗವಾದ ವಿಷಯಗಳು ಗೊತ್ತಾಗುತ್ತವೆ. ಮಾನವನು ಕಾಲಕಾಲಕ್ಕೆ ಕಟ್ಟಿಕೊಂಡು ಬಂದಿರುವ ಗುಣಾವಗುಣಗಳ ಅನಾವರಣವು ಕಂಡುಬರುತ್ತದೆ. ಉತ್ತಮ ವಿಚಾರಗಳನ್ನು ಸಂತೋಷದಿಂದ ಸ್ವೀಕರಿಸುತ್ತಾ ಹಾಗೂ ಅದೇ ಕಾಲದಲ್ಲಿ ಹುಟ್ಟಿಕೊಂಡ ಅನಿಷ್ಟಗಳಿಗೆ ಯಾರನ್ನೂ ಹೊಣೆಗಾರರನ್ನಾಗಿ ಮಾಡಬೇಕು ಎಂಬ ತಳಮಳವು ಮನಸ್ಸಿನಲ್ಲಿ ಹುಟ್ಟಿಕೊಳ್ಳುತ್ತದೆ. ಬಹುಶಃ ಇತಿಹಾಸವು ತುಂಬಾ ಕಠೋರವಾಗಿದ್ದರಿಂದಲೇ ಯಾರ ಹಂಗಿಲ್ಲದೇ ಘಟನೆಗಳನ್ನು ದಾಖಲಿಸುತ್ತಾ ಹೋಗುತ್ತದೆ. ಅವುಗಳನ್ನು ಪರಿಹರಿಸಿಕೊಳ್ಳುವ ಒಳ ದಾರಿಗಳ ಸೂಕ್ಷ್ಮಗಳನ್ನು ಇತಿಹಾಸವೇ ಬಿಟ್ಟುಹೋಗಿರುತ್ತದೆ. ಅಂಥ ವಿವರಗಳಿಂದಲೇ ನಮ್ಮ ಪಯಣವು ಸಾಗಬೇಕು. ಸಮಾಜೋ-ಧಾರ್ಮಿಕ ಹಾಗೂ ಆರ್ಥಿಕ ವಿವರಗಳನ್ನು ಕಟ್ಟಿಕೊಡುವ ದೀರ್ಘ ಪ್ರಯಾಣದಲ್ಲಿ ಕೆಲವು ಸ್ಥಳಗಳಲ್ಲಿ ನಿಲ್ಲದೇ ಕೆಲವು ಆಕರಗಳನ್ನು ಗಮನಿಸದೆ ದಾರಿ ಸಾಗುವ ಧಾವಂತದಲ್ಲಿ ಕೆಲವು ಕೊರತೆಗಳು ಈ ಅಧ್ಯಾಯದಲ್ಲುಂಟು.

ಧಾರ್ಮಿಕ ಸಂಗತಿಗಳನ್ನು ನಿರ್ವಚಿಸುವಾಗ ಈಗಾಗಲೇ ಕಟ್ಟಿಕೊಂಡಿರುವ ಅಧ್ಯಯನಗಳ ಸೌಧದ ಮೇಲೆ ಹೊಸಬಗೆಯ ತಿರುವುಗಳನ್ನು ಗಮನಿಸಲು ಸಾಧ್ಯವುಂಟು ಎಂಬ ವಿಷಯವು ಪ್ರಸ್ತುತ ಅಧ್ಯಯನದಲ್ಲಿ ಸಾಬೀತುಗೊಳಿಸುವ ಪ್ರಯತ್ನ ಮಾಡಲಾಗಿದೆ. ಕಾಳಮುಖ ಪರಂಪರೆಯಲ್ಲಿಯೇ ಇದ್ದ ಸಿಂಹಪರಿಷನ್ಮಂಡಲಿಯ ಮೂಲಕ ಸಿಡಿದೆದ್ದು ಪಾಶುಪತದಲ್ಲಿಯೇ ಇದ್ದ ಪ್ರಗತಿಪರ ವಿಚಾರ ಧಾರೆಯಾದ ನಾಥದ ಮೂಲಕ ವಿಚಾರಕ್ರಾಂತಿಗಳನ್ನು ಶರಣ ಚಳುವಳಿಯ ಮುಂದಿನ ದಿನಗಳಲ್ಲೇ ಈ ನೆಲದಲ್ಲಿ ಪ್ರಾರಂಭಿಸಿದ್ದಾರೆ. ಅಂಥ ಪರಿಣಾಮಗಳೇ ವಚನ ಧರ್ಮ ಅಥವಾ ಶರಣ ಚಳುವಳಿಗೆ ಈ ನೆಲದ ಗುಣವೂ ಸಹ ಹೇಗೆ ಪೂರಕವಾಯಿತೆಂಬ ವಿವರಗಳನ್ನು ಕಟ್ಟಿಕೊಟ್ಟಿರುವ ಸಮಾಧಾನವಿದೆ. ಅಧ್ಯಯನದಲ್ಲಿ ಊಹಾತ್ಮಕ ತಥ್ಯಗಳಿಗೆ ಸ್ವಲ್ಪಮಟ್ಟಿನ ಜಾಗವುಂಟು. ಆ ಹಿನ್ನೆಲೆಯಲ್ಲಿ ಈ ವಿಚಾರಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಈ ಭಾಗದ ಸಾಂಸ್ಕೃತಿಕ ಪ್ರತೀಕಗಳಾದ ವಾಸ್ತು ಮತ್ತು ಮೂರ್ತಿಶಿಲ್ಪಗಳ ವಿವರಗಳು ಹಲವು ದಶಕಗಳಿಂದಲೂ ಅಧ್ಯಯನಕಾರರ ಉಪೇಕ್ಷೆಗೆ ಒಳಗಾಗುತ್ತಿವೆ. ಅಂಥ ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ನಿವಾರಿಸಿಕೊಳ್ಳಲು ಪ್ರತಿ ಗ್ರಾಮದ ಕ್ಷೇತ್ರಕಾರ್ಯ ಪೂರೈಸಿ ಇತಿಹಾಸ-ಪುರಾತತ್ವ ಹಾಗೂ ಇನ್ನಿತರೆ ವಿವರಗಳನ್ನು ಸಮಗ್ರವಾಗಿ ದಾಖಲಿಸಿಕೊಂಡು ವಿವರಿಸಿರುವ ಪ್ರಯತ್ನವು ಇದಾಗಿದೆ.

ಈ ನಾಡಿನಲ್ಲಿರುವ ದೇವಾಲಯ ಹಾಗೂ ಮೂರ್ತಿಶಿಲ್ಪಗಳ ಕುರಿತೇ ಬಹು ವಿಸ್ತೃತವಾದ ಅಧ್ಯಯನ ಕೈಗೊಳ್ಳಲು ಸಾಕಷ್ಟು ಸಂಪನ್ಮೂಲ ಆಕರಗಳು ಈ ನೆಲದಲ್ಲಿ ಹುದುಗಿವೆ. ಅವುಗಳನ್ನು ಸಮಗ್ರವಾಗಿ ದಾಖಲಿಸಿ ವಿವರಿಸಿರುವ ಸಮಾಧಾನವಿದ್ದರೂ ಸಂಬಂಧಿಸಿದ ತಾಂತ್ರಿಕ ವಿವರಗಳಾದ ಅಳತೆ, ಮಾಪನ, ಪ್ರಮಾಣಗಳ ಕುರಿತು ವಿವರ ತಯಾರಿಸಿಕೊಳ್ಳಬೇಕಾಗಿತ್ತು. ಆದರೆ ಅದನ್ನು ಪೂರೈಸಲಾಗಲಿಲ್ಲ ಎಂಬ ಕೊರತೆಯು ಇದೆ. ಮುಂಬರುವ ಸಂಶೋಧಕರು ಈ ಕೊರತೆಗಳನ್ನು ನೀಗಿಸಬಹುದೆಂಬ ಮಹದಾಸೆಯನ್ನು

ಇಟ್ಟುಕೊಳ್ಳಲಾಗಿದೆ. ಹಾಗಾಗಿ ಕೇವಲ ಅವುಗಳ ಕುರಿತಿರುವ ಸಾಮಾನ್ಯ ವಿವರಗಳನ್ನು ಮಾತ್ರ ದಾಖಲಿಸಲಾಗಿದೆ. ಸಂಶೋಧನೆ ಅಥವಾ ಅಧ್ಯಯನ ಎನ್ನುವುದು ಚಲನಾತ್ಮಕ ಪ್ರಕ್ರಿಯೆ. ಹಾಗಾಗಿ ಮುಂಬರುವ ಸಂಶೋಧಕರು ಆ ಕೊರತೆಗಳನ್ನು ತುಂಬುತ್ತಾರೆ.

ಪ್ರಸ್ತುತ ಅಧ್ಯಯನವು ಇತಿಹಾಸ-ಪುರಾತತ್ವ ಚೌಕಟ್ಟಿನಲ್ಲಿ ರೂಪಗೊಂಡಿದ್ದರೂ ಅವುಗಳನ್ನು ಮೀರಿ ಈ ನಾಡಿನ ಇತಿಹಾಸ ಕಟ್ಟಿಕೊಡುವಲ್ಲಿ ಸಾಂಸ್ಕೃತಿಕ ಆಚರಣಾ ನೆಲೆಗಳು ತುಂಬ ಮುಖ್ಯಪಾತ್ರವಹಿಸುತ್ತವೆ. ಅವುಗಳಿಗೆ ಭೂತ, ವರ್ತಮಾನ ಮತ್ತು ಭವಿಷ್ಯದ ಕಾಲ ಮಿತಿಯ ಹಂಗಿರುವುದಿಲ್ಲ. ಹಾಗಾಗಿ ಅದರ ಆದಿ ಮತ್ತು ಅಂತ್ಯವನ್ನು ಗುರುತಿಸುವುದು ಕಷ್ಟ. ಎಲ್ಲ ಕಾಲದ ಅನುಭವಗಳನ್ನು ತನ್ನೊಡಲೊಳಗೆ ನಿಷ್ಕರ್ಷೆ ಮಾಡುತ್ತಾ ಹೊಸ ಬಗೆಗಳನ್ನು ನಿರ್ಮಿಸುತ್ತಾ ಸಾಗುವ ಇಂಥ ನೆಲೆಗಳ ಕುರಿತು ಅಲ್ಲಿರುವ ಭೌತಿಕ ಆಯಾಮಗಳ ಹಿನ್ನೆಲೆಯಲ್ಲಿ ಮಾತ್ರ ಸಾಧ್ಯವಾದ ಮಟ್ಟಿಗೆ ಆ ಅಧ್ಯಾಯವನ್ನು ಪೂರ್ಣಗೊಳಿಸುವ ಕಿರು ಪ್ರಯತ್ನ ಮಾಡಲಾಗಿದೆ. ಈ ಅಧ್ಯಾಯವು ಸಹ ಬಹುಶ್ರುತ ಹೊಂದಿದ ಜ್ಞಾನವನ್ನು ಮತ್ತು ಕ್ಷೇತ್ರ ಮಾಹಿತಿಗಳನ್ನು ಬಯಸುತ್ತದೆ. ಅಂತಹ ವಿವರಗಳನ್ನು ಸೀಮಿತ ಕಾಲಾವಧಿಯಲ್ಲಿ ಹುರಿಗೊಳಿಸಿಕೊಂಡು ಮಂಡಿಸುವುದು ಸಾಧ್ಯವಾಗಲಾರದಂತದ್ದು. ಹಾಗಾಗಿ ಪ್ರಸ್ತುತ ಅಧ್ಯಯನಕ್ಕಾಗಿ ನಿರ್ವಹಿಸಿದ ಕ್ಷೇತ್ರಕಾರ್ಯದಲ್ಲಿ ಕಂಡಿರುವ ಆ ಬಗೆಯ ಕೆಲವು ನೆಲಗಳನ್ನು ಅದರಲ್ಲೂ ಪುರಾತತ್ವ ಅಧ್ಯಯನ ನೆಲೆಯಲ್ಲಿ ಮಾತ್ರ ಸಮೀಕರಿಸಿಕೊಂಡು ಹೇಳುವ ಪ್ರಯತ್ನ ಮಾಡಲಾಗಿದೆ.

ಒಟ್ಟಾರೆ ಯಾದಗಿರಿ ಜಿಲ್ಲೆಯ ಪ್ರಾಚೀನ ವಿಭಾಗಗಳ ಕುರಿತು ಇತಿಹಾಸ, ಪುರಾತತ್ವ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ರೂಪಗೊಂಡಿರುವ ಇಂಥ ಸಮಗ್ರ ಮಾಹಿತಿಗಳನ್ನು ಹಲವು ಬಗೆಯ ಚರ್ಚೆಗಳ ಮೂಲಕ ಆ ಪ್ರದೇಶದ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವ ಕಿರು ಪ್ರಯತ್ನ ಮಾತ್ರ ಪ್ರಸ್ತುತ ಮಹಾಪ್ರಬಂಧವಾಗಿದೆ.

**ಆಕರಸೂಚಿ**


೧. ಅಪರ್ಣ ಕೂ.ಸ., 'ದೇವಾಲಯ ವಾಸ್ತುಶಿಲ್ಪ ಪರಿಚಯ', ಕವಿವಿ, ಹಂಪಿ, ೧೯೯೯

೨. ಅರುಣಿ ಎಸ್.ಕೆ, ಸುರಪುರ ಸಂಸ್ಥಾನ, ಭಾರತೀಯ ಕಲಾ ಪ್ರಕಾಶನ, ನವದೆಹಲಿ, ೨೦೦೪.

೩. ಅಕ್ಕಿ ಡಿ.ಎನ್, ಹಕ್ಕಲು ತೆನೆ, ಕವಿ ಕುಂಚ ಪ್ರಕಾಶನ ಗೋಗಿ, ೨೦೧೧.

೪. ಅಕ್ಕಿ ಡಿ.ಎನ್, ಜಿನದನಿ, ಪವನ ಪ್ರಕಾಶನ, ಗುಲಬರ್ಗಾ, ೨೦೧೦.

೫. ಅಬ್ದುಲ್ ಕರೀಂ ಕನ್ಯಾಕೋಳೂರು(ಸಂಪಾದಕರು), ಯಾದಗಿರಿ ಜಿಲ್ಲೆಯ ಶಾಸನಗಳು, ಹನಿ ಪ್ರಕಾಶನ, ಶಹಾಪುರ, ೨೦೧೦.

೬. 'ಇತಿಹಾಸ ದರ್ಶನ ಸಂಪುಟಗಳು', ಇತಿಹಾಸ ಅಕಾಡೆಮಿ, ಬೆಂಗಳೂರು.

೭. ಕಪಟರಾಳ ಕೃಷ್ಣರಾವ್: 'ಸುರಪುರ ಸಂಸ್ಥಾನದ ಇತಿಹಾಸ', ಬೆಂಗಳೂರು.೧೯೭೭

೮. ಕೊಪ್ಪ ಎಸ್.ಕೆ., 'ತರ್ದವಾಡಿ ನಾಡು-ಒಂದು ಅಧ್ಯಯನ', ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೯. ಕೊಪ್ಪ ಎಸ್.ಕೆ, ಪಂಚಪೂರ್ಮ ಕರ್ನಾಟಕದ ಶಾಸನಗಳು, ಕಲಬುರ್ಗಿ, ೨೦೧೧

೧೦. ಕಲಬುರ್ಗಿ ಎಂ.ಎಂ., 'ಮಾರ್ಗ ಸಂಪುಟಗಳು ೧, ೨ ಮತ್ತು ೩' ಸ್ವಪ್ನಬುಕ್ ಹೌಸ್, ಬೆಂಗಳೂರು, ೨೦೧೦

೧೧. ಕುಲಕರ್ಣಿ ವಿರುಪಾಕ್ಷ (ಅನು)., 'ಕಾಪಾಲಿಕರು ಮತ್ತು ಕಾಳಾಮುಖರು', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೫.

೧೨. ಕೃಷ್ಣ ಎ., 'ಸಗರನಾಡ ದರ್ಶನ', ಸುರಪುರ-೧೯೮೫.

೧೩. ಕುಷ್ಟಗಿ ವಸಂತ, ಸಾಂಸ್ಕೃತಿಕ ಪದರುಗಳು, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ, ಗುಲಬರ್ಗಾ, ೨೦೧೧.

೧೪. ಕೊಲ್ಹಾರಕುಲಕರ್ಣಿ ಕೃಷ್ಣ(ಸಂ), ನಾ.ಶ್ರೀ.ರಾಜಪುರೋಹಿತರ ಸಂಶೋಧನ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೮

೧೫. ಕಾಮತ್ ಸೂರ್ಯನಾಥ(ಸಂ), ಹಿಸ್ಟೋರಿಯೋಗ್ರಾಫಿ ಆಫ್ ಕರ್ನಾಟಕ, ಮಿಥಿಕ್ ಸೊಸೈಟಿ, ಬೆಂಗಳೂರು, ೧೯೯೧.

೧೬. ಗೋಗಿ ಹನುಮಾಕ್ಷಿ., 'ಸುರಪುರ ತಾಲೂಕಿನ ಶಾಸನಗಳು', ಹುಬ್ಬಳಿ, ೨೦೦೫.

೧೭. ಗೋಪಾಲ ಆರ್ (ಸಂ)., 'ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು-೨೦೦೭

೧೮. ಗೋಗಿ ಹನುಮಾಕ್ಷಿ (ಸಂಪಾದಕರು), ಕಲಬುರ್ಗಿಯ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ, ನವನಗರ ಹುಬ್ಬಳ್ಳಿ, ೧೯೯೬.

೧೯. ಗೋಗಿ ಹನುಮಾಕ್ಷಿ(ಸಂಪಾದಕರು), ಅನುಶಾಸನ, ಸಂಪುಟ.೧, ಮಹಿಳಾ ಸಾಹಿತ್ಯಿಕ ಪ್ರಕಾಶನ, ನವನಗರ, ಹುಬ್ಬಳ್ಳಿ, ೨೦೦೨.

೨೦. ಗುಂಥೈರ್ ಸೊಂಥಿಮಿರ್, ಕಿಂಗ್ಸ್ ಆಫ್ ಹಂಟರ್ಸ್ ವಾರಿಯರ್ಸ್ ಆ್ಯಂಡ್ ಶೆಫರಡ್ಸ್, ಇಂದಿರಾಗಾಂಧಿ ನ್ಯಾಶನಲ್ ಸೆಂಟರ್ ಫಾರ್ ದಿ ಆರ್ಟ್ಸ್, ನ್ಯೂದೆಹಲಿ, ೧೯೯೭.

೨೧. ಗೋಗಿ ಹನುಮಾಕ್ಷಿ(ಸಂ) ಡಾ.ಆರ್.ಎನ್.ಗುರುವ ಶಾಸನ ಸಂಶೋಧನ ಪ್ರಬಂಧಗಳು, ಧಾರವಾಡ ಮಹಿಳಾ ಸಾಹಿತ್ಯಿಕಾ, ನವನಗರ, ಹುಬ್ಬಳ್ಳಿ, ೨೦೧೪.

೨೨. ಗೋಪಾಲ್ ಬಾ.ರಾ., ಕರ್ನಾಟಕದ ಕಲೆಗಳು(ನಾಲ್ಕನೆಯ ಸಂಪುಟ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩.

೨೩. ತರೀಕೆರೆ ರಹಮತ್, ಕರ್ನಾಟಕದ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೨೪. ತರೀಕೆರೆ ರಹಮತ್, ಕರ್ನಾಟಕದ ನಾಥಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨೫. ತಿಂಥಣಿ ಮೌನೇಶ್ವರ ವಚನಗಳು, (ಸಂಪಾದಕರು) ಸಿ.ಬಿ.ಕಡಕೋಳ ಮತ್ತು ಡಾ.ಕೆ.ಪಿ.ಈರಣ್ಣ, ಪ್ರಕಟಣೆ, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೬. ದೇವರಕೊಂಡಾರೆಡ್ಡಿ(ಸಂ), ಮನ್ವಾಚಾರಿ ಕಲವೀರ, ಭಟ್‌ಸೂರಿ ಕೆ.ಜಿ ಹಾಗೂ ಪರಮಶಿವಮೂರ್ತಿ ಡಿ.ವಿ(ಸಹ ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಕವಿವಿ, ಹಂಪಿ, ೨೦೦೩.

೨೭. ದೇವರಕೊಂಡಾರೆಡ್ಡಿ(ಸಂ), ಮನ್ವಾಚಾರಿ ಕಲವೀರ, ಭಟ್‌ಸೂರಿ ಕೆ.ಜಿ ಹಾಗೂ ಪರಮಶಿವಮೂರ್ತಿ ಡಿ.ವಿ(ಸಹ ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧೦, ಬಿಜಾಪುರ ಜಿಲ್ಲೆ, ಕವಿವಿ, ಹಂಪಿ, ೨೦೦೩.

೨೮. ದೇಸಾಯಿ ಬಿ.ಪಿ., ಜೈನಿಸಮ್ ಇನ್ ಸೌಥ್ ಇಂಡಿಯಾ, ಆ್ಯಂಡ್ ಸಮ್ ಜೈನಾ ಎಪಿಗ್ರಾಫ್ಸ್, ಜೈನ್ ಸಂಸ್ಕೃತಿ ಸಂರಕ್ಷಸಂಘ, ಸೊಲ್ಲಾಪುರ, ೨೦೦೧.

೨೯. ಢಾಕಿ ಎಂ.ಎ., ಇಂಡಿಯನ್ ಟೆಂಪಲ್ ಫಾರ್ಮ್ಸ್, ಅಭಿನವ ಪಬ್ಲಿಕೇಷನ್ಸ್, ನವದೆಹಲಿ, ೧೯೯೭.

೩೦. ನರಸಿಂಹಮೂರ್ತಿ ಎಂ.ವಿ, ಕರ್ನಾಟಕ ನಾಣ್ಯ ಪರಂಪರೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೩೧. ನರಸಿಂಹಮೂರ್ತಿ ಎ.ವಿ., ಕರ್ನಾಟಕದ ಸೇವುಣರ ಇತಿಹಾಸ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೧.

೩೨. ನಾಗರಾಜ ಎಂ.ಜಿ., ಸಾಂಸ್ಕೃತಿಕ ಶ್ರೀ ವೀರಭದ್ರಸ್ವಾಮಿ, ಬಾಳೆಹೊನ್ನೂರು, ೧೯೯೯.

೩೩. ನಾಗರಾಜ ಎಂ.ಜಿ, ಮಹಾ ವೀರಭದ್ರ, ಸಂಪುಟ ಒಂದು, ಬಾಳೆಹೊನ್ನೂರು, ೨೦೧೧

೩೪. ನಾಗಯ್ಯ ಜೆ.ಎಂ., 'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ', ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ, ೧೯೯೭.

೩೫. ನಾಗಭೂಷಣ ಸಿ., ಕಲ್ಯಾಣ ಕರ್ನಾಟಕ, ಸಾಹಿತ್ಯ-ಸಂಸ್ಕೃತಿ, ಅವಿರತ ಪುಸ್ತಕ, ಬೆಂಗಳೂರು, ೨೦೦೯.

೩೬. ನೇಗಿನಾಳ ಎಂ.ಬಿ., ಮೈಲಾರಲಿಂಗ-ಖಂಡೋಬ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨.

೩೭. ಪದ್ದಯ್ಯ ಕೆ., 'ರಿಸೆಂಟ್ ಸ್ಟಡೀಸ್ ಇನ್ ಇಂಡಿಯನ್ ಆರ್ಕಿಯಾಲಜಿ', ಮುನಶಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನವದೆಹಲಿ, ೨೦೦೨.

೩೮. ಪಡಸೆಟ್ಟಿ ಎಂ.ಎಂ., 'ತಿಂಥಣಿ ಮೋನಪ್ಪಯ್ಯ-ಒಂದು ಅಧ್ಯಯನ' ವೀರಶೈವ ಸಂಸ್ಥೆ ತೋಂಟದಾರ್ಯ ಮಠ, ಗದಗ, ೧೯೯೨.

೩೯. ಪಂಡಿತ–ಐರೋಡಿ ಯಜ್ಞನಾರಾಯಣ ಉಡುಪ, ಪುರಾಣ ಭಾರತ ಕೋಶ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೨.

೪೦. ಪಾಟೀಲ ಎಂ.ಬಿ (ಮುಖ್ಯ ಸಂಪಾದಕರು) 'ಗುಲಬರ್ಗಾ ಜಿಲ್ಲೆಯ ಗ್ಯಾಸೆಟಿಯರ್', ಬೆಂಗಳೂರು, ೧೯೯೭.

೪೧. ಪಾಟೀಲ ಎಂ.ಬಿ (ಮುಖ್ಯ ಸಂಪಾದಕರು) 'ಬಿಜಾಪುರ ಜಿಲ್ಲೆಯ ಗ್ಯಾಸೆಟಿಯರ್', ಬೆಂಗಳೂರು, ೧೯೯೮.

೪೨. ಪಾಟೀಲ ಚನ್ನಬಸಪ್ಪ ಮತ್ತು ಬಾಲಸುಬ್ರಮಣ್ಯ, ಶಿರವಾಳ, ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೧.

೪೩. ಪಾಟೀಲ ವಿನೋದಾ, ಶಿಲ್ಪಗಳಲ್ಲಿ ಶಿವಭಕ್ತರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೩.

೪೪. ಪ್ರಭಾಕರ ಎಂ.ಎನ್., 'ದೇವಾಲಯ ವಾಸ್ತು', ಕವಿವಿ, ಹಂಪಿ, ೨೦೧೧.

೪೫. ಬಡಿಗೇರ ವಾಸುದೇವ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೪೬. ಬಸವರಾಜು ಎಲ್, ಬಸವಪೂರ್ವ ವಚನಕಾರರು, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ೨೦೦೯.

೪೭. ಮರಾಠೆ ರಾಮಕೃಷ್ಣ(ಕನ್ನಡ ಅನುವಾದ), ದಕ್ಷಿಣದ ದೇಸಿದೇವರು ಶ್ರೀ ಖಂಡೋಬ, ಸಿವಿಜಿ ಪಬ್ಲಿಕೇಷನ್, ಬೆಂಗಳೂರು, ೨೦೦೩.

೪೮. ಮಂಜುನಾಥ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ ಚಿತ್ಕಲಾ ಪ್ರಕಾಶನ, ಕುಪ್ಪಂ, ೨೦೧೨.

೪೯. ಮಹದೇವ ಸಿ., (ಸಂಪಾದಕರು), ಮೈಲಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೦. ಮೂರ್ತಿ ಚಿದಾನಂದ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನಬುಕ್‌ಹೌಸ್, ಬೆಂಗಳೂರು, ೨೦೧೨.

೫೧. ರಿತ್ತಿ ಶ್ರೀನಿವಾಸ(ಸಂ), ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೦.

೫೨. ಶಿವತಾರಕ ಕೆ.ಬಿ., 'ಕರ್ನಾಟಕದ ಪುರಾತತ್ವ ನೆಲೆಗಳು', ಕವಿವಿ, ಹಂಪಿ, ೨೦೦೧.

೫೩. ಶಿವಾನಂದ ವಿ., 'ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು', ಬನಾರಸ್ ವಿಶ್ವವಿದ್ಯಾಲಯ ಬನಾರಸ್, ೧೯೯೨

೫೪. ಸಿಂದಗಿ ರಾಜಶೇಖರ, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್ಸ್, ಧಾರವಾಡ, ೧೯೮೮.

೫೫. ಸುಂದರ ಅ., 'ದಿ ಅರ್ಲಿ ಚೇಂಬರ್ ಟೂಂಬ್ಸ್ ಆಫ್ ಸೌಥ್ ಇಂಡಿಯಾ', ಯುನಿವರ್ಸಿಟಿ ಪಬ್ಲಿಕೇಷನ್ಸ್, ದೆಹಲಿ, ೧೯೬೫.

೫೬. ಸುಂದರ ಅ (ಸಂಪಾದಕರು) 'ಕರ್ನಾಟಕದ ಚರಿತ್ರೆ ಸಂಪುಟ-೧', ಕವಿವಿ, ಹಂಪಿ, ೧೯೯೭.

೫೭. ಸುರೇಂದ್ರರಾವ್ ಬಿ., 'ಕರ್ನಾಟಕದ ಚರಿತ್ರೆ ಸಂಪುಟ-೨', ಕವಿವಿ, ಹಂಪಿ, ೧೯೯೭.

೫೮. ಸೊಪ್ಪಿಮಠ ಬಸವಲಿಂಗ, 'ಕೊಡೇಕಲ್ಲ ಬಸವಣ್ಣ-ಒಂದು ಅಧ್ಯಯನ:' ಶ್ರೀ ಕೊಡೇಕಲ್ಲ ಬಸವೇಶ್ವರ ಅಧ್ಯಯನ ಪೀಠ ಕೊಡೆಕಲ್ಲು, ೧೯೯೭.

೫೯. ಹಿರೇಮಠ ಬಿ.ಆರ್ ಮತ್ತು ಗೋಗಿ ಹನುಮಾಕ್ಷಿ(ಸಂಪಾದಕರು), ಮುದನೂರು ಮತ್ತು ಯಡ್ರಾಮಿ ಶಾಸನಗಳು, ಶಿವಚಂದ್ರ ಪ್ರಕಾಶನ, ನವನಗರ, ಹುಬ್ಬಳ್ಳಿ, ೧೯೯೪.

೬೦. ಹಿರೇಮಠ ಎಸ್.ಎಸ್., ಕಾಳಾಮುಖ ದರ್ಶನ, ಸಮತಾ ಪ್ರಕಾಶನ, ಹರಪನಹಳ್ಳಿ, ೨೦೦೪.

೬೧. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.



ಸುರಪುರ ತಾಲೂಕು
ಉ
ಜೇವರಗಿ ತಾಲೂಕು
ಶಹಾಪುರ ತಾಲೂಕು
ದೇವದುರ್ಗ ತಾಲುಕು
*ಯಾಳಗಿ
*ಚಿಂಚೊಳ್ಳಿ
ಕೆಂಭಾವಿ
*ನಾಗನೂರು
*ಮಾವಿನಹಳ್ಳಿ
*ರಾಂಪೂರ
*ಮಾಲಗತ್ತಿ
*ಕೊರಡ್ಕಲ್
*ಬೈಚಬಾಳ
*ಕರಿಭಾವಿ
*ಅರಕೇರಾ
*ಕುರಬಹಳ್ಳಿ
*ವಾಗಣಗೇರಾ
ಸುರಪುರ
*ಇಸ್ಲಾಂಪುರ
*ಕಲ್ಲದೇವನಹಳ್ಳಿ
ಹುಣಸಗಿ
*ಗೋನಾಳ
*ಖಾನಾಪುರ
*ಹಾವಿನಾಳ
*ದೇವಪುರ
ಮರಳಬಾವಿ
*ಹಗರಟಗಿ
*ಬೂದಿಹಾಳ
*ಕಕ್ಕೇರಾ
*ಕೊಡೆಕಲ
*ಕಮಲಾಪುರ
*ಡೋಣಿನದಿ




ಗರನಾಡು: ಕಲಬುರ್ಗಿ ಜಿಲ್ಲೆಯಲ್ಲಿನ ಸುರಪುರ, ಶಹಾಪುರ, ಜೇವರಗಿ ತಾಲೂಕುಗಳಲ್ಲಿನ ಕೃಷ್ಣಾ – ಭೀಮಾ ನದಿಗಳ
ಧ್ಯಮಂಡಲದ ಹಾಗೂ ಡೋಣಿ ನದಿ ದಡದ ತಾಳಿಕೋಟೆ.

ಕೃಪೆ; ಸಗರನಾಡು ದರ್ಶನ, ಸ್ಮರಣ ಗ್ರಂಥ, ಸುರಪುರ




Fig. 1 : Map of Shorapur Doab and its Geographical Features

ಕೃಪೆ; ಎಸ್. ಕೆ. ಅರುಣಿ, ಸುರಪುರ ಸಂಸ್ಥಾನ, ಭಾರತೀಯ ಕಲಾ ಪ್ರಕಾಶನ, ದೆಹಲಿ



ನಾದಯ್ಯ ದೇವಾಲಯದ ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ನಾನಯ್ಯ ದೇವಾಲಯದ ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ಸುಗಣೇಶ್ವರ ದೇವಾಲಯದ ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)




ಕೋಷ್ಠಾಗಾರ ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)




ಈಶ್ವರ ದೇವಾಲಯ, ಅಧಿಷ್ಠಾನ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ಈಶ್ವರ ದೇವಾಲಯ, ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ಕದಂಬೇಶ್ವರ ದೇವಾಲಯ, ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ.
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ಕೋಷ್ಠಾಗಾರ/ಮಠ ತಲನಕ್ಷೆ, ಶಿರವಾಳ




ಕೋಷ್ಠಾಗಾರ/ಮಠ, ಅಧಿಷ್ಠಾನ, ಶಿರವಾಳ




ಕದಂಬೇಶ್ವರ ದೇವಾಲಯ, ಅಧಿಷ್ಠಾನ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)




ಕುಂಬಾರ ದೇವಾಲಯ, ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ.
ಶಿರವಾಳ (ಸ್ಮಾರಕಗಳು. ಶಿಲ್ಪಗಳು. ಶಾಸನಗಳು)




ಕುಂಬಾರ ದೇವಾಲಯ, ಅಧಿಷ್ಠಾನ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ಸಿದ್ಧೇಶ್ವರ ದೇವಾಲಯ, ಪಂಚಕೂಟ ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ,
ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)



ಮಲ್ಲಿಕಾರ್ಜುನ ದೇವಾಲಯ, ತಲನಕ್ಷೆ, ಶಿರವಾಳ

ಕೃಪೆ; ಚನ್ನಬಸಪ್ಪ ಎಸ್. ಪಾಟೀಲ ಮತ್ತು ಬಾಲಸುಬ್ರಮಣ್ಯ.

ಶಿರವಾಳ (ಸ್ಮಾರಕಗಳು, ಶಿಲ್ಪಗಳು, ಶಾಸನಗಳು)

# ಛಾಯಾಚಿತ್ರಗಳು





ಬೃಹತ್ ಶಿಲಾ ಸಮಾಧಿಗಳು, ರಾಜನಕೋಳುರು



ಬಾವಿ ಬಸವಣ್ಣ ದೇವಾಲಯದ ಮುಖಮಂಟಪ, ಐವೂರು



ನಗರೇಶ್ವರ ದೇವಾಲಯ, ಗುರಮಿಟ್ಕಲ್




ರಾಮಲಿಂಗೇಶ್ವರ ದೇವಾಲಯ, ವಜ್ಜಲ




ಸೋಮನಾಥ ದೇವಾಲಯ, ಕಕ್ಕೇರಿ




ಶಂಕರಲಿಂಗ ದೇವಾಲಯ, ಇಡ್ಲೂರು




ನನ್ನಯ್ಯ ದೇವಾಲಯ, ಶಿರವಾಳ




ಮಕರತೋರಣ, ರೇವಣಸಿದ್ಧೇಶ್ವರ ದೇವಾಲಯ, ಕೆಂಬಾವಿ




ಅಂತರಾಳ, ಪರಮಾನಂದ ದೇವಾಲಯ, ದೋರನಹಳ್ಳಿ




ಭಿತ್ತಿ, ಪರಮಾತ್ಮನ ಗುಡಿ, ಶಿರವಾಳ




ಅಧಿಷ್ಠಾನ, ಸಿದ್ದೇಶ್ವರ ದೇವಾಲಯ, ಶಿರವಾಳ



ಬಾಗಿಲವಾಡ, ಸಿದ್ದೇಶ್ವರ ದೇವಾಲಯ, ಶಿರವಾಳ



ಬಾಗಿಲವಾಡ, ನೀಲಕಂಠೇಶ್ವರ ದೇವಾಲಯ, ಯಾಳಗಿ




ಬಾಗಿಲವಾಡ (ಪಶ್ಚಿಮಾಭಿಮುಖ), ರೇವಣಸಿದ್ದೇಶ್ವರ ದೇವಾಲಯ, ಕೆಂಬಾವಿ




ಬಾಗಿಲವಾಡ, ನೀಲಕಂಠೇಶ್ವರ ದೇವಾಲಯ, ಹುಣಸಗಿ



ಸ್ತಂಭ, ಸಿದ್ದೇಶ್ವರ ದೇವಾಲಯ, ಶಿರವಾಳ



ಸ್ತಂಭ, ರಾಮಲಿಂಗ ದೇವಾಲಯ, ಹಯ್ಯಾಳ



ಸ್ತಂಭ, ರಾಮಲಿಂಗೇಶ್ವರ ದೇವಾಲಯ, ತುಮಕೂರು



ಸ್ತಂಭ, ನೀಲಕಂಠೇಶ್ವರ ದೇವಾಲಯ, ಯಾಳಗಿ



ಭ, ಸಂಗಮೇಶ್ವರ–ಸೋಮೇಶ್ವರ ದೇವಾಲಯ, ಐವೂರು



ಸ್ತಂಭ, ನೀಲಕಂಠೇಶ್ವರ ದೇವಾಲಯ, ಯಾಳಗಿ



ಸ್ತಂಭ, ಕಲ್ಲೇಶ್ವರ ದೇವಾಲಯ, ವಜ್ಜಲ



ಸ್ತಂಭ, ಭೀಮನ ಗುಡಿ, ಹಗರಟಗಿ



ಾಗಿಲವಾಡ ಪಟ್ಟಿಕೆ, ಮಲ್ಲಯ್ಯ ದೇವಾಲಯ, ಹುಣಸಗಿ





ಬಾಗಿಲವಾಡ ಪಟ್ಟಿಕೆ, ಶಂಕರಲಿಂಗ ದೇವಾಲಯ,ಇಡ್ಲೂರು



ಮಕರತೋರಣ, ಸಿದ್ದೇಶ್ವರ ದೇವಾಲಯ, ಶಿರವಾಳ



ವಿತಾನ, ಸಿದ್ದೇಶ್ವರ ದೇವಾಲಯ, ಶಿರವಾಳ




ಬಾವಿ, ಬಸವಣ್ಣ ಗುಡಿ, ಐವೊರು



ಚಾಮುಂಡಿ ಶಿಲ್ಪ, ಮಾಲಗತ್ತಿ



ನಟರಾಜ ಶಿಲ್ಪ, ಮುದನೂರು



ತೀರ್ಥಂಕರ ಶಿಲ್ಪ, ಮಾಲಗತ್ತಿ



ಶಂಕರಲಿಂಗ ದೇವಾಲಯದಲ್ಲಿರುವ ಶಾಸನ, ಇಡ್ಲೂರು



ಸೂರ್ಯ ಶಿಲ್ಪ, ನಗರೇಶ್ವರ ದೇವಾಲಯ, ಗುರುಮಿಟ್ಕಲ್



ವೀರಭದ್ರ ಶಿಲ್ಪ, ಚಂಡರಕಿ



ತಿರುಮಲೇಶ್ವರಿ, ಇಡ್ಲೂರು



ಭಕ್ತರ ಆತ್ಮಾರ್ಪಣೆಯ ಶಿಲ್ಪಗಳು, ಕಡೇಚೂರು



ಗುಹಾಶಿಲ್ಪಗಳು, ಯಾದಗಿರ



ಉಮಾ-ಮಹೇಶ್ವರ ಶಿಲ್ಪ, ಗುರುಮಿಟ್ಕಲ್